# ಕರಿ ನೀರು.



೧ನೇ ಪ್ರಕರಣ

"ಅವ್ವಾ ಅವ್ವಾ, ಒಂದು ಹಾಡು ಹಾಡೇ. ಹಾಡಬಾರದೇ ಬೇಗನೆ! ನಾನೊಲ್ಲೆ ಹೋಗು. ನಾನು ಮಾತ್ರ ಒಳ್ಳೊಳ್ಳೇ ಹಾಡು ಹಾಡಿ, ನಿನ್ನ ಮನ ರಂಜಿಸಬೇಕು. ನೀನು ಒಂದೂ ಹಾಡು ಹಾಡಬಾರದೇನು?" ಹೀಗೆಂದು ಮಾಲತಿಯು ತೂಗುಮಣೆಯ ಮೇಲಿಂದ ಇನ್ನಿಷ್ಟು ಎತ್ತರದ ಝುರೀ ಜೀಕುತ್ತ ಅಚ್ಚೆಯಿಂದ ರಮಾಬಾಯಿಗಂದಳು.

"ಮಗಳೇ, ಒಂದೇ ಏಕೆ? ಎಷ್ಟೋ ಹಾಡುಗಳನ್ನು ನಾನು ನಿನಗಾಗಿ ಹಾಡೇನು; ಆದರೆ ನಿನ್ನ ತಾಯಿಯ ದನಿಯು ನಿನ್ನಷ್ಟು ಮಂಜುಲವಾಗುಳಿದಿರುವುದೆಲ್ಲಿ? ಬಾಳೆಯ ನಾರಿನಲ್ಲಿ ಚಂಡ್ಹೂವುಗಳನ್ನು ಪೋಣಿಸಿ ಮಾಲೆ ಕಟ್ಟಬರುತ್ತಿದ್ದರೂ ಜಾಜಿ-ಮಲ್ಲಿಗೆಯ ಹೂಮಾಲೆ ಕಟ್ಟಲಿಕ್ಕೆ ರೇಶ್ಮೆಯ ಸೂಕ್ಷ್ಮ ಎಳೆಗಳೇ ಬೇಕಾಗುವದಿಲ್ಲವೆ? ಅದರಂತೆ ಇಂಥ ಪ್ರೇಮಲ ಗೀತಗಳು ಸವಿದನಿಯಲ್ಲಿ, ಇರುವುದಕ್ಕಿಂತಲೂ ಹೆಚ್ಚು ಪ್ರೇಮಲವಾಗಿ ತೋರುತ್ತವೆ. ಆದ್ದರಿಂದಲೇ ಇಂಥ ಪ್ರೇಮಲ ಗೀತಗಳನ್ನು ನಿನ್ನಂತಹ ಕುವರಿಯರೇ ಅನ್ನತಕ್ಕದ್ದು; ಹಾಗು ನಾವು ತಾಯಂದಿರು ಕುಳಿತು ಕೇಳತಕ್ಕದ್ದು. ನಾನು ಈ ಬಗೆಯ ಗೀತಗಳನ್ನನ್ನಹತ್ತಿದರೆ, ಸೀಳುಬಿದ್ದ ಕಾಯಿಯ ತಂಬೂರಿಯ ದನಿಯಂತೆ ಆ ಗೀತಗಳೊಳಗಿನ ಸ್ವಾರಸ್ಯವೇ ಇಲ್ಲದಂತಾಗಿ, ನನ್ನ ಚಿರುಗುಟ್ಟುವ ಅಪಸ್ವರವನ್ನು ಕೇಳಿ ನಿನಗೆ ನಗುವು ಮಾತ್ರ ಬಂದೀತು."

"ಬರಲಿ ಬಿಡೇ ನಗೆ ನನಗೆ! ಮೋಜೆನಿಸಿದರೇ ನಗೆ ಬರುವುದಲ್ಲವೆ? ನನಗೆ ಮೋಜೆನಿಸಲಿಕ್ಕಾದರೂ ನೀನು ಒಂದೆರಡು ಗೀತಗಳನ್ನು ಈಗ ಅನ್ನಲೇಬೇಕು. ಅವ್ವಾ, ನೀನು ದೇವರ ಸ್ತೋತ್ರ-ಗೀತ್ರಗಳನ್ನು ತಾಸುಗಟ್ಟಲೆ ಅನ್ನುತ್ತಿರುವುದಿಲ್ಲವೆ? ಆಗ ಮಾತ್ರ ನಿನ್ನ ದನಿಯು ಒಡೆಯುವದಿಲ್ಲಲ್ಲವೆ? ಆದರೆ ಈಗ

ನನ್ನ ಸಂಬಂಧದ ಒಂದೆರಡು ಹಾಡು ಹಾಡೆಂದ ಕೂಡಲೆ ದನಿ ಒಡೆದು ಚಿರ ಗುಟ್ಟುತ್ತದಂತೆ ದನಿ! ತಾಯಂದಿರು ಬರಿಯ ಮಕ್ಕಳು ಹಾಡುವ ಹಾಡುಗಳನ್ನೇ ಕೇಳುವದಿದ್ದರೆ, ತಾಯಂದಿರು ಹಾಡುವ ಹಾಡುಗಳನ್ನು ಕವನಗಾರರೇಕೆ ರಚಿಸುತ್ತಿದ್ದರು? ಆದರೆ ತಾಯಂದಿರನ್ನುವ ಎಷ್ಟೋ ಮಮತೆಯ ಹಾಡುಗಳು ರಚಿಸಲ್ಪಟ್ಟಿರುತ್ತವೆ ಅಂಥ ಕೆಲವು ನನಗೂ ಬರುತ್ತವೆ.''

''ಮಾಲತೀ, ಹಾಗಾದರೆ ಸಾಳೆ ನೀನು ತಾಯಿಯಾದೆಯೆಂದರೆ, ಹಾಡವ್ವಾ ನೀನು ಅವನ್ನು ನಿನ್ನ ಮಗುವಿಗೆ.'' ರಮಾಬಾಯಿಯೆಂದಳು.

ನಾಚಿಕೆಯಿಂದ ತಲೆಬಾಗಿದವಳಾಗಿ ಮಾಲತಿಯು ಸಿಟ್ಟಿನಿಂದ ''ನಾನು ಆಗ ಅಂದೇನು; ಅಥವಾ ಅನ್ನಲಿಕ್ಕಿಲ್ಲ! ಈಗ ನೀನು ನನಗೊಂದು ಹಾಡು ಹಾಡುವದಿಲ್ಲವಷ್ಟೇ?'' ಎಂದಂದು ತಮ್ಮವ್ವನನ್ನು ಬಿಗಿದಪ್ಪಿ, ಆಕೆಯ ತುಟಿಗೆ ತುಟಿಯಾನಿಸಿ, ಆ ಕಿಶೋರಿಯು ಮತ್ತೆ:

''ಇದೇನೇ ಇದು, ನೀನು ನನ್ನವ್ವನಲ್ಲವೆ? ನೀನು ನನ್ನನ್ನು ಕುರಿತು ಹಾಡದಿದ್ದರೆ, ಇನ್ನಾರು ನನ್ನವ್ವನ ಮಮತೆಯ ಗೀತಗಳನ್ನನ್ನಂದಾರು?'' ಎಂದು ಒತ್ತಾಯ ಪಡಿಸತೊಡಗಿದಳು.

''ನೀನು ನನ್ನವ್ವನಲ್ಲವೆ?'' ಎಂದು ತನ್ನ ಒಬ್ಬಳೇ ಒಬ್ಬಳಾದ ಮಗಳ ಅಚ್ಚದ ಶಬ್ದಗಳನ್ನು ಕೇಳಿ ರಮಾಬಾಯಿಯ ಹೃದಯದಲ್ಲಿ ವಾತ್ಸಲ್ಯದ ಭರತಿಯು ಮೇರೆದಪ್ಪಿತು. ಆದರಿಂದ ಮೊಲೆ ಕುಡಿಯುವ ಕೂಸನ್ನು ಎದೆಗವಚಿ ಹಿಡಿಯುವಂತೆ ಮಾಲತಿಯನ್ನು ಹಿಡಿಯಬೇಕೆಂದು ಆಕೆಗನಿಸಿತು; ಮತ್ತು ಮಾಲತಿಯನ್ನು ಮಟಮಟವೆಂದು ಚುಂಬಿಸುವದಕ್ಕಾಗಿ ಆಕೆಯ ತುಟಿಗಳು ಸ್ಫುರಣಗೊಂಡವು; ಆದರೆ ತಾಯಿಯ ಪ್ರೇಮವು ಎಷ್ಟು ಉತ್ಕಟವಾಗಿರುವುದೋ, ಅದು ವಯಸ್ಸಿಗೆ ಬಂದ ಹೆಣ್ಣುಮಕ್ಕಳೊಡನೆ ನಡಕೊಳ್ಳುವಾಗ ಅಷ್ಟೇ ಸಂಕೋಚವುಳ್ಳದ್ದಾಗುತ್ತದೆ!

ಮಾಲತಿಯ ಗಲ್ಲಕ್ಕೆ ಸಲ್ಲಗ್ನವಾಗಲಿರುವ ತನ್ನ ತುಟಿಗಳನ್ನು ಹಿಂದೆ ತಕ್ಕೊಂಡು, ಆಕೆಯ ತಾಯಿಯು ಆ ಉಪವರಳಾದ ಕನ್ನೆಯ ಮುಖವನ್ನು ತನ್ನ ಎರಡೂ ಕೈಗಳಿಂದ ಕ್ಷಣಕಾಲ ಒತ್ತಿಹಿಡಿದಳು. ನಂತರ ಮೆಲ್ಲನೆ ಅವಳನ್ನು ಹಿಂದಕ್ಕೆ ಸರಿಸುತ್ತ ರಮಾಬಾಯಿಯನ್ನುತ್ತಾಳೆ:—''ಅನ್ನುವೆನವ್ವಾ ಮಾಲತಿ ನಿನ್ನ ಗೀತಗಳನ್ನು! ಆದರೆ ನಾನು ಒಂದೆರಡೇ ಅನ್ನುವವಳು!''

''ಭಲೆ! ಬಲು ಮೋಜಾಗುವುದು!'' ಎಂದು ಮಾಲತಿಯು ಉಲ್ಲಸದಿಂದ ತೂಗುಮಣೆಯ ಕೆಳಗಿನ ನೆಲಕ್ಕೆ ತನ್ನ ಹಿಂಬಡದಿಂದ ಒತ್ತಿಒತ್ತಿ ಝುಂಕಿ ತಕ್ಕೊಳ್ಳಹತ್ತಿದಳು. ಕೆಲ ಕ್ಷಣ ನಿರೀಕ್ಷಿಸಿದ ಬಳಿಕ ಆಕೆ: ''ಇದೇನೇ ಅವ್ವಾ!

ಯಾವನೊಬ್ಬ ವೈಗಕ್ಷ ಗಾಯಕನು ತಾಳ-ಸ್ವರ ಹೊಂದಿಸುವದಕ್ಕೇ ಅರ್ಧ ರಾತ್ರಿಗಳೆಯುವಂತೆ ವೇಳೆಗಳೆಯುತ್ತಿರುವೆಯಲ್ಲ!" ಎಂದೆನ್ನಲು, ರಮಾಬಾಯಿಯು ತನ್ನ ಬಾಯಿಗೆ ಆಗ ಯಾವ ಹಾಡು ನೆನಪಾಯಿತೋ ಅದನ್ನೇ ಅನ್ನತೊಡಗಿದಳು:

ಎಲೆ ರನ್ನದ ಖಣಿಯೆ। ಮೆರೆವುದುಬೇಡ ಬಿಂಕದಿ।
ಇದು ನೋಡು ನನ್ನುದರದ। ರತ್ನಮಾಲೆ।
ಸಾಕಾಗಿ ಉಳಿಯಲಿ। ದೇವಾ ಜನುಮದವರೆಗೆ।
ಈ ಸುಲಕ್ಷಣ ಕುವರಿ। ಮಾಲತಿಯು।
ಕೊಡುವೆ ನಾ ಸುಕೃತವ। ಏಳೇಳು ಜನುಮದ್ದು।
ದೇವಾ ಸಂರಕ್ಷಿಸು ನನ್ನೀ। ಒಬ್ಬೊಂಟಿಗ ಮಗಳ।

'ಒಬ್ಬೊಂಟಿಗ ಮಗಳು' ಎಂಬ ಶಬ್ದವು ಗಾಯನದ ನಾದದಲ್ಲಿ ಉಚ್ಚರಿಸಲ್ಪಟ್ಟ ಕೂಡಲೆ, ಆಕಸ್ಮಿಕವಾಗಿ ಚೇಳು ಕಚ್ಚಿದಾಗ ಮನುಜನು ಹೇಗೆ ಕಕ್ಕಾವಿಕ್ಕಿಯಾಗುವನೋ, ಹಾಗೆ ಯಾವದೋ ಒಂದು ತೀವ್ರ ದುಃಖದ ನೆನಪು ಆಗಿ ರಮಾಬಾಯಿಯ ಮನಸ್ಸು ವ್ಯಾಕುಲವಾಯಿತು! ತನ್ನ ಮಗಳಿಗೆ ಇಂಥ ಆನಂದದ ಭರದಲ್ಲಿ ಆ ಶಲ್ಯವನ್ನು ಚುಚ್ಚಗೊಟ್ಟು ವ್ಯಾಕುಲಿತಳನ್ನಾಗಗೊಡಬಾರದೆಂದು ರಮಾಬಾಯಿಯು ತನ್ನ ಮೋರೆಯ ಮೇಲೆ ಖಿನ್ನತೆಯ ಛಾಯೆಯನ್ನು ತೋರಗೊಡದಿದ್ದರೂ, ಹಾಡುಗಳು ಅವಳ ಬಾಯಿಂದ ಹೊರಡುವದು ಮಾತ್ರ ಅಕಸ್ಮಾತ್ತಾಗಿ ಕಟ್ಟಾಯಿತು; ಅದರಿಂದ ಅವಳು ಸುಮ್ಮನಾಗಿರಬಹುದು. ತಾಯಿಗೆ ಮಧ್ಯದಲ್ಲಿ ತುಸ ವಿಶ್ರಾಂತಿ ದೊರೆಯಬೇಕೆಂದೂ ಆಕೆ ಗುಂಟಾಗಿರುವ ಹಾಡಿನ ಲಹರಿಯು ಕುಗ್ಗಬಾರದೆಂದೂ ಯೋಚಿಸಿ, ಮಾಲತಿಯು ಇನ್ನು ತನ್ನ ಸರತಿ ಬಂತೆಂದು ಊಹಿಸಿ ತಾನೇ ಗೀತ ಗಾಯನಕ್ಕೆ ಪ್ರಾರಂಭಿಸಿದಳು. ಅವಳ ತಾಯಿಯು ಅವಳನ್ನು ಕುರಿತು ಪದ್ಯರೂಪವಾಗಿ ಯಾವ ಹಾಡುಗಳನ್ನು ಹಾಡಿದ್ದಳೋ ಅದರಿಂದ ಮಾಲತಿಗೆ ತುಂಬಾ ಸಂತೋಷವುಂಟಾಗಿ, ಆ ಹಾಡಿನೊಳಗಿನ ಪ್ರತಿಯೊಂದು ಶಬ್ದಗಳಿಂದ ಅವಳ ಹೃದಯಕ್ಕೆ ಕಟ್ಟಾಡಿಸದಂತಾಗುತ್ತಿತ್ತು. ಪ್ರಿಯಕರನ ಪ್ರೇಮಲ ಆರಾಧನೆಯನ್ನು ಕೇಳಿಕೊಳ್ಳುವ ಚಾಳಿ ಹತ್ತುವ ಮೊದಲು ಹೆಣ್ಣುಮಕ್ಕಳುಗಳಿಗೆ ತಾಯಿಯ ಅಚ್ಚದ ಕೌತುಕದಂತಹ ಸವಿಯು ಬೇರೆ ಯಾತರಲ್ಲಿಯೂ ಬಹುಶಃ ಅನಿಸುತ್ತಿರುವುದಿಲ್ಲ.

ಪಶ್ಚಿಮದಿಕ್ಕಿನ ಕಡೆಗಿನ ಆವರಣರಹಿತವಾದ ಆ ಪಡಸಾಲೆಯುಲ್ಲಿ ಅಂದು ಸಂಜೆಯ ಮುಂದೆ ತಮ್ಮ ಮನೆಯ ತೂಗಮಂಚದ ಮೇಲೆ ಕುಳಿತು, ಉದ್ದ

ದ್ದನ್ನ ಝುರಿಕೆ ತಕ್ಕೊಳ್ಳುತ್ತ ಆ ಸುಂದರ ವೈಕಕ್ಟಿನ ಮಾಲತಿ ಕಿಶೋರಿಯು ತನ್ನ ಸುಸ್ವರಗಾನದ ಆಲಾಪಗಳನ್ನು ತಾನೇ ಉಪಭೋಗಿಸುತ್ತಲಿದ್ದಳು. ತೂಗಮಂಚವು ಒಂದು ಕಡೆಯ ಎತ್ತರದಿಂದ ಇಳುಕಲಿಗೆ ಹತ್ತಿತೆಂದರೆ, ಆ ವೇಗದಿಂದ ಅವಳ ಬೆನ್ನ ಮೇಲಿನ ಸೀರೆಯ ಸೆರಗು ಸರಿದು ಫಡಫಡನೆ ಹಾರುತ್ತಿರುವದನ್ನು ಕಂಡು, ಸಾಯಂಕಾಲದಲ್ಲಿ ದೂರಿನಿಂದ ತನ್ನ ಗೂಡಿನ ಕಡೆಗೆ ಹಾರಿ ಹೋಗುವ ಯಾವುದೊಂದು ಸುಂದರ ಪಕ್ಷಿಯು ತನ್ನ ಗುಂಪಿನಿಂದ ಹಿಂದೆ ಬಿದ್ದಿರುವಾಗ ಒಳ್ಳೇ ವೇಗವಾಗಿ ರೆಕ್ಕೆಗಳನ್ನು ಬಡಿಬಡಿದು ಗತಿಯ ಮೇಲೆ ಗತಿಯನ್ನುಂಟು ಮಾಡಿಕೊಳ್ಳುತ್ತ ಉಲ್ಲಸದ ಆಕಾಶದಲ್ಲಿ ಹಾರುತ್ತ ನಡೆದಿದೆಯೋ ಏನೋ ಎಂಬಂತೆ ತೋರುತ್ತಿತ್ತು. ಬಳಿಕ ಮಾಲತಿಯು ಮತ್ತೆ ಗೀತಗಾಯನಕ್ಕೆ ಪ್ರಾರಂಭಿಸಿದಳು:

ತಾಯಿಯ ಮಮತೆಯು । ಬಾರದು ಅನ್ಯರಿಗೆ ।
ದೇವದಯದ ಛಾಯೆ । ಭೂಮಿ ಮೇಲೆ ।
ಜೀವಕ್ಕೆ ಜೀವಾ ಕೊಡುವೆ । ನಮ್ಮಣ್ಣನಿಗಾಗಿ ನಾನು ।
ಹೂವೇಕೆ ಬಾಡಿತು । ಅಣ್ಣಯ್ಯನದು ।
ನನ್ನ ಆಯುಷ್ಯವ । ಕೊರೆ ಮಾಡಿ ಮಾರುತಿ ।
ಪೂರಾ ನೂರು ಮಾಡೋ । ನಮ್ಮಣ್ಣನಿಗೆ ।

ಗಾನದ ಲಹರಿಯಲ್ಲಿ ಮಾಲತಿಯು ಈಗ ತನ್ನ ಬಾಯಿಗೆ ಯಾವ ಗೀತವು ಬರುತ್ತಿದ್ದಿತೋ ಅದನ್ನೇ ಹಾಡಹತ್ತಿದಳು. ಈ ಮೊದಲು ಹಾಡುವಾಗ ಅವಳು ತನ್ನ ತಾಯಿಗೆ ಸಂಬಂಧಿಸಿದ ಗೀತಗಳನ್ನೇ ಆರಿ ಆರಿಸಿ ಹಾಡುತ್ತಿದ್ದಳು; ಆದರೆ ಈಗಿನ ಗೀತಗಳನ್ನು ನೆನಪಾದ ಹಾಗೆ ಅನ್ನಹತ್ತಿದಳು. ರಮಾಬಾಯಿಯ ಲಕ್ಷ್ಯವು ಮಾಲತಿಯು ಅನ್ನುವ ಗೀತಗಳ ಅರ್ಥದ ಕಡೆಗಿದ್ದಿತು. ಅದರಿಂದ ಮಾಲತಿಯ ಗೀತಗಳಲ್ಲಿ ಅಣ್ಣಯ್ಯನ ಹೆಸರು ಹೊರಟ ಕೂಡಲೆ ಅದನ್ನು ಕೇಳಿ ರಮಾಬಾಯಿಯ ಹೃದಯವು ದುಃಖಪೂರ್ಣವಾಗಿ, ಅದರಿಂದ ಅವಳಿಗೆ ಅಳುವೇ ಬರಹತ್ತಿತು. ತನ್ನ ಆ ದುಃಖದ ಕವಿನೆಳಲು ನಗೆ-ಕೆಲೆದಾಡುತ್ತಿದ್ದ ಕಿಶೋರಿ ಮಾಲತಿಯ ಆನಂದದ ಮೇಲೆ ಬಿದ್ದು, ಅದು ಕರ್ರಗಾಗಬಾರದೆಂದು, ತನಗೆ ಅಸಹ್ಯವಾಗಿ ತೋರುವ ಆ ಗೀತಗಳನ್ನು ತಡೆಯುವ ಸಲುವಾಗಿ ರಮಾಬಾಯಿಯು ಮಾಲತಿಯನ್ನು ಕುರಿತು:—

"ಮಾಲೀ, ತಂಗೀ, ತುಸ ತಡೆ. ನನಗೆ ಬವಳ ಬರಹತ್ತಿತು ನೋಡು. ಅದೆಷ್ಟುತ್ತರ ಝುರಿಕೆ ತಕ್ಕೊಳ್ಳುತ್ತೀ?" ಎಂಬ ನೆವ ಮಾಡಿ, ತನ್ನ ಹಿಂಬಡವನ್ನು ನೆಲಕ್ಕೆ ಒತ್ತಿ ಹಿಡಿದು, ತೂಗುಮಂಚವನ್ನು ನಿಲ್ಲಿಸಿ ಕೆಳಗಿಳ

ದಳು. ಆಗ ಮಾಲತಿಯೊಬ್ಬಳೇ ಮಂಚದ ಮೇಲುಳಿದಿದ್ದಳು ಆಕೆಯು ಆಗಿನ ಆನಂದದ ಲಹರಿಗಳು ಒಮ್ಮೆಲೆ ಮಾಯವಾಗಿ ಅವು ಕುಸಿಕುಳಿತವು!

ಮಾಲತಿಯು ತಾಯಿಯ ಕಡೆಗೆ ನೋಡುತ್ತಾಳೆ, ಅವಳ ಕಣ್ಣುಗಳು ಅಶ್ರುಪೂರ್ಣವಾಗಿವೆ! ಮುಖವು ತೀವ್ರ ದುಃಖದ ಸ್ಮೃತಿಯಿಂದ ಕಕ್ಕಾವಿಕ್ಕಿಯಾಗಿದೆ! ತನ್ನ ಬಾಯಿಂದ ಗೀತವೊಡನೆ ಆಕಸ್ಮಿಕವಾಗಿ ಹೊರಟ ತಮ್ಮಣ್ಣನ ಹೆಸರಿನಿಂದ ತನ್ನ ತಾಯಿಗೆ ಈ ಮೊದಲೇ ಮೃತಪಟ್ಟ ತನ್ನ ಮಗನ ನೆನಪಾಗಿ, ಆಕೆಗೆ ಈ ಪರಿ ದುಃಖವಾಗಿರಬೇಕು! ಅವಳ ತಾಯಿಗೆ ಆಕೆಯ ಹಿರಿಯ ಮಗನು ಇಲ್ಲದಂತಾಗಿ ಅದೆಷ್ಟೋ ವರ್ಷಗಳಾಗಿದ್ದರೂ, ನಡುನಡುವೆ ಹೀಗೆ ಏನಾದರೂ ವಿಶೇಷ ನೆನಪಾದ ಕೂಡಲೆ ಆ ತಾಯಿಗೆ ಯಾವುದೊಂದು ಹೊಸ ದುಃಖವಾದ ಹಾಗೆ ಅಸಹ್ಯವಾಗುತ್ತಿತ್ತು; ಮತ್ತು ಆ ಮಮತೆಯು ಹಡದವ್ವನು ಬಿಕ್ಕಿ ಬಿಕ್ಕಿಯಾಗಿ ಅಳುತ್ತಿದ್ದಳು. ಅಂಥ ಪ್ರಸಂಗಗಳಲ್ಲಿ ತಾಯಿಯ ಸಮಾಧಾನವನ್ನು ಹೇಗೆ ಮಾಡಬೇಕು? ಅವಳ ಆ ದುಃಖವನ್ನು ಆಗಿನ ಮಟ್ಟಿಗಾದರೂ ಕಡಿಮೆ ಮಾಡಲಿಕ್ಕೆ ಏನು ಪ್ರಯತ್ನ ಮಾಡಬೇಕು ಇವೆಲ್ಲ ಮಾಲತಿಗೆ ಚೆನ್ನಾಗಿ ಗೊತ್ತಿತ್ತು.

ಆ ಕೂಡಲೆ ಮಾಲತಿಯು ಮಂಚದಿಂದಿಳಿದು ಬಂದು ತಾಯಿಯ ತೊಡೆಯ ಮೇಲೆ ತನ್ನ ಗೋಣನ್ನಿಟ್ಟಳು. ಅದರಿಂದ ಮಾಲತಿಯ ಮುಖವೂ ತಾನಾಗಿಯೇ ಕಕ್ಕಾವಿಕ್ಕಿಯಾಯಿತು. ಅವಳ ಕಣ್ಣುಗಳಿಂದಲೂ ಅಶ್ರುಗಳು ತಾವಾಗಿಯೇ ಪ್ರವಹಿಸಹತ್ತಿದವು. ಆ ಮೇಲೆ ಪದ್ಧತಿಯ ಮೇರೆಗೆ ಆ ದುಃಖಪೂರ್ಣ ಮೊಗವನ್ನು ತನ್ನ ತಾಯಿಯ ಮುಖದ ವರೆಗೆ ಒಯ್ದು ಮಾಲತಿಯು:—"ಹೀಗೇಕೇ ಅವ್ವಾ? ನಾನು ನಿನ್ನ ಮನಸ್ಸನ್ನು ರಂಜಿಸುವದಕ್ಕೆಂದು ಗೀತಗಳನ್ನನ್ನಹತ್ತಿದೆನು; ಆದರೆ ಭ್ರಮೆಯಿಂದ ನಿನ್ನ ದುಃಖದ ಹುಣ್ಣಿನ ಮೇಲಿನ ಹಕ್ಕಳಿಯನ್ನೇ ಕಿತ್ತು ಬಿಟ್ಟೆನು! ನನಗೆ ಆ ಖೋಡಿ ಗೀತಗಳು ಹೇಗೆ ನೆನಪಾದವೋ ಯಾರಿಗೆ ಗೊತ್ತು?"

ಮಾಲತಿಯ ಮನಸ್ಸಿಗೆ ಆ ತಪ್ಪು ಹೆಚ್ಚಾಗಿ ಹತ್ತಿದಂತೆ ತೋರಿದ್ದರಿಂದ ಅವಳ ತಾಯಿಗೆ ತನ್ನ ಹಿಂದಿನ ದುಃಖಕ್ಕಿಂತ ಹಾಗೆ ಬಿಕ್ಕಿ ಬಿಕ್ಕಿ ಅಳುತ್ತಿರುವ ತನ್ನ ಮಗಳ ಸದ್ಯದ ದುಃಖವೇ ಸಹನವಾಗದಂತಾಯಿತು ಅದರಿಂದ ರಮಾಬಾಯಿಯು ತಟ್ಟನೆ ತನ್ನ ಅಳುವನ್ನು ನಿಲ್ಲಿಸಿಕೊಂಡು, ಮಾಲತಿಯ ಸಮಾಧಾನಕ್ಕೆ ತೊಡಗಿದಳು: —"ಹುಚ್ಚ ಹುಡುಗಿ! ಇದು ನಿನ್ನ ಗೀತಗಳಿಂದಲ್ಲವ್ವಾ. ನಾನೇ ಹಾಡು ಹಾಡುವಾಗ ನಿನ್ನನ್ನು ಒಬ್ಬೊಂಟಿಗಳೆಂದು ಸಂಬೋಧಿಸಲಿಲ್ಲವೆ? ಆ ಬಗ್ಗೆಯೇ ನನಗೆ ಇಷ್ಟು ಕೆಡಕೆನಿಸಿತು. ದೇವರು ನನಗೆ

ಎರಡು ಮಕ್ಕಳನ್ನು ಕೊಟ್ಟರಲಿಕ್ಕೆ ದೈವವು ಅದರಲ್ಲೊಂದನ್ನು ಕಸಿಮೊಯ್ಯಲು, ಬಾಕಿಯೊಂದೇ ಉಳಿಯಿತೆಂಬ ಶಬ್ದವು ನನಗೆ ನೆಟ್ಟಿತು! ಅದಿರಲಿ. ತಂಗೀ, ಸುಮ್ಮನಾಗು. ನೀನಲ್ಲವ್ವಾ ನನ್ನ ದುಃಖದ ಹುಣ್ಣಿನ ಹಕ್ಕಳೆ ತೆಗೆದವಳು. ತದ್ವಿರುದ್ಧವಾಗಿ ಆ ದುಃಖವನ್ನು ಕೊಂಚವಾದರೂ ಕಡಿಮೆ ಮಾಡುವ ಯಾವದೊಂದು ರಸಾಯನವಿದ್ದರೆ, ಅದು ನಿನ್ನೀ ಆನಂದೀ ಮುಖದಲ್ಲಿಯ ಸುಖದ ನಗುವೇ ಆಹುದು! ಮಿಂಚಿ ಹೋದದ್ದಕ್ಕೆ ಚಿಂತಿಸಿದರೆ ಮರಳಿ ಬರುವದೇ? ನಿನ್ನಣ್ಣನು ನಿನ್ನನ್ನು ಅತ್ಯಂತ ಪ್ರೀತಿಸುತ್ತಿದ್ದುದರಿಂದ, ಆತನ ವಿಯೋಗದ ದುಃಖದಿಂದ ನಾನು ನಿನ್ನನ್ನು ಅಳಿಸಿದರೆ ಆತನಿಗೆ ಸಿಟ್ಟು ಬಂದೀತು; ಆತನ ಆತ್ಮವು ಈಗೆಲ್ಲಿರುವದೋ ಅಲ್ಲಿಯೇ ಅದು ತಳಮಳಗೊಂಡೀತು. ನೀನು ನನಗೆ ಆತನ ಸ್ಥಳದಲ್ಲಿಯೇ ಇರುವೆಯಲ್ಲವೆ? ಅಂದಮೇಲೆ ನಿನ್ನಲ್ಲಿಯೇ ನನ್ನ ಎರಡೂ ಮಕ್ಕಳು ತಾದಾತ್ಮ್ಯ ಹೊಂದಿರುವದಿಲ್ಲವೇನು? ಸುಮ್ಮನಾಗು. ಅಗೋ, ನಾವು ಆ ಹೊಸದಾಗಿ ಬಂದಿರುವ ಸಾಧುಗಳ ಭಜನೆಗೆ ಇಂದು ರಾತ್ರಿ ಹೋಗಬೇಕಾಗಿದೆಯಲ್ಲವೆ? ಹಾಗಾದರೆ ಎದ್ದೇಳು. ನಾನು ಒಲೆ ಹೊತ್ತಿಸುತ್ತೇನೆ. ನೀನು ಕಸ-ಗಿಸ ತೆಗೆ. ನಾವು ಬೇಗನೆ ಊಟ ಮುಗಿಸುವಷ್ಟರಲ್ಲಿ ನಾಯಡೂ ಬಾಯಿಯವರು ಕರೆಯಬರುವರು."

ಆ ಮೇಲೆ ಆ ತಾಯಿ-ಮಗಳು ಒಳಗೆ ಹೋದರು. ರಮಾಬಾಯಿಯವರು ಕಳೆದ ತಿಂಗಳಲ್ಲಿಯೇ ಮಥುರೆಯ ಕ್ಷೇತ್ರನಿವಾಸಕ್ಕೆಂದು ಬಂದು, ಅಲ್ಲಿ ಒಂದು ಚಿಕ್ಕ, ಆದರೆ ಎಲ್ಲ ಸುಖ-ಸೌಕರ್ಯಕ್ಕನುಕೂಲವಾದ ಮನೆಯನ್ನು ಬಾಡಿಗೆ ಹಿಡಿದಿದ್ದರು.

ರಮಾಬಾಯಿಯ ಗಂಡನು ಅವಳಿಗೆ ಎರಡು ಮಂದಿ ಮಕ್ಕಳಾದಮೇಲೆ ಆಕಸ್ಮಿಕವಾಗಿ ಗತಿಸಿದನು. ಆಕೆಯ ಚರಿತಾರ್ಥವು ಸುಸೂತ್ರವಾಗಿ ಸಾಗುವಷ್ಟು ದುಡ್ಡು ಹಾಗು ಕೆಲ ಅಲಂಕಾರಗಳು ಆಕೆಯ ಗಂಡನು ಸಂಗ್ರಹಿಸಿಟ್ಟಿದ್ದನು. ಆ ದುಡ್ಡಿನ ಆಧಾರದಿಂದ ರಮಾಬಾಯಿಯು ತನ್ನ ಎರಡೂ ಮಕ್ಕಳ ಪಾಲನ-ಪೋಷಣವನ್ನು ನಾಗಪೂರ ಬಳಿಯ ತನ್ನ ಊರಲ್ಲಿಯೇ ಮಾಡಿದಳು. ಮುಂದೆ ಆಕೆಯ ಮಗನಿಗೆ ದಂಡಿನಲ್ಲಿ ಕೆಲಸವಾಯಿತು. ಆತನು ಅತ್ತ ಹೋಗಲು, ಆಕೆಯ ಮಗಳಾದ ಮಾಲತಿಯೊಬ್ಬಳೇ ಅವಳ ಬಳಿಯಲ್ಲುಳಿದಳು. ಮುಂದೆ ೨-೩ ವರ್ಷಗಳಲ್ಲಿ ಹಿಂದುಸ್ಥಾನದ ಹೊರಗಿನ ಇಂಗ್ಲಿಷರೊಡನೆ ನಡೆದ ಯಾವುದೊಂದು ಯುದ್ಧಕ್ಕೆ ಹಿಂದೀ ಸೈನ್ಯವು ಕಳಿಸಲಾಯಿತು. ಆ ದಂಡಿನೊಡನೆ ರಮಾಬಾಯಿಯ ಮಗನೂ ಹೋಗಬೇಕಾಯಿತು; ಆದರೆ ಅತ್ತ ತೆರಳಿದ ನಂತರ ಆತನು ಬಹುಮಟ್ಟಿಗೆ ಪತ್ತೆಯಿಲ್ಲದಾದನು. ಬಹುಶಃ

ಪ್ರಯಾಸಬಟ್ಟ ಬಳಿಕ ಅಧಿಕಾರಿಗಳಿಂದ ರಮಾಬಾಯಿಗೆ ಬರೆದು ಬಂದಿತೇನೆಂ ದರೆ, ಆ ದಂಡಾಳು ಕೆಲ ಕಾರಣಗಳಿಂದ ಅಧಿಕಾರಿಗಳೊಡನೆ ಜಗಳ ಕಾದಿ ಓಡಿ ಹೋಗಿದ್ದು, ಆತನು ಬಹುಶಃ ವೈರಿಗಳಿಂದ ಹತನಾಗಿರಬೇಕು.''

ಆ ಮಾತಿಗೂ ಇಂದಿಗೆ ೫-೬ ವರ್ಷಗಳಾಗಿದ್ದವು. ರಮಾಬಾಯಿಯ ಮಗನು ದಂಡಿಗೆ ಹೋದವನು ಅತ್ತೇ ಮರಣಹೊಂದಿದನೆಂಬ ಸಂಗತಿಯು ಆ ಊರ ಜನರಿಗೆ ಖಾತ್ರಿಯಾದದ್ದರಿಂದ. ಅಲ್ಲಿಯವರಿಗೆ ಆ ಸಂಗತಿಯು ಮರೆ ಯಾಗಹತ್ತಿತ್ತು; ಆದರೆ ರಮಾಬಾಯಿಗೆ ಆ ಮಾತಿನ ಸಂಪೂರ್ಣ ವಿಸ್ಮ ರಣವೆಂತಾದೀತು! ಅವಳಿಗೆ ತನ್ನ ಮಗನ ವಿಸ್ಮರಣವಾಗಿರಲಿಲ್ಲವಿಷ್ಟೇ ಅಲ್ಲ; ಆದರೆ ಆತನು ಕೊಲ್ಲಲ್ಪಟ್ಟದ್ದರಿಂದ ಇನ್ನು ಈ ಲೋಕದಲ್ಲಿ ಪುನಃ ಎಂದೂ ಭೆಟ್ಟಿಯಾಗಲಾರನೆಂಬದೂ ಅವಳಿಗೆ ಒಮ್ಮೊಮ್ಮೆ ನಿಜವೆನಿಸುತ್ತಿರಲಿಲ್ಲ. ಯು ದ್ಧದಲ್ಲಿ ಕೊಲ್ಲಲ್ಪಟ್ಟ ಸೈನಿಕರ ನಿಕಟದ ಸಂಬಂಧಿಕರಲ್ಲಿ ಬಹುಶಃ ಇದೇ ಮ- ನೋವೃತ್ತಿಯಿರುತ್ತಿರುತ್ತದೆ. ಯಾವ ಆಶೆಯೂ ಉಳಿದಿರದಿದ್ದರೂ, ರಮಾ ಬಾಯಿಯ ಶಂಕೆಯು ಸಮಾಧಾನವಾಗಲೊಲ್ಲದು. ತನ್ನ ಮಗನು ದೂರ ದೇಶದಲ್ಲಿ ಕಾಳಗಕ್ಕೆ ಹೋಗಿ ಸತ್ತಿರುತ್ತಾನೆಂಬ ಶಬ್ದಗಳನ್ನುಚ್ಚರಿಸುವದು ಕೂಡ ಅವಳಿಗೆ ಹೇಗೆ ಹೇಗೋ ಅನಿಸುತ್ತಿತ್ತು; ಅವುಗಳನ್ನು ಅನ್ನುವ ಪ್ರಸಂ ಗವೇ ಪ್ರಾಪ್ತವಾದರೆ 'ನನ್ನ ಹಿರಿಯ ಮಗನು ಅತ್ತ ಯುದ್ಧದಲ್ಲಿ ಇಲ್ಲದಂತಾ ದನು.' ಎಂದಿಷ್ಟೇ ಅನ್ನುತ್ತಿದ್ದಳು.

ಮಗನ ಮರಣದ ಸಂಗತಿ ತಿಳಿದ ಬಳಿಕ ದುಃಖದಿಂದ ಕ್ಲೇಶಗೊಂಡಂ ತಾದ ರಮಾಬಾಯಿಯ ಜೀವವು ಆಕೆಯ ಒಬ್ಬೊಂಟಿಗಳಾದ ಮಗಳ ಮಮ ತೆಯ ಸಲುವಾಗಿಯೇ ಜೀವಿಸುತ್ತಿತ್ತು. ಮಾಲತಿಯ ಇಚ್ಛೆಯನ್ನು ಈಡೇರಿಸ ಲಿಕ್ಕೆ ಅವಳು ಕೊಂಚವೂ ಹಿಂದೆಗೆಯುತ್ತಿರಲಿಲ್ಲ. ಮಾಲತಿಯು ಬಿದಿಗೆಯ ಚಂದ್ರಮನಂತೆ ಹೆಚ್ಚೆಚ್ಚು ಶೋಭಿವಂತಳಾಗಿ ಬೆಳೆಯಹತ್ತಿದಳು. ಆಕೆಯ ಆ ಅಚ್ಛದ ಚಪಲ ಹಾಗು ಸುಶೀಲ ನಡೆ-ನುಡಿಗಳಲ್ಲಿ ಒಳ್ಳೇ ಮೋಹಕತೆಯಿದ್ದು ದರಿಂದ, ಅವು ಅವಳ ತಾಯಿಯನ್ನಷ್ಟೇ ಅಲ್ಲ, ಯಾರು ಯಾರು ಅವಳನ್ನು ನೋಡುವರೋ ಆ ಎಲ್ಲ ಜನರ ಕಣ್ಣಿಗೂ ಮನಸ್ಸಿಗೂ ಕಾಂತಿಯ ಚಂದ್ರಿಕೆ ಯನ್ನು ನೋಡಿದಂತೆಯೇ ಸಂತೋಷವಾಗುತ್ತಿತ್ತು. ಒಳ್ಳೇ ಮುತ್ತನ್ನು ಕಾಣುತ್ತಲೆ ಇದು ಯಾವುದಾದರೂ ಶೋಭಿವಂತ ಅಲಂಕಾರದ ಸಾಮಗ್ರಿ ಯೆಂದು ಹೇಗೆ ಸಹಜವಾಗಿ ತೋರುತ್ತದೋ, ಅದರಂತೆ ಯಾರೊಬ್ಬರ ಮೋಹಕ, ಮಂಗಲ ಮತ್ತು ಸುಖಕಾರಕ ಜೀವನದ ಸಲುವಾಗಿಯೇ ದೇವರು ಈ ಮಾಲತಿಯನ್ನು ನಿರ್ಮಿಸಿರಬಹುದೆಂದು ಆ ಕಿಶೋರಿಯನ್ನು ನೋಡಿದ

ಕೂಡಲೆ ಅನಿಸುತ್ತಿತ್ತು. ಆಕೆಗೀಗ ಹದಿನಾಲ್ಕನೇ ವರ್ಷ ಮುಗಿದಿತ್ತು; ಮತ್ತು ಆಕೆಯ ತಾಯಿಯ ಮನಸ್ಸಿನಲ್ಲಿ ಆಕೆಯ ಭವಿಷ್ಯದ ಬಗ್ಗೆ ಉನ್ನತಾಶೆಯ ಹಾಗು ಆಕಾಂಕ್ಷೆಯು ಒಂದು ಉದ್ಯಾನಕ್ಕೆ ಉದ್ಯಾನವೇ ಮೊಳಗಹತ್ತಿತ್ತು!

. ರಮಾಬಾಯಿಯ ಬಹು ದಿನದ ಗೆಳತಿಯೆಂದರೆ, ನರ್ಸ ಅನ್ನಪೂರ್ಣಬಾಯಿ ನಾಯಡು ಇವಳೇ ಆಗಿದ್ದಳು. ಆಕೆಯು ಇತ್ತೀಚೆಗೆ ಮಥುರೆಯಲ್ಲಿ ನೌಕರಿಗಿದ್ದಳು. ಆವಳ ಒತ್ತಾಯದ ಮೂಲಕವೂ ತೀರ್ಥ ಯಾತ್ರೆಗಳನ್ನು ಮಾಡುವದು ರಮಾಬಾಯಿಯಂಥ ದೇವಭೋಳೇ ಮನುಷ್ಯರ ಇಚ್ಛೆಯ ಮೂಲಕವೂ ಆವಳು ಮಾಲತಿಯೊಡನೆ ತಿಂಗಳೊಪ್ಪತ್ತಿನ ಮಟ್ಟಿಗೆಂದು ಮಥುರೆಗೆ ಬಂದಿದ್ದಳು. ಮಥುರೆಯ ಪ್ರಖ್ಯಾತ ಸ್ಥಳಗಳು, ಮಂದಿರಗಳು, ಸಾಧು-ಸಂತರು ಇವರ ದರ್ಶನ ಪಡೆಯುವುದರಲ್ಲಿ ಅವಳಿಗೆ ಮುಖ್ಯ ಪುರೋಹಿತರೂ ದಾರಿತೋರುವವಳೂ ಆ ನಾಯಡು ಬಾಯಿಯೇ ಆಗಿದ್ದಳು. ಆಕೆಗೂ ಸಾಧು-ಸಂತರಲ್ಲಿ ಹೆಚ್ಚಾಗಿ ನಿಷ್ಠೆಯಿದ್ದಿತು. ಯಾವನೊಬ್ಬ ಹೊಸ ಸಾಧುವು ಮಥುರೆಯಲ್ಲಿ ಪ್ರಖ್ಯಾತನಾದ ಕೂಡಲೆ, ಆತನ ಉಪದೇಶ ಕೇಳಿಕೊಳ್ಳಲಿಕ್ಕೂ ಪ್ರಸಂಗೋಪಾತ್ ಯಥಾಶಕ್ತಿ ಆತನ ಸೇವೆ ಮಾಡಲಿಕ್ಕೂ ಅನ್ನಪೂರ್ಣಬಾಯಿಯು ಸಹಸಾ ತಪ್ಪುತ್ತಿರಲಿಲ್ಲ.

ಆವಳ ಮನೆಯ ಸಮೀಪದ ಘಾಟಿನಲ್ಲಿ ಕಳೆದ ತಿಂಗಳಲ್ಲಿ ಯಾವ ಒಬ್ಬ ಯೋಗಾನಂದ ಹೆಸರಿನ ಸಾಧುವು ತನ್ನ ಶಿಷ್ಯರೊಡನೆ ಉಳಿದುಕೊಂಡಿದ್ದನೋ ಆತನೆಡೆಗೆ ನಾಯಡೂ ಬಾಯಿಯು ಭಜನ-ಪೂಜನ-ದರ್ಶನಗಳಿಗೆ ಹೋಗಹತ್ತಿದ್ದಳು. ಆ ಯೋಗಾನಂದ ಸ್ವಾಮಿಗೆ ಭೂತ-ಭವಿಷ್ಯ-ವರ್ತಮಾನ ತಿಳಿಯುವ ದೈವಿಕ ಶಕ್ತಿಯಿದೆಯೆಂದು ಎಲ್ಲೆಡೆಯಲ್ಲೂ ಸುದ್ದಿಯಾಗಿತ್ತು. ರಾತ್ರಿಯಲ್ಲಿ ಆ ಸಾಧುವಿನ ಮಠದಲ್ಲಿ ಭಜನವು ರಂಗಿಗೆ ಬರಲು, ಆ ನಾಮ ಸಂಕೀರ್ತನದ ಭರದಲ್ಲಿ ನೂರುಗಟ್ಟಲೆ ಜನರು ಬೆರೆತು, ಭಕ್ತಿಪರವಶತೆಯಿಂದ ಕುಣಿಯಹತ್ತುವರು. ಯೋಗಾನಂದ ಸ್ವಾಮಿಗೆ ನಾಯಡೂ ಬಾಯಿಯಿಂದ ರಮಾಬಾಯಿಯ ಸಂಗತಿ ತಿಳಿಯಲು, ಆತನು ದೇವರ ಪ್ರಸಾದವನ್ನು ರಮಾಬಾಯಿಗೆ ಸ್ವಂತ ಹಸ್ತದಿಂದ ತನ್ನ ವಿಶೇಷ ಕೃಪೆಯ ನಿದರ್ಶಕವೆಂದು ಕಳಿಸಿದನು. ರಮಾಬಾಯಿಯು ಆ ಭಜನೋತ್ಸವಕ್ಕೆ ಮಾಲತಿಯೊಡನೆ ಕಳೆದ ಎರಡು-ಮೂರು ರಾತ್ರಿಗಳಲ್ಲಿ ಹೋಗಹತ್ತಿದ್ದಳು. ಸ್ವಂತ ಯೋಗಾನಂದನೂ ಯೋಗಕ್ಷೇಮ ಕೇಳುವ ನೆವದಿಂದ ರಮಾಬಾಯಿಯನ್ನು ಅಲ್ಪಸ್ವಲ್ಪ ಮಾತನಾಡಿಸಿದ್ದನು.

ಯೋಗಾನಂದನ ಬಗ್ಗೆ ಊರೊಳಗಿನ ಕುಟಾಳ ಸಂಘದಲ್ಲಿ ಕೂಡ ಏನೂ ಟೀಕೆಯಾಗದಂತೆ ಆತನ ವರ್ತನವು ದೈವಿಕವೂ, ನಿರ್ಲೋಭವೂ, ಸಾತ್ವಿಕವೂ, ಸರಲವೂ ಆಗಿದ್ದಿತು. ಆತನು ಭಜನದಲ್ಲಿ ಗುಂಗಾದನೆಂದರೆ ಆ ಸತ್ಪುರುಷನಿಗೆ ಜಗತ್ತಿನ ಹಾಗು ಸ್ವಂತದ ದೇಹದ ಭಾನವೇ ಉಳಿಯದಂತೆ ತೋರುತ್ತಿತ್ತು. ಆತನ ಮುಖ್ಯ ಸಾಧನವು ಭಜನವೇ ಆಗಿತ್ತು. ಮಿಕ್ಕ ಯಾವ ಆಡಂಬರವೂ ಆತನ ಮಠದಲ್ಲಿ ಕಂಡು ಬರುತ್ತಿದ್ದಿಲ್ಲ. ಆತನ ಶಿಷ್ಯ ಸಂಪ್ರದಾಯವು ಮಾತ್ರ ಹೆಚ್ಚಾಗಿದ್ದು, ಅವರೆಲ್ಲರೂ ಆತನ ಹಿಂದಿನಿಂದ ಶಿಸ್ತಿನಲ್ಲಿ ನಡೆಯುವಾಗ, ಶಿಸ್ತಿನಿಂದ ಮಠದಲ್ಲಿ ವರ್ತಿಸುವಾಗ ಆಶ್ಚರ್ಯವೆನಿಸುತ್ತಿತ್ತು. ಆತನ ಬಿಡಾರವು ಮುಘುರೆಯಿಂದ ಬೇಗನೆ ಸ್ಥಳಾಂತರವಾಗತಕ್ಕದ್ದಿತ್ತು. ಅದರಿಂದ ಆ ಕೊನೆಯ ಸಪ್ತಾಹದಲ್ಲಿ ಭಜನೆಯು ಏಕೋಪ್ರಕಾರವಾಗಿ ನಡೆದಿತ್ತು. ನೂರುಗಟ್ಲೆ ಜನರು ಅಲ್ಲಿಗೆ ಪ್ರತಿ ರಾತ್ರಿ ಸೇರುತ್ತಿದ್ದರು.

ರಮಾಬಾಯಿಯು ಮಾಲತಿಯನ್ನು ಕರಕೊಂಡು ಇಂದಿನ ರಾತ್ರಿಯ ಭಜನಮಹೋತ್ಸವಕ್ಕೆ ಅಲ್ಲಿಗೆ ಹೋಗತಕ್ಕವಳಿದ್ದಳು. ಆ ತಾಯಿ-ಮಗಳು ತಮ್ಮ ರಾತ್ರಿಯ ಊಟ-ಪಾಟ ತೀರಿಸಿಕೊಂಡರು. ಅಷ್ಟರಲ್ಲಿ ನಾಯುಡೂ ಬಾಯಿಯೂ ಬಂದಳು. ಕೂಡಲೆ ಆ ಮೂವರೂ ಘಾಟಿನ ಮೇಲಿನ ಆ ಸ್ವಾಮಿಯ ಮಠಕ್ಕೆ ಹೋಗಲು ಲಗುಬಗೆಯಿಂದ ಹೊರಟರು.

---

## ೩ನೇ ಪ್ರಕರಣ

ರಮಾಬಾಯಿಯು ಮಾಲತಿಯೊಡನೆ ಭಜನೆಯ ಸ್ಥಳಕ್ಕೆ ತಲುಪಿದ ಕಾಲಕ್ಕೆ ಭಜನೆಯು ಒಳ್ಳೇ ರಂಗಿಗೆ ಬಂದಿದ್ದಿತು. ಆ ಘಾಟಿನ ಮೇಲೆ ನೋಡಿದತ್ತೆಲ್ಲ ಜನದಟ್ಟಣೆಯು! ಹಿಂದೀ ಭಜನದಂತೆ ದೊಡ್ಡ ದೊಡ್ಡ ಝಾಂಜು ತಕ್ಕೊಂಡು ಅರವತ್ತು-ಎಪ್ಪತ್ತು ಗೋಸಾವಿಗಳು, ಸಾಧು-ಸಂತರು ಯೋಗಾನಂದನನ್ನು ಸುತ್ತುಗಟ್ಟಿಕೊಂಡು ನಾಮಸಂಕೀರ್ತನವನ್ನು ನಡೆಸಿದ್ದಾರೆ. ಮುಖ್ಯರಾದ ಹತ್ತಿಪ್ಪತ್ತು ಮಂದಿ ಶಿಷ್ಯರು ಮೃದಂಗ, ವೀಣೆ, ತಾಳ, ತಪ್ಪಡೆ ಮುಂತಾದವುಗಳನ್ನು ಒಳ್ಳೇ ಸಜ್ಜಾಗಿ ಧರಿಸಿ, ಯೋಗಾನಂದನ ಸನ್ನಿಧಿಯಲ್ಲಿರುವರು; ಮತ್ತು ಮಧ್ಯದಲ್ಲಿ ಕೆಲಹೊತ್ತು ಕುಳಿತು, ಕೆಲಹೊತ್ತು ಭಕ್ತಿಪರವಶನಾಗಿ ನಿಂತುಕೊಂಡು ಯೋಗಾನಂದಜಿಯು ಗಟ್ಟಿ, ದೊಡ್ಡ ಹಾಗು ತನ್ಮಯ ದನಿಯಲ್ಲಿ ಭಜನವನ್ನನ್ನುತ್ತಿರುವರು! ಆ ದಟ್ಟಣಿಯಲ್ಲಿ ಒಳನುಗ್ಗಿ ಹೋಗಲಿಕ್ಕೆ ಶಕ್ಯವಿರಲಿಲ್ಲ; ಆದರೆ ನಾಯುಡು ಬಾಯಿಯು ಮುರುವತ್ತಿಗಾಗಿ, ಅವರನ್ನು ಮಂದಿರದೊಳಗಿನ ವಿಶಿಷ್ಟವಾದ ಕಾದಿಟ್ಟ ಸ್ಥಳದಲ್ಲೊಯ್ದು ಬಿಡಲಿಕ್ಕೆ

ಒಬ್ಬ ಶಿಷ್ಯನು ಮುಂಗಡವಾಗಿಯೇ ನಿಯಮಿಸಲ್ಪಟ್ಟಿದ್ದನು. ಆತನು ಆ ತ್ರಿವರ್ಗರನ್ನು ಕಾಣುತ್ತಲೆ, ಯೋಗಾನಂದರ ಸಂಕೇತದ ಮೇರೆಗೆ ಅವರನ್ನು ಕರೆದೊಯ್ದು ಕೂಡ್ರಿಸಿದನು.

ಇತ್ತ ಭಜನವು ಒಳ್ಳೇ ರಂಗಿಗೆ ಬಂದಿತು. ಶ್ರೀಮತ್ ಸಾಧು ತುಲಸೀ ದಾಸರ ಒಂದು ಪದದ ಆ ಚರಣವನ್ನು ಯೋಗಾನಂದರು ನೂರಾರು ಭಜನಿಗರ ಕಂಠಗಳಿಂದ ಪರಿಪುಷ್ಟವಾದ ಒಂದೇ ಸ್ವರದಲ್ಲಿ ಗಟ್ಟಿಗಟ್ಟಿಯಾಗಿ ನಿನಾದಗೊಳಿಸುತ್ತಿದ್ದರು.

ತುಲಸೀ ಮುಗನ ಭಯೇ । ಹರಿಗುಣ ಗಾನೋಮೇ॥
ಮುಗನ ಭಯೇ । ಹರಿಗುಣ ಗಾನೋಮೆ ॥ ಪಲ್ಲ ॥
ಕೋಯೀ ಚಢೇ ಹಾಥೀ ಘೋಡಾ ಪಾಲಖೀ ಸಜಾಕೇ ।
ಸಾಧು ಚಲೆ ಪೈಯಾ ಚಿಟೀಯಾ ಬಜಾಕೆ ॥
ಮುಗನ ಭಯೆ । ಹರಿಗುಣ ಗಾನೋಮೆ ॥ ತುಲಸೀ ॥

ಝೂಂಝುನ ಝುಣ ಝುಣ ಶಬ್ದವು ರಕ್ತದ ಬಿಂದು ಬಿಂದುಗಳನ್ನು ಕಂಪಿಸತೊಡಗಿತು. ಭಕ್ತಿರಸದ ಮಡುವಿನಲ್ಲಿ ಎಲ್ಲ ಸಮಾಜವೂ ಮುಣುಗೇಳುತ್ತಿತ್ತು. ಹರಿನಾಮೋಚ್ಚಾರದ ಹೊರತು ಬೇರೆ ಯಾವ ಮನೋವೃತ್ತಿಯ ಧ್ವನಿಯೂ ಕೇಳಿಸದಾಯಿತು; ಆದರೆ ಅದು ಒಬ್ಬರಿಂದೊಬ್ಬರಿಗೆ ಕೇಳಿಸದಾಯಿತೋ ಅಥವಾ ಸ್ವಂತದ್ದು ಸ್ವಂತಕ್ಕೇ ಕೇಳಿಸದಾಯಿತೋ ಇದನ್ನಾರು ಹೇಳಬೇಕು?

ಇಷ್ಟರಲ್ಲಿ ಆ ಅತ್ಯುಚ್ಚವಾಗಿದ್ದ ಶತಕಂಠ ನಿನಾದವನ್ನಿಳಿಸುತ್ತ ಇಳಿಸುತ್ತ ಆ ಪದದ ಚರಣಗಳನ್ನು ಯೋಗಾನಂದನೊಬ್ಬನೇ ಬಹು ತಲ್ಲೀನತೆಯಿಂದ ಅನ್ನಹತ್ತಿದ್ದರಿಂದ, ಶಿಷ್ಯಾದಿಕ ಭಜನಿಗರು ಝಾಂಜು ಬಾರಿಸುವದನ್ನು ಬಿಟ್ಟು, ಚಿಪ್ಪಲಿಗಳನ್ನು ಗತ್ತಿನಿಂದ ಹಿಡಿದರು. "ತುಲಸೀ ಮುಗನ ಭಯೇ। ಹರಿಗುಣ ಗಾನೋಮೇ॥" ಈ ಚರಣವನ್ನು ಒಳ್ಳೇ ಸವಿಕಟ್ಟಾಗಿ ತಿರುತಿರುಗಿ ಸಣ್ಣದನಿಯಲ್ಲಿ ಅನ್ನುತ್ತನ್ನುತ್ತ ಯೋಗಾನಂದನು ಎದ್ದು ನಿಂತನು.

ಯೋಗಾನಂದನು ಆ ಪದದ ಅರ್ಥವನ್ನೇನೂ ಹೇಳುತ್ತಿರಲಿಲ್ಲ; ಆದರೆ ಯಾರಿಗೆ ಅದು ತಿಳಿದಿದ್ದಿತೋ, ಅವರಿಗೆ ಆ ಭಜನದಲ್ಲಿ ಅರ್ಥದ ಗ್ರಂಥಗಳೇ ಕೇಳಬರುತ್ತಿದ್ದವು! ಈ ಜೀವನದ ಸಾಧನವನ್ನು ಪ್ರತಿಯೊಬ್ಬರು ತಂತಮ್ಮ ಇಚ್ಛೆಯ ಮೇರೆಗೆ ಆಚರಿಸುತ್ತಿರುವರು. ಪ್ರತಿಯೊಬ್ಬನೂ ಆನಂದದ ಬೆನ್ನು ಹತ್ತಿರುತ್ತಾನೆ. ಹಲವರು ಭೋಗದಲ್ಲಾದರೆ ಕೆಲವರು ಯೋಗದಲ್ಲಿ. ಯಾವನು ಹೇಗೆ ಮತ್ತು ಎಂಥ ಮನೋವೃತ್ತಿಯಿರುವನೋ ಅಂತೆಯೇ ಆತನ

ಇಚ್ಛೆಯು. 'ಸ್ವಭಾವೋ ಮೂರ್ಧ್ನಿ ವರ್ತತೇ!' ಆದುದರಿಂದ ಬಾಹ್ಯ ಸಾಧನಗಳ ವಾದವೇತಕ್ಕೆ ಬೇಕು? ನಿಮಗೆ ಏತರಲ್ಲಿ ಆನಂದವೆನಿಸುವದೋ ನೀವು ಅದರಲ್ಲಿರ್ರಿ. ಅವರಿಗೇತರಲ್ಲಿ ಆನಂದವೆನಿಸುವದೋ ಅವರು ಅದರಲ್ಲಿರಲಿ. ನನ್ನ ಮಟ್ಟಿಗೆ ಕೇಳಿದರೆ, "ತುಲಸೀ ಮಗನ ಭಯೇ। ಹರಿಗುಣ ಗಾನೋಮೇ। ಹರಿಗುಣ ಗಾನೋಮೇ। ಹರಿಗುಣ ಗಾನೋಮೇ॥"

ಒಬ್ಬಾನೊಬ್ಬನು ಬಹು ಮೂಲ್ಯವಾದ ಚಂದನದ ಮಂಚದ ಮೇಲೆ ತೆಕ್ಕೆ-ಲೋಡುಗಳ ಮಧ್ಯದಲ್ಲಿ ಹೊರಳಾಡಲಿಕ್ಕೆ ಆತುರನಾಗಿದ್ದಾನೆ; ಆತನಿಗೆ ಅದರಲ್ಲಿಯೇ ಆನಂದವೆನಿಸುತ್ತದೆ; ಆದರೆ ಇನ್ನೊಬ್ಬನು ತನ್ನದಾಗಿದ್ದ ಪಲ್ಲಂಗದ, ಇಷ್ಟೇ ಅಲ್ಲ, ತನ್ನ ಕಾಮುಕ ಹೆಂಡಂದಿರನ್ನು ಕೂಡ ಬಿಟ್ಟುಗೊಟ್ಟು, ಯಾವನೊಬ್ಬ ಬುದ್ಧನಂತೆ ಬೋಧೀ (ಆಲದ) ಗಿಡದ ಕೆಳಗೆ ಬಟ್ಟಬೈಲಲ್ಲಿ ಕೇವಲ ನೆಲದ ಮೇಲೆ ಬಿದ್ದುಕೊಳ್ಳುತ್ತಾನೆ. ಅಂಥವನಿಗೆ ನಿಜವಾದ ಗಾಢನಿದ್ದೆಯು ಅಲ್ಲಿಯೇ ಹತ್ತುತ್ತದೆ! ಗಾಢನಿದ್ದೆ ಹತ್ತುವದೇ ಉದ್ದಿಷ್ಟವಿದ್ದರೆ, ಅದು ಯಾರಿಗೆ ಎಲ್ಲಿ ಹತ್ತುವದೋ ಅಲ್ಲಿಯೇ ಅವರು ಮಲಗುವದು ಇಷ್ಟವಾಗಿದೆ ನನ್ನ ಸಾಧನವನ್ನೇ ನೀನೂ ಮಾಡಬೇಕೆಂಬ ವಾದವೇತಕ್ಕೆ?

ಕೆಲವರು ಆನೆಯ ಮೇಲೆಂದರೆ, ಕೆಲವರು ಕುದುರೆಯ ಮೇಲೆ; ಕೆಲವರು ಪಲ್ಲಕ್ಕಿಯಲ್ಲಿ ಕುಳಿತು ಒಳ್ಳೇ ಡೌಲಿನಿಂದ ದಾರಿಕ್ರಮಿಸುತ್ತಾರೆ; ಅವರಿಗೆ ಅದರಲ್ಲಿಯೇ ಆನಂದವೆನಿಸುತ್ತವೆ. ಅವರದವೇ ಸ್ವಭಾವವು; ಆದರೆ ಈ ಸಾಧು ನೋಡಿರಿ! ಈತನಿಗೆ ಆನೆಯ ಮೇಲೆ ಹತ್ತುವದೆಂದರೆ ಗಲ್ಲಿಗೇರುವಷ್ಟೇ ದುಃಖಪ್ರದವು! ಪಲ್ಲಕ್ಕಿಯನ್ನೇರಿ ಅದನ್ನು ಬೇರೆಯವರು ಹೊರುವ ಸ್ವಾಮಿತ್ವವು ಅತಿ ಹೇಯವಾಗಿ ತೋರುವದರಿಂದ, ಪಲ್ಲಕ್ಕಿಯ ಸ್ಪರ್ಶವಾದೊಡನೆಯೇ ಆತನ ಮನಸ್ಸಿಗೆ ಬೆಂಕಿಯ ಸ್ಪರ್ಶವಾದಂತೆ ದುಃಖವಾಗುತ್ತದೆ! ಅಂತೆಯೇ ಆ ಸಾಧುವು ಕಾಲಿಲೆ ನಡೆಯುತ್ತಾನೆ, ಮತ್ತು ಕಾಲಿಲೆ ನಡೆಯುವಾಗಲೂ ಕ್ರಿಮಿ-ಕೀಟಕಗಳು ತನ್ನ ಕಾಲ ಕೆಳಗೆ ಸಾಯುವವೇನೋ ಎಂಬ ಅಂಜಿಕೆಯಿಂದ ಅವುಗಳ ಬಗ್ಗೆ ಕನಿಕರವುಂಟಾಗಿ, ಅವುಗಳನ್ನು ಬದುಕಿಸುವದಕ್ಕೆಂದು ನೋಡಿ ನೋಡಿ ಕಾಲಿಕ್ಕುತ್ತಿರುತ್ತಾನೆ. ಆತನಿಗೆ ಅದರಲ್ಲಿಯೇ ನಿಜವಾದ ಆನಂದವೆನಿಸುತ್ತದೆ.

ಕೋಯಿ ಚಢೇ ಹಾಥೀ ಘೋಡಾ ಪಾಲಖೀ ಸಜಾಕೇ ॥
ಸಾಧು ಚಲೆ ಪೈಯಾ ಪೈಯಾ ಚಿಟೀಯಾ ಬಚಾಕೇ ॥
ಪೈಯಾ ಪೈಯಾ। ಚಿಟೀಯಾ ಬಚಾಕೇ ॥
ಪೈಯಾ ಪೈಯಾ। ಚಿಟೀಯಾ ಬಚಾಕೆ ॥

ಈ ಚರಣವನ್ನು ಮಂದ ಹಾಗು ಶಾಂತ ಸ್ವರದಲ್ಲಿ ಮತ್ತೆ ಮತ್ತೆ ಅನ್ನುತ್ತ, ಯೋಗಾನಂದ ಸಾಧುವು ತನ್ನ ಹೆಜ್ಜೆಗಳನ್ನು ಒಂದೊಂದಾಗಿ ಎಣಿಸಿ ಮೆಲ್ಲನೆ ಇಕ್ಕುತ್ತ, ವೀಣೆಯ ಸ್ವರದಲ್ಲಿ ತಿರುಗಿ ತಿರುಗಿ ಹಾಡಹತ್ತಿದನು:— "ಪೈಯಾ ಪೈಯಾ ಚಿಟೀಯಾ ಬಜಾಕೇ ॥ ಸಾಧು ಚಲೇ ಪೈಯಾ ಪೈಯಾ ಚಿಟೀಯಾ ಬಜಾಕೆ ॥"

ಆ ಕಾಲಕ್ಕೆ ತುಲಸೀದಾಸರ ಪದದಲ್ಲಿ ಉಲ್ಲೇಖಿಸಿದ ಸಾಧುವು ಈತನೇ ಏನೆಂದು ಪ್ರತಿಯೊಬ್ಬರಿಗೂ ಭಾಸವಾಯಿತು. ಏಕೆಂದರೆ. ಯೋಗಾನಂದನಿಗೊಂದು ವಿಶಿಷ್ಟ ಚಟವಿದ್ದಿತೇನಂದರೆ, ದಾರಿಯಲ್ಲಿ ಅಂಗಳದಲ್ಲಿ-ಮನೆಯಲ್ಲಿ, ಆತನು ಎಲ್ಲಿ ನಡೆಯುತ್ತಿದ್ದರೂ ಕೆಳಗೆ ನೋಡಿ ನೋಡಿ ಒಂದೊಂದೇ ಹೆಜ್ಜೆಯನ್ನು ಎತ್ತಿಡುತ್ತ ಸಾಗುತ್ತಿದ್ದನು

ತನ್ನ ಸ್ವಂತದ ಸಾಧುತ್ವವನ್ನೇ ತುಳಸೀದಾಸರ ಪದದೊಳಗಿನ ಚರಣಗಳಿಂದ ಲೋಕದವರ ಮನಸ್ಸಿನ ಮೇಲೆ ಬಿಂಬಿಸಲಿಕ್ಕುಪಯುಕ್ತವಾಗಬೇಕೆಂದು ಅವನು ಆ ಭಜನವನ್ನಷ್ಟು ರಸಾಳ ತನ್ಮಯತೆಯಿಂದನ್ನುತ್ತಿರದಿದ್ದರೂ ಅದರ ಪರಿಣಾಮವು ಮಾತ್ರ ಹಾಗೆಯೇ ಆಯಿತು. ತುಳಸೀದಾಸರ ಒರೆಗೆ ಯೋಗಾನಂದನ ಸಾಧುತ್ವವು ಸಂಪೂರ್ಣವಾಗಿ ಹತ್ತುತ್ತವೆಂದು ಪ್ರತಿಯೊಬ್ಬರಿಗೂ ಹೇಳದಿದ್ದರೂ ತಿಳಿಯಿತು

ಅಂಥ ಭಜನೋತ್ಸವದಲ್ಲಿ ಅಪರಾತ್ರಿಯಾಯಿತು. ಆರತಿಯ ಕಾಲಕ್ಕೆ ಸಾಧುವಿನ ಚರಣ ಸ್ಪರ್ಶಿಸಲಿಕ್ಕೆಂದು ಬಹು ಜನರ ದಟ್ಟಣೆಯಾಯಿತು; ಮತ್ತು ಆ ಗೊಂದಲದಲ್ಲಿಯೇ ಆ ಸಮೂಹವು ತಮ್ಮ ತಮ್ಮ ಮನೆಯ ದಾರೀ ಹಿಡಿಯಹತ್ತಲು, ಆಗ ಬಹು ದೊಡ್ಡ ಗಲಭೆಯಾಯಿತು. ಇಷ್ಟರಲ್ಲಿ ನಾಯುಡೂಬಾಯಿ, ರಮಾಬಾಯಿ ಹಾಗು ಮಾಲತಿ ಇವರು ಎಲ್ಲಿಂದ ಹೊರಬೀಳುತ್ತಿದ್ದರೋ, ಅಲ್ಲಿ ಯಾರೋ ಹತ್ತೆಂಟು ಜನರಲ್ಲಿ ಒಮ್ಮೆಲೆ ಜಗಳಕ್ಕೆ ಆರಂಭವಾಗಿ ದೊಡ್ಡ ಗದ್ದಲವುಂಟಾಯಿತು. ಅದನ್ನು ನಿವಾರಿಸುವದಕ್ಕೆಂದು ಸಾಧುಗಳ ಐದಾರು ಜನ ಶಿಷ್ಯರು ಕೈಯಲ್ಲಿ ಬೆತ್ತ ತಕ್ಕೊಂಡು ಅಲ್ಲಿ ನುಗ್ಗಿದರು. ಯಾವನು ಎತ್ತ ನಡೆದನೋ, ಅತ್ತೇ ಅವನನ್ನು ನೂಕಿಸುತ್ತ ನಡೆದರು. ಮಧ್ಯದಲ್ಲಿ ವಿಪುಲವಾದ ದಟ್ಟಣೆಯಾಯಿತು! ಈ ಗೊಂದಲದಲ್ಲಿ ರಮಾಬಾಯಿಯೂ, ನಾಯುಡುಬಾಯಿ-ಮಾಲತಿಯರೂ ಎತ್ತ ನೂಕಲ್ಪಟ್ಟರೆಂಬದು ಪತ್ತೆಹತ್ತದಾಯಿತು; ಆದರೆ ಇಷ್ಟರಲ್ಲಿ ಗದ್ದಲಕ್ಕೆ ಸಿಕ್ಕು ಬಿದ್ದು ಗಾಬರಿಗೊಂಡ ರಮಾಬಾಯಿಯ ಕೈಯನ್ನು ಸಾಧುವಿನ ಒಬ್ಬ ಶಿಷ್ಯನು ಹಿಡಿದು, ಅವಳನ್ನು ಆ ಗದ್ದಲದೊಳಗಿಂದ ಒತ್ತಟ್ಟಿಗೆಳೆದು ಹೇಳಿದನೇನಂದರೆ:— "ಸಾಧುಗಳ

ಅಪ್ಪಣೆಯ ಮೇರೆಗೆ ಹೆಂಗಸರನ್ನು ಹೆಚ್ಚು ತತ್ಪರತೆಯಿಂದ ಅವರವರ ಮನೆಗೆ ಕಳಿಸಲಿಕ್ಕೆ ನಮ್ಮನ್ನು ನೇಮಿಸಿರುತ್ತಾರೆ. ನೀವು ನಿಮ್ಮ ಮನೆಗೆ ನಡೆಯಿರಿ.''

“ಆದರೆ ನಮ್ಮ ಮಾಲತಿಯೆಲ್ಲಿ? ಮಾಲತೀ”-ಎಂದು ಗದ್ಗದ ಸ್ವರದಿಂದ ರಮಾಬಾಯಿಯು ಕೇಳಲು, ಆ ಶಿಷ್ಯನು ಅವಳನ್ನು ಇನ್ನಿಷ್ಟು ವೇಗದಿಂದ ಮುಂದೆ ಮುಂದೆ ದೂಡುತ್ತಲೆ “ಎಲ್ಲರನ್ನೂ ಅವರವರ ಸ್ಥಳಕ್ಕೆ ಕಳಿಸಲಾಗಿವೆ. ನೀವು ಸುಮ್ಮನೆ ನಿಮ್ಮ ಮನೆಗೆ ಹೊರಟು ಹೋಗಿರಿ!”

ದಟ್ಟಣೆಯಿಂದ ಅರ್ಧದಾರಿ ಮುತ್ತಿತ್ತು. ಅದರೊಳಗಿಂದ ಆ ಶಿಷ್ಯನು ರಮಾಬಾಯಿಯನ್ನು ದೂಡುತ್ತ ಕರೆತಂದು “ಹೊರಡಿರಿ; ಇನ್ನು ನೆಟ್ಟಗೆ ನಿಮ್ಮ ಮನೆಗೆ ಹೋಗಿರಿ. ಅಲ್ಲಿದ್ದ ಆ ಇಬ್ಬರು ತಾಯಿಂದಿರನ್ನೂ ಈ ಮೊದಲೇ ಕಳಿಸಲಾಗಿವೆ!” ಎಂದು ಭರವಸೆ ಕೊಟ್ಟು, ಆಕೆಯ ಪ್ರತ್ಯುತ್ತರ ಕೇಳಿಕೊಳ್ಳಲಿಕ್ಕೆ ನಿರೀಕ್ಷಿಸದೆ, ಆ ಶಿಷ್ಯನು ಮತ್ತಾರಾದರೂ ಹೆಣ್ಣುಮಕ್ಕಳು ಆ ದಟ್ಟಣೆಯಲ್ಲಿ ಸಿಕ್ಕಿದ್ದರೆ ಅವರನ್ನು ಪಾರುಮಾಡಿ ಮನೆಗೆ ಕಳಿಸುವದಕ್ಕೆಂದು ಅಲ್ಲಿಂದ ಹೊರಟು, ಆ ದಟ್ಟಣೆಯಲ್ಲಿ ಸೇರಿ ಕಾಣದಾದನು.

ರಮಾಬಾಯಿಯು ಧಡಪಡಿಸುವ ಹೃದಯದೊಡನೆ ಲಗುಬಗೆಯಿಂದ ಹೆಜ್ಜೆಯಿಕ್ಕುತ್ತ ಮನೆಗೆ ನಡೆದಳು. ಇಂಥ ಗದ್ದಲದಲ್ಲಿ ಸಾಧುಗಳು ತಮ್ಮೆಲ್ಲರ ಬಗ್ಗೆ ಇಷ್ಟು ಜಾಗ್ರತೆ ವಹಿಸಿ ಮನೆಗೆ ಕಳಿಸಿಕೊಟ್ಟ ಉಪಕಾರವನ್ನು ಒತ್ತಟ್ಟಿಗೆ ಸ್ಮರಿಸುತ್ತಲೂ, ಮಾಲತಿಯು ಬಾಗಿಲ ಬಳಿಯಲ್ಲಿ ತನ್ನ ದಾರಿ ಕಾಯುತ್ತ ಎಷ್ಟು ಗಾಬರಿಯಿಂದ ನಿಂತಿರಬಹುದೆಂದು ಮತ್ತೊತ್ತಟ್ಟಿಗೆ ಚಿಂತಿಸುತ್ತಲೂ ಆಕೆ ಮನೆಗೆ ತಲುಪಿದಳು. ಕಗ್ಗತ್ತಲೆಯಲ್ಲಿಯೇ ತಮ್ಮ ಪಡಸಾಲೆಯ ಕಡೆಗೆ ನೋಡಿದಳು; ಆದರೆ ಅಲ್ಲಿ ಮಾಲತಿಯು ಅಥವಾ ಇನ್ನಾರ ಸುಳಿವೂ ಹತ್ತಲಿಲ್ಲ. ಲಾಂದರ ಹೊತ್ತಿಸಿ ನೋಡಿದಳು; ಬಾಗಿಲ ಬೀಗವು ಹಾಕಿದಂತೆಯೇ ಇತ್ತು! ಮಾಲತಿಯು ತನಗಿಂತ ಮುಂದೆ ಬಂದ ಯಾವ ಲಕ್ಷಣವೂ ತೋಚಲೊಲ್ಲದು. ಭಜನದ ಕೊನೆಗೆ ಯಾವ ಗೊಂದಲವೆದ್ದಿತೋ, ಅದರಲ್ಲಿ ಸಿಕ್ಕ ಮಾಲತಿಯು ಬಿಕ್ಕಿಬಿಕ್ಕಿಸಿ ಅಳುತ್ತಿದ್ದಳೆಂದು ಅವಳಿಗೆ ಭಾಸವಾಗಹತ್ತಿತು!

“ಮಾಲತೀ, ಎಲೇ ಮಾಲತೀ!”

ಹೀಗೆಂದು ರಮಾಬಾಯಿಯು ಎರಡು ಸಾರೆ ಹೇಗೆ ಹೇಗೋ ಏತಕ್ಕಾಗಿಯೋ ಆ ಕಾರ್ಗತ್ತಲೆಯಲ್ಲೇ ಕೂಗಿದಳು; ಮತ್ತು ಮೂರನೇ ಸಾರೆ ಹಾಗೆ ಸುಮ್ಮ ಸುಮ್ಮನೆ ಕೂಗುತ್ತಿರುವಾಗಲೇ ಅವಳ ಕುತ್ತಿಗೆಯು ಬಿಗಿದು ಅಳುವು ಬರಲು, ಗಕ್ಕನೆ ಆಕೆಯು ನೆಲಕ್ಕೆ ಕುಸಿಕುಳಿತಳು! ಅಲ್ಲಿರದ ಯಾರನ್ನು ತಾನು

ಕೇಳುತ್ತಿರುವೆನೆಂಬದನ್ನು ತಿಳಿದೂ ತಿಳಿದು, ಅವಳು ಬಿಕ್ಕಿಬಿಕ್ಕುತ್ತ "ನನ್ನ ಮಾಲತಿಯು ಎಲ್ಲಿರುವಳವ್ವಾ? ನನ್ನ ಮಾಲತಿ ಬಂದಳೇನಿರಿ?" ಎಂದು ಗಟ್ಟಿಗಟ್ಟಿಯಾಗಿ ಕೇಳಿದಳು.

ನಿಜವಾಗಿ ಹೇಳುವುದಾದರೆ, ಆಗ ಅವಳು ಅಂಜುವಕಾರಣವಿದ್ದಿಲ್ಲ. ಸಾಧುವಿನ ಶಿಷ್ಯನು "ಅವರೆಲ್ಲರನ್ನೂ ಈ ಮೊದಲೇ ಕಳಿಸಲಾಗಿದೆ." ಎಂದು ಅವಸರವಸರದಿಂದ, ಆದರೆ ಸ್ಪಷ್ಟವಾಗಿ ಹೇಳಿದ್ದನು. ಇಲ್ಲಿರದಿದ್ದರೆ ನಾಯುಡು ಬಾಯಿಯ ಮನೆಗೇ ಅವರಿಬ್ಬರನ್ನು ಕಳಿಸಿರಬೇಕು. ತಾನು ದಟ್ಟಿಣೆಯಲ್ಲಿ ಒಬ್ಬಳೇ ಸಿಕ್ಕೆನು; ಆದರೆ ಅವರಿಬ್ಬರೂ ಕೂಡಿಯೇ ಇರಬಹುದು ಅಲ್ಲಿ ಇರಲೇಬೇಕು! ಆದ್ದರಿಂದ ತನ್ನನ್ನು ಶೋಧಿಸುತ್ತ, ಇಷ್ಟು ದೂರದ ಈ ಮನೆಗೆ ಬರುವುದಕ್ಕಿಂತ, ತಮ್ಮಿಬ್ಬರನ್ನೂ ಅಲ್ಲಿಂದ ಸಮೀಪದಲ್ಲಿಯೇ ಇದ್ದ ನಾಯುಡು ಬಾಯಿಯ ಮನೆಗೇ ಕಳಸಬೇಕೆಂದು ನಾಯುಡು ಬಾಯಿಯೇ ಹೇಳಿಕೊಂಡಿರಬೇಕು.

ಹೀಗೆ ಬೇರೆ ಆಲೋಚನೆಯು ರಮಾಬಾಯಿಗೆ ಉಂಟಾಯಿತು. ತಾನು ಅತ್ತಕಡೆಗೆ ಹೋಗಿ ಮಾಲತಿಯನ್ನು ಸ್ವತಃ ನೋಡಬೇಕೆಂದು ಅವಳು ಎರಡೆರಡು ಸಾರೆ ದಾರಿ ಕೂಡ ಹಿಡಿದಿದ್ದಳು; ಆದರೆ ತಾನು ಅತ್ತ ಹೋದಾಗ ಇತ್ತ ಮಾಲತಿ ಬಂದರೆ? ಮತ್ತೆ ಆಕೆ ಒಬ್ಬಳೇ ಉಳಿಯುವಳು. ತನ್ನ ತಪ್ಪು, ಗಂಟಾದ್ದರಿಂದ ತನ್ನನ್ನು ಹುಡುಕಲಿಕ್ಕೆ ಆಕೆಯು ಪುನಃ ಹಿಂದಿರುಗಿದರೆ? ದೂರಿನ ದಾರಿ, ರಾತ್ರಿಯ ಮೂರನೇ ಯಾಮ, ಕಾರ್ಗತ್ತಲೆ! ಹೋಗಬೇಕೋ-ಬೇಡವೋ? ಹೀಗೆ ವಿವಂಚನೆಯು ಮರಳಿ ಮರಳಿ ಉಂಟಾಗುತ್ತಿರಲು, ಹೇಗೆಯೇ ತಿಳಿಯದು, ಆಕೆಗಾಗ ಜಂಪು ಹತ್ತಿತು!

ಆಕೆ ಮೆಟ್ಟಿ ಬಿದ್ದು ಎಚ್ಚತ್ತಾಗ ಮಾಲತಿಯ ಬರಿದಾದ ಹಾಸಿಗೆಯು ಪಕ್ಕದಲ್ಲಿಯೇ ಗೋಚರವಾಯಿತು! ಹಾಗೆಂದೂ ಕಾಣದ ಹಾಸಿಗೆಯದು! ದಿನಾಲು ಬೆಳಿಗ್ಗೆ ಎದ್ದೊಡನೆಯೇ ಗಾಢನಿದ್ರೆ ಮಾಡುತ್ತಿದ್ದ ತನ್ನ ಮಾಲತಿಯ ಅಸ್ತವ್ಯಸ್ತಗಳಾದ ಕೂದಲುಗಳನ್ನು ತನ್ನ ಬೆರಳಿನಿಂದ ಸರಿಪಡಿಸಿ, ಆಕೆಯ ಮೋರೆಯ ಮೇಲೆ ಕೈಯಾಡಿಸಿ ಹೊದಿಕೆಯನ್ನು ಚೆನ್ನಾಗಿ ಹೊಚ್ಚಿ, ಬಳಿಕ ನಗೆಮೊಗದಿಂದ ಪಟ್ಟಸಮ್ಮಾರ್ಜನಕ್ಕಾಗಿ ಹತ್ತುವದು ಆ ತಾಯಿಯ ನಿತ್ಯದ ಪರಿಪಾಠವು. ಆ ಹಾಸುಗೆಯ ಮೇಲೆ ಆ ತನ್ನ ಅಚ್ಚದ ಕೂಸಿನ ಮುಖಮಂಡಲವು ಇಂದು ಅವಳಿಗೆ ಕಾಣಸಲೊಲ್ಲದು. ಒಮ್ಮೆಲೆ ಅವಳ ಎದೆ ನಡುಗಿತು. ಅಶುಭ ವಿಚಾರಗಳು ಮನಸ್ಸಿನಲ್ಲಿ ನುಸುಳಿ ಬಂದವು; ಆದರೆ ಅವನ್ನು ಮನಸ್ಸಿನಲ್ಲಿ ಕೂಡ ಉಚ್ಚರಿಸದೆ, ರಮಾಬಾಯಿಯು ನೆಟ್ಟಗೆ ಎದ್ದು ಮಾಲ

ತ್ರಿಯ ಶೋಧಕ್ಕೆಂದು ನಾಯಡೂಬಾಯಿಯ ಮನೆಯ ದಾರಿ ಹಿಡಿದಳು.

ರಮಾಬಾಯಿ ತುಸ ದಾರಿ ಕ್ರಮಿಸುವಷ್ಟರಲ್ಲಿ ನಾಯುಡೂ ಬಾಯಿಯು ತನ್ನೆಡೆಗೆ ಬರುತ್ತಿರುವುದು ಕಾಣಿಸಿತು. ಆ ನಾಯಡೂ ಬಾಯಿಯ ಜೊತೆಗೆ ಮಾಲತಿಯಿರಲಿಲ್ಲ.

ಗಾಬರಿಯ ದನಿಯಿಂದ ರಮಾಬಾಯಿ ಕೇಳುತ್ತಾಳೆ "ಆದರೆ ಮಾಲತಿ ಯೆಲ್ಲಿರುವಳು?"

ಆಶ್ಚರ್ಯದಿಂದ ನಾಯಡೂ ಬಾಯಿ ಹೇಳುತ್ತಾಳೆ: "ಹಾಗಂದರೇನು? ಮಾಲತಿಯು ನಿಮ್ಮೊಡನೆಯೇ ಹೋದಳೆಂದು ಸಾಧುವಿನ ಶಿಷ್ಯನೊಬ್ಬನು ನನಗೆ ಹೇಳಿದನಲ್ಲ!"

"ಅಪ್ಪಯ್ಯಾ! ನಮ್ಮ ಮಾಲತಿಯೆಲ್ಲಿರುವಳಪ್ಪಾ?" ಎಂದು ಅಸ್ಪಷ್ಟ ವಾಗಿ ಅನ್ನುತ್ತ, ರಮಾಬಾಯಿಯು ಯಾವಳೊಬ್ಬ ಎಳ ಹುಡುಗಿಯಂತೆ ದಾರಿಯಲ್ಲೇ ಗಟ್ಟಿಗಟ್ಟಿಯಾಗಿ ಅಳಹತ್ತಿದಳು!

ನಾಯಡೂ ಬಾಯಿಯು ರಮಾಬಾಯಿಗಿಂತ ಧೈರ್ಯಸ್ಥ ಹೆಣ್ಣುಮಗ ಳಾಗಿದ್ದಳೆಂದೋ ಅಥವಾ ಅವಳ ಹೊಟ್ಟೆಯ ಒಬ್ಬೊಂಟಿಗ ಉಪವರಳಾದ ಹುಡುಗಿಯೇನೂ ಕಳೆದಿರಲಿಲ್ಲವೆಂದೋ ಆಕೆಯು ಧೈರ್ಯಗೆಡದೆ, ರಮಾ ಬಾಯಿಯನ್ನು ಸಾವರಿಸಿ ಹಿಡಿಯುತ್ತ:-"ಹೀಗೇಕೆ ಅಂಜುತ್ತೀರಿ? ನಿಮ್ಮನ್ನು, ನನನ್ನು ಹಾಗು ಎಲ್ಲ ಹೆಂಗಸರನ್ನು ಸಾಧುಗಳು ಹೇಗೆ ತಮ್ಮ ಶಿಷ್ಯರ ಮೂಲಕ ಆ ಗದ್ದಲದೊಳಗಿಂದ ಪಾರು ಮಾಡಿದರೋ, ಅದರಂತೆ ಮಾಲತಿಯನ್ನಾದರೂ ಪಾರುಮಾಡಿ ಅವರು ಸಂರಕ್ಷಿಸಿರಬಹುದು. ನಡೆಯಿರಿ, ನಾವು ಮೊದಲು ನೆಟ್ಟಗೆ ಸಾಧುಗಳ ಕಡೆಗೇ ಹೋಗೋಣ! ಮಾಲತಿಯು ಅಲ್ಲಿಯೇ ಸುರಕ್ಷಿತ ಳಾಗಿರುವಳು ನಡೆಯಿರಿ."

ಹೀಗೆಂದು ರಮಾಬಾಯಿಗೆ ಧೈರ್ಯಹೇಳಿ, ನಾಯುಡೂ ಬಾಯಿಯು ಆಕೆಯನ್ನು ಆ ಸಾಧುವಿನ ಮಂದಿರದ ಕಡೆಗೆ ಕರೆದೊಯ್ದಳು; ಆದರೆ ಆಗ ಅವಳ ಹೃದಯದಲ್ಲಿ ಮುಂದೆ ಏನಾದೀತು-ಏನಾಗಲಿಕ್ಕಿಲ್ಲ? ಎಂಬ ಧಗಧಗಿ ಯು ಹತ್ತದಿರಲಿಲ್ಲ

---

## ೩ನೇ ಪ್ರಕರಣ

ಯೋಗಾನಂದನು ಯಾವ ಮಂದಿರದಲ್ಲುಳಿದಿದ್ದನೋ ಅದರ ಅಂಗಳ ದಲ್ಲಿ ಕೆಲ ದರ್ಶನೇಚ್ಛುಗಳೂ ಕೆಲ ಪ್ರಶ್ನೇಚ್ಛುಗಳೂ ಸಾಧುಗಳ ಕರೆಬರುವ ವರೆಗೆ ಅತ್ತಿತ್ತ ಅಡ್ಡಾಡುತ್ತಿದ್ದರು. ಗುರುತಿನ ನಾಲ್ಕಾಲ್ಕು ಎಂಟೆಂಟು ಜನರು

ಒತ್ತಕ್ಷಿಗೆ ನಿಂತು, ಯೋಗಾನಂದನು ಭೂತ-ಭವಿಷ್ಯ ವರ್ತಮಾನಗಳನ್ನು ಹೇಗೆ ತಪ್ಪದೆ ಹೇಳುತ್ತಿರುತ್ತಾನೆಂಬದನ್ನು ಹೊಗಳುತ್ತಿದ್ದರು. ಯಾವ ನೊಬ್ಬನು ಆ ಬಗ್ಗೆ ಶಂಕಿಸಿದರೆ, ಆತನ ಶಂಕಾನಿರಸನಗೊಳಿಸುವದಕ್ಕೆ ಬೇರೆ ಕೆಲ ಭಾವಿಕ ಭಕ್ತರು ಯೋಗಾನಂದನು ಭವಿಷ್ಯವರ್ತಿಸುವ ಸಂಗತಿಗಳನ್ನು ಮತ್ತಿಷ್ಟು ಉಪ್ಪು-ಕಾರ ಹಚ್ಚಿ ಹೇಳಹತ್ತಿದ್ದರು. ಸ್ವಂತ ಯೋಗಾನಂದನು ಕೀರ್ತನದಲ್ಲಿ ಅಥವಾ ವ್ಯಕ್ತಿಗತ ಸಂವಾದದಲ್ಲಿ ಧಾರ್ಮಿಕ ಉಪದೇಶ ವೆಂದೇನೂ ಮಾಡುತ್ತಿರಲಿಲ್ಲ. ಆತನು ಯಾವ ಬಗ್ಗೆಯೂ ಯಾರೊಡನೆ ಯೂ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ಕೇವಲ ಯಾವ ಭೂತ-ಭವಿಷ್ಯ ಗಳನ್ನು ನೋಡಬೇಕೆಂದು ಅವನ ಮನಸ್ಸಿನಲ್ಲಿ ಬರುವದೋ, ಅಂಥವರನ್ನೇ ತನ್ನ ಶಿಷ್ಯರಿಂದ ತನ್ನ ಏಕಾಂತದ ಕೋಣೆಗೆ ಕರೆಯಿಸುತ್ತಿದ್ದನು. ಅಲ್ಲಿ ಆ ಮಹಂತನು ಕೆಲ ನಿಶ್ಚಿತ ಪ್ರಶ್ನೆಗಳನ್ನೇ ಕೇಳುತ್ತಿದ್ದನು. ಆ ಮೇಲೆ ಜಲಾ ದರ್ಶ ಎಂಬ ಹೆಸರಿನ ಒಂದು ತಾಂತ್ರಿಕ ಯಂತ್ರವನ್ನು ಎದುರಿಗೆ ತಕ್ಕೊಂಡು, ಆ ಯಂತ್ರದಲ್ಲಿ ತನ್ನ ದೈವಿಕ ದೃಷ್ಟಿಗೆ ಪ್ರತ್ಯಕ್ಷವಾಗಿ ಏನು ಕಾಣುವದೋ ಅಷ್ಟನ್ನೇ ಹೇಳುತ್ತಿದ್ದನು. ಯಾರಾದರೂ ಅದಕ್ಕೆ ಸಟಿ-ದಿಟವೆಂದರೆ, ಆ ಬಗ್ಗೆ ವಾದ ಮಾಡುತ್ತಿರಲಿಲ್ಲ. "ಪ್ರಭೂನೆ ಬತಲಾಯಾ, ವೈಸೆ ಕಹಾ। ಸಚ ಝೂಟ ಪ್ರಭೂಕಾ ಅಧಿಕಾರ। ಮೈ ಏಕ ಉಸಕೋ ಶಬ್ದೋಂಕಾ ಧ್ವನೀ ಹೂಂ।" ಈ ನಿಶ್ಚಿತ ಉತ್ತರವನ್ನೇ ಯೋಗಾನಂದನು ಹೇಳಿ, ತನ್ನ ಶಿಷ್ಯ ರಿಂದ ಆ ಪ್ರಶ್ನೇಚ್ಛು ಮನುಷ್ಯನನ್ನು ಹೊರಗೆ ಕಳಿಸಿಬಿಡುತ್ತಿದ್ದನು. ಆ ಜಲ ದರ್ಶನದೊಳಗಿನ ಭೂತ-ಭವಿಷ್ಯಕಥನದ ಬಗ್ಗೆ ಯೋಗಾನಂದನು ಯಾರಿಂ ದಲೂ ಒಂದು ಕಾಸು ಕೂಡ ಸ್ವೀಕರಿಸುತ್ತಿದ್ದಿಲ್ಲ. ಆ ಅಪರಿಗ್ರಹ ನಿರ್ಲೋಭ ವೃತ್ತಿಯ ಮೂಲಕ ಆತನು ಹೇಳಿದ ಸಂಗತಿಯ ಬಗ್ಗೆ ವಿಶ್ವಾಸಿಕ ಜನ ರದೇ ಅಲ್ಲ, ಅರ್ಧ ಸಂಶಯಿ ಜನರಿಗೂ ಹೆಚ್ಚಾಗಿ ಶ್ರದ್ಧೆಯುಂಟಾಗು ತ್ತಿತ್ತು. ಆ ಮಹಂತನು ವಾಕ್‌ಸಂಯಮನವನ್ನು ಪಾಲಿಸುತ್ತಿದ್ದುದರಿಂದ, ಆತನ ಬಾಯಿಂದ ಯಾವದೊಂದು ಗೂಢ ಶಬ್ದವು ಯಾವಾಗಾದರೊಮ್ಮೆ ಹೊಮ್ಮಿ ಹೊರಡಲು, ಅದರ ಅರ್ಥವನ್ನು ಪ್ರತಿಯೊಬ್ಬರೂ ತಮಗುಚಿತವಾಗಿ ತೋರುವುದನ್ನೇ ಮಾಡಿಕೊಳ್ಳಲಿಕ್ಕೆ ಸ್ವತಂತ್ರರಿರುತ್ತಿದ್ದರು. ಕೀರ್ತನ-ಭಜನ ಗಳಲ್ಲಿ ಮಾತ್ರ ಆ ಮಹಂತನು ಸ್ವತಃ ಅವರಲ್ಲಿ ತಲ್ಲೀನನಾಗಿ ವ ನಬಿಚ್ಚಿ ಸುಸ್ವರವಾಗಿ ಹಾಡುತ್ತಿದ್ದನು. ಆ ಕಾಲದ ಆತನ ಭಕ್ತಿತಲ್ಲೀನ ಅಭಿನಯ ದಿಂದ ಮಾತ್ರ ಆತನ ದೈವಿಕ ಸಿದ್ಧಿಯ ಮಹತಿಯು ಶ್ರೋತೃಗಳಿಗೆ ಕಂಡು ಬರುತ್ತಿತ್ತು; ಆದರೆ ಆ ಕೀರ್ತನವಲ್ಲಿಯೂ ಭಜನದ ಹೊರತು ಪ್ರವಚನ

ಮುಂತಾದ್ದನ್ನು ಅವನು ಲೇಶಮಾತ್ರವೂ ಹೇಳುತ್ತಿರಲಿಲ್ಲ. "ಭಜನ ಸಂತೋಕಾ | ಸಂತಸಿ ಜಾದಾ ವೈ ಕ್ಯಾ ಕಹೂಂ |" ಇದೊಂದು ವಾಕ್ಯವನ್ನು ಮಾತ್ರ ಅವನು ಪ್ರಸಂಗೋಚಿತವಾಗಿ ಉಚ್ಚರಿಸಿ ಸುಮ್ಮನಾಗುತ್ತಿದ್ದನು.

ಆದರೆ ಯೋಗಾನಂದನ ಆ ಮೌನವೃತ್ತಿಯು ಮೂಲಕವೇ ಬೇರೆ ಯಾವ ಪ್ರವಚನಕಾರರ ಯಾವುದೊಂದು ವಕ್ತೃತ್ವಕ್ಕಿಂತಲೂ ಆತನ ವೇದಾಂತ ಜ್ಞಾನದ ಗೂಢತೆಯ ಬಗ್ಗೆ ಜನರ ಮೇಲೆ ಹೇಳಕೂಡದಷ್ಟು ಶ್ರದ್ಧೆ ಕೂಡುತ್ತಿತ್ತು. ಆತನ ಜ್ಞಾನವು ಎಷ್ಟು ಗೂಢವೆಂದೂ ಅಗಾಧವಾದದ್ದೆಂದೂ ಹೇಳಲಿಕ್ಕೆ ಶಬ್ದಗಳೇ ಸಾಕಾಗುತ್ತಿರಲಿಲ್ಲ! "ಗುರೋಸ್ತು ಮೌನಂ ವ್ಯಾಖ್ಯಾನಂ" ಇದೇ ಪರಮ ಸಿದ್ಧಿಯ ಗುರುತೆಂದು ಭಾವಿಕ ಜನರು ಸ್ವಗತವಾಗಿ ಅಂದುಕೊಳ್ಳುತ್ತಿದ್ದರು. ಬೈಲಬಾವಿಯ ಆಳವನ್ನು ಕೊಂಚವಾದರೂ ತರ್ಕಿಸಬಹುದು; ಆದರೆ ಯಾವ ಬಾವಿಯ ಬಾಯಿ ಮುಚ್ಚಿಬಿಟ್ಟಿರುತ್ತದೋ, ಅದು ತೆರೆದದ್ದನ್ನು ಯಾರೂ ನೋಡಿಲ್ಲವೋ, ಅಂಥ ಬಾವಿಯ ಆಳವು ಆಶ್ಚರ್ಯವನ್ನು ಹೆಚ್ಚಾಗಿ ಹೆಚ್ಚಿಸಬಹುದು. ಇದರಂತೆಯೇ ವ್ಯಾಖ್ಯಾನ ಕೊಡಲಿಕ್ಕೆ ಬಾರದಿದ್ದ ಗುರುವಿಗೂ 'ಗುರೋಸ್ತು ಮೌನಂ ವ್ಯಾಖ್ಯಾನಂ' ಎಂಬಂತಾಯಿತೆಂದು ಯಾರಾದರೂ ಅಂದರೆ "ಆ ನಿಂದಕನ ಬಾಯಿಗೇನು ಹತ್ತುವರೆ"ಂದು ಎಲ್ಲ ಕಡೆಯಿಂದಲೂ ಭಾವಿಕರು ಗುಣಗುಟ್ಟುತ್ತಿದ್ದರು ಇರಲಿ.

ಆ ಸಾಧುವಿನಲ್ಲಿದ್ದ ರಮಾಬಾಯಿಯ ನಿಷ್ಠೆಯೇ ಆಕೆಯನ್ನು ಆ ದಾರಿಯಿಂದ ನಡೆಯಗೊಡುವಷ್ಟು ಶಕ್ತಿದಾಯಕವಾಗಿತ್ತು. ತನ್ನ ಮಾಲತಿಯು ಯೋಗಾನಂದನ ಮಠದಲ್ಲಿ ಸುರಕ್ಷಿತವಾಗಿರದಿದ್ದರೂ, ಆಕೆ ನಿನ್ನಿನ ಗದ್ದಲದಲ್ಲಿ ಇಲ್ಲದಂತಾಗಿದ್ದರೂ ಆಕೆ ಮತ್ತೆಲ್ಲಿ ಹೋಗಿರುವಳೆಂಬದನ್ನಾದರೂ ಯೋಗಾನಂದನು ತನ್ನ ಜಲಾದರ್ಶಯಂತ್ರದಿಂದ ಕಂಡು, ತನಗೆ ಖಂಡಿತವಾಗಿ ಹೇಳುವನೆಂಬ ವಿಚಾರವು ಆ ಭಾವಿಕ ತಾಯಿಯ ಬೆದರಿದ್ದ ಮನಸ್ಸಿಗೆ ಸ್ವಲ್ಪಾದರೂ ಭರವಸೆ ಕೊಡುತ್ತಿದ್ದಿತು. ಆ ಸಾಧುವು ಈ ಸಂಕಟದೊಳಗಿಂದ ತನ್ನನ್ನು ಯಾವುದೊಂದು ಉಪಾಯ ದಿಂದ ಮುಕ್ತಗೊಳಿಸಿಯೇ ಗೊಳಿಸುವನೆಂದು ಆಕೆ ತನ್ನ ಸಮಾಧಾನವನ್ನು ತಾನೇ ಮಾಡಿಕೊಳ್ಳುತ್ತಿದ್ದಳು; ಹಾಗು ಆ ನಿರ್ಲೋಭ ಸಾಧುವಿನಲ್ಲಿಯ ಶ್ರದ್ಧೆಯ ಊರುಗೋಲನ್ನು ಊರುತ್ತ ಊರುತ್ತ, ತಾನು ಸ್ವತಃ ನಡುಗುತ್ತಲೇ ಮಂದಿರದ ದಾರಿಯಲ್ಲಿ ವೇಗವಾಗಿ ಸಾಗಿದ್ದಳು.

ನಾಯುಡೂ ಬಾಯಿಯು ಭಾವಿಕಳಾಗಿದ್ದರೂ ಭೋಳೇ ಸ್ವಭಾವದವಳಿರಲಿಲ್ಲ. ಧೂರ್ತ ಸಾಧುಗಳನ್ನು ಅವಳು ಕಂಡಿದ್ದಳು; ಆದ್ದರಿಂದ ಎಲ್ಲ

ಸಾಧುಗಳೂ ಧೂರ್ತರೇ ಎಂದು ಯಾರಾದರೂ ಅದ್ವಾತದ್ವಾ ವಾದಮಾಡಿದರೆ, ಆವಳು ಅದನ್ನು ಖಂಡಿಸಿಬಿಡುತ್ತಿದ್ದಳು. ಯೋಗಾನಂದನು ಯಾರಿಂದಲೂ ಏನೂ ಸ್ವೀಕರಿಸದೆ, ತಿಳಿದದ್ದನ್ನು ಹೇಳುವ ಪ್ರವೃತ್ತಿಯವನು; ಆತನು ಹೇಳಿದ ಭೂತ-ಭವಿಷ್ಯಗಳು ತೀರ ಗಾಳಿಗಂಟಾಗಿರದಿದ್ದರೂ, ಖೊಟ್ಟಿ ಎಂದು ಜನರಲ್ಲಾಗದ ಬೊಬ್ಬಾಟ, ಈ ಎರಡು ದೃಷ್ಟಾಂತಗಳಿಂದ ಯೋಗಾನಂದನ ಬಗ್ಗೆ ಆಕೆಯ ಮತವು ಅನುಕೂಲವಾಗಿತ್ತು. ಆತನು ಸಚ್ಛೀಲನೂ ಪರೋಪಕಾರಿಯೂ ಆದ ಸತ್ಪುರುಷನೆಂಬುದು ಒಡೆದೇ ಕಾಣುತ್ತಿತ್ತು; ಅಲ್ಲದೆ ಆತನಲ್ಲಿ ಭೂತ-ಭವಿಷ್ಯ ತಿಳಿಸುವ ದೈವೀಶಕ್ತಿಯಿದ್ದ ಬಗ್ಗೆಯೂ ಕೆಲ ಅಂತಜ್ಞಾನವಿದ್ದದ್ದರಿಂದ ನಾಯುಡೂ ಬಾಯಿಯ ನಂಬಿಗೆಯು ಹೆಚ್ಚುತ್ತ ನಡೆದಿತ್ತು. ಆಕೆಯಲ್ಲಿ ಯಾತರ ಬಗ್ಗೆ ತುಸ ಶಂಕೆಯೆನಿಸಿತ್ತಿದ್ದಿತೋ ಅದು ಪ್ರಾಮಾಣಿಕತೆಯು ವಿಷಯಕವಾಗಿರದೆ, ಭೂತ-ಭವಿಷ್ಯ-ವರ್ತಮಾನ ಜ್ಞಾನಗಳ ಸಿದ್ಧಿಯೋ ಪ್ರಥಮತಃ ಎಷ್ಟು ತಪ್ಪಿನದಿರುವದೆಂಬ ಬಗ್ಗಾಗಿದ್ದಿತು. ಅದರ ಪರೀಕ್ಷೆ ಮಾಡಿಕೊಳ್ಳಲಿಕ್ಕೆ ಇದೊಳ್ಳೇ ಸಂಧಿ ಪ್ರಾಪ್ತವಾಯಿತೆಂಬ ವಿಚಾರವು ನಾಯುಡೂ ಬಾಯಿಯ ಮನಸ್ಸಿನಲ್ಲಿ ಮಾಲತಿಗುಂಟಾದ ಸಂಕಟದಿಂದಾದ ಆಕೆಯ ಹೃದಯ ವಿದಾರಣದ ಸ್ಥಿತಿಯಲ್ಲೂ ಬಾರದಿರಲಿಲ್ಲ.

ಆ ಇಬ್ಬರೂ ಸ್ತ್ರೀಯರು ಮಂದಿರದ ಪ್ರಾಂಗಣದಲ್ಲಿ ಕಾಲಿಡುವಷ್ಟರಲ್ಲಿ ಮಹಂತನ ಒಬ್ಬ ಶಿಷ್ಯನು ಅವರನ್ನು ಎದುರ್ಗೊಂಡು, ಕಾದಿಟ್ಟ ವಿಶಿಷ್ಟ ದಾರಿಯಿಂದ ಮಹಂತರಿರುತ್ತಿದ್ದ ಖಾಸಕೋಣೆಗೆ ಕರೆದೊಯ್ದನು. ಅಲ್ಲಿ ಹೋಗಿ ನಿಲ್ಲುತ್ತಲೆ ಇದುವರೆಗೆ ತಡೆದಿದ್ದ ಉಸಿರನ್ನು ಬಿಟ್ಟು, ರಮಾಬಾಯಿಯು ಆ ಶಿಷ್ಯನನ್ನು ಕೇಳುತ್ತಾಳೆ:—"ಆದರೆ ನಮ್ಮ ಮಾಲತಿಯೆಲ್ಲಿ-ಮಾಲತಿ?"

ಆಕೆಯ ಆ ಉತಾವಳಿ ಪ್ರಶ್ನೆಯು ದಾರಿ ಕಾಯುತ್ತಲೇ ಇದ್ದ ಆ ಶಿಷ್ಯನು ತನ್ನ ಮೋರೆಯ ಮೇಲಿನ ಆಶ್ವಾಸಿಕ ಸ್ಮಿತದಿಂದಲೂ, ಎತ್ತಿದ ಎರಡೂ ಕೈಗಳನ್ನು ವರದಹಸ್ತದಂತೆ ಅಲ್ಲಾಡಿಸುತ್ತಲೂ, ಹೌದೆಂದು ಹೇಳಲು ಬೊಗ್ಗಿಸಿದ ಕುತ್ತಿಗೆಯಿಂದಲೂ 'ಎಲ್ಲವೂ ಸರಿಯಿದೆ.' ಎಂದು ಸೂಚಿಸಿದನು. ಅದರಿಂದ ರಮಾಬಾಯಿಗೆ ಹಾಯ್ ಎನಿಸಿತು. ಆ ಚಿಂತೆಯು ಎಷ್ಟು ಬೇಗನೆ ಕಡಿಮೆಯಾಯಿತೋ ಅಷ್ಟೇ ತೀವ್ರ ಉತ್ಸುಕತೆಯು ಇಮ್ಮಡಿಯಾಗಲು, ರಮಾಬಾಯಿಯು "ಹಾಗಾದರೆ ಆಕೆಯನ್ನು ಕರೆಯಿರಿಲ್ಲಿ; ಅವಳು ಇಲ್ಲೆಲ್ಲಿಯೂ ಕಾಣುವದಿಲ್ಲವಲ್ಲ! ಅವಳನ್ನು ನನ್ನೆದುರಿಗೆ ಕರೆತನ್ನಿರಿ." ಹೀಗೆಂದು ಕರುಣತೆಯಿಂದ ಬಿನ್ನಯಿಸಹತ್ತಿದಳು. ಆದರಿಂದ ಇನ್ನು ಹೇಳಲೇಬೇಕಾದ್ದರಿಂದ ಹೇಳುವೆನೆಂಬ ನಿರುಪಾಯದ ಅಭಿಭಾರ್ವದಿಂದ ಶಿಷ್ಯನು "ಮಾತಾಜಿ, ಗುರು

ಮಹಾರಾಜ ಅಭಿ ಆಪಕೋ ಬುಲಾತೇ ಹೈ। ಘಬರಾಯಿಯೆ ಮತ। ಗಡ ಬಡಭೀ ಮತ ಮಚಾನಾ।”

ಯೋಗಾನಂದನಂತೆ ಆತನ ಶಿಷ್ಯರಿಗಾದರೂ ಶಕ್ಯವಾದಷ್ಟು ಅಲ್ಪ ಮಾತಾಡುವ ಶಿಸ್ತು ಪಾಲಿಸಬೇಕಾದ್ದರಿಂದ, ಯೋಗಾನಂದನ ಅಪ್ಪಣೆಯ ಹೊರತು ಯಾವ ಪ್ರಶ್ನೆಗೂ ಅವರು ಅದಾವ ವಾಚಿಕ ಉತ್ತರವನ್ನೂ ಸಹಸಾ ಹೇಳಲಿಕ್ಕೆ ಬರುತ್ತಿರಲಿಲ್ಲ. ಭೆಟ್ಟಿಗೆ ಬಂದವರಿಗೆ ಕೂಡ ಮಹಂತನು ಕೇಳಲಿಕ್ಕೆ ಸಮ್ಮತಿಸುವಷ್ಟೇ ಪ್ರಶ್ನೆ ಕೇಳಬರುತ್ತಿತ್ತೆಂಬ ಅಲ್ಲಿಯ ಕಟ್ಟುನಿಟ್ಟಿನ ಪದ್ಧತಿಯು ನಾಯುಡು ಬಾಯಿಗೆ ಗೊತ್ತಿತ್ತು. ಅದರಿಂದ ಅವಳು ಸಂಜ್ಞೆಯಿಂದ ರಮಾಬಾಯಿಯನ್ನು ಬೆದರಿಸಿ “ತುಸ ಸುಮ್ಮನಿರಿ.” ಎಂದಳು.

ಇಷ್ಟರಲ್ಲಿ ಮಹಂತನ ಕೋಣೆಯ ಬಾಗಿಲು ತೆರೆಯಿತು. ಎರಡು-ಮೂರು ಜನ ಪ್ರಶ್ನೇಚ್ಛುಗಳು ಹೊರಬಿದ್ದರು. ಶಿಷ್ಯನು ಇವರಿಬ್ಬರನ್ನೂ ಒಳಗೊಯ್ದನು; ಆದರೆ ಅಲ್ಲಿಯೂ ಮಾಲತಿ ಕಾಣಲಿಲ್ಲ. ರಮಾಬಾಯಿಗೆ 'ಮಾತಾಡಿರಿ' ಎಂದು ಸಂಜ್ಞೆಯಾಗುತ್ತಲೆ, ಆಕೆ ಕೇಳಿದಳು:—“ನನ್ನ ಮಗಳಾದ ಮಾಲತಿಯನ್ನು ನಿನ್ನಿನ ಗೊಂದಲದೊಳಗಿಂದ ಬಿಡಿಸಿ ನೀವು ಇಲ್ಲಿರಿಸಿಕೊಂಡ ಬಗ್ಗೆ ನಾನು ಜನ್ಮ-ಜನ್ಮಾಂತರಗಳಲ್ಲೂ ನಿಮಗೆ ಋಣಿಯಾಗಿರುವೆನು. ನಾನು ಅವಳನ್ನು ಕರೆದೊಯ್ಯಲಿಕ್ಕೆ ಬಂದಿರುತ್ತೇನೆ. ಎಲ್ಲಿರುವಳು. ನನ್ನ ಕಂದಮ್ಮ ಮಾಲತಿಯು?”

ಮಹಂತನ ಸಂಜ್ಞೆಯ ಮೇರೆಗೆ ಶಿಷ್ಯನು ಹೇಳಿದನು:—“ಮಾತಾಜೀ! ನಿಮ್ಮ ಮಗಳನ್ನು ನಾನು ಗೊಂದಲದೊಳಗಿಂದ ಪಾರು ಮಾಡಿ, ನಿಮ್ಮ ಮನೆಗೆ ಕಳಿಸಬೇಕೆಂದು ಕರೆದೊಯ್ಯುತ್ತಿದ್ದೆನು; ಆದರೆ ಅವಳು ತನ್ನ ಗುರುತಿನ ಯಾವನೊಬ್ಬ ಪುರುಷನೊಡನೆ ಸ್ವಸಂತೋಷದಿಂದ ಮನೆಗೆ ಹೋಗುತ್ತೇನೆಂದು ಅಂದು, 'ಇವರು ನನ್ನ ಸಮೀಪದ ಆಪ್ತರಿರುವರು' ಎಂದಂದಳು.”

'ಅಂದರೆ? ಯಾರವನು?' ಆರಿದ ಮನೆಯ ಬೆಂಕಿಯು ಪುನಃ ಪ್ರಜ್ವಲಿತವಾಗುವಂತೆ, ನಂದಿದ ಚಿಂತೆಯ ಜ್ವಾಲೆಗಳು ಹೃದಯದಲ್ಲಿ ಮತ್ತೆ ಎದ್ದು ರಮಾಬಾಯಿಯು ಕಸವಿಸಿಯಿಂದ ಪುನಃ:—“ಮಹಾರಾಜ! ಇಲ್ಲಿ ನಮ್ಮ ಆಪ್ತೇಷ್ಟರಾರೂ ಇಲ್ಲ. ಮಹಾರಾಜ! ಏನಾದರೂ ಘಾತವಾಗಿದೆ! ಮಹಾರಾಜ!........”

ಮಹಾರಾಜನು ನಿಶ್ಚಯಿ ಮುದ್ರೆಯಿಂದ ತನ್ನ ತೋರು ಬೆರಳನ್ನೆತ್ತಿ: “ತಡೆಯಿರಿ” ಎಂದು ಆ ಸ್ತ್ರೀಗೆ ಸೂಚಿಸಿದನು. ರಮಾಬಾಯಿಯ ಆ ತಡೆಯಲಾರದ ಆವೇಗವು ಆ ಬೆದರಿಕೆಯು, ಆದರೂ ಸಹಾನುಭೂತಿಯ ಸೂಚನೆಯಿಂದ ತಟ್ಟನೆ ಶಾಂತವಾಯಿತು. ಆಕೆಯ ತುಟಿಯು ಬಳಿಯಲ್ಲ ಬಾಯಿಂದ

ಹೊರಡಲಿಕ್ಕೆ ದಟ್ಟಣೆಗೊಂಡಿದ್ದ ವಾಕ್ಯದ ಮೇಲಿನ ವಾಕ್ಯಗಳು ಅಲ್ಲಿಯೇ ತಬ್ಬಿಕೊಂಡವು.

ಮಹಂತನು ಕಣ್ಣುಕೆಕ್ಕರಿಸಿಕೊಂಡು ತುಸ ಅಂತರ್ಮುಖನಾದನು. ನಂತರ ಅತ್ಯಂತ ದಯಾರ್ದ್ರಸ್ವರದಿಂದ:—“ತಾಯಿ, ಕಳೆದವಳು ನಿನ್ನ ಮಗಳಲ್ಲ; ನನ್ನ ಮಗಳು! ದೇವರ ಇಚ್ಛೆಯಿದ್ದರೆ ಇಗೋ, ನಾನು ಅವಳನ್ನು ಶೋಧಿಸುತ್ತೇನೆ! ಆದರೆ ನಾನು ಕೇಳುವಷ್ಟೇ ಹೇಳು! ತೋರುವದಷ್ಟನ್ನೇ ನೋಡು! ಹೇಳುವವದಷ್ಟನ್ನೇ ಕೇಳಿಕೋ! ನೀನು ನಿನ್ನ ಮನಸ್ಸನ್ನು ನನಗೊಪ್ಪಿಸಿ ಬಿಡು ನೋಡೋಣ! ಬೇರೆ ಯಾವ ವಿಚಾರವನ್ನೂ ನೀನು ನಿನ್ನ ಮನಸ್ಸಿನಲ್ಲಿ ಬರಗೊಡಬೇಡ! ಹಾಗೆ ನಿರ್ಲಿಪ್ತವಾದ ನಿನ್ನ ಮನಸ್ಸನ್ನು ನನಗೆ ಕೊಟ್ಟೆಯಾ?”

“ಮಹಾರಾಜ! ಕೊಟ್ಟೆನು.” ಎಂದು ಹೇಳುತ್ತಲೆ, ರಮಾಬಾಯಿಯ ಮನಸ್ಸು ನಿಜವಾಗಿಯೂ ಸುಂದವಾದಂತಾಯಿತು; ಮತ್ತು ಆಕೆ ಆ ಮಹಂತನ ಚಲನವಲನದ ಕಡೆಗೆ ಸುಮ್ಮನೆ ನೋಡುತ್ತ ನಿಂತುಕೊಂಡಳು.

ಶಿಷ್ಯನು ಗುರುಗಳ ಸಂಜ್ಞೆಯ ಮೇರೆಗೆ ಒಂದು ಸ್ವಚ್ಛ ಪರಾತವನ್ನು ಆವನೆದುರಿಗೆ ತಂದಿಟ್ಟನು. ಅದರಲ್ಲಿ ತಿಳಿನೀರನ್ನು ಕಂಟದವರೆಗೆ ಸುರುವಿದನು. ಆ ಪರಾತಿಗಿಂತ ಕೊಂಚ ಎತ್ತರವ ಮೇಲೆ ಒಂದು ಸ್ವಚ್ಛವಾದ ಕನ್ನಡಿಯನ್ನು ಗೋಡೆಗೆ ತೂಗಿಟ್ಟನು. ಒಂದು ಸಮೆ ಹಚ್ಚಿ ಹತ್ತರಿಟ್ಟನು. ಯೋಗಾನಂದ ಮಹಂತನು ಉದ್ಧರಣೆಯಲ್ಲಿ ಜಲವನ್ನು ಮಂತ್ರಿಸಿ ತನ್ನ ಮೇಲೆ ಸಿಂಪಡಿಸಿಕೊಂಡನು; ಸುತ್ತಲೂ ಸಿಂಪಡಿಸಿದನು; ಮತ್ತು ಏಕಾಗ್ರಚಿತ್ತದಿಂದ ಮಂತ್ರವನ್ನನ್ನುತ್ತ, ಆತನು ಆ ಪರಾತಿನೊಳಗಿನ ನೀರಲ್ಲಿ ಟಕ್ಕು ಹಿಡಿದು ನೋಡುತ್ತ ಕುಳಿತನು ಮಿಕ್ಕ ಜನರು ಶ್ವಾಸವನ್ನು ಕೂಡ ಬಿಗಿಹಿಡಿದು ಬಿಡುತ್ತ ನಿಸ್ತಬ್ಧರಾದರು!

ಕೆಲಹೊತ್ತಿನ ಮೇಲೆ ಮಹಂತನು ಗೋಣು ಎತ್ತಿ ನಾಯುಡೂ ಬಾಯಿಯನ್ನು ಕೇಳಿದನು. “ಇವರಿಗೊಬ್ಬ ಹಿರಿಯ ಮಗನಿರುವನಷ್ಟೆ?”

ರಮಾಬಾಯಿಯು ಬೆರಗಾದಳು! “ಅದು ಇವರಿಗೆ ಹೇಗೆ ತಿಳಿಯಿತು? ಇವರು ನಿಜವಾಗಿಯೂ ಅಂತರ್ಜ್ಞಾನಿಗಳೇ ಅಹುದು!”

ಆದರೆ ನಾಯುಡೂ ಬಾಯಿಯೇನೂ ಅಷ್ಟು ಬೆರಗಾಗಲಿಲ್ಲ. ಆಕೆಯೆಂದಳು:—“ಅಹುದು; ಅದನ್ನು ನಾನು ಈ ಮೊದಲೇ ‘ರಮಾಬಾಯಿಗೊಬ್ಬ ಹಿರಿಯ ಮಗನಿದ್ದನೆ’ಂದು ನಿಮಗೆ ತಿಳಿಸಿದ್ದೆನು; ಆದರೆ ಯುದ್ಧಕ್ಕೆ ಹೋದಾಗ ಆತ ಅಲ್ಲಿಯೇ ಕೊಲ್ಲಲ್ಪಟ್ಟನು. ಆ ಮಾತಿಗೆ ಈಗ ಆರೇಳು

ವರ್ಷಗಳಾಗಿ ಹೋಗಿವೆ."

"ಆದರೆ ಆತನು ಕೊಲ್ಲಲ್ಪಟ್ಟಿಲ್ಲ. ಇವರ ಆ ಹಿರಿಯ ಮಗನು ಬದುಕಿರುತ್ತಾನೆಂದೇ ನಾನು ಹೇಳುವದು; ಆತನೊಳ್ಳೇ ಪುಷ್ಟನಾಗಿರುವನು. ಇದು ನೋಡಿರಿ, ನನ್ನೆದುರಿಗೆ ನೀವು ಹೇಗೆ ನಿಂತು ಮಾತನಾಡುತ್ತಿರುವಿರೋ, ಆತನೂ ಹಾಗೆಯೇ ಪ್ರತ್ಯಕ್ಷವಾಗಿ ಕುಳಿತು ಮಾತನಾಡುತ್ತಿರುವನು."

ಮಹಂತನ ಪ್ರತ್ಯೇಕ ವಾಕ್ಯದೊಡನೆ ರಮಾಬಾಯಿಗಷ್ಟೇ ಅಲ್ಲ, ನಾಯುಡೂ ಬಾಯಿಗೆ ಕೂಡ ಆಶ್ಚರ್ಯದ ವೇದನೆಗಳು ಆಗಹತ್ತಿದವು. ರಮಾಬಾಯಿಯು ನಡುಗುವ ದನಿಯಿಂದ ಅಂದದ್ದೇನಂದರೆ:—"ನನ್ನ ಮಗನೇ? ಬದುಕಿರುವನೇ? ಸಾಧುಗಳೇ, ನಿಮ್ಮ ಬಾಯಲ್ಲಿ ಸಕ್ಕರೆ ಬೀಳಲಿ!"

ನಾಯುಡೂ ಬಾಯಿಯು ತನಗಾದ ಆಶ್ಚರ್ಯವನ್ನು ತುಸ ಸಂಯಮಗೊಳಿಸಿಕೊಂಡು:—"ಆದರೆ ಆತನು ಇವರ ಮಗನೇ ಎಂಬದು ಹೇಗೆ? ಮಿಥ್ಯಾಭಾಸವಾಗಿದೆಯೋ ಏನೋ? ಕ್ಷಮಿಸಿರಿ"

"ಸುಮ್ಮನೆ ತರ್ಕ ಬೇಡ! ಇವಳ ಮಗನೇ ಹೇಗೆಂಬ ಬಗ್ಗೆ ಕೇಳಿಕೋ. ಆತನ ಹಣೆಯ ಮೇಲೊಂದು ಆಘಾತದ ದೊಡ್ಡ ಕಲೆಯಿದೆ! ಅಹುದೋ-ಅಲ್ಲವೋ?"

ನಾಯುಡೂ ಬಾಯಿಗೆ ಅದಾವುದೂ ಗೊತ್ತಿರಲಿಲ್ಲಾದ್ದರಿಂದ ಅವಳು ರಮಾಬಾಯಿಯ ಕಡೆಗೆ ನೋಡಿದಳು. ರಮಾಬಾಯಿಯು ಗಡಬಡಿಸಿದಳು; ಯಾಕಂದರೆ ಆಕೆಯ ಮಗನ ಹಣೆಯ ಮೇಲೆ ಅಂಥ ಯಾವ ಚಿಹ್ನವೂ ಇರಲಿಲ್ಲ! ಆದರೆ ಅದಿದ್ದಿಲ್ಲವೆಂದರೆ, ಈ ಮಹಂತನು ಸುಳ್ಳುಗಾರನೆಂದಾಗುವದು; ಮತ್ತು ಮಹಂತನ ಅಂತರ್ಜ್ಞಾನವು ಸುಳ್ಳು ಬೀಳುತ್ತಲೆ, ತನ್ನ ಸತ್ತ ಮಗನು ಪುನಃ ಬದುಕುವ, ಕಳೆದ ಕನ್ಯೆಯು ಸಿಗುವ ಹೀಗೆ ಕೈಗೆ ಬಂದ ಸುಖದಾಯಕದ ಶಕ್ಯತೆಯೂ ಮತ್ತೆ ಸಂಶಯಕ್ಕೀಡಾಗುವದು.

"ಇರದಿದ್ದರೆ ಹಾಗಿಲ್ಲವೆಂದು ಸ್ಪಷ್ಟವಾಗಿ ತಿಳಿಸು, ಗಾಬರಿಯಾಗಬೇಡ" ಮಹಂತನು ಆಹ್ವಾನ ಮಾಡಿದನು.

"ಅಂಥ ಯಾವ ಚಿಹ್ನವೂ ಆತನ ಹಣೆಯ ಮೇಲಿರಲಿಲ್ಲ" ಮಾತಾಡಲೋ-ಬೇಡವೋ ಎಂದಂದುಕೊಳ್ಳುತ್ತ ರಮಾಬಾಯಿಯು ಹೇಳಿಬಿಟ್ಟಳು.

"ಚೆನ್ನಾಗಿ ಜ್ಞಾಪಿಸಿಕೋ. ದಂಡಿನೊಳಗೆ ಸೇರ್ಪಡೆಯಾದ ಬಳಿಕ ನಿನ್ನ ಮಗನು ಯುದ್ಧಕ್ಕೆ ಹೋದನಷ್ಟೇ? ಆಯಿತು; ಹಾಗಾದರೆ ಅಲ್ಲಿಯೇ ಆತನಿಗೆ ಈ ಗಾಯವಾಗಿರುವದು!"

"ಅಹುದರೀ-ಅಹುದು! ಮಹಾರಾಜ, ಈಗ ನೆನಪಾಯಿತು. ತೀರ

ಸತ್ಯ! ಆತನ ಕೊನೆಯ ಪತ್ರದಲ್ಲಿ ಹಣೆಯ ಮೇಲೆ ಸ್ಫೋಟವುಂಟಾದ ಬಗ್ಗೆ ಸಂಗತಿಯಿದ್ದಿತು. ತಮ್ಮ ಅಂತಜ್ಞಾನವು ತ್ರಿಕಾಲದಲ್ಲಿಯೂ ಸತ್ಯವಾಗಿದೆ!''

ಯಾವುದು ಸ್ವಂತ ರಮಾಬಾಯಿಗೂ ನೆನಪಿದ್ದಿಲ್ಲವೋ, ಯಾವುದು ಅದುವರೆಗೆ ಅಲ್ಲಿಯವರಾರಿಗೂ ಗೊತ್ತಿರಲಿಲ್ಲವೋ ಅಂಥ ಸಂಗತಿಯು ಅಷ್ಟು ಸರಿಯಾಗಿ ಈ ಮಹಂತರಿಗೆ ತಿಳಿಯುವದಲ್ಲವೆ? ಅದು ನಿಜವಿರುವದಲ್ಲವೆ? ಮತ್ತು ಅದು ಅಷ್ಟು ಸಹಜವಾಗಿ ತಿಳಿದದ್ದನ್ನು ಕಂಡು, ನಾಯುಡೂ ಬಾಯಿಯು ತೀರ ಚಕಿತಳಾದಳು. ಮಹಂತನ ಮಾತಿನಲ್ಲಿ ರಮಾಬಾಯಿಯಷ್ಟೇ ಭಾವಿಕ ವಿಶ್ವಾಸವು ನಾಯುಡೂ ಬಾಯಿಯದಾದರೂ ಕೂಡದಿರಲಿಕ್ಕಿನ್ನು ಅಶಕ್ಯವೇ ಆಯಿತು. ಅವರು ಕೇವಲ ಪರಸ್ಥರೂ, ಪರಿಚಯವಿಲ್ಲದವರೂ ಆಗಿದ್ದರು. ಮಹಂತನು ಇಷ್ಟು ಲಗುಬಗೆಯಿಂದ ಆ ಪುತ್ರನ ಮೈಮೇಲಿನ ಗುರ್ತುಗಳೊಡನೆ ಆತನ ಮನೆಯ ಸಂಗತಿಯನ್ನು ತಿಳಿಸಲು, ಆ ಮಗನು ಅವರ ಕಣ್ಣೆದುರಿಗೆ ಅಂತರ್ದೃಷ್ಟಿಯಿಂದ ಕಾಣುತ್ತಿರುವನೆಂಬದನ್ನು ಎಂಥ ಪಾಖಂಡಿಯೂ ನಂಬದಿರಲಾರನು.

ರಮಾಬಾಯಿಯ ಆಶ್ಚರ್ಯಕ್ಕಂತೂ ಮೇರೆಯೇ ಉಳಿಯಲಿಲ್ಲ! 'ನಿಮ್ಮ ಮಗನು ಬದುಕಿರುವನು; ಕ್ಷೇಮದಿಂದಿರುವನು!' ಎಂಬ ಮಹಂತನ ನುಡಿಗಳನ್ನು ಕೇಳುವಾಗ ಆಕೆಯ ಅಂತಃಕರಣವು ಸಂತಸದ ಲಹರಿಗಳಿಂದ ಹೆಚ್ಚಾಗಿ ನಡುಗಿತು. ಆಗ ಅವಳಿಗೆ ಮಾಲತಿಯು ಇಲ್ಲದಂತಾದ್ದರ ನೆನಪು ಕೂಡ ಕ್ಷಣ ಕಾಲ ಮರೆತು ಹೋಯಿತು! ಕಳೆದು ಹೋದ ಮಗಳನ್ನು ಹುಡುಕುತ್ತಿರುವ ಆ ತಾಯಿಗೆ, ತನ್ನ ಸತ್ತಿದ್ದ ಒಬ್ಬೊಂಟಿಗ ಮಗನು ಜೀವಂತ ದೊರಕಿದನು!

''ಆದರೆ ಹೇಳುವದಿನ್ನೂ ಮುಂದೆಯೇ ಇದೆ.'' ಎಂದಂದು ಮಹಂತನು ಲಗುಬಗನೆ ಮತ್ತೆ ಹೇಳಹತ್ತಿದನು:—''ಆ ನಿಮ್ಮ ಮಗನ ಈ ಒಬ್ಬ ಗೆಳೆಯನನ್ನು ನೋಡು; ಆತನೂ ಈ ನಿಮ್ಮ ಮಾಲತಿಯೂ ಕೂಡಿ ಬಂದರು ನೋಡು! ಒಳ್ಳೇದು! ನಿಮ್ಮ ಮನೆಯು ನಾಗಪುರ ಕಡೆಗಿರುವುದಲ್ಲವೆ? ಅತ್ತ ನೋಡಿರಿ. ಅಲ್ಲಿ ಮಾಲತಿಯು ಆತನೊಡನೆ ಪ್ರೇಮದಾಟವನ್ನಾಡುತ್ತಿದ್ದಾಳೆ. ಇವನೇ ಆ ಗೃಹಸ್ಥನು! ನಿನ್ನೆ ಈತನೊಡನೆಯೇ ಮಾಲತಿಯು ಹೊರಟು ಹೋದಳು. ಆಕೆಯು ಆನಂದದಿಂದ ಹೊರಟಿರುವಳು ನೋಡು. ನೀವುಗಳು ನನಗೆ ಹೇಗೆ ಕಾಣುತ್ತಿರುವಿರೋ, ಅದರಿಂದಲೇ ನೀವಿಲ್ಲಿರುವದು ಹೇಗೆ ಸತ್ಯವೋ? ತೀರ ಇದರಂತೆಯೇ ಅವಳು ನನಗೆ ಕಾಣಿಸುತ್ತಿದ್ದಾಳೆ; ಅಂತೆಯೇ ಅದಾದರೂ ತೀರ ಸತ್ಯವಿದೆ! ಹೊರಟಿಗ; ರೈಲು ಬಂಡಿ ಹೊರಟಿತು! ಏನು? ರೈಲಿನ ಮೇಲಿನ ಅಕ್ಷರಗಳು ಅಸ್ಪಷ್ಟವೇ? ಆದರೆ ಅದು ನಾಗ

ಪುರ ಕಡೆಗೇ ಹೊರಟಿತು. ಮಾಲತಿಯು ತನ್ನ ಪ್ರಿಯಕರನೊಡನೆ ನಾಗ ಪುರಕ್ಕೆ ಹೊರಟುಹೋಗಿದ್ದಾಳೆ! ಹ್ರೀಂ ಹ್ರಾಂ ಹ್ರೈಂ ವಷಟ್ | ನೇತ್ರ ತ್ರಯಾಯ ಫಟ್!"

ಏಕಾಗ್ರಚಿತ್ತದ ಅವಧಾನದಿಂದ ದಣಿದಿದ್ದ ಆ ಮಹಂತನು ಆ ಮಂತ್ರೋ ಚ್ಚಾರದ ನಂತರ ಮೆಲ್ಲನೆ ಕೃಷ್ಣಾಜಿನದ ಮೇಲೆ ಕಣ್ಣು ಮುಚ್ಚಿಕೊಂಡು ಬಿದ್ದನು. ಆ ಅನೇಕ ಪ್ರಶ್ನೆ, ಶಂಕೆ-ಜಿಜ್ಞಾಸಾದಿಗಳಿಂದ ವ್ಯಾಕುಲರಾದ ಆ ಇಬ್ಬರೂ ಹೆಣ್ಣುಮಕ್ಕಳ ಕಡೆಗೆ ಒಬ್ಬ ಶಿಷ್ಯನು ಬೊಟ್ಟಿನಿಂದ ಸಂಜ್ಞೆ ಮಾಡಿ ಬೆದರಿಸಿ, ಆ ಜಲ ಯಂತ್ರವನ್ನು ವಿಸ್ಖಲಿತ ಮಾಡಿದನು. ಆ ಕೂಡಲೆ ಎಲ್ಲಿಂ ದಲೋ ಏನೋ ಒಂದು ಶಬ್ದವು ನಿನಾದಗೊಂಡಿತು; ಘಂಟೆಯ ಖಣ ಖಣ ನಾದವಾಗಿ ಸ್ತಬ್ಧವಾಯಿತು! ಪರಾತ, ಸಮೆ, ಕನ್ನಡಿ ಮುಂತಾದ ಜೀನಸು ಗಳನ್ನು ಆ ಶಿಷ್ಯನು ಇಡತಕ್ಕಲ್ಲಿ ಬೇಗನೆ ಇರಿಸಿದನು. ಗಾಳಿಬೀಸುತ್ತ ಗುರುವಿನ ಬಳಿಯಲ್ಲಿ ಸ್ವಲ್ಪಹೊತ್ತು ಕುಳಿತನು; ಮತ್ತು ಗುರುವು ಕೊಂಚ ಕೈಅಲ್ಲಾಡಿಸಿ ಸಂಜ್ಞೆ ಮಾಡುತ್ತಲೆ, ಆ ಹೆಂಗಸರಿಗೆ ಆ ಶಿಷ್ಯನು ಬಹು ಮೃದು ಸ್ವರದಲ್ಲಿ ಕಟ್ಟಪ್ಪಣೆ ಗೈದನೇನಂದರೆ:—"ಇನ್ನು ಹೆಚ್ಚಿಗ ಏನನ್ನೂ ಹೇಳ ಲಾಗುವದಿಲ್ಲ. ಸ್ಫೂರ್ತಿಯು ಇಳಿಯಿತು. 'ಮುಂದೇನು ಮಾಡಬೇಕು?' ಎಂಬದಿಷ್ಟನ್ನೇ ಬೇಕಾದರೆ ಕೇಳಿರಿ. ಯೋಗತಂದ್ರಿಯು ಇಳಿಯುವಷ್ಟ ರೊಳಗೆ ಗುರುಗಳೇನಾದರೂ ಹೇಳಿದರೆ ಅಷ್ಟನ್ನೇ ಕೇಳಿಕೊಳ್ಳಬೇಕು; ಹಾಗು ಹೆಚ್ಚು ಚರ್ಚೆಯನ್ನೇನೂ ಮಾಡದೆ ಇಂದು ಹೊರಟುಹೋಗಬೇಕು; ನಾಳೆ ಯಾದು ನಾಳೆಗೆ!"

ರಮಾಬಾಯಿಯು ನೂರಾರು ಪ್ರಶ್ನೆಗಳನ್ನು ಒಂದೇ ಉಸಿರಿನಲ್ಲಿ ಕೇಳಿ ಕೊಳ್ಳಬೇಕಾಗಿತ್ತು. ಮಾಲತಿಯ ಬಗ್ಗೆ ಮಹಂತನು ವರ್ಣಿಸಿದ ಭವಿಷ್ಯ ದಿಂದ ಚಿಂತಾತುರ ವಿಚಾರಗಳಿರುವ ಅವಳ ಮನಸ್ಸಿನಲ್ಲಿ ಅಷ್ಟು ಗೊಂದಲ ವೆದ್ದು ಬಿಟ್ಟಿತ್ತು; ಆದರೆ ನಿರುಪಾಯವು! ಆದೊಂದೇ ಉತ್ತರದಿಂದ ಆಕೆಯ ನೂರಾರು ಪ್ರಶ್ನೆಗಳು ಉಗಮಸ್ಥಾನದಲ್ಲಿಯೋ ಹೆಪ್ಪುಗಟ್ಟಿಕೊಂಡವು! ಆ ಉತ್ತರವೆಂದರೆ, ಆ ಉಗ್ರಭಾವದ ಶಿಷ್ಯನ 'ಚೂಪ' ಎಂದು ಬೆದರಿಸುವ ಬೊಟ್ಟು! ಅರ್ಥಾತ್ ಯಾವ ಒಂದು ಪ್ರಶ್ನೆ ಕೇಳಿಕೊಳ್ಳುವ ಅಪ್ಪಣೆಯು ದೊರೆತಿದ್ದಿತೋ ಅದನ್ನೇ ರಮಾಬಾಯಿಯು ವ್ಯಾಕುಲಚಿತ್ತದಿಂದ ಕೇಳಿ ಕೊಂಡಳು:—"ನಾನಿನ್ನು ಏನು ಮಾಡಿದರೆ ಈ ಸಂಕಟನಿವಾರಣವಾದೀತು? ಮಹಾರಾಜರು ದಯವಿಟ್ಟು........"

ಶಿಷ್ಯನು 'ಹಾಂ' ಎಂದೆಂದು ತನ್ನ ತೋರಬೆರಳನ್ನು ಮೂಗಿನ ಮೇ

ಲಿಟ್ಟು ಬಿಡರಿಸಿದನು; ಯಾಕಂದರೆ, ರಮಾಬಾಯಿಯ ವಾಕ್ಯವು ನಿಶ್ಚಿತ ಆಳತೆಗಿಂತ ದೀರ್ಘವಿತ್ತು! ಮಹಂತನು ಗುಂಗಿನಲ್ಲಿಯೇ ವೈ ಒಡ್ಡಮುರಿಯುತ್ತ, ಸಂದಿಗ್ಧ ಮತ್ತು ವಿಸಂಗತವಾಗಿ ಗುಣಗುಟ್ಟತೊಡಗಿದನು:—

"ಹಾಂ! ಆಗೆ! ಅಚ್ಛಾ! ಕಿಸಕೋಭೀ ಇದರ ಉದರ ಮತ ಬೋಲೋ | ಈ ಬಗ್ಗೆ ಯಾರ ಮುಂದಾದರೂ ಪ್ರಸ್ತಾಪವನ್ನೆತ್ತಿದರೆ, ಅಲ್ಪಸ್ವಲ್ಪಾಗಿ ಉಳಿದಿರುವ ಲಜ್ಜೆಯನ್ನು ತೊರೆದು, ಮಾಲತಿಯು ನಿನ್ನ ವೈರಿಣಿಯಾದಾಳು. ಇಲ್ಲಿ ಯಾರ ಬಳಿಯಲ್ಲೂ ಮಾಲತಿ ಕಳೆದು ಹೋದ ಸಂಗತಿಯನ್ನೆತ್ತ ಕೂಡದು! ಈಗಿಂದೀಗಲೇ ನೆಟ್ಟಗೆ ನಾಗಪುರಕ್ಕೆ ಹೋಗು! ನಿನ್ನ ಮಗಳು ನಿನಗೆ ರೈಲಲ್ಲಿ ಭೆಟ್ಟಿಯಾಗುವಳು; ಆದರೆ ಇಲ್ಲಿ ತಡ ಮಾಡಿದರೆ-ಇಲ್ಲಿ ಒಂದು ರಾತ್ರಿ ಕಳೆದರೆ-ಆಕೆ ನಿನಗೆಂದಿಗೂ ಸಿಗಲಿಕ್ಕಿಲ್ಲ! ನಾಗಪುರದಿಂದ ಆ ಹುಡುಗಿ ದೂರ-ದೂರ-ಅತ್ಯಂತ-ದೂರ ಸಾಗಿಸಲ್ಪಟ್ಟಾಳು. ಹೊರಡು, ಬೇಗನೆ ನಾಗಪೂರ ವೈದಾನಿಗೆ ಹೋಗು. ನೋಡು!-ನೋಡು! ನೋಡು!! ಇದು ನೋಡು. ಮಾಲತೀ! ಎಲೆ! ಏ-ಏ-ಏ-ಹುಡುಗಿ! ನಿಮ್ಮನ್ನವನ ಹತ್ತರ ಹೋಗು!"

ಮಹಂತನು ನಿಶ್ಚೇಷ್ಟ ಬಿದ್ದನು. ಆಗ ಶಿಷ್ಯನು ತಾನೆ:-"ಮಾತಾಜಿ! ನಿಮ್ಮ ಸಂಕಟ ನಿವಾರಣವಾಯಿತು. ಗುರುಗಳ ಅಭಿಪ್ರಾಯವನ್ನು ಕೇಳಿಕೊಂಡಿರಷ್ಟೇ? ಸಾಕ್ಷಾತ್ಕಾರದ ವಾಕ್ಯಗಳಿವು! ಈ ನುಡಿಗಳಂತೆ ನಡೆದರೆ ಮಗಳನ್ನು ಹೊಂದುವಿರಿ. ನಿಶ್ಚಯವಾಗಿ ಪಡೆಯುವಿರಿ. ಈ ಪ್ರಾಂತದಲ್ಲಿ ಆ ಬಗ್ಗೆ ಯಾರೊಡನೆಯೂ, ಏನನ್ನೂ ಮಾತೆತ್ತದೆ, ಗೊಂದಲವನ್ನೆಬ್ಬಿಸದೆ ಇಂದೆಂದರೆ ಇಂದೇ ಹೊರಟು, ನಾಗಪೂರಕ್ಕೆ ಹೋಗಿರಿ. ಜನರಲ್ಲಿ ಅಲೌಕಿಕವಾದೀತು. ಮಾಲತಿಯು ಆದರಿಂದ ಇನ್ನಿಷ್ಟು ಲಜ್ಜೆಹೀನಳಾಗಿ, ದೂರ ಓಡಿ ಹೋಗಬಾರದೆಂದು ನಿಮಗನಿಸುತ್ತಿದ್ದರೆ, ಚಕಾರ ಶಬ್ದ ಕೂಡ ಉಚ್ಚರಿಸದೆ, ನಾಗಪೂರದಲ್ಲಿ ಆಕೆಯಿರುವ ಮೂರು-ನಾಲ್ಕು ದಿನಗಳಲ್ಲಿ ಆಕೆಯನ್ನು ಕಾಣಿರಿ. ಬಸ್, ಜಾವ್ ಅಭೀ. ಛೀ-ಛೀ! ಇವೇನಿದು? ಹಣ್ಣುಗಳೇ? ದಕ್ಷಿಣೆಯೇ? ಛೀ-ಛೀ! ತಾಯಿ, ನಮ್ಮ ಗುರುದೇವನಿಗೆ ಮುಂದಿ ತಂದ ಹೂವು ಕೂಡ ನಡೆಯುವದಿಲ್ಲ. ಯಹ ಮಹಂತ ಏಕ ಅಲೌಕಿಕ ಸಾಧು ಹೈ! ವೈಸೇತೋ ಲಾಖೋ ತುಮ ದೇಖತೇ ಹೈ! ಪರಂತು ಮಾತಾಜಿ, ಯಹ ತೋ ಸಾಕ್ಷಾತ್ಕಾರೀ ಪುರೂಷ! ಅಚ್ಛಾ! ಪಲೀಯೇ! ಛೀ! ಇನ್ನು ಒಂದು ಶಬ್ದ ಕೂಡ ಆಡಬೇಡಿರಿ. ಹೊರಡಿರಿ ಹೊರಗೆ!"

ಶಿಷ್ಯನ ಆ ಕೊನೆಯ ಶಬ್ದವು ಅತ್ಯಂತ ನಿರ್ಧಾರದಿದ್ದುದರಿಂದ ಇನ್ನು ಹೊರಗೆ ಹೆಜ್ಜೆ ಇಡದಿದ್ದರೆ ಈತನು ಜೆಂಡಿಗೆ ಕೈಕೊಟ್ಟು ದೂಡುವನೋ

ಎಂದೆನಿಸಿತು. ಕೂಡಲೆ ಅವರಿಬ್ಬರೂ ನಮಸ್ಕರಿಸಿ, ಈ ಮೊದಲಿಟ್ಟಿದ್ದ ಹಣ್ಣು-ದಕ್ಷಿಣೆಗಳನ್ನು ತಿರುಗಿ ತಕೊಂಡು, ಹಿಟ್ಟಿನ್ನದೆ ಹೊರ ಹೊರಟರು. ಮಂದಿರದ ಹೊರಗೆ ಮೌನವಾಗಿ ಬಂದು ದಾರಿಗೆ ಹತ್ತಿದ ಕೂಡಲೆ ರಮಾಬಾಯಿಯು ಮಾತಾಡಲಾರಂಭಿಸಲು, ನಾಯಡೂ ಬಾಯಿಯು ಗದ್ದರಿಸಿ "ಬೇಡ! ದಾರಿಯಲ್ಲಿ ಮಾತಾಡಬೇಡಿರಿ. ಮನೆಗೆ ತಲುಪಿದ ನಂತರವೇ ಮಾತಾಡತಕ್ಕದ್ದನ್ನು ಆಡಿರಿ." ಎಂದಳು

ಅವರು ನಾಯಡೂ ಬಾಯಿಯ ಮನೆಗೇ ಮೊದಲು ಹೋದರು. ಹೋದ ಕೂಡಲೆ ನಾಯಡೂಬಾಯಿ: "ರಮಾಬಾಯಿ, ಆ ಗೃಹಸ್ಥನು ನಿಮ್ಮ ಗುರ್ತಿನವನಿರುವನೋ? ನಿಮ್ಮ ಮಗನ ಮಿತ್ರರಲ್ಲಾರಾದರೂ ಮಾಲತಿಯೊಡನೆ ಇಷ್ಟು ಸಲಿಗೆಯಿಂದ ನಡೆಯುತ್ತಿದ್ದರೊ? ಮಾಲತಿಯು ಅದಾರ ಪ್ರೇಮಕ್ಕಾದರೂ ಮನಸೋತಿದ್ದಳೇ? ಆ ಬಗ್ಗೆ ನಿಮ್ಮ ಸಮ್ಮತಿಯಿರಲಿಲ್ಲವೆ?" ಎಂದು ಕೇಳಿದಳು. ಪಾಪ! ಆ ರಮಾಬಾಯಿಯ ಹೃದಯವು ನಿನ್ನೆ ರಾತ್ರಿಯಿಂದ ಇದುವರೆಗೆ ಹಲವು ಚಮತ್ಕಾರಿಕ ಪ್ರಸಂಗಗಳಿಂದ ವಿದೀರ್ಣವಾಗಿ ಹೋಗಿತ್ತು! ಆದರಿಂದ ಈಗ ಅವಳ ಮಿದುಳಿನ ಕ್ರಿಯೆಯು ತೀರ ಮಂದವಾಗ ಹತ್ತಿತ್ತು. ಅದರಲ್ಲಿಯೂ ನಾಯಡೂ ಬಾಯಿಯು ಕೊನೆಯ ಪ್ರಶ್ನೆಯಿಂದ ಆಕೆ ಮುಂದುಗಾಣದೆ: "ಹಾಗಿಲ್ಲರಮ್ಮಾ! ನಮ್ಮ ಮಾಲತಿಯು ಯಾರೊಡನೆಯೂ ಹಾಗೆ ವರ್ತಿಸಿದುದನ್ನು ನಾನು ನೋಡಿಯೇ ಇಲ್ಲ; ಅಂದಬಳಿಕ ನಾನು ಆಕೆಗೆ ಅಸಮ್ಮತಿಸುವ ಬಗೆ ಹೇಗೆ? ಇನ್ನು ಅವಳು ಯಾವಾಗಾದರೊಮ್ಮೆ ಆಡ್ಡಾಡಲಿಕ್ಕೆಂದು ಹೋದರೆ, ತನ್ನ ಸಖಿಯರೊಡನೆ ಗುಡಿ-ಗುಂಡಾರಗಳ ಕಡೆಗೆ ಹೋಗುತ್ತಿದ್ದಳು. ಒಮ್ಮೊಮ್ಮೆ ನಾಟಕ-ಸಿನೇಮಾಗಳಿಗೂ ಹೋಗಿರಬಹುದು; ಆದರೆ ಆಕೆಯ ಗುರ್ತು-ಪರಿಚಯದ ಯಾವ ತರುಣನೂ ಇರಲಿಲ್ಲ. ಇನ್ನು ನನ್ನ ಮಗನ ಆ ಗೆಳೆಯನಾವನೆಂಬದನ್ನು ನಾನಾದರೂ ಹೇಗೆ ಹೇಳಲಿ? ದೇಶಸಂಚಾರಿಯಾದ ನನ್ನ ಮಗನು! ಆದರೆ ಮಾಲತಿಯು ಹೀಗಾಗಬೇಕೆ! ಅಯ್ಯೋ ದೈವವೇ!"

"ಛೀ-ಛೀ! ದೈವವು ದೇವರಂತೆಯೇ ನಿಮ್ಮ ಮೇಲೆ ಉಪಕಾರಕವಾಗಿದೆ! ಪುರಾಣದೊಳಗಿನ ಕಥೆಯು ಈ ಯುಗದಲ್ಲಿಯೇ ಘಟಿಸಿತು! ಸತ್ತಿದ್ದ ನಿಮ್ಮ ಮಗನ ಪುನರ್ಜನ್ಮವು ಇಂದಾಗಲಿಲ್ಲವೇ? ಅಂದಬಳಿಕ ಕಳೆದು ಹೋದ ಮಗಳ ಭೆಟ್ಟಿಯ ಚಿಂತೆಯೇತಕ್ಕೆ? ನೀವು ಇನ್ನು ನಿಮ್ಮ ಎಲ್ಲ ತರ್ಕ-ಗಿರ್ಕಗಳನ್ನು ಬಿಟ್ಟು, ಆ ಮಹಂತನು ಹೇಳಿದ, ಕೇವಲ ಸತ್ಯವೆಂದು ಗೊತ್ತಾದ ಅದ್ಭುತತಂತಜ್ಞಾನದಲ್ಲ ನಂಬಿಗೆಯಿಟ್ಟು, ಆತನು ಹೇಳಿದ ದಾರಿಯನ್ನೇ ಹಿಡಿ

ಯಿರೆಂದು ನಾನು ನಿಮಗೆ ಹೇಳುತ್ತೇನೆ."

"ಛೀ! ನಾನೊಬ್ಬಳೇ ಹೋಗಲಾರೆನು. ನೀವೂ ನಾಗಪುರಕ್ಕೆ ಬರುವುದಾದರೆ ಹೊರಡುತ್ತೇನೆ" ಹೀಗೆಂದು ರಮಾಬಾಯಿ ಹಟಹಿಡಿದು ಕುಳಿತಳು. ಆಕೆಯು ಎದ್ದೇಳಲು ಕೂಡ ಶಕ್ತಿಸಾಲದಾಗಿದ್ದಳು!

ಮಾಲತಿಯು ಆ ಕೀರ್ತನ ಪ್ರಾಂಗಣದಲ್ಲಿ ಇಲ್ಲದಂತಾದಳೆಂಬ ಸಂಗತಿಯನ್ನು ಆ ಪ್ರಾಂತದಲ್ಲಿ ಯಾರ ಕಿವಿಗೂ ಹಾಕದೆ ರಮಾಬಾಯಿ-ನಾಯಡೂಬಾಯಿಯವರು ಅಂದೇ ಮಧ್ಯಾಹ್ನದಲ್ಲಿ ನಾಗಪುರ ರೈಲನ್ನಾರೋಹಿಸಿದರು.

---

## ೮ನೇ ಪ್ರಕರಣ

ರಮಾಬಾಯಿ ನಾಯ್ಡೂಬಾಯಿಯೊಡನೆ ಕೂಡಲೆ ನಾಗಪುರಕ್ಕೆ ಹೊರಟುಹೋದದ್ದರಿಂದಲೂ, ಅವಳು ಮಾಲತಿ ಇಲ್ಲದಂತಾದ ಸಂಗತಿಯನ್ನು ಯಾರೆದುರಿಗೂ ತೆಗೆಯದ್ದರಿಂದಲೂ ಅವರ ನೆರೆ ಹೊರೆಯವರಿಗೆ ಕೂಡ ಆ ಸುದ್ದಿ ಹತ್ತಿರಲಿಲ್ಲ; ಅಂದಬಳಿಕ ಇತರರಿಗಾಗಲಿ ಪೋಲೀಸರಿಗಾಗಲಿ ಅದು ಹೇಗೆ ಗೊತ್ತಾಗಬೇಕು?

ಅಂದೇ ರಾತ್ರಿ ಮಥುರೆಯ ಭಾವಿಕರಿಗೆ ಯೋಗಾನಂದನ ಕಡೆಯ ದರ್ಶನವಾಗುವದಿತ್ತು; ಕೊನೆಯ ಭಜನೆ ಕೇಳಲಿಕ್ಕೆ ದೊರೆಯುವದಿತ್ತು; ಯಾಕಂದರೆ, ಅಂದು ಭಜನೆ ಮುಗಿಯುತ್ತಲೆ ಸ್ವಾಮೀಜಿಯವರ ಬೀಡಾರವು ಮಥುರೆಯಿಂದ ಹೊರಡುವದು ನಿಶ್ಚಿತವಾಗಿತ್ತು. ಆದ್ದರಿಂದ ಇಂದು ಆ ಮಂದಿರದ ಪ್ರಾಂಗಣದಲ್ಲಿ ದಿನಕ್ಕಿಂತಲೂ ಹೆಚ್ಚು ದಟ್ಟಣೆಯಾಗಿತ್ತು. ತನ್ನ ನಾಲ್ಕು ಜನ ಮುಖ್ಯ ಶಿಷ್ಯರ ಮಧ್ಯದಲ್ಲಿ ಯೋಗಾನಂದ ಮಹಾರಾಜನು ನಿಂತುಕೊಂಡು, ಕೈಯಲ್ಲಿ ವೀಣೆ ಹಿಡಿದು ಭಜನವನ್ನನ್ನಹತ್ತಿದನು. ಭಜನೆಯು ರಂಗಿಗೆ ಬಂದಿತು. ಅಲ್ಪಾವಧಿಯಲ್ಲಿ ಅಲ್ಲಿ ನೆರೆದಿದ್ದ ಸಾವಿರಾರು ಜನರು ಸ್ವಾಮೀಜಿಯ ಆಜ್ಞೆಯ ಮೇರೆಗೆ ಎದ್ದು ನಿಂತು ಏಕಕಂಠದಿಂದ ಯಾವಾಗ ನಾಮಘೋಷ ಮಾಡಹತ್ತಿದರೋ, ದೊಡ್ಡ ದೊಡ್ಡ ಮದ್ದಲಿ, ಮೃದಂಗ, ಝಾಂಜು, ಸಾರಂಗಿ, ಸಹಸ್ರಾವಧಿ ತಾಳ ಒಮ್ಮೆಲೆ ನಾದಗೊಟ್ಟು ಆ ಶತಕಂಠ ನಿನಾದಕ್ಕೂ ನಾಮಘೋಷಕ್ಕೂ ಬೆಂಬಲ ಕೊಡಹತ್ತಲು, ನಂತರ ಮಹಂತನು ಭಕ್ತಿಯ ಆವೇಶಕ್ಕೆ ಬಂದು ಎತ್ತಿದ ಕೈಯಿಂದ ತಾಳದ ಗತಿಯನ್ನು ತೀವ್ರ ಮಾಡಲಿಕ್ಕೆ ಯಾವಾಗ ಸೂಚಿಸುತ್ತಿದ್ದನೋ, ಆಗ ಆ ಧ್ವನಿಸಿಂಧುವಿನ ತೆರೆಗಳೊಡನೆ ಹೃದಯಗಳು ಥರಥರನೆ ನಡುಗಿ, ಪ್ರತಿಯೊಬ್ಬರ ದೇಹಭಾನವು ಕ್ಷಣಕಾಲ ಹಾರಿದಂತಾಗುತ್ತಿದ್ದಿತು. ಭಕ್ತಿಯ ಆನಂದದಲ್ಲಿ ತಲ್ಲೀನರಾಗಿ ಎಷ್ಟೋ

ಜನರು ಕುಣಿಯಹತ್ತಿದರು; ಎಷ್ಟೋ ಜನರ ಕಣ್ಣೊಳಗಿಂದ ಪ್ರೇಮಾಶ್ರುಗಳು ಧಾರೆಗಟ್ಟಿ ಹರಿಯತೊಡಗಿದವು; ಹಾಗು ಆ ನಾಮಘೋಷದಿಂದ ವಾತಾವರಣವೆಲ್ಲ ದುಮುದುಮಿಸಿ ಬಿಟ್ಟಿತು.

ಆದರೆ ಯಾವಾಗ ಸಾಧುವು ತನ್ನ ಎರಡೂ ಕೈ ಎತ್ತಿ 'ಶಾಂತರಾಗಿರಿ' ಎಂದು ಒಮ್ಮೆಲೆ ಸೂಚಿಸಿದನೋ, ಆಗ ಯಾವುದೊಂದು ದೊಡ್ಡ ಪೆಟ್ಟಿಗೆಯ ಸಂಗೀತದ ಭರದಲ್ಲಿ ಅದರ ಸೂರವು ಕೇಳಲಿಕ್ಕೆ ಬಾರದಂತೆ ಆಕಸ್ಮಿಕ ಮೂಕವಾಗಿ ಹೋಗುತ್ತದೋ, ಹಾಗೆ ಆ ವಿಶಾಲ ಸಭೆಯು ಒಮ್ಮೆಲೆ ನಿಃಶಬ್ದವಾಗಿ ಬಿಟ್ಟಿತು. ಎಲ್ಲಿಯೂ ಪಿಟ್ಟೆಂದು ಶಬ್ದವಾಗಲೊಲ್ಲದು! ಪ್ರತಿಯೊಬ್ಬನೂ ಆ ಸಾಧುಶೀಲ ಭಕ್ತನ ಮುಖದಿಂದ ಇನ್ನು ಅದಾವ ಭಾವರಸದ ಭಜನಾಪದ ಹೊರಬೀಳುತ್ತದೋ ಎಂದು ಉತ್ಸುಕತೆಯಿಂದ ಟಕಮಕವಾಗಿ ನೋಡುತ್ತ ನಿಂತುಕೊಂಡನು.

ಗಾಢವಾಗಿ ಮಲಗಿದ್ದ ಹಕ್ಕಿಯು ಗೂಡಿನೊಳಗಿಂದ ನಸುಕಿನಲ್ಲಿ ಹೇಗೆ ಅದರ ಮೊದಲನೇ 'ಕಿಲಿಬಿಲಿ'ಯು ಕೇಳಿಸುವದೋ ಮತ್ತು ಅದು ಒಳ್ಳೇ ಇಂಪಾಗಿ ತೋರುವುದೋ ಹಾಗೆಯೆ ಆ ನಿಃಶಬ್ದ ಸಭೆಯು ಆ ಶಾಂತತೆಯೊಳಗಿನ ಕೆಲಹೊತ್ತಿನ ಮೇಲೆ ಮೆಲ್ಲಮೆಲ್ಲನೆ ಒಂದು ಸಾರಂಗಿಯ ಮಂಜುಃ ಧ್ವನಿಯು ಪುನಃ ಹೊರಡಹತ್ತಲು ಸ್ವಾಮೀಜಿಯು ಭಜನೆಗೆ ಹಿಮ್ಮೇಳಾಗಿದ್ದ ಶಿಷ್ಯನು ಅವರ ಪ್ರೀತಿಯ ಮೀರಾಬಾಯಿಯ ಈ ಕೆಳಗಿನ ಪದವನ್ನು ಸಾರಂಗಿಯಲ್ಲಿ ನುಡಿಸಹತ್ತಿದನು:

> ಬತಾದೇ ಸಖೀ ಕೋನ ಗಲೀ ಗಯೇ ಶಾಮು! ॥
> ಕೋನ ಗಲೀ ಗಯೇ ಶಾಮ ॥ ಪಲ್ಲ ॥
> ಗೋಕುಲ ಧುಂಡೀ । ವೃಂದಾವನ ಧುಂಡೀ ॥
> ದುಂಡೀ ಆಯೋ ವ್ರಜಧಾಮು । ಬತಾದೇ ಸಖೀ ॥ ೧ ॥

'ಕೋನ ಗಲೀ ಗಯೇ ಶಾಮು!' ಈ ರಸಾಲ ಚರಣವನ್ನು ಒಳ್ಳೇ ಆರ್ತತೆಯಿಂದ ಆ ಭಕ್ತನು ಅನ್ನಹತ್ತಿ, ಶಬ್ದಶಬ್ದಕ್ಕೆ ಸರಸರತಿಯಂತೆ ಏರಿಸುತ್ತ ಇಳಿಸುತ್ತ ಮಧುರ ಆಲಾಪಗಳಲ್ಲಿ ಭಜಿಸಹತ್ತಿದಕೂಡಲೆ ಪ್ರತಿಯೊಬ್ಬರ ಹೃದಯದಲ್ಲಿಯೂ ಅವರವರ ಪ್ರಿಯಕರರ ಮೂರ್ತಿಗಳು ಕಾಣಹತ್ತಿದವು. ತಾವೇ ತಮ್ಮ ಪ್ರಿಯಕರರನ್ನು ಶೋಧಿಸುತ್ತಿರುವೆವೆಂಬ ಭಾಸವಾಗತೊಡಗಿತು! 'ಕೋನ ಗಲೀ ಗಯೇ ಶಾಮು!' ಸಖಿಯೆ ಹೇಳಬಾರದೆ, ನನ್ನ ಪ್ರಿಯಕರನು ಯಾವ ಓಣಿಯಲ್ಲಡಗಿರುವನೆಂಬದನ್ನು? ನಾನು ಗೋಕುಲದಲ್ಲಿ ಹುಡುಕಿ ಬಂದೆನು, ವೃಂದಾವನವನ್ನು ಶೋಧಿಸಿ ಬಂದೆನು, ವ್ರಜದಲ್ಲಿ ನೋಡಿ

ಬಂದೆನು; ಆದರೆ ನನ್ನ ಪ್ರಿಯಕರನು ಸಿಗಲೊಲ್ಲನು! ಆ ಮನೋಹರನೆಲ್ಲಿರುವನೆಂಬದನ್ನು ಗೆಳತೀ, ಹೇಳಬಾರದೇ? 'ಕೋನ ಗಲೀ ಗಯೇ ಶಾಮ'

ಸಂಸಾರರತರಾದ ತರುಣ-ತರುಣಿಯರ ಹೃದಯಗಳಲ್ಲಿ ಅವರ ಐಹಿಕ ಪ್ರಿಯಕರರ ಸ್ಮೃತಿಯು ಜಾಗೃತವಾಗಿ, ಅವರ ಭೆಟ್ಟಿಯ ಮಧುರ ವ್ಯಾಕುಲತೆಯು ಕಂಪಿಸಹತ್ತಿತು. 'ಕೋನ ಗಲೀ ಗಯೇ ಶಾಮ?'

ಅಧ್ಯಾತ್ಮ ಸಾಧುಸಂತಭಕ್ತರ ಹೃದಯಗಳು ಅವರ ಪ್ರಿಯಕರನ ಆಗಮನದ ವ್ಯಾಕುಲತೆಯಿಂದ ನಡುಗಹತ್ತಿದವು! ಈ ಜೀವವು ಜನ್ಮ-ಜನ್ಮಾಂತರಗಳ ಗೋಕುಲ-ವೃಂದಾವನಗಳೊಳಗಿನ ಯಾವುದನ್ನು ಶೋಧಿಸುತ್ತ, ಯಾವುದನ್ನು ಹುಡುಕುತ್ತ, ಯಾವುದರ ಇಚ್ಛೆಯಿಂದ ರಸ-ರೂಪ-ವರ್ಣಸ್ಪರ್ಶಗಳೆಂಬ ಹೂಗಳ ಗುಂಪು-ಗುಂಪುಗಳೊಳಗಿಂದ ಆ ಅಸ್ಪಂದಕಂದ ದೇವನ ಶೋಧಕ್ಕಾಗಿ ಒಂದೇಸವನೆ ಸಾಗುತ್ತಿನೆಯೋ, ಆತನ ಭೆಟ್ಟಿಯ ಉತ್ಸುಕತೆಯಿಂದ ಅವರೂ 'ಕೋನ ಗಲೀ ಗಯೇ ಶಾಮ?' ಎಂದು ಕೇಳಹತ್ತಿದರು ಗೆಳತೀ, ಆ ದೇವನಲ್ಲಿರುವ? ಆತನ ಆಕರ್ಷಣದಿಂದ ಈ ಜೀವವ ಕಸವಿಸಿಯಾಗಿ, ಯುಗಯುಗಾಂತರಗಳಿಂದ ಓಡಹತ್ತಿದೆ! ಯಾವಾತನ ಕೊಳಲಿನ ನಾದದಿಂದ ಜೀವಿಸಿರಬೇಕೆಂದಿಸುವದೊ, ಆ ಕೊಳಲು ಕೃಷ್ಣನೆಲ್ಲಿರುವನು? ಯಾವ ಓಣಿಯಲ್ಲಿರುವನು?

ಈ ರಸಾಲ ಪದವನ್ನು ಅನ್ನುತ್ತಿರುವಾಗಲೇ ಮಧ್ಯದಲ್ಲಿ ಹೂವಿನ ಹಾಸಿಗೆಯ ಮೇಲೆ ಮಲಗಿರುವಾಗ ಆಕಸ್ಮಿಕವಾಗಿ ಏನಾದರೂ ಕಚ್ಚಿದಂತೆ ಆ ಮಂಜುಲತೆಯಲ್ಲಿ ರಮಮಾಣರಾದ ಸಭಿಕರ ಕರ್ಣಗಳಿಗೆ ದಾರಿಯಲ್ಲಿ ಒಂದರ ಹಿಂದೋಂದರಂತೆ ಬರುತ್ತಿರುವ ಹತ್ತು-ಹನ್ನೆರಡು ತೈಲರಥಗಳ ಹಾರ್ನಿನ 'ಫೊಂ-ಫೊಂ' ಎಂಬ ಕರ್ಕಶ ಶಬ್ದವು ತಟ್ಟನೆ ಕೇಳಿಸಿತು. ಮಂದಿರದ ಯಾವ ಪ್ರಾಂಗಣದಲ್ಲಿ ಆ ಭಜನೆಯು ನಡೆದಿದ್ದಿತೋ, ಅದರ ಮೂರು ದಿಕ್ಕಿಗಿರುವ ಮೂರೂ ಬಾಗಿಲುಗಳಿಗೆ ಆ ಮೋಟರುಗಳಲ್ಲಿಯ ಎರಡೆರಡು ಬಸ್ಸುಗಳು ಫೊಂ ಫೊಂ ಎಂದೆನ್ನುತ್ತ ಬಂದು ನಿಂತವು. ಮಥುರೆಯಲ್ಲಿ ಯೋಗಾನಂದ ಸ್ವಾಮಿಯ ಕೀರ್ತಿಯು ದೂರದ ವರೆಗೆ ಹಬ್ಬಿದ್ದರಿಂದ, ಆತನ ಭಜನೆಗೆ ಎಷ್ಟೋ ದೊಡ್ಡದೊಡ್ಡ ಜನರು ತಮ್ಮ ಮೊಟರುಗಳನ್ನು ತಕ್ಕೊಂಡು ಆಗಾಗ್ಗೆ ಬರುತ್ತಿದ್ದರು. ಅಂಥವರವೇ ಯಾವವಾದರೂ ಈ ಬಸ್ಸುಗಳಿರಬಹುದೆಂದರು. ಆದರೂ ಕೂಡ ಭಜನೆಯ ಭರದಲ್ಲಿ ಹೀಗೆ ರಸಭಂಗ ಮಾಡುವ ಅಡಮುಟ್ಟತನ ಮಾಡಲಿಕ್ಕೆ ಕೊಂಚವಾದರೂ ಸಂಕೋಚವು ಆ ಮೋಟರಿನವರಿಗನಿಸಬಾರವೆ? ಎಂದು ಮೋಟರಿನ ಗೊಂಗಾಟದಿಂದ ತ್ರಸ್ತರಾದ ಕೆಲ ಜನರು ತಮ್ಮ

ತವ್ಮೊಳಗೆ ಅಂದುಕೊಂಡರು; ಆದರೆ ಮಹಂತರಾದ ಯೋಗಾನಂದಜಿಯವರು ಮಾತ್ರ ಭಜನೆಯಲ್ಲಿ ಹೇಗೆ ಹಾಡುತ್ತಿದ್ದರೊ, ಹಾಗೆಯೇ ತಲ್ಲೀನತೆಯಿಂದ ಹಾಡುತ್ತಿದ್ದರು.

ಇಷ್ಟರಲ್ಲಿ ಒಬ್ಬ ಟೊಣಪ, ಉಗ್ರ ಹಾಗು ಎತ್ತರದ ಗೃಹಸ್ಥನು ಆ ಪ್ರಾಂಗಣದೆದುರಿಗಿನ ಬಾಗಿಲೊಳಗಿಂದ ಒಳಗೆ ಬಂದು ದಿಟ್ಟತನದಿಂದ ದಾರಿ ಮಾಡಿಕೊಳ್ಳುತ್ತ, ವ್ಯಾಸಪೀಠದ ಮೇಲೆ ಮಹಂತನು ತನ್ನ ಹಿವ್ಮೇಳದೊಡನೆ ಎಲ್ಲಿ ಕುಳಿತಿದ್ದನೋ ಅತ್ತ ನೆಟ್ಟಗೆ ನಡೆದನು. ಅಕ್ಕಪಕ್ಕದ ಜನರು ಆತನನ್ನು ಕುರಿತು ಒದರಿ:'ಕೆಳಗೆ ಕುಳ್ಳಿರಿ''ಎಲೋ, ಆ ಪಂಡಿತರನ್ನೀಚೆಗೆಳೆಯಿರಿ' ಎಂದು ಅನ್ನಹತ್ತಿದರು; ಆದರೆ ಆ ಮಾತಿನ ಕಡೆಗೂ ಉಪಹಾಸದ ಕಡೆಗೂ ಕೊಂಚವೂ ಲಕ್ಷ್ಯಗೊಡದೆ ಹೋಗಿ, ಆತನು ಆ ವ್ಯಾಸಪೀಠವನ್ನೇರಿದನು. ಭಜನೆಯ ರಂಗಿನಲ್ಲಿ ಮನಃಪೂರ್ವಕವಾಗಿ ಗುಂಗಾದ ಯಾವನೊಬ್ಬ ಭಕ್ತನ ಮೈಯಲ್ಲಿ ದೈವೀ ಆವೇಶವುಂಟಾಗುವದು; ಇಲ್ಲವೆ ಅರೆಹುಚ್ಚಿನ ಯಾವನೊಬ್ಬ ಮನುಷ್ಯನು ದೊಡ್ಡ ದೊಡ್ಡ ಸಭೆಗಳೊಳಗಿನ ಬರಿಯ ಜನಸಮ್ಮರ್ದದ ದೃಶ್ಯದಿಂದಲೇ ಗಾಳಿದುಂಬಿದಂತಾಗುವನು; ಆದರೆ ಆತನು ಅರೆಹುಚ್ಚನೂ ಆಗಿರಲಿಲ್ಲ; ಭೋಳೇ ಭಾವಿಕನೂ ತೋರಲಿಲ್ಲ. ಆತನು ಶಿಸ್ತಿನಿಂದ ಧರಿಸಿದ ಪೋಷಾಕು-ಠೀವಿಯ ಸಮಂಜಸವಾದ ಮುಖಮುದ್ರೆಗಳುಳ್ಳವನಿದ್ದನು. ಅಂತೆಯೇ ಆತನು ವ್ಯಾಸಪೀಠವನ್ನೇರಿದ ಕೂಡಲೆ ಮಹಂತನ ಆ ನಾಲ್ಕು ಜನ ಪಟ್ಟದ ಶಿಷ್ಯರಲ್ಲಿಯ ಒಬ್ಬನು ಆತನನ್ನು ಕುರಿತು:

"ತಮಗೇನು ಬೇಕು? ಹೀಗೆ ಒಮ್ಮೆಲೆ ವ್ಯಾಸಪೀಠವನ್ನೇರುವದು ಸಭೆಯ ವಿನಯಕ್ಕೆ ತಕ್ಕದ್ದಾಗಿಲ್ಲ." ಎಂದನು.

ಆದರೆ ಆ ಗೃಹಸ್ಥನು ಕೇಳಿಯೂ ಕೇಳಿಸದವನಂತೆ ನಟಿಸಿ, ನೆಟ್ಟಗೆ ಮಹಂತನ ಬಳಿಗೆ ಹೋದನು; ಮತ್ತು ಆತನನ್ನು ಕುರಿತು:-"ನಿಮ್ಮನ್ನು ಹೊರಗೆ ಯಾರೋ ದೊಡ್ಡ ಮನುಷ್ಯರು ಭೆಟ್ಟಿಗೆ ಕರೆಯುತ್ತಿರುವರು ಬನ್ನಿರೆ"ಂದನು. ಮಹಂತನು ಆತನಿಗೆ ಸ್ವತಃ ಉತ್ತರ ಕೊಡದೆ, ಶಿಷ್ಯನ ಕಡೆಗೆ ಬೊಟ್ಟುತೋರಿಸಿದನು. ಶಿಷ್ಯನು "ಆ ದೊಡ್ಡ ಮನುಷ್ಯರನ್ನೇ ಒಳಗೆ ಕರೆಯಿರಿ! ಮಹಂತರು ದೇವರೊಬ್ಬರನ್ನೇ ಎದುರ್ಗೊಳ್ಳುವರು; ಮನುಷ್ಯರನ್ನು ಎದುರ್ಗೊಳ್ಳುವದಿಲ್ಲ"

ಆ ಶಿಷ್ಯನನ್ನು ದುರ್ಲಕ್ಷಿಸಿ, ಆ ಗೃಹಸ್ಥನು ಯೋಗಾನಂದನನ್ನು ಬೆದರಿಸುತ್ತ:-"ನೀವೇ ಹೊರಗೆ ಬರಬೇಕು."

ಆ ಬೆದರಿಕೆಯಿಂದ ಮಹಂತನು ಚಮಕಿತನಾಗದಿಸಲಿಲ್ಲ. "ಭಜನೆ ಪೂರೈಸುವವರೆಗೆ ನಮಗೆ ಬರಲಿಕ್ಕಾಗುವದಿಲ್ಲ." ಎಂದು ಆತನು ಶಂಕೆಯಿಂದ

ಕಡವರಿಸುತ್ತ ಉತ್ತರವಿತ್ತನು.

"ನೀವಾಗಿ ಬರದಂತಿದ್ದರೆ, ನಾನು ನಿಮ್ಮನ್ನು ಕರೆದೊಯ್ಯಲಿಕ್ಕೆ ಬಂದಿರುತ್ತೇನೆ. ಬರುವಿರೋ-ಇಲ್ಲವೋ? ಹೇಳಿರಿ."

"ಈ ಉದ್ಧಟತನವು ತಕ್ಕುದಲ್ಲ!" ಒಬ್ಬ ಶಿಷ್ಯನು ಸಿಟ್ಟಿನಿಂದ ಅಂದು, ಆ ಗೃಹಸ್ಥನಿಗೆ ಹೀಗೆ ಹೇಳಿದನು:—"ಹೊರಗಿನ ಆ ದೊಡ್ಡ ಗೃಹಸ್ಥರಾದರೂ ಯಾರು? ಅವರ ಹೆಸರು ಹೇಳಿರಿ."

"ಪೋಲೀಸ ಸುಪರಿಂಟೆಂಡೆಂಟ."

ಆ ಶಬ್ದಗಳನ್ನು ಕೇಳುತ್ತಲೆ ಯೋಗಾನಂದ ಸ್ವಾಮಿಯ ಆ ಪ್ರಶಾಂತ ಮುದ್ರೆಯಷ್ಟೇ ಅಲ್ಲ, ಆತನ ಆ ಭಕ್ತಿಶೀಲ ಸುಖಶಿಖಾಂತ ಆವಿರ್ಭಾವವೂ ಒಮ್ಮೆಲೆ ಬೇರ್ಪಡಿಸಿ, ಆತನು ಯಾವನೋ ಒಬ್ಬ ತೀವ್ರ, ತಾಮಸಿ ಹಾಗು ಜಗಳಗಂಟ ಪುರುಷನಾಗಿ ತೋರಹತ್ತಿದನು. ಆ ಕರೆಯ ಬಂದ ಮನುಷ್ಯನು ಪೋಲೀಸ ಸುಪರಿಂಟೆಂಡೆಂಟನ ಹೆಸರನ್ನು ಸಂಪೂರ್ಣವಾಗಿ ಉಚ್ಚರಿಸುವ ಮೊದಲೇ ಯೋಗಾನಂದ ಸ್ವಾಮಿಯು ತನ್ನ ವಜ್ರಮುಷ್ಟಿಯಿಂದ ಆತನ ಮೂಗಿಗೆ ಗುದ್ದಿದವನೇ, ವ್ಯಾಸಪೀಠದಿಂದ ಕೆಳಗೆ ಬಹು ದೂರದ ವರೆಗೆ ಜಿಗಿದನು! ಅದರಿಂದ ಮೂಗಿನ ಮೇಲೆ ಗುದ್ದಿಸಿಕೊಂಡ ಗೃಹಸ್ಥನು ಒಳ್ಳೇ ಟೊಣಪನಾಗಿದ್ದರೂ ಕೂಡ ಸ್ವಂತದ ದೇಹವನ್ನು ಸಾವರಿಸಿಕೊಂಡು ಯೋಗಾನಂದನ ಹಿಂದೆ ಹಾರಲು, ಅದು ಯೋಗಾನಂದನ ಜಿಗಿತದ ಅರ್ಧದಷ್ಟು ದೂರ ಕೂಡ ಹೋಗಲಿಲ್ಲ! ಆ ನಾಲ್ವರೂ ಪಟ್ಟಶಿಷ್ಯರು ಯೋಗಾನಂದನ ಹಿಂದಿನಿಂದ ತಮ್ಮ ಹರಿತಾದ ಚಿಮುಟಿಗೆಗಳನ್ನು ಹಿಡಿದು, ವ್ಯಾಸಪೀಠದಿಂದ ಹಾರಿಕೊಂಡಿದ್ದರು. ದಟ್ಟವಾದ ಮಂಡಲಿಯಲ್ಲಿ ಆ ಗೋಸಾವಿಗಳು ಧಡಧಡನೆ ಹಾರುತ್ತಲೆ, ಅಲ್ಲಿ ಬಹು ದೊಡ್ಡ ಗೊಂದಲವೇ ಎದ್ದಿತು. ಅಲ್ಲಿಯ ಜನರು ಒದರುತ್ತ ಚೀರುತ್ತ ಎದ್ದು ನಿಂತರು. ನೂಕಾಟಕ್ಕೆ ಪ್ರಾರಂಭವಾಯಿತು!

ಆದರೆ ಅದೆಲ್ಲ ಸಂಗತಿಯು ಬಹು ತೀವ್ರವಾಗಿ ಘಟಿಸಿದ್ದರಿಂದ, ಹಾರಿಕೊಂಡ ಕಡೆಯ ಜನದಟ್ಟಣೆಯು ಒದರಿ-ಚೀರಿ ಏಳುವಷ್ಟರಲ್ಲಿ, ಸಭೆಯ ಬೇರೆ ಕಡೆಗಳಿಗೆ ಏನು ನಡೆದಿತ್ತೆಂಬದರ ಗಂಧವೂ ಕೂಡ ಅದಕ್ಕಿದ್ದಿಲ್ಲ; ಮತ್ತು ಯಾರಿಗೆ ಏನಾದರೂ ಧಕ್ಕೆಮುಕ್ಕೆಯುಂಟಾಗಿ, ಮಹಂತನು ಜಿಗಿದು ಹೋಗುತ್ತಿರುವನೆಂಬದಿಷ್ಟೇ ಕಾಣಿಸಿತೋ, ಆ ಜನರಿಗಾದರೂ ಹಾಗೇಕಾಗುತ್ತಿದೆಯೆಂಬದರ ಕಲ್ಪನೆಯೇ ಬರಲಿಲ್ಲ. "ಏನರೀ, ಏನಾಯಿತು?" ಎಂದು ಪ್ರತಿಯೊಬ್ಬರೂ ಗಟ್ಟಿಗಟ್ಟಿಯಾಗಿ ಕೇಳುತ್ತಿದ್ದರು. ಅದು ಹೀಗೇಕಾಗುತ್ತದೆ? ಎಂತಾಗುತ್ತದೆ? ಎಂಬ ಪ್ರಶ್ನೆಗಳು ಮನಸ್ಸಿನಲ್ಲಿ ಬರುವಷ್ಟು ಕೂಡ ಅವಕಾಶ ದೊರೆಯಲಿಲ್ಲ.

ಧಡಧಡನೆ ಹಾರಿಕೊಂಡು ಆ ಗೋಸಾವಿಗಳು ದಟ್ಟಣೆಯಲ್ಲಿ ಸೇರಿ, ದಿಟ್ಟತನದಿಂದ ದಾರಿ ಮಾಡಿಕೊಳ್ಳುತ್ತ ಬಹುಮಟ್ಟಿಗೆ ಕಾಣಿಸದಂತಾದರು; ಯಾಕಂದರೆ, ನೂರಾರು ಜನರು ಆ ಆಕಸ್ಮಿಕ ಕೂಗಾಟದಿಂದ ನೂಕುನೂಕುತ್ತ ಮುಂದೆ ಸರಿಯಲು, ಆ ಪ್ರಾಂಗಣದಲ್ಲಿ ಏಕೋಪ್ರಕಾರದ ಗೊಂದಲವೆದ್ದಿತ್ತು. ಅದು ಆ ಗೋಸಾವಿಗಳಿಗೆ ಅನುಕೂಲವೇ ಆಗಿತ್ತು. ಕೆಲವರು "ಮಹಂತರ ವ್ಯೆಯಲ್ಲಿ ಮಹಾವೀರನ ಸಂಚಾರವಾಯಿತೆಂದರು; ಕೆಲವರು ಹನುಮಾನಜಿಯ ಸಂಚಾರವಾಯಿತೆಂದೂ ಅದಕ್ಕಾಗಿಯೇ ಅವರು ಹಾರುತ್ತ-ಜಿಗಿಯುತ್ತ ರಾಮಚಂದ್ರನ ಗುಡಿಯ ಕಡೆಗೆ ಹೋಗುತ್ತಿರುವರೆಂದೂ, ಕೆಲವರು ಯಾವನೊಬ್ಬ ಹುಚ್ಚನು ಮಹಂತರಿಗೆ ತೊಂದರೆ ಕೊಟ್ಟಿದ್ದರಿಂದ ಅವರು ಪ್ರಜ್ಞಾವಿಹೀನರಾದರೆಂದೂ, ತಮಗೆ ತಿಳಿದಂತೆ ಅಂದರು. ಆ ಪ್ರಶಾಂತ ಭಕ್ತಿರಸದ ಶಾಂತತೆಯಿಂದ ಗುಂಗಿನಲ್ಲಿರುವಾಗ ಹೀಗೆ ಆಕಸ್ಮಿಕವಾಗಿ ಕೂಗಾಟವೆದ್ದಿದ್ದನ್ನು ಕೇಳಿ ಹಲವರು ದೇಹಭಾನವಿರಹಿತರೇ ಆದರು ಆ ಸಾಧುವಿನ ಆ ಸುಸ್ವರ ಭಜನ ನಡೆದ ಆ ಪ್ರಾಂಗಣದಲ್ಲಿಂದ ಎತ್ತಿ ಒಯ್ದು ತಮ್ಮನ್ನು ಯಾವುದೋ ಒಂದು ಸ್ಥಳದಲ್ಲಿ ಬೇರೆ ಯಾವದೋ ಒಂದು ಬಗೆಯ ಗೊಂದಲದಲ್ಲಿ ಚೆಲ್ಲಿರುವರೋ ಏನೆಂದು ಆ ಆಕಸ್ಮಿಕ ದೃಶ್ಯಪಲ್ಲಟ (ಟ್ರಾನ್ಸಫರಸೀನ) ವಾಗುತ್ತಲೆ ಕೆಲವರಿಗೆ ಭಾಸವಾಯಿತು.

ಇತ್ತ ಯಾವ ಎದುರಿಗಿನ ಬಾಗಿಲದಿಂದ ಪೋಲೀಸ ಸುಪರಿಂಟೆಂಡೆಂಟನ ಆಜ್ಞೆ ತಂದ ಮನುಷ್ಯನು ಹೊಕ್ಕಿದ್ದನೋ ಆ ಬಾಗಿಲದ ಕಡೆಗೆ ಹಾರಿಕೊಳ್ಳದೆ, ಬೇರೆ ಬಾಗಿಲದ ಕಡೆಗೇ ಆ ಗೋಸಾವಿಗಳು ಹಾರಿಕೊಂಡು ಅತ್ತ ಕಡೆಯ ಬಾಗಿಲದ ದಾರಿಯ ಹಿಡಿಯುವ ಪ್ರಯತ್ನಮಾಡಿದರು. ಬುದ್ಧಿಪೂರ್ವಕವಾಗಿಯೇ ಆ ದಿಕ್ಕು-ಆ ಬಾಗಿಲಗಳ ಕಡೆಗೆ ಬೇಕಂತ ತಮಗನುಕೂಲರಾದ ದಿನಾಲು ಬರುತ್ತಿದ್ದ ಜನರನ್ನೇ ಕೂಡ್ರಿಸಲಾಗಿತ್ತು. ಅವರು ಬಹುಭಾವಿಕರಾಗಿ ತೋರುತ್ತಿದ್ದರು; ಹಾಗು ಅವರು ದಿನಾಲು ಎಲ್ಲರಿಗಿಂತಲೂ ಮೊದಲು ಬಂದು, ಒಳ್ಳೇ ಆಸ್ಥೆಯಿಂದ ತಮ್ಮ ತಮ್ಮ ಸ್ಥಳಹಿಡಿದು ಕುಳಿತುಕೊಳ್ಳುತ್ತಿದ್ದರು. ಅಂಥ ಆಸ್ಥಾಪೂರ್ಣ ಭಜನಲೋಲುಪ ಜನರೇ ಆ ಬಾಗಿಲ ಕಡೆಗಿದ್ದರು; ಆದ್ದರಿಂದ ಆ ಬಾಗಿಲದಿಂದಲೇ ತಮಗೆ ಬೇಗನೆ ಸುಖರೂಪವಾಗಿ ಹೊರಬೀಳಬಂದೀತೆಂದು ಮಹಂತನು ತಟ್ಟನೆ ತರ್ಕಿಸಿದನು. ಪೋಲೀಸ ಸುಪರಿಂಟೆಂಡೆಂಟನ ಆಜ್ಞೆಯು ಯಾವಎದುರಿಗಿನ ಬಾಗಿಲದಿಂದ ಬಂದಿತ್ತೋ, ಅದೇ ಕಡೆಗೆ ಪೋಲೀಸ ಶಿಪಾಯಿಗಳು ಬಂದು ನಿಂತಿರುವ ಸಂಭವವೂ ಹೆಚ್ಚು. ಆದುದರಿಂದ ಆ ಚತುರ ಮಹಂತನೂ ಆತನ ಶಿಷ್ಯರೂ ಆ ಎದುರಿಗಿನ ಬಾ-

ಗಿಲವನ್ನು ಳಿದು, ಆ ಭಾವಿಕ ಜನರಿಂದ ತುಂಬಿದ್ದ ಬಾಗಿಲ ಕಡೆಗೇ ಧಾವಿಸಿದರು. ಅವರ ಹಿಂದೆಯೇ ಬರುತ್ತಿದ್ದ ಆ ಪೋಲೀಸ ಸುಪರಿಂಟೆಂಡೆಂಟನ ಹಸ್ತಕನ ಕೈಯಿಂದ ಜಾರಿ. ಅವರು ಆ ಕಡೆಯು ಆ ಬಾಗಿಲಿಗೆ ಕೂಡ ತಲುಪಿದರು. ಇನ್ನೊಂದು ಸಾರೆ ಕೊಸರಿ ಓಡಿದರೆ "ಆ ಬಾಗಿಲಿಗೆ; ಮತ್ತು ಬಾಗಿಲ ಹೊರಗೆ!" ಎಂಬ ಕೃತನಿಶ್ಚಯದಿಂದ ಆ ಐದೂಜನ ಗೋಸಾವಿಗಳು ಆ ಬಾಗಿಲಿಗೆ ತಲುಪಿದರು; ಹಾಗು ಅಲ್ಲಿ ಗುಂಪುಗಟ್ಟಿಕೊಂಡು ನಿಂತಿದ್ದ ಆ ತಮ್ಮ ನಿತ್ಯದ ಭಾವಿಕ ಶ್ರೋತೃಗಳಿಗೆ 'ದಾರಿ ಬಿಡಿರಿ' ಎಂದು ಅವಸರವಸರದಿಂದ ಅಂದರು. ಆ ಕೂಡಲೆ ಆ ಭಾವಿಕ ಭಕ್ತರು ಆ ಬಾಗಿಲ ಬಳಿಯ ದಟ್ಟಣೆಯಲ್ಲೇ ಒಬ್ಬರಿಗೊಬ್ಬರು ಹೊಂದಿ, ಹೆಗಲಿಗೆ ಹೆಗಲು ಹಚ್ಚಿಕೊಂಡು ಹಬ್ಬುತ್ತ ಹಬ್ಬುತ್ತ, ಆ ಐದೂ ಮಂದಿ ಗೋಸಾವಿಗಳನ್ನು ನಟ್ಟನಡುವೆ ತಕ್ಕೊಳ್ಳುವ ಒಂದು ವರ್ತುಲವಮಾಡಿಕೊಂಡು ನಿಂತುಬಿಟ್ಟರು; ಅವರಲ್ಲಿಯ ಪ್ರತಿಯೊಬ್ಬರು ತಮ್ಮ ಬಳಿಯ ಪಿಸ್ತೂಲುಗಳನ್ನು ನೋಡನೋಡುತ್ತಲೆ ಹಿರಿದರು; ಮತ್ತು ಅವರು ಅವುಗಳನ್ನು ಆ ಗೋಸಾವಿಗಳ ಮೇಲೆ ಗುರಿಯಿಟ್ಟರು ಹಾಗು ಅವರಲ್ಲಿಯ ಮುಂದಾಳುವು ಯೋಗಾನಂದನನ್ನು ಕುರಿತು: "ನಿಲ್ಲು! ಒಂದು ಹೆಜ್ಜೆ ಕೂಡ ಮುಂದೆ ಸರಿವೆಯೆಂದರೆ, ನೀನು ಪಿಸ್ತೂಲಿನ ಗುಂಡಿಗೇ ತುತ್ತಾಗುವೆ."

ವೈಷ್ಣವೀ ನಾಮ, ವೈಷ್ಣವೀ ಮುದ್ರೆ, ಕೊರಳಲ್ಲಿ ತುಲಸೀ ಮಾಲೆ, ಮೈಯಲ್ಲಿ ಕಾವೀ ಶಾಟಿ ಮುಂತಾದ ವೇಷಗಳನ್ನು ಧರಿಸಿದ, ದಿನಾಲು ಭಜನದಲ್ಲಿ ತಲ್ಲೀನರಾಗಿ ತೋರುವ, ಪ್ರತಿನಿತ್ಯವೂ ಭಜನೆಯ ಮೊದಲೇ ಬಂದು ಭೋಳೇ ಭಾವಿಕ ಮುಖಮುದ್ರೆಗಳಿಂದ ಸ್ಥಳ ಹಿಡಿದು ಕೂಡ್ರುವ ಮತ್ತು ತೀರ ಸಾದಾ ಮನುಷ್ಯರಂತೆ ತೋರುವ ಆ ನಿತ್ಯದ ಶ್ರೋತೃಗಳು ಒಮ್ಮೆಲೆ ಒಟ್ಟಾಗಿ ಎಲ್ಲರೂ ಪಿಸ್ತೂಲುಗಳನ್ನು ಗುರಿಯಿಟ್ಟು ಪಾಪ! ಆ ಬಡ ಸಾಧುಶೀಲ ಸತ್ಪುರುಷನ ಮೈ ಮೇಲೆ ಏರಿ ಬಂದರು! ದೇವಾವತಾರಿಯಾದ ಭಗವದ್ಭಕ್ತನೆಂದು ಪ್ರತಿದಿನವೂ ಯಾವಾತನ ಚರಣಗಳಿಗೆರಗಿದ್ದರೋ, ಆತನ ಜೀವದ ಮೇಲೆಯೆ ಅವರು ಆಕಸ್ಮಿಕವಾಗಿ ಒಮ್ಮೆಲೆ ಒಟ್ಟಾಗಿ ಎದ್ದರು! 'ಇದೇನಿದು?' ಎಂದು ದಿಗ್ಮೂಢರಾದ ನೂರಾರು ಜನರು ಗುಣಗುಟ್ಟತೊಡಗಿದರು. ನೂರಾರು ಜನರು ಭಯಭೀತರಾಗಿ ಪ್ರಾಂಗಣದ ಹೊರಗೆ ಜಾರಿ ಹೋಗಹತ್ತಿದರು. ಕೆಲವರ ಮನಸ್ಸಿನಲ್ಲಿ ಗೋಸಾವಿಗಳ ಬಗ್ಗೆ ಸಹಾನುಭೂತಿಯು ಉಂಟಾಗಿ, ಆ ಧರ್ಮಪರಾಯಣ ಭಕ್ತರನ್ನು ಬಿಡಿಸುವ ಸಲುವಾಗಿ ದಂಗೆ ಎಬ್ಬಿಸಬೇಕೆಂದೂ ಅನಿಸಿತು!

ಆದರೆ ಆ ಮಹಂತನಿಗೆ ಚೆನ್ನಾಗಿ ತಿಳಿದು ಬಂದುದೇನಂದರೆ, ಈ

ಹಲವು ವೇಷಧರಿಸಿದ ಗುಪ್ತ ಪೋಲೀಸ ಜನರೇ ಇಲ್ಲಿಯ ಮೂರೂ ಬಾಗಿಲಗಳ ಕಡೆಗೆ ದಿನಾಲು ಭಜನಕ್ಕೆ ಬಂದು ಕುಳಿತಿರಲಿಕ್ಕೆ ಸಾಕು. ಇವರ ವೇಷವು ನನಗೆ ಇದುವರೆಗೂ ತಿಳಿಯಲಿಲ್ಲವು. ನಾನು ಇವರ ಜಾಲದಲ್ಲಿ ಸಂಪೂರ್ಣ ವಾಗಿ ಸಿಕ್ಕೆನು; ಆದರೂ ಕೂಡ ಕೊನೆಯ ಉಪಾಯವೆಂದು ಒಳ್ಳೇ ಕರ್ಕಶ ಹಾಗು ಗಟ್ಟಿದನಿಯಿಂದ ಆ ಚದರಿಸಿದ್ದ ಸಮಾಜವನ್ನು ಕುರಿತು "ಎಲೋ, ಇಲ್ಲಿ ಧರ್ಮದ ಅಭಿಮಾನಿಗಳಾರೂ ಇಲ್ಲವೇನು? ಭಗವಂತಾ! ಇನ್ನು ನೀನೇ ನಿನ್ನ ಭಕ್ತನ ಸಲುವಾಗಿ ಧಾವಿಸು!" ಎಂದಂದನು.

ಆ ಕೂಡಲೆ ಸಮಾಜದೊಳಗಿನ ಎಷ್ಟೋ ಪ್ರಾಮಾಣಿಕ ಸಜ್ಜನರು ರೇಗಿಗೆದ್ದರು. ಆ ಮಹಂತನ ಬಗ್ಗೆ ಯಾರಿಗೆ ಪ್ರತ್ಯಕ್ಷ ಮಾಹಿತಿಯಿದ್ದಿತೋ ಅವರೆಲ್ಲರೂ ಅವನಲ್ಲಿ ಅಚಲ ಶ್ರದ್ಧೆ ಧರಿಸಿದವರಿದ್ದರು. ಅಪರಿಗ್ರಹೀ, ನಿರ್ಲೋಭೀ, ಸ್ವಧರ್ಮಪ್ರಚಾರಕ ಭಕ್ತನ ಮೇಲೆ, ಪರಧರ್ಮೀಯ ವಿಶನರೀ ಜನರು ಏನಾದರೂ ಖೊಟ್ಟಿ ಆರೋಪ ರಚಿಸಿರಬಹುದೆಂಬ ಭಾವನೆಯಿಂದ, ಕೆಲ ಜನ ಧೈರ್ಯವಂತ ಸ್ವಧರ್ಮಾಭಿಮಾನಿಗಳು ಕ್ರೋಧಸಂತಪ್ತರಾದರು! ಅಂಥವರಿಂದ ಪೋಲೀಸರ ಮೈಮೇಲೆ ಮೂರು-ನಾಲ್ಕು ಕಲ್ಲುಗಳೂ ಎಸೆಯಲ್ಪಟ್ಟವು. ಬೈಗಳ ಬಾಯಿಪ್ರಸಾದಕ್ಕಂತೂ ಭರತಿಯೇ ಉಂಟಾಯಿತು!

ಇಷ್ಟರೊಳಗೆ ಮುಖ್ಯದ್ವಾರದಿಂದ ಲಾಠೀಧಾರಿಗಳಾದ ಪೋಲೀಸ ತಂಡದೊಡನೆ ಸ್ವತಃ ಪೋಲೀಸ ಸುಪರಿಂಟೆಂಡೆಂಟನು ಒಳಹೊಕ್ಕನು; ವ್ಯಾಸ ಪೀಠವನ್ನೇರಿದನು; ಹಾಗು ಸ್ಪಷ್ಟವಾದ ದನಿಯಲ್ಲಿ ಎಲ್ಲ ಜನರನ್ನು ಕುರಿತು ಆಜ್ಞಾಪಿಸಿದ್ದೇನಂದರೆ:—

"ಶ್ರೋತೃಸಮೂಹವೇ, ನಾಗರಿಕ ಮಹಾನುಭಾವರೇ! ಯೋಗಾನಂದನೆಂದು ಹೆಸರಿಟ್ಟುಕೊಂಡಿರುವ ಈ ಮನುಷ್ಯನು ಇಲ್ಲಿ ಇರುವಾಗ್ಗೆ ಯಾವ ಆಡಂಬರ ಹೂಡಿದ್ದನೋ, ಆದರ ಮೇಲಿಂದ ಇವನಾವನಾದರೂ ದೊಡ್ಡ ಭಗವದ್ಭಕ್ತನಿರಬೇಕೆಂದು ತಮ್ಮಂತಹ ನಿರ್ಬಂಧಶೀಲರಾದ ನಾಗರಿಕರಿಗನಿಸುವುದು ಸಹಜವಾಗಿದೆ. ಆದರೆ, ಈತನ ಬಗ್ಗೆ ನಮಗೆ ಏನು ಗೊತ್ತಿದೆಯೋ ಆ ಸಂಗತಿಯನ್ನು ನೀವು ಕೇಳಿಕೊಂಡರೆ, ನಿಮ್ಮಲ್ಲಿ ಆ ಸಹಾನುಭೂತಿಯು ಸಹಜವಾಗಿದ್ದರೂ ಸರ್ವವೂ ಅಪಾತ್ರದ್ದೆಂದು ನಿಮಗೆ ಕಂಡು ಬಂದೀತು. ಈ ಸಾಧು-ಮಹಂತರ ಹೆಸರಿಟ್ಟುಕೊಂಡು ವ್ಯವಹರಿಸುವ ಈ ಯೋಗಾನಂದ ಸ್ವಾಮಿಯ ನಿಜವಾದ ಹೆಸರು ರಫೀಉದ್ದೀನ ಅಹಮ್ಮದ' ಎಂದಿದೆ ಈತನು ಪಂಜಾಬ ದೇಶದ ಮುಸಲ್ಮಾನನು. ಈತನ ಮೇಲೆ ಎರಡು ಅತ್ಯಂತ ಕ್ರೂರತನದ ದರವಡೆಗಳ ಆರೋಪವು ಸಿದ್ಧವಾಗಿ, ಈತನಿಗೆ ಪಂಜಾಬ

ಕೋರ್ಟಿನವರು ಏಳು ವರ್ಷಗಳ ಕರಿನೀರಿನ ಶಿಕ್ಷೆಯನ್ನು ವಿಧಿಸಿದ್ದರು. ಆ ಪ್ರಕಾರ ಈತನನ್ನು ಕರಿನೀರಿಗೆ ಕಳಿಸಿರಲಾಗಿ, ಈತನು ಅಲ್ಲಿಂದ ನಾಲ್ಕು ವರ್ಷಗಳ ತರುವಾಯ ಓಡಿಬಂದಿರುತ್ತಾನೆ. ಕಳೆದ ಎರಡು ವರ್ಷಗಳಿಂದ ಈತನು ಈತನ ಈ ನಾಲ್ಕು ಜನ ಶಿಷ್ಯರಂತೆಯೇ ಹಲವು ಜನ ದುಷ್ಟಜನರನ್ನು ಗುಂಪು ಕಟ್ಟಿಕೊಂಡು ಮತ್ತೆ ಹಲವು ಕಳವು, ದರವಡೆ, ಅಪಹರಣಾದಿಗಳಿಂದ ಭಯಂಕರ ಉಪದ್ರವಗೊಡಲಿಕ್ಕೆ ಪ್ರಾರಂಭಿಸಿರುತ್ತಾನೆ. ಕಳೆದ ವರ್ಷ ಪೋಲೀಸರು ಈತನ ತಂಡವನ್ನು ಹಿಡಿಯಲಿಕ್ಕೆ ಸುತ್ತುಗಟ್ಟಿದಾಗ, ಆ ತಂಡವು ಪೋಲೀಸರ ಮೇಲೆ ಆಕಸ್ಮಿಕವಾಗಿ ಗುಂಡು ಹಾಕಿ, ಪೋಲೀಸ ಅಧಿಕಾರಿಯನ್ನು ಗಾಯಗೊಳಿಸಿದ್ದಲ್ಲದೆ, ಆತನ ಕುದುರೆಯ ಮೇಲೆಯೇ ಸ್ವಾರನಾಗಿ ಈ ದಿಟ್ಟದುಷ್ಟನು ಫರಾರಿಯಾದನು! ಆ ಮೇಲೆ ಈತನ ಪತ್ತೆಯೇ ಇರಲಿಲ್ಲ! ಅದರೆ ಈತನೇ ಅವನು ಎಂಬ ಸಂಶಯವುಂಟಾದ್ದರಿಂದ, ಈತನ ಭಜನೆಯಲ್ಲಿ ನಾವು ಈತನು ಮಥುರೆಗೆ ಬಂದಾಗಿನಿಂದ ಗುಪ್ತ ಪೋಲೀಸರನ್ನು ನಾನಾ ವೇಷಗಳಿಂದ ಬಾಗಿಲ ಬಳಿಯಲ್ಲಿಟ್ಟು ಸಕ್ತ ಪಹರೆ ಮಾಡುತ್ತಿರುವೆವು; ಯಾಕಂದರೆ ಈತನ ಸಂಪೂರ್ಣ ಶೋಧಹತ್ತಿ, ವಾರಂಟು ಹೊರಟ ಕೂಡಲೆ ಈತನಂತಹ ಧೈರ್ಯದ ಅಪರಾಧಿಯನ್ನು ಈತನ ಸಂಗಡಿಗರೊಡನೆ ಒಮ್ಮೆಲೆ ದಸ್ತಗೀರ ಮಾಡಬರಬೇಕೆಂದು. ಎಲ್ಲ ಪುರಾವೆಯು ಸಿದ್ಧವಾಗಿ, ಗುರ್ತು ಚಿಹ್ನಗಳ ಮೇಳವಾಗಿ, ಈತನ ಒಬ್ಬ ಸಂಗಡಿಗನ ಹೇಳಿಕೆಯಿಂದಲೇ ಅಲಹಾಬಾದದಿಂದ ಹೊರಟ ವಾರಂಟು ಇದು ನೋಡಿರಿ. ಇದು ಇಂದೇ ಸಂಜೆಗೆ ನಮ್ಮ ಕೈ ಸೇರಿತು. ಈ ತಂಡವಂತೂ ಇಂದಿನ ಈ ಭಜನೆ ಮುಗಿದೊಡನೆಯೇ ಗುಪ್ತವಾಗಿ ಪಾರಾಗುವದಿದೆಯೆಂಬ ಬೇತು ತಿಳಿದದ್ದರಿಂದ, ಭಜನೆಯ ಭರದಲ್ಲಿಯೇ ಇವರನ್ನು ಹಿಡಿಯುವದು ನಿಶ್ಚಿತವಾಯಿತು. ಈ ನೀಚರು ಒಬ್ಬೊಬ್ಬರಿಗೆ ಅಸುಕಲಾರರೆಂಬದು ನಮಗೆ ಮೊದಲೇ ಗೊತ್ತಿತ್ತಾದ್ದರಿಂದ, ಇವರ ಮೇಲೆ ಹೀಗೆ ಸಶಸ್ತ್ರವಾಗಿ ದಂಮುಕಬೇಕಾಯಿತು. ತಮ್ಮೊಳಗಿನ ಕೆಲವರು ಒಬ್ಬ ಸಾಧುವಿಗೆ ಸುಮ್ಮನೆ ಛಲನವಾಗುತ್ತದೆಂದು ಇಲ್ಲದ ಕಲ್ಪನೆಯಿಂದ ಗೊಂದಲ, ಗದ್ದಲ, ಹೊಡೆದಾಟ-ಬಡಿದಾಟ ಮಾಡಬಾರದೆಂದೇ ನಾವು ಇಷ್ಟು ವಿವರಿಸಿ ಹೇಳಿರುತ್ತೇವೆ. ಇನ್ನು ನೀವೆಲ್ಲರೂ ಹತ್ತು ನಿಮಿಷದೊಳಗಾಗಿ ಈ ಪಟಾಂಗಣವನ್ನು ತೆರವು ಮಾಡಲಿಕ್ಕೆ ಬೇಕು. ಅದರಂತೆಯೇ ದಾರಿಯಲ್ಲಿ ನಾಳೆ ಬೆಳಗಾಗುವವರೆಗೂ ಯಾವ ಬಗೆಯ ದಟ್ಟಣೆಯೂ ಆಗ ಕೂಡದು. ಇಲ್ಲದಿದ್ದರೆ ಪೋಲೀಸರು ಲಾಠಿಗಳಿಂದ ಆ ದಟ್ಟಣೆಯನ್ನು ವಿಧ್ವಂಸಗೊಳಿಸಬೇಕಾದೀತು! ವಾರಂಟಿನಂತೆ ನಮ್ಮ ಕರ್ತವ್ಯವನ್ನು ನಾವು ಮಾಡಲೇಬೇಕು. ಅದರೊಳಗಿನ

ತಥ್ಯಾತಥ್ಯ ನೋಡುವ ಕೆಲಸವು ನ್ಯಾಯಾಲಯದ್ದು! ಪೋಲೀಸರೇ, ಹತ್ತು ನಿಮಿಷದೊಳಗೆ ಈ ಐದೂ ಜನರಿಗೆ ಬೇಡಿಗಳನ್ನು ಹಾಕಿ ಜೇಲಿಗೆ ತಕ್ಕೊಂಡು ನಡೆಯಿರಿ; ಹಾಗು ಈ ಪಟಾಂಗಣವನ್ನು ತೆರವು ಮಾಡಿರಿ!''

ಹತ್ತು ನಿಮಿಷಗಳೊಳಗೆ ಆ ಐದೂ ಜನ ಗೊಸಾವಿಗಳ ಕೈಕಾಲುಗಳಿಗೆ ಬೇಡಿಗಳನ್ನು ಹಾಕಿ, ಅವರನ್ನು ಸೆರೆಮನೆಗೆ ಸಾಗಿಸಲಾಯಿತು; ಮತ್ತು ಅಲ್ಲಿಯ ಆ ಎಲ್ಲ ಜನಸಮುದಾಯವು ತನ್ನಷ್ಟಕ್ಕೆ ತಾನೇ ದಾರಿಗೆ ಹತ್ತಿತು. ನಿಯಮಿತ ಅವಧಿಯ ನಂತರ ಆ ಪ್ರಾಂಗಣದಲ್ಲಿ ಯಾರೂ ಕಾಣದಾದರು!

ಆದರೆ ಆಗ ಸೆರೆಹಿಡಿಯಲ್ಪಟ್ಟ ಗೋಸಾವಿಯು ಯಾರು? ಯೋಗಾನಂದ ಸ್ವಾಮಿಯೋ, ರಫೀ ಉದ್ದೀನ ಅಹಮ್ಮದನೋ?

ಮತ್ತು ಮಾಲತಿ? ಆಕೆಯ ಗತಿ ಏನಾಯಿತು?

---

೫ನೇ ಪ್ರಕರಣ.

ಅಲಹಾಬಾದದ ಸೆರೆಮನೆಯೊಳಗಿನ ಸೆರೆಯಾಳುಗಳ ಮೇಲಿನ ಮುಖ್ಯ ಜಮಾದಾರನಿಗೆ ಸಕ್ತ ಆಜ್ಞೆಯಾಗಿತ್ತೇನಂದರೆ, ಕರಿನೀರಿನಿಂದ ಓಡಿಬಂದ ಕಟ್ಟಾ ದರೋಡೆಗಾರನಾದ ರಫೀ ಉದ್ದೀನನನ್ನು ಆತನ ಸಂಗಡಿಗರೊಡನೆ ಇಂದು ಸೆರೆಮನೆಗೆ ತರಲಾಗುವದು. ಅದರಿಂದ ಯಾವ ಸೆರೆಯಾಳಿಗೂ ಇದರೊಳಗಿನ ಚಕಾರವೂ ತಿಳಿಯಕೂಡದು; ಮತ್ತು ಆತನ ಬಂದೋಬಸ್ತ ಚನ್ನಾಗಿಡಬೇಕು. 'ಜಮಾದಾರ, ಇದರಲ್ಲೇನಾದರೂ ಕೊರತೆಯಾದರೆ, ನಿಮ್ಮ ಕಾಲೊಳಗೇ ಬೇಡಿ ಬಿದ್ದಾವು; ಎಚ್ಚರ!' ಹೀಗೆಂದು ಬಂದಿಪಾಲನು ಕಟ್ಟೆಪ್ಪಣೆ ಗೈದನು.

ಜೇಲರನೆದುರಿಗೆ ಸೆಟೆದು ನಿಂತಿದ್ದ ಆ ಮುಸಲ್ಮಾನ ಜಮಾದಾರನು ಇಂಗ್ಲಿಷ ಪದ್ಧತಿಯ ಸೈನಿಕ ಸೆಲ್ಯೂಟ ಮಾಡಿ:—''ಜೀ ಹುಜೂರ! ಆತನು ಬಹು ದೊಡ್ಡ ದರೋಡೆಗಾರನಿರಬಹುದು! ಆದರೆ ನಾನು ಅಂಥ ನೂರೆಂಟು ಮಂದಿ ದರೋಡೆಗಾರರಿಗೆ ಈ ಜೇಲಿನಲ್ಲಿ ಬಾಯಲ್ಲಿ ಕಡ್ಡಿ ಕಚ್ಚ ಹಚ್ಚಿರುತ್ತೇನೆ! ಆತನು ಕರಿನೀರಿನಿಂದ ಓಡಿ ಬಂದಿರಬಹುದು; ಆದರೆ ಇಲ್ಲಿ ಕೆನ್ನೀರಿದೆಯೆಂದು ಆತನಿಗೆ ಹೇಳಿರಿ! ಈ ದಂಡುಕದ ಒಂದೇ ಏಟಿನಿಂದ ನೆತ್ತರ ಕಾರ ಹಚ್ಚೇನು ನೆತ್ತರ! ನಡಮುರಿದು ಬಿಟ್ಟೇನು!'' ಜಮಾದಾರನು ತನ್ನ ಟೊಂಕಕ್ಕೆ ತೂಗಗಟ್ಟಿದ್ದ ದಂಡುಕವನ್ನು ಕೈಯಲ್ಲಿ ಹಿಡಿದು, ವಾತಾವರಣದಲ್ಲೊಂದು ಚೆನ್ನಾಗಿ ಏಟು ಕೂಡ ಹಾಕಿದನು!

''ಹಾಗೆಲ್ಲ ಹೊಡೆ-ಬಡೆಯ ಕೂಡದು! ಅವರು ಜೀವದ ಪರಿವೆಯಿಲ್ಲದ

ಗುಂಡ ಜನರುಗಿರುತ್ತಾರೆ! ಅವರನ್ನು ರಮಿಸಿಯೇ ಕಾರ್ಯ ಸಾಧಿಸಬೇಕು. ಅಂದರೇ ನಿಮ್ಮ ಕರಾಮತಿ! ನೀವೇನೋ ಹೊಡೆದು-ಬಡೆದು ಬಿಡುತ್ತೀರಿ; ಆದರೆ ಅನುಭೋಗಿಸುವವರು ನಾವು"

"ಅಚ್ಛಾ ಹುಜೂರ! ಈ ದಂಡುಕವನ್ನು ಮತ್ತೆ ಟೊಂಕಕ್ಕೆ ಸೇರಿಸುವೆನು. ನಾನಿನ್ನು ನನ್ನ ಮೆತ್ತನ್ನ ನಾಲಿಗೆ ಹಿರಿಯುತ್ತೇನೆ! ಈ ದಂಡುಕಕ್ಕಿಂತಲೂ ಈ ನಾಲಿಗೆಯ ಕರಾಮತಿ ಹೆಚ್ಚಿನದಿದೆ. ಈ ದಂಡುಕದಿಂದ ಮನುಷ್ಯನು ಗಾಯಹೊಂದುತ್ತಾನೆ; ಆದರೆ ಈ ನಾಲಿಗೆಯಿಂದ ಅವನು ಜೀವಂತ ಸಾಯುತ್ತಾನೆ! ಕತ್ತಿಯಿಂದ ರುಂಡ ಹಾರಿಸಿ ಕೊಲ್ಲಬರುತ್ತದೆ; ಅದರಿಂದ ನೆತ್ತರ ಹರಿಯುತ್ತದೆ; ಆದರೆ ನಾಲಿಗೆಯಿಂದ ಕುತ್ತಿಗೆಯನ್ನು ಇದ್ದಹಾಗೆಯೇ ಇರಿಸಿ, ಪ್ರಾಣ ಹೀರ ಬರುತ್ತದೆ; ಮತ್ತು ಪುರಾವೆಗೆ ರಕ್ತದ ಬಿಂದು ಕೂಡ ಸಿಗುವದಿಲ್ಲ! ಅಂತೆಯೇ ಕತ್ತಿಯಿಂದ ಮಾಡಿದ ಕೊಲೆ ಪತ್ತೆಹತ್ತುತ್ತದೆ. ನಾಲಿಗೆಯಿಂದ ಯಾರಿಗೆ ಪ್ರಾಣ ಹೀರಲಿಕ್ಕೆ ಬರುತ್ತದೋ, ಅವರಿಗೆ ನೂರು ಹತ್ಯೆಗಳಾದರೂ ಮಾಫೀ!"

"ಚೂಪ! ಲಗಾ ಬಕನೇಕೂ! ಜಾವ! ನಿನ್ನ ದಂಡುಕದಂತೆಯೇ ನಿನ್ನ ನಾಲಿಗೆಯನ್ನಾದರೂ ಸಂಬಾಳಿಸುವದು ನನಗೆ ಸಾಕು ಸಾಕಾಗಿದೆ!"

"ಅಚ್ಛಾ ಸಾಬ! ದಂಡುಕವನ್ನು ಟೊಂಕಕ್ಕೆ ತೂಗುಗಟ್ಟಿದಂತೆ ನಾಲಿಗೆಯನ್ನೂ ಅಂಗಳಿನಲ್ಲಿ ತೂಗಗಟ್ಟಿ ಬಿಟ್ಟೆನು ನೋಡಿರಿ." ಹೀಗೆಂದು ಮತ್ತೊಂದು ಸಲಾಮು ಮಾಡಿ ಜಮಾದಾರನು ಹೊರಬಿದ್ದನು.

"ಏ ಜಮಾದಾರ! ಅಂದರ ಆವ! ಹಮಾರಾ ಬೂಟ ಕಿಧರ ಹೈ ಆಜ? Damn fool. ಭುಲಗಯಾ ತುಮು? ಜಾವ ಲಾವ?"

ಜೇಲರನ ಆ ಬೈಗಳೆಂದರೆ ತನ್ನ ವಿಸ್ಮರಣವನ್ನು ಕೊಂಡಾಡುವದೊಂದು ಇಂಗ್ಲಿಷ ಶಬ್ದ ಎಂಬ ಸಮಾಧಾನದಿಂದ ಜಮಾದಾರನು ಅದನ್ನು ಕೇಳುತ್ತಲೆ, ತನ್ನ ನಾಲಿಗೆಯನ್ನು ಹಿರಿದು ಕಚ್ಚಿ, ಕೂಡಲೆ ಆ ಅಭಿನಯಕ್ಕೆ ನಾಚಿಗೊಂಡು, ಮೋರೆಯ ಮೇಲೆ ಕೈಯಿಟ್ಟುಕೊಂಡು ನಕ್ಕನು; ಹಾಗು ಆ ಕೂಡಲೆ ಕಳ್ಳನಂತೆ ಹೊರಗೆ ಹೋಗಿ ಬೂಟು ತಕ್ಕೊಂಡು ಬಂದನು; ಮತ್ತು ತನ್ನ ಮೋರೆಯೊರಸಿಕೊಳ್ಳುವದು ಮೊದಲು ಮಾಡಿಕೊಂಡು ಸುಂಬಳ ಶೀನುವವರೆಗಿನ ಪ್ರತಿಯೊಂದು ಕೆಲಸಕ್ಕೂ ಉಪಯೋಗವಾದಂತಹ ತನ್ನ ಕರವಸ್ತ್ರದಿಂದ ಆ ಬೂಟುಗಳನ್ನು ಒರಸಿ ಅವುಗಳನ್ನು ಅವನು ಬಂದಿಪಾಲನ ಎದುರಿಗೆ ಮೆಲ್ಲನೆ ಇರಿಸಿದನು; ಮತ್ತು ತನ್ನ ಕರವಸ್ತ್ರದ ಹೊಲಸು ಕಳೆಯುವದಕ್ಕಾಗಿ ಅದನ್ನು ಝಾಡಿಸಹತ್ತಿದನು. ಅಷ್ಟರಲ್ಲಿ ಬಾಯೊಳಗಿನ ಸಿಗರೇಟನ್ನು

ತೆಗೆದು ಬಂದಿಪಾಲನು—:“ವಸ್ತ್ರವನ್ನೇಕೆ ಕೊಡುವುತ್ತೀ? ನನ್ನ ಬೂಟನಿಂದ ನಿನ್ನ ರೂಮಾಲು ಹೊಲಸಾಗಿಲ್ಲ; ಆದರೆ ಆ ಮಾಸಿದ ವಸ್ತ್ರದಿಂದಲೇ ನನ್ನ ಬೂಟು ಹೊಲಸಾಗಿದ್ದೀತು.”

“ಸಚ ಬಾತ ಹೈ ಹುಜೂರ! ಸಾಬ, ತಮ್ಮ ಬೂಟೇ ನನ್ನ ಅನ್ನದಾತೃವು. ತಮ್ಮ ಜೋಡಿನ ಚಾಕರಿಯನ್ನು ಹನ್ನೆರಡು ವರ್ಷಗಳಿಂದಲೂ ಮಾಡುತ್ತಿದ್ದೇನೆ. ಇದರಿಂದಲೇ ಶಿಪಾಯಿಗಿರಿಯಿಂದ ಈ ಬಹಾದ್ದರನು ಜಮಾದಾರನಾಗಿರುವದು!”

ಈತನು ಮತ್ತೆ ಹರಟೆಯಲ್ಲೇ ಮಗ್ನನಾದಾನೆಂಬ ಅಂಜಿಕೆಯಿಂದ ಈತನಿಗೆ ಬೇರೆ ಯಾವ ವಿಷಯವೂ ದೊರೆಯಬಾರದೆಂದು ಪಕ್ಕದಲ್ಲಿ ಕಾಗದದ ಮೇಲೆ (ಟೈಪ) ಟಂಕಲಿಪಿ ಮಾಡುತಿದ್ದ ಗುಮಾಸ್ತನಿಗೆ ಬಂದಿಪಾಲನು:— ಒಳ್ಳೇದು. ಬಾಬೂ, ನಿಮ್ಮ ಕಾಗದ ಕೊಡಿರಿ; ಹಾಗು ಸಹಿಗಳನ್ನೆಲ್ಲಿ ಮಾಡಬೇಕೆಂಬುದನ್ನು ತಿಳಿಸಿರಿ”

ಜಮಾದಾರನು ಹೊರಟು ಹೋದದ್ದನ್ನು ಕಂಡು ಆ ಚಿಟೇಗಾರ ಜಾತಿಯ ಜೇಲರನು ಗುಮಾಸ್ತನ ಕಡೆಗೆ ನೋಡಿ, ಆದರೆ ಸ್ವಗತವೇ:— “ಎಂಥ ಸವಿ ಮಾತಿನವನಿರುವನೀ ಕುತ್ತಿಗೆಗೊಯ್ಕನು! ಸೆರೆಯಾಳೊಳಗಿನ ಆ ನೀಚರನ್ನು ನಂಬಬಹುದು; ಆದರೆ ಶಿಪಾಯಿಗಳೊಳಗಿನ ಈ ಪರಮ ನೀಚನನ್ನು ನಂಬುವಂತಿಲ್ಲ.”

ಹೆಸರು ಹೇಳದೆ ತನ್ನ ಗಣನೆಯೂ ಆ ಎರಡನೇ ವರ್ಗದಲ್ಲಿಯದೇ ಎಂಬದು ಕಾರಕೂನನಿಗೆ ಗೊತ್ತೇ ಇತ್ತು. ಅದರಂತೆ ಸ್ವತಃ ಜೇಲರಸಾಬನಾದರೂ ಅದೇ ವರ್ಗದವನಾಗಿದ್ದನು; ಯಾಕಂದರೆ, ಬಂದಿಪಾಲನು ಆ ಜಮಾದಾರನ ಬಗ್ಗೆ ಗುಮಾಸ್ತನ ಬಳಿಯಲ್ಲಿ ಯಾವ ಅಭಿಪ್ರಾಯವಿತ್ತಿದ್ದನೋ, ಅದೇ ಅಭಿಪ್ರಾಯವನ್ನು ಆ ಗುಮಾಸ್ತ ಬಾಬುವೂ ಜಮಾದಾರನೂ ಒಟ್ಟಿಗೆ ಕುಳಿತಾಗ ಜೇಲರನ ಬಗ್ಗೆ ಪ್ರಕಟಿಸುತ್ತಿದ್ದರು. ಅದರಿಂದ ಆಗಾಗ್ಗೆ ಸವಸಾಟಿಯಾಗುತ್ತಿದ್ದು, ಯಾರು ಯಾರ ಹಿಂದೆಯೂ ಆಡಿದ ಮಾತುಗಳನ್ನು ಮನಸ್ಸಿನಲ್ಲಿ ಹಿಡಿಯುತ್ತಿರಲಿಲ್ಲ. ಪ್ರತಿಯೊಬ್ಬರ ಒಳಗಂಟುಗಳು ಗೊತ್ತಿದ್ದುದರಿಂದ, ಪ್ರತಿಯೊಬ್ಬರ ಮುಚ್ಚಿದ ಮುಷ್ಟಿಯಲ್ಲಿ ಪ್ರತಿಯೊಬ್ಬನ ಅಲ್ಪಸ್ವಲ್ಪಾದರೂ ಹಿಸೆಯಿರುತ್ತಿದ್ದುದರಿಂದ, ಕಳೆದ ಹನ್ನೆರಡು ವರ್ಷ ಆ ಜಮಾದಾರ, ಆ ಗುಮಾಸ್ತ ಬಾಬು ಹಾಗು ಆ ಬಂದಿಪಾಲ ಸಾಬ ಇವರು ಆ ಜೇಲಿನ ಸಂಸ್ಥಾನದ ಅಧಿಕಾರವನ್ನು ಯಾವುದೊಂದು ಸಾಮುದಾಯಿಕ ಕುಟುಂಬದಂತೆ ಒಬ್ಬರನ್ನೊಬ್ಬರು ಸಂಬಾಳಿಸುತ್ತ ದೊಡ್ಡ ಮನಸ್ಸಿನಿಂದ ಸಾಗಿಸು

ತ್ತಿದ್ದರು. ಹೊಸ ಹೊಸ ಪರ್ಯವೇಕ್ಷಕ(ಸುಪರಿಂಟೆಂಡೆಂಟ)ರು ಬರುತ್ತಿದ್ದರು, ಹೋಗುತ್ತಿದ್ದರು; ಆದರೆ ಆ ಸೆರೆಮನೆಯು ಮಾತ್ರ ಅಚಲವಾಗಿತ್ತು. ಅದ ರಂತೆಯೇ ಆ ಜಮಾದಾರ, ಆ ಗುಮಾಸ್ತ ಬಾಬು ಹಾಗು ಆ ಜೇಲರಸಾಬ ಇವರುಗಳ ಸಾಮುದಾಯಿಕ ಕುಟುಂಬವು ಕಳೆದ ಹನ್ನೆರಡು ವರ್ಷಗಳಿಂದ ಅಲ್ಲಿ ಅಚಲವಾಗಿಯೇ ಉಳಿದಿತ್ತು.

ಬಂದಿಪಾಲನ ಅಜ್ಞೆಯನ್ನು ಕೇಳಿ ಜಮಾದಾರನು ಸೆರೆಮನೆಯೊಳಗೆ ಹೋಗಹೋಗುತ್ತಲೆ ಮನಸ್ಸಿನಲ್ಲಿ ವಿಚಾರಿಸುತ್ತಿದ್ದನು. ಆತನು ಎರಡು ಕಬ್ಬಿಣಬಾಗಿಲುಗಳನ್ನು ತೆರೆದು ಒಳಗಿನದೊಂದು ಮಧ್ಯಭಾಗದ ಪಟಾಂಗಣ ದಲ್ಲಿ ಕಾಲಿಟ್ಟಕೂಡಲೆ "ಶಿವರಾಮ! ಶಿವರಾಮ! ಶಿವರಾಮ ಹವಾಲದಾರ ಕಿಧರ ಹೈ? ಬುಲಾವ ಉಸಕೋ!" ಎಂದು ಕೂಗಿದನು.

ಅಲ್ಪಾವಧಿಯಲ್ಲೇ ಶಿವರಾಮ ಹವಾಲದಾರನು ಓಡುತ್ತೋಡುತ್ತ ಬಂದು, ಹಿಂಬಡಕ್ಕೆ ಹಿಂಬಡವನ್ನಾನಿಸಿಕೊಂಡು ಎದುರಿಗೆ ಸೆಟೆದು ನಿಂತವನೇ ಜಮಾದಾರನಿಗೆ ಸಲಾಮು ಮಾಡಿದನು. ಮಿಕ್ಕವರೆಲ್ಲರಿಗೂ 'ಚಲೇ ಜಾವ' ಎಂದು ಹೇಳಿ, ಒಬ್ಬನೇ ಉಳಿದ ಶಿವರಾಮನನ್ನು ಕುರಿತು ಜಮಾದಾರನು "ಶಿವರಾಮ! ಕರಿನೀರಿನಿಂದ ಓಡಿ ಬಂದಂಥ ಯಾವನೊಬ್ಬ ದರೋಡೆಗಾರ ಬಂದಿಯು ಆತನ ಸಂಗಡಿಗರೊಡನೆ ಈ ಜೇಲಿಗೆ ಬೇಗನೆ ಬರತಕ್ಕವನಿದ್ದಾನೆ. ಈ ಸಂಗತಿಯನ್ನು ಬೇರೆ ಯಾರಿಗೂ ತಿಳಿಸಕೂಡದೆಂದು ಜೇಲರ ಸಾಹೇಬರು ಸಕ್ತ ಬಜಾಯಿಸಿರುತ್ತಾರೆ."

"ಅಚ್ಛಾ ಜಮಾದಾರಜೀ!"

"ಕೇಳು, ಆ ಭಯಂಕರ ದರೋಡೆಗಾರನನ್ನು ಆ ಕಡೆಯ ಫಾಸಿಯ ಚೌಕದಲ್ಲಿ ಒಂದು ಒಂಟಿಗರ ಕೋಣೆಯಲ್ಲಿ ಬಂಧಿಸತಕ್ಕದ್ದು. ನಾನು ಇಲ್ಲವೆ ನೀನು ಇಬ್ಬರ ಹೊರತು ಒಳಗೆ ಮತ್ತಾರನ್ನೂ ಬಿಡಲಾಗದು"

"ಜೇಲರ ಸಾಬರನ್ನೂ ಸುಪರಿಂಟೆಂಡೆಂಟ ಸಾಹೇಬರನ್ನೂ ಬಿಡ ಕೂಡದೇನು?"

'ಮೂರ್ಖತನ ತೋರಬೇಡ. ನಿನ್ನ ಹಲ್ಲುಗಳು ಚೆಲ್ಲೆಗೆಂದು ನಗು ವಾಗ ಕಾಣುವಂತೆಯೆ ಒಮ್ಮೊಮ್ಮೆ ಬಿದ್ದು ಹೋದಾವು! ಯಾವ ಕಸಗೂಡಿಸು ವವನನ್ನೂ, ಅಡುಗೆಯವನನ್ನೂ, ನೀರಿನವನನ್ನೂ ಒಳಗೆ ಒಯ್ಯಬೇಕಾದರೆ ನಾನು ಇಲ್ಲವೆ ನೀನು ಅವರ ಸಂಗಡವಿದ್ದರೆ ಒಯ್ಯತಕ್ಕದ್ದು. ಆ ದರೋಡೆ ಯವನೊಡನೆ ಯಾರಾದರೂ ಮಾತನಾಡುವದನ್ನು ಕಂಡರೆ, ನಿನ್ನ ಕುತ್ತಿಗೆ ಯನ್ನೇ ಹಿಚುಕುವೆನು ನೋಡು' ಹೀಗೆ ಕಟ್ಟು ನಿಟ್ಟಾಗಿಹೇಳುತ್ತಿರುವಾಗ, ಆ

ಅಭಿನಯ ಪಟುವಾದ ಜಮಾದಾರನು ಆತನ ಆ ಸಲಿಗೆಯ ಹವಾಲದಾರನ ಕುತ್ತಿಗೆಗೆ ಕೈ ಹಚ್ಚಿ "ಯಾರಿಗೂ ಆತನ ಕೂಡ ಮಾತಾಡಗೊಡಕೂಡದು."

"ಹಾ! ಹಾ! ಈಗಲೇ ಅದೇಕೆ ಕುತ್ತಿಗೆ ಹಿಚುಕುವಿರಿ?" ನಾನು ಯಾರನ್ನಾದರೂ ಆತನೊಡನೆ ಮಾತಾಡಗೊಟ್ಟಾಗಲ್ಲವೇ ನನಗೀ ಶಿಕ್ಷೆ? ಯಾವ ಸೂಳೀಮಗನು ಆ ದರೋಡೆಗಾರನೊಡನೆ ಮಾತಾಡಬರುವನೋ ಬರಲಿ! ಆ ಮೇಲೆ ಆತನು ಈ ಜೇಲಿನೊಳಗಿನ ದೊಡ್ಡ ಜಮಾದಾರನಿದ್ದರೂ ಇರಲಿ. ಅಲ್ಲಲ್ಲ ಜಮಾದಾರಸಾಬ, ಕ್ಷಮಿಸಿರಿ. ತಮ್ಮ ಆಜ್ಞೆಯನ್ನು ನಾನು ಎಷ್ಟು ಕಟ್ಟನಿಟ್ಟಾಗಿ ಪಾಲಿಸುತ್ತೇನೆಂಬದನ್ನು ಹೇಳುವ ಲಹರಿಯಲ್ಲಿ ಹೀಗೆ ಆ ಅಪಶಬ್ದಗಳು ನನ್ನ ಬಾಯಿಂದ ಹೊರಬಿದ್ದು ಹೋದವು."

"ಎಲೋ, ನೀನು ನನಗೆ ಬೇಕಾಗಿದ್ದುದನ್ನೇ ಆಡಿರುತ್ತೀ! ಇದು ನೋಡು, ಶಿವರಾಮ, ಇಂಥ ವಿಶಿಷ್ಟ ಪ್ರಕರಣದಲ್ಲಿ ವಿಶೇಷ ಮಾತನಾಡುವ ಕೆಲಸ ಬಂದಾಗ, ನೀನೇ ಆತನೊಡನೆ ಮಾತಾಡತಕ್ಕವನು; ನಿನ್ನ ಸೂಚನೆ ಬಂದ ಹೊರತು ನಾನು ಚಕಾರ ಕೂಡ ಉಚ್ಚರಿಸಲಾರೆನು. ಇಂಥ ಕೆಲಸದಲ್ಲಿ ನೀನೊಳ್ಳೇ ಪಾತಾಳಯಂತ್ರಿಯಾಗಿರುತ್ತೀ! ಅಂತೆಯೇ ನಾನು ನಿನ್ನನ್ನು ಇಂಥ ಸೂಕ್ಷ್ಮ ಕೆಲಸಕ್ಕೆ ಆಗಾಗ್ಗೆ ನೇಮಿಸುತ್ತಿರುತ್ತೇನೆ. ಇತ್ತ ಕೇಳು. ಇಂಥ ಯಾವನೊಬ್ಬ ದರವಡೆಖೋರನು ಬಂದಾಗಲೇ ನಮ್ಮ-ನಿಮ್ಮಗಳ ಹೋಳಿಗೆಯು ತುಪ್ಪದಲ್ಲಿ ಬೀಳಬೇಕು. ಇಂಥ ಆಸಾಮಿಗಳು ನೂರಿನ್ನೂರರ ಹೊರತು ಸಹಸಾ ಹೋಗುವುದಿಲ್ಲ ಇಂಥವರ ಗಂಟಿನಲ್ಲಿಯೇ ಇದ್ದರೆ ಗಿನಿ-ಪೌಂಡುಗಳಿರಬೇಕು; ಇಲ್ಲದಿದ್ದರೆ ದಾರಿಹೋಕರಾದ ನೂರಾರು ಕಳ್ಳರು ಈ ಜೇಲಿಗೆ ಬರುವರಲ್ಲ ಅವರ ಟೊಂಕದಲ್ಲಿರಬೇಕೇನು? ಮತ್ತು ಅವರು ನಮ್ಮ ಮುಷ್ಟಿಮುಚ್ಚುವರೇನು? ಆತನು ಜೇಲಿನೊಳಗಿಂದ ಓಡಿಹೋಗದಂತೆ ಕಟ್ಟುಪಟ್ಟಾದ ಬಂದೋಬಸ್ತು ಇಟ್ಟೆನೆಂದರೆ, ನಾನು ನಮ್ಮ ಸರಕಾರೀ ಕರ್ತವ್ಯ ಮಾಡಿದಂತಾಯಿತು. ಇನ್ನು ಆತನಿಗೇನು ಬೇಕಾದೀತೋ ಆ ಚೈನಿಯನ್ನು ಮಾಡಲವನು ಆಗಾಗ್ಗೆ ನಮ್ಮ ಮುಷ್ಟಿಯನ್ನು ಚೆನ್ನಾಗಿ ಒಳಗಿಂದೊಳಗೇ ಮುಚ್ಚುತ್ತ; ಆದರೆ ಬಹು ಜಾಗ್ರತೆ! ಮೊಟ್ಟಮೊದಲು ಆ ಬೇಟಿ ಹೇಗಿದೆಯೆಂಬದನ್ನು ನಿರೀಕ್ಷಿಸಿ ನೋಡು; ಇಲ್ಲದಿದ್ದರೆ ಎಲ್ಲವೂ ವ್ಯೆಗಡೀತು! ತಿಳಿಯಿತೇ? ಮನದಟ್ಟಾಯಿತೇ? ಇನ್ನು ಹೊರಡು. ಆ ಚೌಕು, ಆ ಅಂಗಳ, ಒಂಟಿಗರ ಕೋಣೆ ಇವುಗಳನ್ನೆಲ್ಲ ತರವುಮಾಡಿ, ಕಸಹೊಡಿಸಿ, ಕೀಲಿ ಹಾಕಿ ಬಿಡು. ಆ ತಂಡವು ಸಾಯಂಕಾಲದೊಳಗಾಗಿಯೇ ಬಂದೀತು; ಅವರೆ ಯಾರ ಮುಂದೂ ಅವರ ಆಗಮನದ ಬಗ್ಗೆ ಚಕಾರ ಕೂಡ ಎತ್ತಕೂಡದು. ಜಾಗ್ರತೆ!"

"ಛೆ! ಆ ಚಿಂತೆಯನ್ನೇ ಬಿಡಿರಿ!" ಎಂದು ಆಶ್ವಾಸನೆ ಕೊಟ್ಟು, ಶಿವರಾಮು ಫೌಜದಾರನು ಆ ಗಲ್ಲಿನ ಚೌಕು ಸ್ವಚ್ಛ ಮಾಡಿಸುವದಕ್ಕೆಂದು ಹೊರಟು ಹೋದನು. ಆತನು ಹೋದವನೇ ತನ್ನ ನಂಬಿಗೆಯು ಯಾವ ಒಬ್ಬ ಬಂದಿಯಿದ್ದನೋ, ಆತನನ್ನು ಕರೆದನು. ಎಂಟು-ಹತ್ತು ವರ್ಷಗಳ ಅವಧಿಯ ಶಿಕ್ಷೆಯ ಆ ಬಂದಿಯು ತನ್ನ ಕಾರ್ಯತತ್ಪರತೆಯ ಮೂಲಕ ಇತ್ತೀಚಿಗೆ ಮುಕಾದಮನಾಗಿದ್ದನು. ಬಂದಿಗಳ ಆ ಮುಕಾದಮನಿಗೆ ಶಿವರಾಮು ಹವಲದಾರನು ಗಲ್ಲಿನ ಅಪರಾಧಿಗಳಿಗೆಂದು ಕಾದಿಟ್ಟ, ಆದರೆ ಘಾತ-ಪಾತ ಮಾಡುವಂತಹ ಬೇರೆ ಭಯಂಕರ ಬಂದಿಗಳನ್ನು ಪ್ರತ್ಯೇಕ ಬಂಧಿಸಲಿಕ್ಕೆಂದು ಆಗಾಗ್ಗೆ ಉಪಯೋಗಿಸುತ್ತಿದ್ದ ಕೋಣೆಗಳ ಚೌಕು, ಆ ಅಂಗಳ, ಆ ಒಂಟಿಗರ ಕೋಣೆ ಇವುಗಳನ್ನು ಝಾಡಿಸಿ ಉಡುಗಿಸುವ ಕೆಲಸವನ್ನು ಅತ್ಯವಸರದಿಂದ ಹೇಳಿ:—"ಇಂದು ಈ ಚೌಕು ಹೀಗೆ ತೆರವು ಮಾಡಲ್ಪಡತ್ತೆಂಬದನ್ನು ಯಾರಿಗೂ ತಿಳಿಸಕೂಡದು! ಎಂದೂ ಇಲ್ಲದ ಬಂದೋಬಸ್ತ ಇಂದು ಇಲ್ಲಿ ಇಡಬೇಕಾಗಿದೆ ಒಬ್ಬ ಭಯಂಕರ ನೀಚರಿರುವರವರು!"

ಮುಕಾದಮನ ಜಿಜ್ಞಾಸೆಯು ಹೊರಚಿಮ್ಮಿತು; ಆದರೆ ಆ ಭಯಂಕರ ನೀಚರಾರು? ಎಂಬದನ್ನು ಸ್ಪಷ್ಟವಾಗಿ ಕೇಳಿದರೆ, ಹವಾಲದಾರನು ಗೌಪ್ಯವನ್ನು ಗುಪ್ತವಾಗಿರಿಸುವ ಡೌಲಿನಿಂದ ಇನ್ನಷ್ಟು ಸೆಟೆಯುತಕ್ಕವನೆಂಬದನ್ನು ಅರಿತಿದ್ದ ಆ ಮುಕಾದಮನು ದ್ರಾವಿಡೀ ಪದ್ಧತಿಯಿಂದ:—"ಇದೇನರೀ? ಹೋದ ವರ್ಷ ಹೆಚ್ಚುಕಡಿಮೆ ಕರಿನೀರಿನ ಶಿಕ್ಷೆಯಾದ ದರವಡೆಗಾರರ ತಂಡವು ಬಂದಾಗ, ಅದನ್ನು ಅದು ಕರಿನೀರಿಗೆ ಹೋಗುವ ವರೆಗೂ ತಮ್ಮ ಆಶೀರ್ವಾದದಿಂದ ನಾನೇ ಸಂಬಾಳಿಸಿದೆನಲ್ಲವೆ? ನೀವು ಅವರ ಪತ್ರಗಳನ್ನು ಕೊಡಲು, ಪೇಟೆಯೊಳಗೆ ಜೇಲಿನ ಸಾಮಾನು ಮಾರಲಿಕ್ಕೆ ಹೋದಾಗ ಅವರವರ ಮನೆಗೆ ಮುಟ್ಟಿಸಿದವನಾರು? ಅವರಿಂದ ಮುಷ್ಟಿತುಂಬ ಹೊನ್ನುಗಳನ್ನಾರು ತಂದರು? ಹವಾಲದಾರರೇ, ಈ ಬಹಾದ್ದರನೇ ಜೀವದ ಮೇಲಿನ ಆ ಕೆಲಸಗಳನ್ನು ಮಾಡಿದನಲ್ಲವೇ?"

"ಎಲೋ, ಕರಿನೀರಿಗೆ ಹೋಗುವ ನೀಚರಿಗಿಂತ, ಕರಿನೀರಿನಿಂದ ಓಡಿ ಬಂದ ಪರಮ ನೀಚನು ಎಂಥ ಭಯಂಕರನಿದ್ದಾನಪ್ಪಾ!"

"ಈತನು ಕರಿನೀರಿನಿಂದ ಓಡಿ ಬಂದ ಯಾವನೊಬ್ಬ ದರವಡೆಖೋರನಿದ್ದರೂ ಕೂಡ........"

"ಹಾಂ! ಚೂಪ! ನಾನದನ್ನು ಹೇಳಲಾರೆನು! ಆದರೆ ಏ ಮುಕಾದಮಾ, ಆ ಆಸಾಮಿ ಏಹಿತವೆಂದು ತೋರಿದರೆ, ಆತನ ಚೀಟ-ಪತ್ರಗಳನ್ನು

ನೀನು ಅವನ ಜನರಿಗೆ ಕೊಡುವೆಯಾ? ಅಥವಾ ಕರಿನೀರಿನಿಂದ ಓಡಿಬಂದವನನ್ನು ಕಂಡು ಹೇಡಿ ನಾಯಿಯಂತೆ ಬಾಲಬೊಗ್ಗಿಸುವೆಯಾ? ಅವನಿಂದ ಯಾವ ಹೊನ್ನುಗಳು ದೊರೆಯುವವೋ ಅವುಗಳಲ್ಲಿಯ ಒಂದೆರಡನ್ನು ನಿನಗೂ ಕೊಟ್ಟೇನು?"

ಮುಕಾದಮನಿಗೆ ಬೇಕಾದದ್ದೆಲ್ಲ ತಿಳಿಯಿತು. "ಅಂಥ ಹೊನ್ನುಗಳ ಕೆಲಸಗಳಿಲ್ಲ ನನ್ನವೇ. ಕರಿನೀರಿನಿಂದ ಓಡಿ ಬಂದ ಮಾನವನು ತೋಳ ಬೇರೆ ಆಗುವದಿಲ್ಲವಷ್ಟೇ?"

ಬಳಿಕ ಹವಾಲದಾರನು ಮುಕಾದಮನೊಡನೆ ಫಾಶಿಯ ಚೌಕಿಗೆ ಹೋದನು. ಮುಕಾದಮನು ತನ್ನ ಕೈಕೆಳಗಿನ ದೊಡ್ಡ ಬಂದಿವಾನರ ಕಡೆಯಿಂದ ಅದನ್ನು ಝಾಡಿಸಿ ಉಡುಗಿಸಿಕೊಳ್ಳಹತ್ತಿದನು; ಹಾಗು ಆತನು ಅವರಿಗೆ ಆವಶ್ಯಕವಾದ ಉತ್ತೇಜನ ಬರಲಿಕ್ಕೆಂದು ಆರಿಸಿಟ್ಟ ಬೈಗಳನ್ನೂ ತನ್ನ ದಂಡುಕದ ಸಾಕಷ್ಟು ಏಟುಗಳನ್ನೂ ಪೂರೈಸುತ್ತಿರುವುದನ್ನು ಕಂಡು, ಹವಾಲದಾರನು ಆ ಒಂಟಿಗರ ಕೋಣೆಯೊಂದರಲ್ಲಿ ತನ್ನ ನಡುಕಟ್ಟು ಬಿಚ್ಚಿ, ಕಾಲುಚಾಚಿ ಕುಳಿತು, ತಲೆಯ ಮೇಲಿನ ಫೇಟಾ ತೆಗೆದಿಟ್ಟು ದಣು ವಾರಿಸಿಕೊಳ್ಳುತ್ತ ಬಿದ್ದುಕೊಂಡನು. ಕೂಡಲೆ ಮುಕಾದಮನು ಒಬ್ಬ ಬಂದಿ ಬಾಲಕನನ್ನು ಆತನ ಮೈ-ಕೈಗಳನ್ನೊತ್ತಲಿಕ್ಕೆ ಕಳಿಸಿಕೊಟ್ಟನು. ಆ ಸಮಾಧಾನದ ಗುಂಗಿನಲ್ಲಿ ಒಳಂಗಳದ ದೊಡ್ಡ ಬಾಗಿಲಿಗೆ ಒಳಗಿನಿಂದ ಕೀಲಿ ಹಾಕುವದು ಕೂಡ ಹವಾಲದಾರನಿಗೆ ಅಷ್ಟೊಂದು ಆವಶ್ಯಕವಾಗಿ ತೋರಲಿಲ್ಲ.

ಇಷ್ಟರಲ್ಲಿ ಮೈಯೊಳಗೆ ಭೂತ ಸಂಚಾರವಾದವರಂತೆ ಲಗುಬಗೆಯಿಂದ ಬಂದಿರಕ್ಷಕನು, ಆತನ ಹಿಂದೆ ಓಡುತ್ತೋಡುತ್ತ ಜಮಾದಾರನು ಹಾಗು ಮೂರು-ನಾಲ್ಕು ಜನ ಶಿಪಾಯರು ಇವರೆಲ್ಲರೂ ಆ ತೆರೆದ ಬಾಗಿಲದೊಳಗಿಂದ ಒಳಂಗಳವನ್ನು ಹೊಕ್ಕರು.

"ಹವಾಲದಾರ! ಏ, ಹವಾಲದಾರ ಕಿಧರ ಹೈ?" ಎಂದು ಬಂದಿರಕ್ಷಕನು ಕೂಗಿದನು.

"ಇಧರ-ಉಧರ, ಅವರು ಅಲ್ಲಿರುವರು-ಇಲ್ಲಿರುವರು." ಎಂದು ಮುಕಾದಮನು ಗಾಬರಿಯಿಂದ ಏನೇನೋ ಬಡಬಡಿಸಿದನು; ಮತ್ತು ಹವಾಲದಾರನನ್ನು ಆತನ ದೈವಕ್ಕೆ ಹೊಣೆಮಾಡಿ, ತನ್ನ ಕೆಲಸದಲ್ಲಿ ತಾನು ನಿರತನಾಗಿರುತ್ತೇನೆಂದು ತೋರಿಸುವ ಸಲುವಾಗಿ ಆತನು ಬಂದಿಜನರನ್ನು ಕುರಿತು 'ಇದನ್ನು ಹೀಗೆ ಮಾಡಿರಿ; ಅದನ್ನು ಹಾಗಿಡರಿ!' ಎಂದು ಹೇಳುತ್ತ, ಜಮಾದಾರನನ್ನುದ್ದೇಶಿಸಿ:-"ಎಲ್ಲವೂ ಝಾಡಿಸಿ ಉಡುಗಿಸಿದ್ದಾಗಿದೆ." ಎಂದಂದನು.

ಅಷ್ಟರೊಳಗೆ ಬಂದಿಪಾಲನು "ಕಿಧರ ಹೈ ವೋ ಸಾಲಾ! ಹವಾಲದಾರ! ಏ ಹವಾಲದಾರ!" ಎಂದು ಏನೂ ಆತಂಕವಿಲ್ಲದೆ ಒದರುತ್ತ, ಆ ಕೋಣೆಯ ಮೆಟ್ಟಿಲುಗಳನ್ನು ಘಟ್ಟಘಟ್ಟ ಎಂದು ಬೂಟಿನಿಂದ ತುಳಿಯುತ್ತ ಹತ್ತಿದನು. ಆಗ ಹವಾಲ್ದಾರನು ಧಡಬಡಿಸುತ್ತ ಎದ್ದೇಳುವುದು ಕೋಣೆಯ ಎದುರಿನಿಂದಲೇ ಆತನಿಗೆ ಕಾಣಿಸಿತು! ಬಂದಿಪಾಲನ ವಿಕರಾಳ ಕೂಗು ಕೇಳಿಸುತ್ತಲೇ ಹವಾಲದಾರನ ಹರಣವು ಹಾರಹತ್ತಿತ್ತು. ಸಾವರಿಸಿಕೊಂಡು ಏಳಲಿಕ್ಕೆ ಆತನು ಶಕ್ಯವಾದಷ್ಟು ಚಪಲತೆಯಿಂದ ಪ್ರಯತ್ನಿಸಿದನು; ಆದರೆ ಅರ್ಧಮರ್ಧ ಕೂಡ ಸಾವರಿಸದಿರುವಾಗಲೇ ಬಂದಿಪಾಲನು ಕೋಣೆಯನ್ನು ತಟ್ಟನೆ ಹೊಕ್ಕು, ಎದುರಿಗೆ ದೂತ್ತೆಂದು ಬಂದು ನಿಂತುಕೊಂಡನು! ಬಂದಿ ಹುಡುಗನು ಹಿಚುಕುತ್ತಿದ್ದ ಒಂದು ಕಾಲಿನ ಗಣವೇಷದ ಪಟ್ಟಿಯು ಬಿಚ್ಚಲ್ಪಟ್ಟದ್ದು, ಬೂಟು ತೆಗೆಯಲಾಗಿತ್ತು. ಎರಡನೇ ಕಾಲಿನ ಪಟ್ಟಿಯು ಚನ್ನಾಗಿ ಸುತ್ತಿದ್ದು, ಬೂಟು ಕಟ್ಟಿದ್ದಿತ್ತು. ಅವಸರವಸರದಿಂದ ಹವಾಲದಾರನು ಆ ತನ್ನ ಬಿಗಿದ ಟೊಪ್ಪಿಗೆಯಂಥ ಫೇಟಾ ತಲೆಯ ಮೇಲಿರಿಸುವಾಗ ಅದು ಸೊಟ್ಟಬಟ್ಟಾಗಿ ಕೂತಿತು. ಅದರ ಚುಂಗು ಯಾವನೊಬ್ಬ ಪೈಲವಾನನಂತೆ ಹೆಗಲ ಮೇಲಿಂದ ಎದೆಯ ಮೇಲೆ ಇಳಿಬಿದ್ದಿತು. ಟೊಂಕದೊಳಗಿನ ಪಟ್ಟೆಯು ದೂರ ಮೂಲೆಯಲ್ಲಿ ಬಿದ್ದಿದೆ; ಮತ್ತು ಕದಗಳ ಕೀಲೀ ಕೈಗಳ ಗೊಣಚು ಆ ಬಂದಿಬಾಲಕನ ಕೈಯಲ್ಲೇ ನೆನಪಿಲ್ಲದೆ ಇಳಿಬಿದ್ದಿದೆ. ಹೀಗೆ ಆ ಹವಾಲದಾರನ ಅಸ್ತವ್ಯಸ್ತ ಮೂರ್ತಿಯು ಬೂಟಿದ್ದ ಒಂದೇ ಕಾಲಿನ ಮೇಲೆ ನಿಂತುಕೊಂಡಿರುವದನ್ನು ಕಂಡು, ಅಂಥ ಸಂತಾಪಾತಿಶಯದಲ್ಲೂ ಹುಟ್ಟಾ ನಗಚೇಷ್ಟೆಯ ಸ್ವಭಾವದ ಆ ಬಂದಿಪಾಲನಿಗೆ ನಗೆಬಾರದೆ ಇರಲಿಲ್ಲ.

"ಕ್ಯಾಂ ಜಮಾದಾರ! ಜಮಾದಾರರೇ, ಪ್ರಸಂಗ ವಿಶೇಷದಲ್ಲಿ 'ಶಿವರಾಮ ಹವಾಲದಾರನೆಂದರೆ ಒಂಟಿಗಾಲಿನ ಮೇಲೆ ಸಿದ್ಧನು' ಎಂದು ನೀವು ಹೇಳುತ್ತಿದ್ದುದು ಇಂದು ದಿಟವಾಯಿತು! ನೋಡಿರಿ. ಈತನು ಒಂದೇ ಕಾಲಿಗೆ ಪೋಲೀಸೀ ಪೋಷಾಕು ಧರಿಸಿಕೊಂಡು, ನಿಜವಾಗಿಯೂ ಒಂಟಿಗಾಲ ಮೇಲೆಯೇ ನಿಂತುಕೊಂಡಿರುತ್ತಾನೆ. ಏನೋ, ಬೂಟಿಲ್ಲದ ಆ ನಿನ್ನ ಎರಡನೇ ಕಾಲನ್ನು ಹೀಗೆ ಸುಮ್ಮನೆ ಎತ್ತಿಹಿಡಿಯುವ ಸಲುವಾಗಿ ನಿರರ್ಥಕವಾಗೇಕಿಟ್ಟು ಕೊಳ್ಳುತ್ತೀ? ಕಡಿದೇ ಚೆಲ್ಲುವೆ ತಡೆ! ಕಳ್ಳಾ!" ಎಂದು ಬಂದಿಪಾಲನು ಸಿಟ್ಟು ಬೆಂಕಿಯಾಗಿ, ಕೈಯೊಳಗಿನ ಕೋಲಿನ ಏಟನ್ನು ಶಿವರಾಮನ ಆ ಕಾಲಿಗೆ ಕೊಟ್ಟನು.

"ಅಯ್ಯಯ್ಯೋ! ಜೇಲರಸಾಬ! ಕಾಲುಬಿಳುವೆ; ಆದರೆ ಮೊದಲು ನನ್ನ

ಹೇಳಿಕೆಯನ್ನಾದರೂ ಕೇಳಿಕೊಳ್ಳಿರಿ. ನಡೆನಡೆಯುತ್ತಿರುವಾಗ ಒಮ್ಮೆಲೆ ನನ್ನ ಕಾಲಿನ ಮೊನಗಂಡದಲ್ಲಿ ದೊಡ್ಡ ಗಂಟಾಗಿ ಮೇಲಕ್ಕೇರಹತ್ತಿದ್ದರಿಂದ, ನಾನು ಶಂಖವುಟಿಸುತ್ತ ಕೆಳಗೆ ಬಿದ್ದುಬಿಟ್ಟೆನು. ಈ ಕೋಣೆಯಲ್ಲಿ! ಆ ಗಂಟನ್ನು ಕೆಳಗೆ ಹತ್ತಿಕ್ಕಿಸಿಕೊಳ್ಳುತ್ತಿದ್ದೆನು. ಸರಕಾರ! ಮೆಹೆರಬಾನ! ಇದರಲ್ಲಿ ನನ್ನದೇನಾದರೂ ಅಪರಾಧವಾಗಿದ್ದರೆ ಕ್ಷಮಿಸಬೇಕು." ಹೀಗೆಂದು ಆ ಹವಾಲದಾರನು ತಟ್ಟನೆ ಆಕ್ಷೇಪವಿಲ್ಲದ ನೆವ ಮುಂದುಮಾಡಿದನು!!

"ಕ್ಷಮೆಯೇ? ಕೆಲಸದಲ್ಲಿರುವಾಗ ನಡುವಿನ ಪಟ್ಟಿ ಬಿಚ್ಚಿಟ್ಟು, ನೀನಿಲ್ಲಿ ಅಡ್ಡಾಗಿರುತ್ತೀ! ನಿನ್ನನ್ನು ಕ್ಷಮಿಸಿದರೆ, ನಾಳೆ ಎಲ್ಲ ಶಿಪಾಯರಿಗೂ ಮೊನಗಂಡದ ಗಂಟುಗಳು ಬೇಕಾದಾಗೆದ್ದು, ಹೀಗೆಯೇ ತಲೆಗೇರಹತ್ತ್ಯಾವು! ಕೊಡು ಆ ಪಟ್ಟಿಯನ್ನಿತ್ತ. ಜಮಾದಾರ, ಶಿಪಾಯರ ಟೊಂಕದೊಳಗಿನ ಈ ಪಟ್ಟಿಯನ್ನು ಈತನ ಕೊರಳೊಳಗೆ ನಾಯಿಗೆ ಹಾಕುವಂತೆ ಹಾಕಿರಿ; ಹಾಗಲ್ಲ, ಹೀಗೆ. ಹೂಂ ಮತ್ತು ಈತನನ್ನು ಹೀಗಿದ್ದಂತೆಯೇ ಒಂದು ಕಾಲಲ್ಲಿ ಬೂಟು, ಸೊಟ್ಟ ಫೇಟಾ ಸುತ್ತಿದ್ದ ಈ ಸೋಗನ್ನು ಬಂದಿಗಳ ಸಾಲೊಳಗಿಂದ ಹಾಯಿಸಿಕೊಂಡು ಆ ದೊಡ್ಡ ಬಾಗಿಲ ಬಳಿಯ ಕಾರ್ಯಾಲಯಕ್ಕೆ ಕರೆತನ್ನಿರಿ; ಚಲಾವ! ನಿಮ್ಮಪ್ಪ-ಆ ಸುಪರಿಂಟೆಂಡೆಂಟ ಸಾಹೇಬನಿಂದ ಅತ್ತ ಟೆಲಿಫೋನ ಬಂದಿದೆಯೇನಂದರೆ, ಬಂಧಿಸಲ್ಪಟ್ಟ ದರವಡೆಗಾರರ ಒಂದು ತಂಡವು ಈಗಲೆ ಬರುತ್ತದೆಂದು. ಇಂಥ ಪ್ರಸಂಗದಲ್ಲಿ ನೀನಿಲ್ಲಿ ಕಾಲು ಚಾಚಿಕೊಂಡು ಹಿಚುಕಿಸಿಕೊಳ್ಳುತ್ತ ಬಿದ್ದಿರುತ್ತೀಯಲ್ಲವೆ? ಚಲಾವ!"

ಎಲ್ಲರ ಮುಂದೆ ಹವಾಲದಾರನ ಆ ವಿಚಿತ್ರ ಸೋಗು, ಅವನ ಹಿಂದೆ ಬಾಯಿಗೆ ಅರಿವೆ ಹಿಡಕೊಂಡು ನಗುತ್ತಿದ್ದ ಆ ಜಮಾದಾರ, ಆತನ ಹಿಂದೆ ಆ ಮುಕಾದಮು, ಆ ಬಂದಿವಾನರು ಹೀಗೆ ಆ ಮೆರವಣಿಗೆಯು ನಡೆಯಿತು. ದಾರಿಯಲ್ಲಿ ಎಲ್ಲೆಲ್ಲಿ ಅದು ಸೆರೆಯಾಳುಗಳ ಎದುರಿಗೆ ಹೋಗಬೇಕಾಗುತ್ತಿತ್ತೋ ಅಲ್ಲಲ್ಲಿಯವರೆಲ್ಲರೂ ಅಕ್ಕಪಕ್ಕಗಳಲ್ಲಿ ಖೊಳ್ಳೆಂದು ನಗುತ್ತಿದ್ದಾರೆ; ಆದರೆ ಮೋಜನ್ನು ನೋಡಿ ಮನಸ್ಸಿನಲ್ಲಿ ನಗುವ, ಆದರೂ ಮೇಲೆ ಮೇಲೆ ಸಂತಾಪದಿಂದ ಸಿಟಿದ ಆ ಚಿಟೀಗಾರ ಬಂದಿಪಾಲನು ಎಲ್ಲರ ಹಿಂದಿನಿಂದ ನಡೆದಿರುವನು. ಆ ಮೆರವಣಿಗೆಯ ಸವಾರಿಯು ಜೇಲಿನೊಳಗಿನ ಮುಖ್ಯ ಬಾಗಿಲದ ಬಳಿಯ ಮುಖ್ಯ ಕಾರ್ಯಾಲಯಕ್ಕೆ ತಲುಪಿತು.

ಅಷ್ಟರಲ್ಲಿ ಆ ಭಯಂಕರ ಜೇಲಿನ ಆ ತಲೆಬಾಗಿಲದ ಕಬ್ಬಿಣದ ದಪ್ಪನ್ನ ಗಜಗಳನ್ನು ಹೊರಗಿನಿಂದ ಹಿಡಿದು ನಿಂತಿದ್ದ ಒಬ್ಬ ಕೆಂಪು ಸಾರ್ಜಂಟನು ಸಂಗಿನಿ-ಬಂದೂಕುಗಳನ್ನು ಧರಿಸಿದ ಹತ್ತೆಂಟು ಜನ ಶಿಪಾಯಿಗಳೊ

ಡನೆ ನಿಂತುಕೊಂಡಿರುವದು ಕಾಣಿಸಿತು. ಆತನ ಹಿಂದೆ ಹೊರಗಿನಿಂದಲೇ ಕೇಳ ಬರುವ ಕಾಲುಬೇಡಿಗಳ ಖಣಖಣಾಟವು ಕೇಳಿಸಿತು. ಬರಬೇಕಾಗಿದ್ದ ದರವಡೆ ಗಾರರ ತಂಡವು ಬಂದುಬಿಟ್ಟಿತೆಂದು ಬಂಧಿಪಾಲನ ಧ್ಯಾಸಕ್ಕೆ ಬಂದಿಲು, ಆ ಬಾಹ್ಯ ಸಂಕಟಕ್ಕೆ ಎದುರಾಗುವಸಲುವಾಗಿ ಗೃಹಕಲಹವನ್ನಡಗಿಸಿ, ಕಾರ್ಯ ತತ್ಪರರೂ, ವಿಶ್ವಾಸಿಗಳೂ ಆದ ಜಮಾದಾರ-ಹವಾಲದಾರರ ಅಂತರ್ಗತ ಐಕ್ಯಮಾಡಿಕೊಳ್ಳುವದು ಮೊದಲು ಅವಶ್ಯವೆಂದು ತಿಳಿಸು, ಆ ಸೆರೆಮನೆಯಾ ಗೇಣುದ್ದ ರಾಜಕಾರಣದೊಳಗಿನ ಗೊಂದಲ ನಿವಾರಿಸುವ ಆಲೋಚನೆಯನ್ನು ತಟ್ಟನೆ ಮಾಡಿ, ಬಂದಿಪಾಲನು ಜಮಾದಾರನನ್ನು ಕುರಿತು"ಜಮಾದಾರ! ಶಿವರಾಮನನ್ನು ಬಿಟ್ಟುಬಿಡು ಆತನಿಗೆ ಆದ ಅವಮಾನವು ಸಾಕಾಯಿತು! ಮತ್ತೆ ಹಾಗೆ ಮಾಡಬೇಡೆಂದು ಹೇಳು!"

ಜಮಾದಾರನಾದರೂ ಅದನ್ನೇ ಬಿನ್ನಯಿಸತಕ್ಕವನಿದ್ದನು. ಶಿವರಾಮನು ಕೆಲಸಕ್ಕುಪಯುಕ್ತವಾದವನು. ಅಂತಸ್ಥ ಕೆಲಸಗಳೆಲ್ಲ ಆತನ ಮೂಲಕವೇ ನಡೆಯತಕ್ಕವು. ಆ ಅಂತರ್ಗತ ಕೆಲಸಗಳಲ್ಲಿ ಬಂದಿಪಾಲರ ಹಿಸೆಯೂ ಇದ್ದೇ ಇರುತ್ತಿತ್ತು. ಜಮಾದಾರ ಮತ್ತು ಜೇಲರ ಇವರ ದೃಷ್ಟಿಗಳಲ್ಲಿ ಈ ಸಂಭಾಷಣವು ಮಾತನಾಡದೆ ಆದಂತಾಗಿತ್ತು. ಮತ್ತೈಕ್ಯವಾಗಿ ಹೋಗಿತ್ತು. ಆ ಕೂಡಲೆ ಶಿವರಾಮ ಹವಾಲದಾರನ ಎರಡೂ ಬೂಟುಗಳೂ, ಫೇಟಾ, ಪಟ್ಟಿ, ಕೀಲೀಕೈಸರ ಇವುಗಳೆಲ್ಲ ಆತನ ಮೈ ಮೇಲೆ ಚೆನ್ನಾಗಿ ಶೋಭಿಸಹತ್ತಿದವು. ಆತನು "ಇಧರ ಆವ! ಏ ಚೋರ, ಉಧರ ಜಾವ!" ಎಂಬ ಶಿಸ್ತಿನ ಭಾಷೆಯಲ್ಲಿ ಆಜ್ಞೆಮಾಡುತ್ತ, ತನ್ನ ಕೈ ಕೆಳಗಿನ ಮುಕಾದಮ-ಬಂದಿಜನರುಗಳಲ್ಲಿ ಕಾದಾಟದ ಹುಂಜವು ಓಣಿಯೊಳಗೆ ಕೂಗುತ್ತ ಅಡ್ಡಾಡುವಂತೆ ಅಡ್ಡಾಡಹತ್ತಿದನು.

ಜೇಲಿನ ಆ ಅಜಸ್ರವಾದ ಬಾಗಿಲು ಕರ್‍ರ್‍ರ್ ಎಂದು ತೆರೆಯಲ್ಪಟ್ಟಿತು. ಸಾರ್ಜಂಟನು ಕಾಲು ಬೇಡಿಗಳ ಸಪ್ಪಳ ಮಾಡುತ್ತ ಬರುತ್ತಿದ್ದ ಆ ದರವಡೆಗಾರರ ತಂಡದೊಡನೆ ಒಳಸೇರಿದನು. ಬಂದಿಪಾಲನು ಅದರ ಮುಂದಿನ ಬೇರೆ ಕಬ್ಬಿಣ ಬಾಗಿಲ ತೆರೆದು, ಮುಖ್ಯ ಬಂದಿಗೃಹದ ಭಯಾನಕ, ಆದರೆ ಭವ್ಯವಾದ ಪಟಾಂಗಣದಲ್ಲಿ ಆ ಹತ್ತು-ಹನ್ನೆರಡು ಜನ ದರವಡೆಗಾರರನ್ನು ಸಾಲು ಹಿಡಿಸಿ ನಿಲ್ಲಿಸಿದನು. ಅವರ ಮೇಲೆ ಶಿವರಾಮ ಹವಾಲದಾರನಿಗೆ ಪಹರೆ ಮಾಡಲು ಹೇಳಿದನು; ಮತ್ತು ತಾನು ಕಾರ್ಯಾಲಯಕ್ಕೆ ಹೋಗಿ, ಸಾರ್ಜಂಟನಿಂದ ಎಲ್ಲ ಕಾಗದ-ಪತ್ರಗಳ ಮಾಹಿತಿ ಪಡೆಯಹತ್ತಿದನು.

ಇತ್ತ ಆ ಮುಕಾದಮನು ಯಾವಾಗಲೋ ಜೇಲಿನೊಳಗೆ ಹೋಗಿ

ತನ್ನ ನಂಬಿಗೆಯ ಬಂದಿಗಳಿಗೆ 'ಇಂದು ಕರಿನೀರಿನಿಂದ ಓಡಿ ಬಂದ ಯಾವನೋ ಒಬ್ಬ ಪ್ರಸಿದ್ಧ ಅಪರಾಧಿಯು ಬರತಕ್ಕವನಿರುವನು; ಆದರೆ ಇದು ಮತ್ತಾರಿಗೂ ತಿಳಿಯಕೂಡದು.' ಎಂದು ಹೇಳಹತ್ತಿದನು. ಆ ಬಂದಿಗಳು ಆ ಸಂಗತಿಯನ್ನು ಅದೇ ವೇಳೆಗೆ ಬೇರೆ ಬಂದಿಗಳಿಗೆ, ಅವರು ಮೂರನೆಯವರಿಗೆ ಅದೇ ಗುಪ್ತಸಂಗತಿಯನ್ನು ಗೌಪ್ಯಸ್ಫೋಟಗೊಳಿಸಬಾರದೆಂದು ಗುಜುಗುಜು ಹೇಳಹೇಳುತ್ತ, ಅದು ಆ ಸೆರೆಮನೆಯೊಳಗಿನ ಪ್ರತಿಯೊಬ್ಬ ಬಂದಿಗೂ ತಿಳಿದುಬಿಟ್ಟಿತು. ಆದರಿಂದ ಪ್ರತಿಯೊಬ್ಬ ಬಂದಿ, ವಾರ್ಡರ, ಶಿಪಾಯಿ, ಮುಕಾದಮ ಇವರು ಏನಾದರೊಂದು ನೆವ ಮಾಡಿ ಆ ತಂಡವನ್ನು ಕಣ್ಣಾರೆ ಕಾಣುವ ಸಲುವಾಗಿ ಆ ಪಟಾಂಗಣದ ಅಕ್ಕ-ಪಕ್ಕಗಳಲ್ಲಿಲ್ಲಾದರೂ ಸುಳಿದಾಡುತ್ತಿದ್ದರು. ಶಿಪಾಯಿಗಳ ತಂಡವೂ ಅಲ್ಲಲ್ಲಿ ನಿಂತು ನೋಡತೊಡಗಿತ್ತು.

ಆ ಅಸ್ಪೃಜನರೆದುರಿನಲ್ಲಿ ಅಂಥ ಮುತ್ಸಾಳ ದರವಡೆಗಾರನ ಮೇಲೆ ತಾನು ಅಧಿಕಾರ ನಡೆಸುತ್ತೇನೆಂಬ ಗರ್ವದಿಂದ ಉಬ್ಬಿದ್ದ ಶಿವರಾಮ ಹವಾಲದಾರನ ಸಂತೋಷವು ಆತನ ಹೊಟ್ಟೆಯಲ್ಲಿ ಹಿಡಿಸಲಾರದಾಗಿತ್ತು. ಆತನು ತನ್ನ ಕಟ್ಟುನಿಟ್ಟಾದ ಶಿಸ್ತಿನ ಪ್ರದರ್ಶನ ಮಾಡಿ, ಅವರೆಲ್ಲರ ಮೇಲೆ ತನ್ನ ಛಾಪು ಕೆಡಹುವ ಅನಿವಾರ್ಯ ಇಚ್ಛೆಯಿಂದ, ಆ ದರವಡೆಗಾರರೊಳಗೆ ಅಲ್ಪಸ್ವಲ್ಪಾಗಿ ಬೆದರಿದ್ದ ಹಾಗು ಸೌಮ್ಯನಾಗಿ ಕಾಣುತ್ತಿದ್ದ ಒಬ್ಬನಿಗೆ ಆ ಹವಾಲದಾರನು ಸುಮ್ಮಸುಮ್ಮನೆ ತನ್ನ ದಂಡುಕದಿಂದ ಚುಚ್ಚಿ: "ಏ ಸೀಧಾ ಖಡಾ ಹೋ! ಇದು ನಿನ್ನ ಮನೆಯಲ್ಲ, ಅಲಹಾಬಾದದ ಜೇಲಿರುವದು! ಇಲ್ಲಿ ಪ್ರತಿಯೊಬ್ಬರೂ ಶಿಸ್ತಿನಿಂದ ನಿಲ್ಲಲಿಕ್ಕೆ ಬೇಕು." ಎಂದನು.

ಶಿವರಾಮ ಹವಾಲದಾರನ ಈ ಸೊಕ್ಕಿನ ಆಜ್ಞೆಯನ್ನು ಆ ಸೌಮ್ಯ ಅಪರಾಧಿಯು ಮನ್ನಿಸಿದನು; ಆದರೆ ಅವರೊಳಗಿನ ಯಾವ ಒಬ್ಬ ಎತ್ತರದ, ನಿಗರಗಟ್ಟಿ, ಸುರೂಪ, ದುಷ್ಟ, ನಗೆಮೊಗದ ದರವಡೆಗಾರನಿದ್ದನೋ, ಆತನಿಗೆ ಹವಾಲದಾರನ ಆ ಡೌಲು ಮೋಜಾಗಿ ತೋರಿತು. ಹವಾಲದಾರನು ಬೇರೆ ಕಡೆಗೆ ಮೋರೆ ತಿರುವುತ್ತಲೆ, ಆತನು ಹವಾಲದಾರನಂತೆಯೇ ಸೆಟೆದು ನಿಲ್ಲುವ ಫಾರ್ಸುಮಾಡಿ, ಗಟ್ಟಿಯಾಗಿ "ಏ ಸೀಧಾ ಖಡೊ! ಇದು ನಿನ್ನ ಮನೆಯಲ್ಲ. ಅಲಹಬಾದದ ಸೆರೆಮನೆಯಿದು." ಎಂದಂದನು.

ತನ್ನನ್ನು ಯಾರಾದರೂ ಅಣಕಿಸಿದರೆಂಬದು ಶಿವರಾಮನಿಗೆ ತಿಳಿಯಿತು; ಎಡಬಲದ ಜನರು ನಕ್ಕರು; ಆದರೆ ಕರಿನೀರಿನಿಂದ ಓಡಿ ಬಂದ ಆ ಮುತ್ಸಾಳ ಬಂದಿ ಈತನೇ ಇರಬೇಕೆಂಬ ಸಂದೇಹವು ಮನಸ್ಸಿನಲ್ಲಿ ಬರಲು, ತಾನು ಆತನ ಉಸಾಬರಿಗೆ ಒಮ್ಮೆಲೆ ಹೋದದ್ದು ತಪ್ಪಾಯಿತೆಂದು ಶಿವರಾಮ

ಹವಾಲದಾರನು ತರ್ಕಿಸಿದನಲ್ಲದೆ, ಆತನ ಅಣಕಿಸುವದು ತನಗೆ ಗೊತ್ತಾಗಲೇ ಇಲ್ಲೆಂದು ತೋರಿಸುತ್ತ ಆತನು ಬೇರೆ ಕಡೆಗೇ ಅಡ್ಡಾಡಹತ್ತಿದನು!

ಇಷ್ಟರಲ್ಲಿ ಸಾರ್ಜಂಟನ ಟಾಮಿ ಎಂಬ ನಾಯಿಯು ಆ ಪಟಾಂಗಣದಲ್ಲಿ ಹೊಕ್ಕಿತು. ಆದಕ್ಕೆ ಆ ಕಟ್ಟುನಿಟ್ಟು ಶಿಸ್ತಿನ ಜೇಲಿನಲ್ಲಿಯೂ ಯಾರೂ ಆತಂಕಪಡಿಸಲಿಲ್ಲ. ಮನುಷ್ಯರಿಗಿಂತಲೂ ಕೆಲವು ಪ್ರದೇಶಗಳಲ್ಲಿ ನಾಯಿಗಳಿಗೆ ಹೆಚ್ಚು ಸ್ವಾತಂತ್ರ್ಯವಿರುತ್ತದೆ! ಅದರಲ್ಲಿಯೂ ಅದು ಸಾರ್ಜಂಟನ ನಾಯಿ! ಶಿವರಾಮ ಹವಾಲದಾರನು ಅದನ್ನು ರಮಿಸಹತ್ತಿದನು. ಟಾಮಿಯು ತನ್ನ ಎರಡೂ ಮುಂಗಾಲೆತ್ತಿ ಹವಾಲದಾರನ ನಡಪಟ್ಟಿಯ ಮೇಲಿಟ್ಟಿತು. ಇಷ್ಟರಲ್ಲಿ ಆ ನಿಗರಗಟ್ಟೆ ದರವಡೆಗಾರನು ಒಳ್ಳೇ ಕನಿಕರದಿಂದ:—“ರಾವಸಾಬ, ಇತ್ತ ತುಸ ಬರುವಿರೇನು? ಈ ಸೇವಕನದೊಂದು ಬಿನ್ನಹವಿದೆ.” ಎಂದು ಕೇಳಿಕೊಂಡನು.

“ಈ ಉದ್ಧಟ ದುಷ್ಟನ ಮೇಲೂ ತನ್ನ ಛಾಪು ಕುಳಿತುಬಿಟ್ಟಿತಲ್ಲ!” ಎಂದು ‘ರಾವಸಾಹೇಬ’ ಎಂಬ ದರವಡೆಗಾರನ ನಮ್ರ ಸಂಬೋಧನದಿಂದ ಹವಾಲದಾರನು ತರ್ಕಿಸಿಕೊಂಡು, ಆತನ ಕಡೆಗೆ ಮಮತೆಯ ದೊಡ್ಡಿಸ್ತಿಕೆಯಿಂದ ಹೋಗಿ:—“ಏನು ಬೇಕು? ಹೇಳು, ಅಂಜಬೇಡ!” ಎನ್ನಲು, ಆ ಧೂರ್ತ ದರವಡೆಗಾರನು ನಸುನಗುತ್ತ ಗಟ್ಟಿಯಾಗಿ:—“ನಾನು ನಿಮ್ಮನ್ನೆಲ್ಲಿ ಕರೆದೆನು? ನಾನು ಆ ಟಾಮಿಯನ್ನು ಕರೆದನು. ನಾನು ಆತನಿಗೆ ಹೀಗೆ ಬೇಶಿಸ್ತಿನಿಂದ ನಿಲ್ಲಬೇಡೆಂದು ಹೇಳಬೇಕಾಗಿತ್ತು. ಇದು ಅಲಹಾಬಾದದ ಸೆರೆಮನೆಯಿದೆ. ಪ್ರತಿಯೊಬ್ಬರೂ ಇಲ್ಲಿ ಶಿಸ್ತಿನಿಂದಲೇ ನಿಲ್ಲಬೇಕು!”

ಆತನ ಈ ನುಡಿಗಳನ್ನು ಕೇಳಿ, ಎಲ್ಲ ಬಂದಿವಾನರೂ ಶಿಪಾಯಿಯರೂ ಖೊಳ್ಳೆಂದು ನಕ್ಕರು! ಹವಾಲದಾರನು ಸಂತಪ್ತನಾಗಿ:—ನೀವೆಲ್ಲರೂ ಮತ್ತ ಕತ್ತೆಗಳಿರುತ್ತೀರಿ.”

ಆಗ ಆ ದರವಡೆಗಾರನು ನಮ್ರವಾಗಿ ನಕ್ಕು:—“ಮತ್ತು ನೀವು ನಮ್ಮ ಸರದಾರರು! ನೀವಾಡಿದ್ದೇ ನಿಜ!” ಅಂದನು.

ಇಷ್ಟರಲ್ಲಿ ಬಂದಿಪಾಲನು ಆ ಪಟಾಂಗಣದಲ್ಲಿ ಸಾರ್ಜಂಟನೊಡನೆ ಬಂದು ಆತನಿಂದ ಆ ಬಂದಿ ಜನರ ಗುರುತು-ಪರಿಚಯಗಳನ್ನು ಮಾಡಿಕೊಳ್ಳಹತ್ತಿದನು. ಮೊಟ್ಟಮೊದಲು ಸಾರ್ಜಂಟನು ಬಂದಿಪಾಲನಿಗೆ ಆ ನಿಗರಗಟ್ಟೆ, ಛದ್ಮ ನಗೆಮೊಗದ, ಎತ್ತರದ ಅಪರಾಧಿಯನ್ನು ತೋರಿಸಿ:—“ಇವನೇ ಆ ಯೋಗಾನಂದ-ಅರ್ಥಾತ್ ರಫೀ ಉದ್ದೀನ ಅಹಮ್ಮದ-ನು; ಕರಿನೀರಿನಿಂದ ಓಡಿ ಬಂದವನು. ಈತನೇ ಈ ದರವಡೆಗಾರರ ತಂಡದೊಳಗಿನ ಮೊದಲನೇ

ನಂಬರಿನ ಆರೋಪಿಯು!"

ಯಾವನೊಬ್ಬ ರಾಜನ ಸ್ತುತಿಯನ್ನು ಭಾಲದಾರನು ಮಾಡುತ್ತಿರುವಾಗ ಆ ರಾಜನು ಹೇಗೆ ಹೆಚ್ಚು ಡೌಲಿನಿಂದ ಉಬ್ಬುತ್ತಿರುವನೋ, ಅದರಂತೆಯೇ ಆ ಆರೋಪಿ ಯೋಗಾನಂದ ಉರ್ಫ ರಫೀ ಉದ್ದೀನನು ತನ್ನ ಪ್ರಸಿದ್ಧಿಯನ್ನು ಆ ಸಾರ್ಜಂಟನಿಂದ ಒಳ್ಳೇ ಸೆಟೆ ಸೇಟೆದು ನಿಂತು ಕೇಳಿಕೊಳ್ಳುತ್ತಿದ್ದನು. ನಾಚಿಕೆಯು ಇಲ್ಲವೆ ಭಯುದ್ದಂತೂ ಇರಲಿ; ಚಿಂತೆಯ ಯಾವುದೊಂದು ಸೂಕ್ಷ್ಮ ಚಿಹ್ನವೂ ಆತನ ಮುಖಮುದ್ರೆಯಲ್ಲಿರಲಿಲ್ಲ. ಉಬ್ಬಿದ ಗಲ್ಲಗಳನ್ನೂ ತುಟಿಗಳನ್ನೂ ಒತ್ತಟ್ಟಿಗೆ ಹೊರಳಿಸಿ ಸೊಟ್ಟ ಮೋರೆ ಮಾಡಿ, ಎಡ ಹುಬ್ಬನ್ನು ಹಾರಿಸಿ, ಬಲಗಣ್ಣು ಮಿಂಚಿಸಿ, ಒಳಗೊಳಗೇ ಛದ್ಮನಗೆ ನಗುವ ಆತನ ಯಾವುದೊಂದು ಪದ್ಧತಿಯಿದ್ದಿತೋ ಹಾಗೆ ನಗುತ್ತ, ಆತನು ಹಾಗೆಂದು ಹೇಳಿ ಸ್ತಬ್ಧನಾದ ಸಾರ್ಜಂಟನನ್ನು ಕುರಿತು:—"ಸಾಬ! ಈ ಪರಿ ಅನ್ಯಾಯವನ್ನೇಕೆ ಮಾಡುತ್ತೀರಿ? ನನಗೆ ನಾಲ್ಕು ಸಾರೆ ಪಟಕೀ ಶಿಕ್ಷೆಯಾಗಿದೆ; ಮತ್ತು ಹದಿಮೂರು-ಹದಿನಾಲ್ಕು ಸೆರೆಮನೆಗಳನ್ನಾದರೂ ನಾನು ನೋಡಿಬಂದವನಿರುತ್ತೇನೆಂಬದನ್ನಾದರೂ ನೀವು ಈ ಪ್ರಿಝುನರ ಸಾಹೇಬರಿಗೆ ತಿಳಿಸಬಹುದಲ್ಲವೆ? ಅಂದರೆ ನನ್ನ ನಿಜವಾದ ಯೋಗ್ಯತೆಯು ಇವರಿಗೆ ತಿಳಿದು, ಈ ಜೇಲರ ಸಾಬರು ನನ್ನನ್ನು ಯಥೋಚಿತವಾಗಿ ಸ್ವಾಗತಿಸಿ, ಯೋಗ್ಯ ಆತಿಥ್ಯ ಹಾಗು ಮಾನ-ಮರ್ಯಾದೆಗಳನ್ನು ಮಾಡಿಯಾರು."

ಸಾರ್ಜಂಟನಿಗೂ ಆ ದರವಡೆಗಾರರಿಗೂ ಕಳೆದ ಒಂದು ತಿಂಗಳಿಂದ ಅವರು ಆತನ ಕೈಯಲ್ಲಿರುವಾಗ ಚೆನ್ನಾಗಿ ಗುರುತು-ಪರಿಚಯವಾಗಿತ್ತು; ಮತ್ತು ಆ ಆರೋಪಿಯು ಈ ಬಗೆಯ ನಿರುಪದ್ರವೀ ಬಡಬಡಿಕೆಯಲ್ಲೂ ಯಾವ ಒಂದು ಬಗೆಯ ತಥ್ಯವಿರುತ್ತಿತ್ತೋ, ಅದು ಆ ಸಾರ್ಜಂಟನಿಗೆ ರುಚಿಸ ಹತ್ತಿತ್ತು. ಬಂದಿಪಾಲನಿಗೆ ಜೇಲರಸಾಬ ಎನ್ನುವದನ್ನು ಬಿಟ್ಟು, ರಫೀ ಉದ್ದೀನನು 'ಪ್ರಿಝುನರ ಸಾಬ' ಎಂದಂದ ಕೂಡಲೆ, ಆತನ ಇಂಗ್ಲಿಷ ಭಾಷೆಯ ಅಜ್ಞಾನದ ಚೇಷ್ಟೆ ಮಾಡುವ ಸಲುವಾಗಿ ಸಾರ್ಜಂಟನು ಗಟ್ಟಿಯಾಗಿ ನಕ್ಕನು.

"ಭಲೆ! ಭಲೆ! ಜೇಲಿನ ಮೇಲಿನ ಅಧಿಕಾರಿಯೇ 'ಪ್ರಿಝುನರ ಸಾಬ'ನೆಂದಾದರೆ, ನಿನ್ನಂತಹ ದರವಡೆಗಾರರಾದ ಜೇಲಿನೊಳಗಿನ ಬಂದಿಗಳಿಗೆ ಜೇಲರ ಸಾಬ, ಎನ್ನಬೇಕಾದಿತಲ್ಲವೆ?"

"ಆಫ್‌ಕೋರ್ಸ ಮಿಸ್ಟರ ಸಾರ್ಜಂಟಸಾಬ! ಎಸ್! ನಿಮ್ಮ ಬಬರ್ಜಿ ಇಂಗ್ಲಿಷಿಗೆ ಅದು ಸರಿಹೋಗಲಿಕ್ಕಿಲ್ಲ; ಆದರೆ ಕರೆಕ್ಟ ಗ್ರಾಮ್ಯಾಟಿಕಲ್ ಇಂಗ್ಲಿಷವೆಂದರೆ ನಾನನ್ನುವದೇ ನಿಜ. ಪ್ರಿಝುನ ಎಂದರೆ ಬಂದಿಶಾಲೆ; ಜೇಲ

ಎಂದರೂ ಬಂದಿಶಾಲೆಯೇ. ಹೀಗಿರಲು, ಪ್ರಿಝುನರ ಮತ್ತು ಜೇಲರ ಇವೆರಡೂ ಶಬ್ದಗಳದು ಏನಾದರೂ ಒಂದು ಅರ್ಥವಾಗುವುದಿಲ್ಲವೆ? ವ್ಯಾಕರಣದಂತಾದರೂ ಜೇಲರನೇ ಪ್ರಿಝುನರನು. ಪ್ರಿಝುನರನೂ ಜೇಲರನೂ ಒಂದೇ ಮಾಲಿಕೆಯ ಮಣಿಗಳು! ಇಂಗ್ಲಿಷವೆಂದು ಏತಕ್ಕೆ ಅನ್ನಬೇಕೆಂಬದು ನನಗಾದರೂ ಚೆನ್ನಾಗಿ ಗೊತ್ತಿದೆಂಬದು ನಿಮಗೆ ತಿಳಿಯಿತೇ ಮಿ. ಸಾರ್ಜಂಟಸಾಬ!"

"ನೀನು ಯೋಗಾನಂದನೇ ಇರುತ್ತೀ! ಅದಿರಲಿ. ರಫೀ ಉದ್ದೀನ, ನಿನಗೆ ನಾಲ್ಕುಸಾರೆ ಅದೇಕೆ ಫಟಕಿ ಹೊಡೆದರೊ? ಅದನ್ನೆಲ್ಲ ಹೇಳಲಿಲ್ಲವಲ್ಲ?" ಸಾರ್ಜಂಟನು ಜಿಜ್ಞಾಸೆಯಿಂದ ಕೇಳಿದನು.

"ಆ ಕಾರಣವು ತೀರ ಸಹಜವಿದೆ ನೋಡಿರಿ; ಆದರೆ ಈ ಜೇಲರ ಸಾಬರಿಗೆ ಸಿಟ್ಟುಬಾರದಿದ್ದರೆ ಹೇಳುತ್ತೇನೆ! ಇಬ್ಬರು ಜೇಲರರು ನನ್ನ ಮತದಂತೆ ನನಗೆ ಕಳವಿನಿಂದ ಅಫು ತಿನ್ನಗೊಡಲಿಲ್ಲ. ಅದಕ್ಕಾಗಿ ನಾನು ಅವರ ತಲೆಗೆ ಥಾಲೀಪಾಟನಿಂದ ಹೊಡೆದ ಬಗ್ಗೆ ಎರಡು ಸಾರೆ ಫಟಕಿ ಹೊಡಿಸಿಕೊಳ್ಳಬೇಕಾಯಿತು; ಮತ್ತು ಇನ್ನಿಬ್ಬರು ಜೇಲರಸಾಬರ ಅಭಿಪ್ರಾಯದಂತೆ ನಾನು ಅವರಿಗೆ ಬೇಡಿದಷ್ಟು ಲಂಚವನ್ನು ಮುಚ್ಚಿ ಕೊಡಲಿಲ್ಲೆಂದು ಫಟಕೀ ಹೊಡಯಿಸಿಕೊಳ್ಳಬೇಕಾಯಿತು."

ಮಾತಮಾತಾಡುತ್ತಿರುವಾಗ ಲಂಚದ ಸಂಗತಿಯು ಹೊರಡಲು, ಸಾರ್ಜಂಟನಿಗೆ ಕಸವಿಸಿಯಾಗಹತ್ತಿತು. ಈ ಬಾಯ್ಬಡಕ ಆರೋಪಿಯು ತನ್ನ ಬಗ್ಗೆ ಏನಾದರೂ ಹೇಳಿಬಿಡುವನೆಲ್ಲಿಯೋ ಎಂದು ಅವನಿಗನಿಸಿತು; ಯಾಕಂದರೆ, ಕಳೆದ ಹದಿನೈದು ದಿನಗಳಲ್ಲಿ ಆ ಸಾರ್ಜಂಟನಿಗೂ ಆ ಆರೋಪಿಯು ನಾಲ್ವತ್ತು-ಐವತ್ತು ಹೊನ್ನುಗಳ ಲಂಚ ತಿನ್ನಿಸಿದ್ದನು. ಹಾತ ಘಡಿ (ರಿಷ್ಟವಾಚನ್ನು) ನೋಡುತ್ತಿರುವವನಂತೆ ನಟಿಸಿ, ಸಾರ್ಜಂಟನು ರಫೀಉದ್ದಿನನ ಆ ವಾಕ್ಯದ ಕಡೆಗೆ ದುರ್ಲಕ್ಷ್ಯಮಾಡಿದನು; ಬೆಲ್ ಆಯಿತೆಂದು ಬಂದಿವಾನರಿಗೆ ಸೂಚಿಸಿದನು; ಮತ್ತು ಆ ಇಡೀ ತಂಡವನ್ನು ಆ ಬಂದಿಪಾಲನ ಕಡೆಗೆ ಪದ್ಧತಿ ಪ್ರಕಾರ ಒಪ್ಪಿಸಿ, ಆತನು ಜೇಲಿನ ಬಾಗಿಲಿಂದ ಹೊರಬಿದ್ದನು.

ಕೂಡಲೆ ಆ ದರವಡೆಗಾರರ ತಂಡವನ್ನು ವಿಂಗಡಿಸಿ ಆ ಕಾದಿಟ್ಟ ಫಾಸಿಯ ಚೌಕದಲ್ಲಿ ಬೇರೆ ಬೇರೆ ಒಂಟಿಗರ ಕೋಣೆಗಳೊಳಗೆ ಬಂಧಿಸಿಟ್ಟರು. ಅವರಲ್ಲಿಯ ಮೂರು-ನಾಲ್ಕು ಜನರ ಮುಖಗಳ ಮೇಲೆ ಭಯಂಕರ ಚಿಂತೆಯ ಛಾಯೆಯು ಹಬ್ಬಿತ್ತು. ಒಬ್ಬನು-ಕಿಶನನೆಂಬವನು ಪೂರ್ಣಪಶ್ಚಾತ್ತಪ್ತನಾಗಿ ತೋರುತ್ತಿದ್ದನು ಉಳಿದವರೆಲ್ಲರೂ ಬಂದಿಶಾಲೆಯಲ್ಲೂ ನೃತ್ಯಶಾಲೆಯಲ್ಲಿ ನಿಶ್ಚಿಂತರೂ ನಿಗರಗಟ್ಟರೂ ಆಗಿ ವ್ಯವಹರಿಸುತ್ತಿರುವಂತೆ ಕಾಣುತ್ತಿದ್ದರು.

ಎಲ್ಲಕ್ಕೂ ನಿಗರಗಟ್ಟಿನಾದವನೇ ಯೋಗಾನಂದನು; ಅರ್ಥಾತ್ ರಫೀ ಉದ್ದೀನ ಅಹಮ್ಮದನು!

ಆತನನ್ನು ಗಲ್ಲಿನ ಚೌಕದೊಳಗಿನ ಒಂಟಿಗದ ಕೋಣೆಯಲ್ಲಿ ಒಳ್ಳೇ ಆತಂಕದಲ್ಲಿಟ್ಟಿದ್ದರು; ಅಂದರೆ ಆತನ ಕೋಣೆಯ ಹತ್ತರ ಜಮಾದಾರನೂ ಶಿವರಾಮ ಹವಾಲದಾರನೂ ಇವರ ಹೊರತು ಇನ್ನಾರಿಗೂ ಹೋಗಲು ಆಸ್ಪದವಿರಲಿಲ್ಲ. ಅಂತೆಯೇ ಆತನು ಮಿಕ್ಕವರೆಲ್ಲರಿಗಿಂತಲೂ ಹೆಚ್ಚು ವಿಲಾಸದಲ್ಲಿದ್ದನು. ಅಪೇಕ್ಷೆಯಂತೆ ಶಿವರಾಮನ ಹಸ್ತಕರು ಆ ದರವಡೆಗಾರನ ಯಾವ ಅನುಯಾಯಿಗಳು ಇನ್ನೂ ಕದ್ದು-ಮುಚ್ಚಿ ಅಲಹಾಬಾದವಲ್ಲಿರುತ್ತಿದ್ದರೋ, ಅವರಿಗೆ ಬಂದಿಶಾಲೆಯೊಳಗಿದ್ದ ಆ ರಫೀಉದ್ದೀನನ ಪತ್ರಗಳನ್ನು ತಲುಪಿಸಲು, ಅವರಿಂದ ಯಥೇಚ್ಛ ಹೊನ್ನುಗಳು ಸೆರೆಮನೆಯಲ್ಲಿ ಬರ-ಹೋಗ ಹತ್ತಿದವು. ತುಸ ಅಫು, ಸಾಕಷ್ಟು ತಂಬಾಕವೂ, ನಡುನಡುವೆ ಮಿಠಾಯಿಯೂ ರಫೀ ಉದ್ದೀನನ ಆ ಒತ್ತಟ್ಟಿಗಿನ ಕೋಣೆಗೆ ಗುಪ್ತವಾಗಿ ಬಂದು ತಲುಪ ಹತ್ತಿದವು; ಹಾಗು ಅಪ್ರತ್ಯಕ್ಷ ರೀತಿಯಿಂದ ಆತನ ರೋಖ ಹಳದೀ ಬಣ್ಣದ ಬಂಗಾರದ ನಾಣ್ಯಗಳು ಜಮಾದಾರ, ಗುಮಾಸ್ತ ಬಾಬೂ, ಜೇಲರಸಾಬ ಇವರ ಜೇಬಿನಲ್ಲಿ ಬೀಳಹತ್ತಿದವು.

ರಫೀ ಉದ್ದೀನನ ಯೋಗಾನಂದ ಸ್ವರೂಪದೊಳಗಿನ ಜಡೆ, ಗಡ್ಡ-ಮೀಸೆಗಳೆಲ್ಲ ಉದರಿ ಬಿದ್ದು ಹೋಗಿದ್ದು, ಈಗ ಆತನೊಬ್ಬ ಡೌಲಿನ ಮುಸಲ್ಮಾನನಾಗಿದ್ದನು. ಆತನು ಯೋಗಾನಂದನ ವೇಷದಲ್ಲಿ, ಭೇಷದಲ್ಲಿ ಹಾಗು ಭಜನೆಯಲ್ಲಿ ತಲ್ಲೀನರಾದುದನ್ನು ಯಾರು ಕಂಡಿದ್ದರೋ ಅವರಿಗೆ ಅವನೊಬ್ಬ ಮುಸಲ್ಮಾನ ದರವಡೆಗಾರನಿರುವನೆಂಬದು ಕನಸಿನಲ್ಲಿ ಕೂಡ ನಿಜವೆಂದು ತೋರಲಿಕ್ಕಿಲ್ಲ. ಅದರಂತೆಯೇ ಆತನನ್ನು ಈ ಫಾಶಿಯ ಬಂದಿಗರ ಕೋಣೆಯಲ್ಲಿ ಒಬ್ಬ ನಿಗರಗಟ್ಟ ಮುಸಲ್ಮಾನ ದರವಡೆಖೋರನ ಸ್ವರೂಪದಲ್ಲಿ ನೋಡುವವರಿಗೆ ಅವನು ಒಮ್ಮೆ ಹಿಂದು ಸಾಧುವಿನ ವೇಷದಲ್ಲಿ ಸಾವಿರಾರು ಜನರನ್ನು ನಡುಗಿಸಿದನು-ರಂಜಿಸಿದನು ಎಂಬದನ್ನು ಹೇಳಿದರೂ ಕೂಡ ಖಾತ್ರಿಯೆನಿಸಲಿಕ್ಕಿಲ್ಲ. ಆದರೂ ಕೂಡ ಯೋಗಾನಂದತ್ವದ ಒಂದು ಚಿಹ್ನವು ಆತನಲ್ಲಿ ಒಂದು ಬಗೆಯಾಗಿ ಇನ್ನೂ ಇದ್ದಿತೆಂದೇ ಹೇಳಬಹುದಾಗಿತ್ತು. ಅದಾವುದೆಂದರೆ, "ಸಮದುಃಖ ಸುಖೀಕೃತ್ವಾ| ತುಲ್ಯ ನಿಂದಾಸ್ತುತಿ ತ್ವಚಿ| ನಿನಗಿನ್ನು ಭಯಂಕರ ಶಿಕ್ಷೆಯಾಗುವ ಭಯ ಇಲ್ಲವೆ ಚಿಂತೆಗಳು ಅನಿಸುವದಿಲ್ಲವೇ? ಎಂದು ಆತನನ್ನು ಯಾರಾದರೂ ಕೇಳಿದರೆ, ಆಗ ಆತನು ತುಟಿಯನ್ನು ಹೊರಳಿಸಿ ಹುಬ್ಬು ಹಾರಿಸಿ ಎಂದಿನಂತೆ ಗಲ್ಲದೊಳಗೆ ನಗುತ್ತಿದ್ದನು ಮಾತ್ರ!

"ಅಸಕ್ಕೇಕೆ ಚಿಂತೆ? ಗಲ್ಲಂತೂ ನನಗಾಗುವದಿಲ್ಲ; ಜೀವಾವಧಿ ಕರಿನೀರಿನ ಶಿಕ್ಷೆಯಾಗದೆ ಇರುವದಿಲ್ಲ! ಔರ ಹಮಕೋ ಕಾಲಾ ಪಾನೀಮೆ ತೋ ಜೋ ಪುಶ್ಯಾ! ಔರ ಮಜಾ ಆತಿ ಹೈ! ವಹ ತುವಾರಿ ಕಾಶೀಜೀ ಮೆ ಭೀ ನಹಿ ಮಿಲ ಸಕ್ತೀ!-ಮಕ್ಕಾಜೀ ಮೆ ಭೀ ನಹಿ ಮಿಲ ಸಕ್ತೀ! ಹಮ ಲೋಗೋಕೀ ಕಾಲಾಪಾನಿಹೀ-ಕಾಶೀಜೀ ಹೈ!"

"ಆದರೆ ನಿನಗೆ ಗಲ್ಲು ಆಗಲಿಕ್ಕಿಲ್ಲೆಂಬದು ಹೇಗೆ? ಭಯಂಕರ ಕ್ರೂರ ರೀತಿಯಿಂದ ಎಷ್ಟೋ ಜನರನ್ನು ನೀನು ಕೊಲೆ ಮಾಡಿರುತ್ತೀ; ಹುಡುಗರ-ಹುಡುಗಿಗಳ ಕುತ್ತಿಗೆ ಕೊಯ್ದಿರುತ್ತೀ. ಇಂಥ ಹಲವು ಆರೋಪಗಳು ನಿನ್ನ ಮೇಲಿವೆ! ನೀನು ಗಲ್ಲಿಗೇ ಏರತಕ್ಕವನೆಂದು ಸ್ವತಃ ಜೇಲರ ಸಾಹೇಬರು ಅನ್ನುತ್ತಿರುವರು" ಎಂದು ಶಿವರಾಮ ಹವಾಲದಾರನು ಆತನಿಗೆಂದಾದರೂ ಅಂದನೆಂದರೆ, ಆತನು ನಕ್ಕು:—"ಅರೇ, ಜೇಲರ ಕ್ಯಾ ಜಾನತಾ ಹೈ! ನೂರೆಂಟು ಭಾಷೆ, ನೂರೆಂಟು ವೇಷ, ನೂರೆಂಟು ಬಂದಿಗೃಹಗಳ ನೀರು ಕುಡಿದ ನನ್ನಂಥ ದರವಡೆಗಾರನಿಗೆ ಪುರಾವೆಯು, ಶಿಕ್ಷೆಯು, ಅಪರಾಧಗಳ, ನಿರ್ಣಯ-ನಿಯಮಗಳ ಯಾವ ಅನುಭವಿಕ ಜ್ಞಾನವಿರುತ್ತದೋ, ಅದು ಇಂಥ ಜೇಲರರಿಗೇ ಏಕೆ, ದೊಡ್ಡ ದೊಡ್ಡ ಜಜ್ಜರಿಗೂ ಇರುವದಿಲ್ಲ! ಆ ಜ್ಞಾನದ ಬೆಂಬಲದಿಂದ ನಾವು ದರವಡೆ ಮಾಡುವಾಗ ಕೂಡ ಕಾಯಿದೆಗನುಸಾರವಾಗಿಯೇ ಮಾಡುತ್ತಿರುತ್ತೇವೆ. ಫಾಸಿಯಾಗುವಂತಹ ಮೂರ್ಖತನದಿಂದ ಕೊಲ್ಲುವವರನ್ನು ಕೂಡ ಕೊಲ್ಲುತ್ತಿರುವದಿಲ್ಲ! ಅಪ್ಪಾ, ನಿಮ್ಮ ಹಿಂದು ಜನರ ಗೀತೆಯನ್ನು ನಾನು ಓದಿಕೊಂಡಿದ್ದೇನೆ. 'ಹತ್ವಾಽಪಿ ಸ ಇಮಾಲ್ಲೋಕಾನ್ ನ ಹನ್ತಿ ನ ನಿಬಧ್ನತೆ |' ಇದಕ್ಕೇ 'ಯೋಗಃ ಕರ್ಮಸು ಕೌಶಲಮ್' ಎಂದೆನ್ನುತ್ತಾರೆ"

ಹಿಂದು ಅಧಿಕಾರಿಗಳ ಪಹರೆಯಲ್ಲಿ ಆತನು ಹೀಗೆ ಸಂಸ್ಕೃತ ಶ್ಲೋಕಗಳನ್ನು ಅನ್ನುತ್ತಿದ್ದನು; ಭಜನೆ ಮಾಡುತ್ತಿದ್ದನು. ಅದನ್ನು ಕೇಳಿ ಭೋಳೇ-ಭಾವಿಕರಿಗೆ ಈತನು ಯಾವನೋ ಒಬ್ಬ ಅಂತರ್ಯಾಮಿಯಾದ ಅವಧೂತನಿರಬೇಕೆಂದು ಭ್ರಾಂತಿಯುಂಟಾಗುತ್ತಿತ್ತು; ಮತ್ತು ಕಾರಾಗೃಹದೊಳಗೆ ಆ ಹಿಂದು ಶಿಪಾಯಿಗಳ ಸಹಾನುಭೂತಿಯು ಆತನಿಗೆ ಸಹಜವಾಗಿ ದೊರಕುತ್ತಿತ್ತು.

ಮುಸಲ್ಮಾನ ಅಧಿಕಾರಿಗಳ ಪಹರೆಯ ಕಾಲಕ್ಕೆ ಹರಟೆಹೊಡೆಯುವಾಗ ಆತನು ಕುರಾಣದೊಳಗಿನ ಸಟಿದಿಟವಾದ ಹತ್ತೆಂಟು ಆಯತ (ಮಂತ್ರ) ಗಳನ್ನಂದಂತೆ ಮಾಡುವನು ನಿಮಾಜವನ್ನಂತೂ ಉಳಿದಿದ್ದ ಅತ್ಯಲ್ಪ ಗಡ್ಡದ

ಮೇಲೆ ಹತ್ತತ್ತು ಸಾರಿ ಗಂಭೀರವಾಗಿ ಕೈಯಾಡಿಸಿ, ಬಹು ತಲ್ಲೀನತೆಯಿಂದ ಹಗಲೆಲ್ಲ ಬೀಳುತ್ತ ಅನ್ನುತ್ತಿದ್ದನೇನಂದರೆ:-"ದೇಖೊ! ನಾನು ಯಾವ ಯಾವ ದರವಡೆಗಳನ್ನು ಹಾಕಿದೆನೋ, ಯಾವ ಯಾವ ಹುಡುಗಿಯರನ್ನು ಓಡಿಸಿದೆನೋ, ಯಾರ ಯಾರ ಕೈ-ಕಾಲುಗಳನ್ನು ಕಡಿದೆನೋ-ಕಡಿಸಿದೆನೋ, ಕೊಂದೆನೋ, ಕೊಲೆ-ಸುಲಿಗೆ ಮಾಡಿದೆನೋ ಅವರೆಲ್ಲರೂ ಕಾಫರರಾದ ಹಿಂದುಗಳೇ ಆಗಿದ್ದರು! ಇಮಾನದಾರೀಕೆ (ಮುಸ್ಲೀಮಕೆ) ಬಾಲಕೇ ಭೀ ಧಕ್ಕಾ ನಹಿ ಲಗಾಯಾ! ಅಲ್ಲಾ ರಹೀಮ ಹೈ! ಕಾಫರರಿಗೆ ಶಿಕ್ಷಿಸಿದ ಬಗ್ಗೆ ಖುದಾತಾಲನು ನನ್ನ ಮೇಲೆ ಮಾಡಿದರೆ ದಯೆಯನ್ನೇ ಮಾಡುವನಲ್ಲವೆ?"

"ಅರ್ಥಾತ್!" ಎಂದು ಆ ಮುಸ್ಲೀಮ ಜಮಾದಾರನು ಅನ್ನುತ್ತಿದ್ದನು; ಹಾಗು ತಳಹತ್ತದ ಯಾವದೊಂದು ಹಳೇ ಕತ್ತಲೆಯ ಬಾವಿಯಲ್ಲಿ ನಾವು ಹೇಗೆ ಇಣಿಕಿ ನೋಡುವೆವೋ, ಹಾಗೆ ಆತನ ಕಣ್ಣುಗಳ ಕಡೆಗೆ ಇಣಿಕಿ ನೋಡುತ್ತ ಸ್ವಂತದ ಮನಸ್ಸಿನಲ್ಲಿ "ಈತನಾವನೋ ಅವಲಿಯಾ ಅಥವಾ ಯಾವನಾದರೂ ಖುದಾ ಈ ಖಿದಮತಗಾರನಾಗಿ ತೋರುತ್ತಾನೆ!" ಎಂದನ್ನುತ್ತಿದ್ದನು.

ಜೇಲುಗಳಲ್ಲಿ ಪ್ರಸಿದ್ಧ ಕಳ್ಳರೂ ದರವಡೆಖೋರರೂ ಮುಸ್ಲೀಮರಿದ್ದರೆ, ಅವರಲ್ಲಿ ಸಿಂಧಿ, ಬಲೂಚೀ, ಪಠಾಣ, ಪಂಜಾಬೀ ಅಪರಾಧಿಗಳಂತೂ ಬಹುಶಃ ತಮ್ಮ ಕೊಲೆ, ಕಳವು, ದರವಡೆಗಳ ಸಮರ್ಥನವನ್ನು ಇದೇ ಬಗೆಯ ಕೋಟಿಕ್ರಮದಿಂದ ಮಾಡುತ್ತಿದ್ದು, "ಹಮತೋ ಕೇವಲ ಕಾಫರ ಹಿಂದುಕೊಹಿ ಮಾರತೇ ಹೈ, ಲೂಟತೇ ಹೈ!" ಮತ್ತು ಅವರ ಸಮರ್ಥನದೊಡನೆ ಆ ಪಾಪಕೃತ್ಯಗಳೂ ಪುಣ್ಯಕೃತಿಗಳಂತೆ ಭಾವಿಸಿ, ಎಷ್ಟೋ ಜನ ಧರ್ಮದ ಹುಚ್ಚಿನ ಶಿಪಾಯಿ-ಜಮಾದಾರರಿಗೆ ಅವರ ಬಗ್ಗೆ ಸಹಾನುಭೂತಿಯುಂಟಾಗುತ್ತದೆ. ಇಂಥ ನೂರಾರು ದೃಷ್ಟಾಂತಗಳು ಹಲವು ಜನರಿಗೆ ಬಂದಿರುತ್ತವೆ. ಇದಕ್ಕೆ ಅಪವಾದರೆಂದರೆ ಬಂಗಾಲೀ, ಮರಾಠೀ ಮುಸಲ್ಮಾನರು ಮಾತ್ರ ಅಷ್ಟೊಂದು ಧರ್ಮದ ಹುಚ್ಚಿನವರಿರುವದಿಲ್ಲವೆಂಬದು ಇದ್ದದ್ದರಲ್ಲಿಯೇ ವಿಹಿತವಾಗಿದೆ. ದರವಡೆಖೋರರಾದ ಉತ್ತರ ಕಡೆಯ ಮುಸಲ್ಮಾನರು ಇದಕ್ಕಾಗಿಯೇ ದಕ್ಷಿಣದ ಮುಸಲ್ಮಾನರನ್ನು ಅಷ್ಟೊಂದು ನಂಬುವದಿಲ್ಲ.

ಆ ಯೋಗಾನಂದ ಅಥವಾ ರಫೀ ಉದ್ದೀನನ ತಂಡಕ್ಕೂ ಕಡೆಗೆ ಅದೇ ಅನುಭವ ಬಂದಿತು. ಅವರೊಳಗಿನ ಯಾವ ಆರೋಪಿಗಳು ಜೇಲಿನಲ್ಲಿ ಕಾಲಿಟ್ಟ ಕೂಡಲೆ ಅಂಜಿ ಗಾಬರಿಗೊಂಡರೆಂದು ಈ ಮೊದಲು ತಿಳಿಸಿದ್ದೆವೋ ಅವರೊಳಗಿನವನೊಬ್ಬ ಹಸನಭಾಯಿಶೊ ಎಂಬ ಹೆಸರಿನ ಮಹಾರಾಷ್ಟ್ರೀಯ ಮುಸಲಮಾ

ನನು ಮತ್ತು ಪಶ್ಚಾತ್ತಾಪಗೊಂಡ ಆ ಕಿಶನನೂ ಕೂಡಿ ಪೋಲೀಸರಿಗೆ ಆ ತಂಡದ ಕಲವು ಸಂಗತಿಗಳನ್ನು ತಿಳಿಸಿದರು; ಮತ್ತು ತಮ್ಮ ಅಪರಾಧಗಳನ್ನೊಪ್ಪಿಕೊಂಡರು ಅವರ ಆ ಒಪ್ಪಿಗೆಯ (ಕಬೂಲೀ ಜವಾಬಿನ) ಮಹತ್ವದ ಉಪಯೋಗವನ್ನು ಪೋಲೀಸರ ಬಳಿಯಲ್ಲಿದ್ದ ಸ್ವತಂತ್ರ ಪುರಾವೆಗಳಲ್ಲಿ ಕೂಡಿಸಿ, ಸರಕಾರವು ಅವರ ಮೇಲೆ ಖಟ್ಲೆ ಹಾಕಿತು; ಮತ್ತು ಖಟ್ಲೆಯ ತಾರೀಖನ್ನು ರಫೀ ಉದ್ದೀನನೇ ಮೊದಲಾದ ಎಲ್ಲ ಆರೋಪಿಗಳಿಗೂ ತಿಳಿಸಿತು.

ಮದುವೆಯ ದಿವಸ ಮದುಮಗನು ಸಿಂಗಾರಾಗುವಂತೆ ಉತ್ಸುಕತೆಯಿಂದಲೂ ಡೌಲಿನಿಂದಲೂ ರಫೀ ಉದ್ದೀನನು ತನ್ನ ಕೂದಲುಗಳ, ದೇಹದ ಹಾಗು ವೇಷದ ಸಿದ್ಧತೆಯನ್ನು ಕಾರಾಗೃಹದಲ್ಲಿ ಎಷ್ಟು ಹೆಚ್ಚಾಗಿ ಮಾಡಬಂದೀತೋ ಅಷ್ಟು ಶಿಸ್ತಿನಿಂದ ಮಾಡಿಕೊಂಡು, ಕಾಲೊಳಗಿನ ಬೇಡಿಗಳನ್ನು ಸೆಟೆಸೆಟೆದು ಖಳ್ಳ ಖಳ್ಳ ಎಂದು ಸಪ್ಪಳ ಮಾಡುತ್ತ ಶಿಪಾಯಿಗಳ ಸಂಗೀನಿನ ಪಹರೆಯಲ್ಲಿ ನಗೆಮೊಗದಿಂದಲೂ ಒಳ್ಳೇ ಆಡಂಬರದಿಂದಲೂ ಕಾರಾಗೃಹದ ಬಾಗಿಲಿನಿಂದ ಹೊರಬಿದ್ದನು "ಕರಿನೀರಿನಿಂದ ಓಡಿ ಬಂದ ಪರಾಕ್ರಮೀ ಪುರುಷನೀತನೇ" ಎಂದು ಭಾವಿಸುತ್ತ ಎಲ್ಲರೂ ತನ್ನನ್ನೇ ನೋಡಹತ್ತಿರುವರೆಂದು ಅವನನವನಿಗೇ ಅನಿಸುತ್ತಿತ್ತು; ಮತ್ತು ಕೋರ್ಟಿನಲ್ಲಿ ಇನ್ನು ಯಾವ ಯಾವ ಚೇಷ್ಟೆ-ಕುಚೇಷ್ಟೆಗಳನ್ನು ಮಾಡಿ, ಜಜ್ಜನನ್ನು ಕೂಡ ನಗಿಸಿ, ಹೇಗೆ ಸಂತೋಷಗೊಳಿಸಬೇಕೆಂಬ ವಿಚಾರವೊಂದು ಆತನ ಮನಸ್ಸಿನಲ್ಲಿ ಉಂಟಾಗಿತ್ತು! ತನ್ನ ಭಯಂಕರ ಅಪರಾಧದ ಕ್ರೂರ ಕಥೆಯನ್ನು ಕೇಳಿ ಯಾವ ಜನರ ಮೈಮೇಲೆ ಮುಳ್ಳುಗಳೆದ್ದಾವು; ತನ್ನನ್ನು ರಾಕ್ಷಸನೆಂದು ಯಾರು ಛೀ-ಥೂ ಅಂದಾರು? ತನಗೆ ಯಾವ ಕಠೋರ ಶಿಕ್ಷೆ ಭೋಗಿಸಬೇಕಾದೀತು? ಇತ್ಯಾದಿ ವಿಚಾರ ಆತನ ಮನಸ್ಸಿನಲ್ಲಿ ಕೂಡ ಬರುತ್ತಿರಲಿಲ್ಲ ಸುಡುಗಾಡದೊಳಗಿನ ಹೆಣ, ಅಳೋಣ, ಚಿತೆ ಇವುಗಳ ರೂಢಿ ಬಿದ್ದ ಅಲ್ಲಿಯ ಧರ್ಮಶಾಲೆಯ ಕಾವಲುಗಾರನಿಗೆ ಆ ಸುಡುಗಾಡದ ಅಂಜಿಕೆಯು ಹೇಗೆ ಅನಿಸುವದಿಲ್ಲವೊ, ಆ ಕಾರ್ಯಕ್ರಮಗಳು ಹೇಗೆ ಆತನ ನಿತ್ಯಾಹ್ನಿಕಗಳಾಗುವವೋ, ಆತನದದೇ ಕಾರ್ಯಕ್ರಮವಾಗಿಬಿಟ್ಟಿರುವದೋ, ಅದರಂತೆಯೇ ಆ ನಿಗರಗಟ್ಟಿ ದರವಡೆಗಾರನಿಗೆ ನ್ಯಾಯಾಲಯ, ಪುರಾವೆ, ಶಿಕ್ಷೆ, ಬೇಡಿ, ಜೇಲು ಜನ್ಮಠೇಪು, ಕರಿನೀರು ಮುಂತಾದ ಎಲ್ಲ ವಸ್ತುಗಳ ಪರಿಪಾಠ ಬಿದ್ದು ಹೆಚ್ಚಾಗಿ ರೂಢಿಯಾದ್ದರಿಂದ, ಆ ಬಗ್ಗೆ ಆತನಿಗೆ ವಿಶೇಷವೇನೂ ಅನಿಸದಂತಾಗಿದ್ದಿತು! ಆತನ ಮನಸ್ಸಿದರೂ ಸೈತಾನನಂತೆಯೇ 'Oh Evil! Thou be my Good!' ಹೀಗೆಯೇ ಆಗಿತ್ತು.

ಆತನ ಮನಸ್ಸೆಂದರೆ ರಾಕ್ಷಸತ್ವ ಹಾಗು ಮನುಷ್ಯತ್ವ ಇವುಗಳದೊಂದು ಸಾಮೂಹಿಕ ಅವಿಭಕ್ತಕುಟುಂಬವಾಗಿತ್ತು. ಆತನು ಅರಮನೆಯೊಳಗಿನ ನೀರೋ ಹೇಗೋ, ಹಾಗೆಯೇ ಈ ಕರಿನೀರಿನ ರಘೋಉದ್ದೀನ! ಆತನಿಗೆ ಏತರದಾದರೂ ಅಂಜಿಕೆ ಉಳಿದಿದ್ದರೆ ಅದು ನೀರೋನಿಗೆ ಹೇಗೆ ವ್ಯತ್ಯಾವಿನದೋ, ಹಾಗೆ ಫಾಶಿಯದೊಂದೇ ಆಗಿದ್ದಿತು; ಮತ್ತು ಏತರದಾದರೂ ಕರಿವೆ ಇಲ್ಲವೆ ಮಾಯ-ಮಮತೆಯಿದ್ದರೆ ಅದು ಅಫ ವಿನದೂ ಸ್ತ್ರೀಯಳದೂ ಆಗಿದ್ದಿತು!

ನ್ಯಾಯಾಲಯಕ್ಕೆ ಹೋಗಹೋಗುತ್ತಿರುವಾಗ ಸಹ ಆತನ ಮನಸ್ಸಿನಲ್ಲಿ ಒಂದೆರಡು ಸಾರೆ ಒಂದು ವೇಳೆ ಗಲ್ಲೇ ಆದರೆ? ಎಂಬ ಬಗ್ಗೆ ದುಗುಡಾಯಿತು; ಮತ್ತು ಒಂದೆರಡು ಸಾರೆ ಆ ಅತ್ಯಂತ ಕ್ರೂರನೂ ಮನಸ್ಸಿನಲ್ಲಿ ಕಳವಳಗೊಂಡನು! ಮತ್ತು

"ನೂಲತೀ! ಹಾಯ! ಹಾಯ! ಇನ್ನೆಲ್ಲಿ ದೊರಕುವಳು ಆ ಹುಡುಗಿ ನನಗೆ ಬಿಗಿಯಾಗಿ ಅವಚಿಕೊಳ್ಳಲಿಕ್ಕೆ?" ಎಂದಂದುಕೊಂಡನು.

---

## ೬ನೇ ಪ್ರಕರಣ.

ಆ ಭಯಂಕರ ದರವಡೆಗಾರನ ಖಟ್ಲೆಯು ಕೋರ್ಟಿನಲ್ಲಿ ಒಳ್ಳೇ ಭರ್ತಿಯಾಗಿ ಸಾಗಿತ್ತು. ವಕೀಲರು, ಅವರ ಕಾರಕೂನರು, ಶಿಪಾಯಿಗಳ ಸಶಸ್ತ್ರ ತಂಡವು, ಇಂಥ ದರವಡೆಗಾರರ ಖಟ್ಲೆಯ ಬಗ್ಗೆ ಆಸ್ಥೆಯುಳ್ಳವರಾದ ಹಲವು ಜನ ಸಭ್ಯರು ಮತ್ತು ಊರೊಳಗಿನ ಕೆಲ ಜನ ಲಂಡ-ಗುಂಡರು ಇವರೆಲ್ಲರಿಂದ ನ್ಯಾಯಾಲಯದಲ್ಲಿ ದಟ್ಟಣೆಯಾಗಿ ಹೋಗಿತ್ತು. ಆ ಕ್ರೂರ ನರಪಶುವಿನ ನೃಶಂಸ ಕೃತ್ಯಗಳನ್ನು ಕೇಳಿಕೊಳ್ಳುತ್ತಿರುವಾಗ ಎಷ್ಟೋ ಸಾರೆ ಸ್ವತಃ ನ್ಯಾಯಮೂರ್ತಿಗಳ ರೂಢಿಯಿಂದ ನಿಗರಗಟ್ಟಿದ ಮನಸ್ಸಿಗೂ ಧಕ್ಕೆಯುಂಟಾಗುತ್ತಿತ್ತು. ಅವರ ನಿಷ್ಪಕ್ಷಪಾತ ವೃತ್ತಿಗೂ ಕ್ರೋಧವು ಆವರಿಸದಾಗುತ್ತಿತ್ತು! ಲಂಡ-ಗುಂಡರ ಮೈಮೇಲೂ ರೋಮಾಂಚಗಳೇಳುತ್ತಿದ್ದವು! ನೃಶಂಸ ಹಾಗು ಕ್ರೂರ ಶ್ವಾಪದಗಳನ್ನು ಮನುಷ್ಯನು ಮಾನವ ವಸತಿಯೊಳಗಿಂದ ಅಡವಿ-ಕಾನನಗಳಿಗೆ ಓಡಿಸಿ ಬಿಡಲಿಕ್ಕೆ ಸಮರ್ಥನಾದನು; ಆದರೆ ಮನುಷ್ಯರ ಮನದೊಳಗೆ ನೃಶಂಸ ಶ್ವಾಪದಗಳು ಇನ್ನೂ ಹೇಗೆ ಹುದುಗಿ ಮನೆಮಾಡಿಕೊಂಡಿರುತ್ತವೆಂಬ ಭಯಾನಕ ಸತ್ಯವು ಮನಸ್ಸಿನ ನೆಲಮನೆಯ ಕೀಲಿಗಳನ್ನು ಯಾವಾಗ ಹೀಗೆ ತೆರೆದಿದ್ದು, ಆ ನೃಶಂಸ ಶ್ವಾಪದಗಳು ಮನಬಂದಂತೆ ಅಡ್ಡಾಡ ಹತ್ತಿದಾಗಲೇ ಅದನ್ನು ಅಲ್ಲವೆಂದು ಹೇಳಲಿಕ್ಕೆ ಅಶಕ್ಯವಾಗಿ ಬಿಡುತ್ತದೆ ಮನುಷ್ಯತ್ವವೆಂದು ನಾವು ಏತಕ್ಕೆ ಅನ್ನುತ್ತಿರುವೆವೋ ಆ ಸುಶೋಭಿತ ಪಟ್ಟಣವು

ಒಂದು ಕ್ಕೇಟಾ ಪಟ್ಟಣವಾಗಿದೆ. ಅವರ ಕೆಳಗೆ ಬಿಸಿಯಾದ ಭೂಕಂಪದ ರಾಕ್ಷಸತ್ವದ ಥರಗಳು ಒಂದರಮೇಲೊಂದು ಹಬ್ಬಿಕೊಂಡಿರುತ್ತವೆ! ಕೇವಲ ದಯೆ-ದಾಕ್ಷಿಣ್ಯ, ಮಾಯಾಮಮತೆ, ನ್ಯಾಯ-ಅನ್ಯಾಯ ಇವುಗಳ ಥರದ ಮೇಲೆಯೇ ಆ ಮನುಷ್ಯತ್ವದ ಕ್ಕೇಟಾ ಪಟ್ಟಣವು ಸ್ಥಾಪಿಸಲ್ಪಟ್ಟಿರುವದರಿಂದ, ಅಚಲವಿರಲೇಬೇಕೆಂಬ ಭ್ರಾಂತಿಯಲ್ಲಿ ಯಾವನು ಅಸಾವಧತನದಿಂದ ಅಲ್ಲಿ ಮಲಗುವನೋ ಆತನು ಸಹಜವಾಗಿಯೇ ನಾಶ ಹೊಂದುತ್ತಾನೆ! ರಾಷ್ಟ್ರಕ್ಕೆ ರಾಷ್ಟ್ರವೇ ಬೊಕ್ಕಬೋರ್ಲಾಗಿ ಬೀಳುತ್ತದೆ!

ರಫೀಉದ್ದೀನ ಅಹಮ್ಮದನಾದರೂ ಮನುಷ್ಯನೇ ಇದ್ದನು; ಯಾಕಂದರೆ, ಆತನು ನಗುತ್ತಿದ್ದನು. ಬೇರೆ ಪ್ರಾಣಿಗಳಿಗಿಂತ ಮನುಷ್ಯನು ಭಿನ್ನನೆಂಬದನ್ನು ತೋರಿಸುವ ಮುಖ್ಯ ವಿಶೇಷ ಗುಣವೆಂದರೆ, ಆತನ ನಗುವೆಂದು ಎಷ್ಟೋ ಪ್ರಾಣಿಶಾಸ್ತ್ರಜ್ಞರ ಅಭಿಪ್ರಾಯವಿರುತ್ತದೆ. ಮನುಷ್ಯನೊಬ್ಬನೇ ನಗುವವನು. ಖಟ್ಲೆಯು ಯಾರೆದುರಿಗೆ ನಡೆದಿತ್ತೋ, ಆ ನ್ಯಾಯಮೂರ್ತಿಗಳಾದ ಆಕ್ಲಂಡ ಸಾಹೇಬರು ಇಂಥ ಅಘೋರ ಆರೋಪಿಗಳ ಕಡೆಗೆ ಕೇವಲ ಅಪರಾಧಿ ಎಂದು ನೋಡದೆ, ರೋಗದ ಪರೀಕ್ಷೆಯನ್ನು ವೈದ್ಯನು ಮಾಡುವಂತೆ ಅಥವಾ ಸರ್ಪದ ವಿಷ ಪರೀಕ್ಷೆಯನ್ನು ಮಾಂತ್ರಿಕನು ಮಾಡುವಂತೆ ಚಿಕಿತ್ಸಕ ದೃಷ್ಟಿಯಿಂದ ಇಂಥ ಅಘೋರ ಪಾತಕಿಗಳ ಸ್ವಭಾವ ವಿಶೇಷಗಳ ಚಿಕಿತ್ಸೆ ಮಾಡುತ್ತಿದ್ದರು. ಅಪರಾಧವಿಜ್ಞಾನವು ಮನೋವಿಜ್ಞಾನದ್ದೇ ಒಂದು ಭಾಗವಿದೆಂದು ಅವರ ನಿರ್ಧಾರವಾಗಿತ್ತು. ಅಂತೆಯೇ ಅವರು ಪುರಾವೆಯಂತೆಯೇ ಅಘೋರ ಇಲ್ಲವೆ ವಿಕ್ಷಿಪ್ತ ಅಪರಾಧಿಗಳ ಮನೋವಿಕಾರ, ಮುದ್ರೆ, ಭಾಷಣ ಮತ್ತು ಚಲನವಲನಗಳ ಬಗ್ಗೆ ತಮ್ಮ ಮನಸ್ಸಿನಲ್ಲಿಯೇ ನಿರ್ಣಯ ಮಾಡಲಿಕ್ಕೆ ಬರಬೇಕೆಂದು ಅಪರಾಧಿಗಳನ್ನು ಆರೋಪಿಗಳ ಪಂಜರದಲ್ಲಿರುವಾಗಲೂ ಯೋಗ್ಯ ಮರ್ಯಾದೆಯಲ್ಲಿ ಸ್ವಾಭಾವಿಕವಾಗಿ ಮಾತುಕತೆಯಾಡಲಿಕ್ಕೂ ಅಳು-ನಗಲಿಕ್ಕೂ ಆಸ್ಪದವೀಯುತ್ತಿದ್ದರು. ಅವರೊಡನೆ ಸ್ವತಃ ಮಾತಾಡಿ, ಅವರನ್ನು ಮಾತಾಡಹಚ್ಚುತ್ತಿದ್ದರು. ಯಾವ ಸಂಕಟಕ್ಕೆ ಸಿಕ್ಕುತ್ತಲೆ ದೊಡ್ಡ ದೊಡ್ಡ ದುಷ್ಟರೂ ಥರಥರನೆ ನಡುಗುವರೋ, ನಾಚಿಗೊಳ್ಳುವರೋ ಆ ಸಂಕಟದಲ್ಲಿಯೂ ಆ ರಫೀ ಉದ್ದೀನನು ನಿಶ್ಚಿಂತನೂ, ನಿರ್ಲಜ್ಜತನದಿಂದ ನಗುವದನ್ನೂ ಕಂಡು ನ್ಯಾಯಮೂರ್ತಿ ಆಕ್ಲಂಡ ಸಾಹೇಬರಿಗೆ ಶೇಕ್ಸಪೀಯರನು ಈತನನ್ನೊಮ್ಮೆ ಕಂಡಿದ್ದರೆ ವಿಹಿತವಾಗುತ್ತಿತ್ತು; ಯಾಕಂದರೆ, ಒಬ್ಬ ದುಷ್ಟಘಾತುಕ ಹಾಗು ಪಾತಾಳ ಯಂತ್ರದ ಮನುಷ್ಯನ ಬಗ್ಗೆ ಶೇಕ್ಸಪೀಯರನು ಒಂದು ಪಾತ್ರದಲ್ಲಿ ಯಾವ ಒಂದು ಲಕ್ಷಣ ಹೇಳಿರುವನೋ,

'He Seldom laughs ಆತನಿಗೆ ಕ್ವಚಿತ್ತಾಗಿಯೇ ನಗೆ ಬರುತ್ತದೆ!' ಈ ಲಕ್ಷಣವು ಒಮ್ಮೊಮ್ಮೆ ಹೇಗೆ ಸುಳ್ಳುಬೀಳುತ್ತದೆಂಬದನ್ನಾದರೂ ಆತನು ಬೇರೊಂದು ಪಾತ್ರದಿಂದ ಹೇಳಿಸುತ್ತಿದ್ದನು. ಕ್ರೂರನಿಷ್ಠರೂ ರಫೀ ಉದ್ದೀನನು ಹೇಗೆ ಮೋಜಿನವನಿದ್ದನೋ, ಹಾಗೆಯೇ ಆತನು ದುವೃತ್ತನಿದ್ದರೂ ಸುರೂಪಿಯಾಗಿದ್ದನು. ನ್ಯಾ. ಆಕ್ಲಂಡರು ತಮ್ಮ ಮನಸ್ಸಿನಲ್ಲಿಯೇ 'ಈತನು ಒಬ್ಬ ಮಹಾಕವಿಯು ಮೇಲೆ ವಿವರಿಸಿದ ಸೂಕ್ತಕಷ್ಟೇ ಅಲ್ಲ, ಬೇರೆ ಮಹಾ ಕವಿಯು 'ನಹ್ಯಾಕೃತಿಸ್ಸು ಸದೃಶಂ ವಿಜಹಾತಿ ವೃತ್ತಮ್' (ಈ ಕಾಲಿದಾಸನ) ಸೂಕ್ತವನ್ನೂ ಸುಳ್ಳುಗೆಡವಿರುತ್ತಾನೆ. ಸುಂದರ ಮನುಷ್ಯನು ಸದ್ವೃತ್ತನಿದ್ದೇ ಇರುತ್ತಾನೆಂತಲ್ಲ; ಇಷ್ಟೇ ಅಲ್ಲ, ಆತನ ದುರ್ವೃತ್ತಗಳಿಗಿಂತ ಆತನ ಸೌಂದರ್ಯವು ಕೆಲಕೆಲವು ಪ್ರಸಂಗಗಳಲ್ಲಿ ಹೆಚ್ಚು ವಿಷಾರಿಯಾಗಿರುತ್ತದೆ. ಗುಲಾಬಿಯು ದಟ್ಟವಾದ ಹೂಗಳ ಗುಂಪಿನ ಮರೆಗೆ ಕಂಟಕದ ಅತಿರೇಕವಿರುತ್ತದೆಂಬದನ್ನು ತೋರಗೊಡುವುದಿಲ್ಲ ಸಹ.

ಆ ದರವಡೆಖೋರ ತಂಡದವರು ಮಾಡಿದ್ದ ನೃಶಂಸ ಕ್ರೌರ್ಯದ ಅತ್ಯಾಚಾರವನ್ನು ಪೋಲೀಸರು ಸಾಕಷ್ಟು ಪುರಾವೆಯೊಡನೆ ಅವರ ಉಡುಲಲ್ಲಿ ಹಾಕಿದರು. ಅವರಲ್ಲಿ ಯಾವ ಒಂದು ಅಪ್ರತ್ಯಕ್ಷ, ಆದರೆ ಮಹತ್ವದ ಪುರಾವೆಯು ಭರತಿಯನ್ನು ಆ ರಫೀ ಉದ್ದೀನನ ತಂಡದೊಳಗಿನ ಸರಕಾರೀ ಮಾಫೀ ಸಾಕ್ಷಿದಾರನಾಗಿದ್ದ ಹಸನಭಾಯಿಯೆ ಎಂಬವನು ಮಾಡಿದ್ದನೋ, ಆತನ ಆ ಸಾಕ್ಷಿಯೊಳಗಿನ ಮುಖ್ಯ ಮುಖ್ಯ ಸಂಗತಿಗಳನ್ನಷ್ಟೇ ಇಲ್ಲಿ ಕೊಟ್ಟರೂ, ರಫೀ ಉದ್ದೀನನ ರಾಕ್ಷಸೀ ಕೃತ್ಯಗಳ ಸುಳುವಾದರೂ ವಾಚಕರ ಧ್ಯಾನದಲ್ಲಿ ಬರಲಿಕ್ಕೆ ಸಾಕಾಗಬಹುದಾಗಿದೆ. ಪೋಲೀಸರ ಸ್ವತಂತ್ರ ಪುರಾವೆಯಿಂದ ಸಮರ್ಥಿಸಲ್ಪಟ್ಟ ಆ ಮಾಫೀ ಸಾಕ್ಷಿಯೊಳಗಿನ ಸಂಗತಿಯು ಹೀಗಿದ್ದಿತು:—

"ನನ್ನ ಹೆಸರು ಹಸನಭಾಯಿಯೆ. ನನ್ನ ಶಿಕ್ಷಣವು ಹಾಯಸ್ಕೂಲಿನವರೆಗಾಗಿದೆ. ನಾನು ಗುಮಾಸ್ತನಾಗಿದ್ದೆನು. ಮುಂದ ಹೆಡ್ಡದ ಲಹರಿಯಿಂದ ದುಡ್ಡಿನ ಸಲುವಾಗಿ ಕಳವು ಮಾಡ ಹತ್ತಿದೆನು. ನನ್ನ ಹುಟ್ಟು ಊರು ಖಾನದೇಶದೊಳಗೆ. ರಫೀ ಉದ್ದೀನನು ಕರಿನೀರಿಗೆ ಹೋಗುವ ಮೊದಲೇ ನನ್ನ ಪರಿಚಯದವನಾಗಿದ್ದನು. ಆತನು ಪಂಜಾಬ, ಲಖನೌಗಳ ಕಡೆಗೆ ಕೊಲೆ-ಸುಲಿಗೆ ಮಾಡಿ ತಂದ ಸಂಪತ್ತನ್ನು ನನ್ನ ಮನೆಯಲ್ಲಿ ಬಚ್ಚಿಡುತ್ತಿದ್ದನು. ಅಂತೆಯೇ ಆತನು ನನ್ನನ್ನು ತನ್ನ ತಂಡದೊಡನೆ ಪ್ರತ್ಯಕ್ಷ ದರವಡೆ ಮಾಡಲಿಕ್ಕೆ ಎಂದೂ ಕರೆದೊಯ್ಯುತ್ತಿರಲಿಲ್ಲ; ಮತ್ತು ನನ್ನ ಕಡೆಗೆ ಪೋಲೀ

ಸರ ಲಕ್ಷ್ಯಬೀಳಬಾರದೆಂದು ಆತನು ನನ್ನೆಡೆಗೆ ಬಹಿರಂಗವಾಗಿ ಬಹುಶಃ ಬರುತ್ತಿರಲಿಲ್ಲ ಮುಂದೆ ಆತನಿಗೆ ಶಿಕ್ಷೆಯಾಗಲು ಕರಿನೀರಿಗೆ ಹೋದನು; ಮತ್ತು ನನ್ನ-ಆತನ ಸಂಬಂಧವು ತಪ್ಪಿತು. ಕೆಲ ವರ್ಷಗಳ ಮೇಲೆ ಒಂದು ದಿನ ಆತನು ನನ್ನ ಬಾಗಿಲಿಗೆ ಆಕಸ್ಮಿಕವಾಗಿ ಬಂದು ನಿಂತದ್ದನ್ನು ಯಾವಾಗ ನಾನು ಕಂಡೆನೋ, ಆಗ ಸತ್ತವನು ಬದುಕಿದ್ದನ್ನು ಕಂಡರೆ ಹೇಗೆನಿಸುವದೋ ಹಾಗೆಯೇ ನನಗನಿಸಿತು! ಕರಿನೀರಿಗೆ ಹೋದವನು ಜೀವದಿಂದ ಬರಬಹುದೆಂಬ ಕಲ್ಪನೆ ಕೂಡ ನನಗಿರಲಿಲ್ಲ. ತಾನು ಮಂತ್ರಬಲದಿಂದ ಅದೃಶ್ಯನಾಗಿ ಸಮುದ್ರದ ಮೇಲೆ ನಡೆದು ಬಂದೆನೆಂದು ಆತನು ಹೇಳಿದನು! ಆತನು ಮಂತ್ರಪೂತಗೊಳಿಸಿದ ಒಂದು ತಾಯಿತವನ್ನು ನನಗೆ ತೋರಿಸಿದನು. ಈ ಮೊದಲು ನನ್ನ ಕಡೆಗಿದ್ದ ಆತನ ಮೂರು-ನಾಲ್ಕು ಸಾವಿರದ ಇಡಿಗಂಟನ್ನು ನನಗೆ ಕಾಣಿಕೆ ಕೊಟ್ಟುಬಿಟ್ಟೆನೆಂದು ಆತನು ತಿಳಿಸಿದನು. ಆತನ ಆ ಸಕ್ಕರೆಯಂಥ ಸವಿಮಾತಿನ ಪರಿಣಾಮವು ನನ್ನ ಮೇಲೆ ವಿಲಕ್ಷಣವಾಗಿ ಆಯಿತು. ಆತನು ನನಗೊಬ್ಬ ಅದ್ಭುತ ಮಾಂತ್ರಿಕನೂ ವಿಲಕ್ಷಣ ಸಾಹಸೀ ಪುರುಷನೂ ಎಂದು ತೋರಹತ್ತಿದನು; ಮತ್ತು ಆತನು ಹೇಳಿದ್ದನ್ನು ಮಾಡಲಿಕ್ಕೆ ನಾನು ಮತ್ತೆ ತತ್ಪರನಾದೆನು. ಸಿಂಧ ಮತ್ತು ಪಂಜಾಬಗಳಲ್ಲಿ ಮುಸಲ್ಮಾನೀ ಧರ್ಮಪ್ರಚಾರದ ಸಲುವಾಗಿ ತಾನೊಂದು ದೊಡ್ಡ ಸಂಸ್ಥೆ ಸ್ಥಾಪಿಸಿರುವೆನು. ಅದೊಂದು ಬಗೆಯ ಧರ್ಮಯುದ್ಧ-ಜಿಹಾದ-ವಿದ್ದು ಅದಕ್ಕೆ ಸಹಾಯ ಮಾಡುವದು ಪ್ರತಿಯೊಬ್ಬ ಮುಸಲ್ಮಾನನ ಕರ್ತವ್ಯವಿದೆಯೆಂದು ಆತನು ಹೇಳಿದ್ದು ನನಗೆ ಆ ಕಾಲಕ್ಕೆ ನಿಜವೆನಿಸಿತು. ಮುಸಲ್ಮಾನರನ್ನಾಗ ಮಾಡುವದಕ್ಕೆ ಖಾನದೇಶದೊಳಗಿನ ಹಿಂದುಗಳ ಗಂಡು-ಹೆಣ್ಣು ಹುಡುಗರು ಲಭಿಲಭಿಸಿದ ಹಾಗೆ ಆಮಿಷದೋರಿ, ಆತನ ಸ್ವಾಧೀನಪಡಿಸಬೇಕು; ಆತನ ಯಾವ ವಸ್ತು ಮತ್ತು ದ್ರವ್ಯಗಳನ್ನು ಬಚ್ಚಿಡಬೇಕಾಗುತ್ತಿತ್ತೋ ಅವನ್ನು ಮೊದಲಿನಂತೆಯೇ ಬಚ್ಚಿಡಬೇಕು; ಆತನು ಕರೆಕರೆದಾಗ ನಾನು ಆತನೆಡೆಗೆ ಹೋಗಬೇಕು; ಮತ್ತು ಈ ಕೆಲಸಗಳಿಗಾಗಿ ಆತನು ನನಗೆ ಆವಶ್ಯಕವಾದ ಖರ್ಚು ಹಾಗು ತಿಂಗಳಿಗೆ ನೂರು ರೂಪಾಯಿಗಳಂತೆ ರೋಖ ಹಣ ಕೊಡುತ್ತಿರಬೇಕು, ಹೀಗೆ ನಮ್ಮಿರ್ವರಲ್ಲಿ ಕರಾರು ಆಯಿತು.

ಆತನ ಆ ಮುಂದಿನ ಕೆಲಸಗಳನ್ನು ನಾನು ಮಾಡದಿದ್ದರೆ ಈ ಮೊದಲಿನ ಇಡಿಗಂಟಿಗಾಗಿ ಆ ಕ್ರೂರನು ನನ್ನನ್ನು ಕೊಲೆ ಮಾಡಲಿಕ್ಕೂ ತಪ್ಪಲಾರನೆಂಬ ಅಂಜಿಕೆಯೂ ನನಗನಿಸುತ್ತಿತ್ತು. ಮೊದ ಮೊದಲು ಅಂಜುತ್ತಂಜುತ್ತಲೇ ನಾನು ಆ ತಂಡಕ್ಕೆ ಸಹಾಯ ಮಾಡುತ್ತಿದ್ದೆನು; ಆದರೆ ದರವಡೆ

ಗಳ ವರ್ಣನೆಗಳನ್ನು ಕೇಳಿ ಕೇಳಿ ಮುಂದೆ ನಾನೂ ಮನುಷ್ಯ ಬಲವನ್ನು ಸಂಪಾದಿಸಿ ಸಣ್ಣಪುಟ್ಟ ದರವಡೆಗಳನ್ನು ಹಾಕಹತ್ತಿದೆನು ಯಾತ್ರೆ-ಜಾತ್ರೆ ಗಳಲ್ಲಿ, ಧರ್ಮಶಾಲೆಗಳಲ್ಲಿ ಮತ್ತು ಸ್ಟೇಶನ್ನುಗಳಲ್ಲಿ ಒಳ್ಳೊಳ್ಳೆ ಹಿಂದೂ ಹುಡಿ ಗೆಯರನ್ನು ಓಡಿಸಿಕೊಂಡೊಯ್ಯುವದರಲ್ಲಿ ನನ್ನ ತಂಡವು ಒಳ್ಳೇ ನಿಪುಣವೂ ನಿಗರಗಟ್ಟಿನದೂ ಆಯಿತು. ಅದರಿಂದ ಯಾರ ಮಗಳನ್ನು ನಾವು ಓಡಿಸು ತ್ತಿದ್ದೆವೋ, ಅವರ ಕನಿಕರದ ಅಳು-ಕರೆಯೋಣವು ನವ ಗೊಂದು ಮನ ರಂಜನದ ವಿಷಯವೇ ಅನಿಸುತ್ತಿತ್ತು! ಈ ಕಾರಣದ ಮೂಲಕ ರಫೀಉದ್ದೀ ನನು ನನ್ನ ಮೇಲೆ ಸಂತುಷ್ಟನಾಗಿ ಹೋದನು ಆ ಬಾಲ-ಬಾಲಿಕೆಯರನ್ನು ಬಹು ದೂರ ಸಿಂಧ-ಬಲೂಚಿಸ್ಥಾನಗಳ ವರೆಗೆ ಒಯ್ದು, ಅವರನ್ನು ತಮ್ಮ ತಂಡ ದೊಳಗಿನ ಮುಸಲ್ಮಾನರಿಗೆ ಮಾರಬೇಕು; ಇಲ್ಲವೆ ಸರಿ ಕಂಡರೆ ತಮ್ಮಲ್ಲಿಯೇ ಹಂಚಿಕೊಳ್ಳಬೇಕು. ದೊಡ್ಡದೊಡ್ಡ ಮೌಲವಿಗಳು ನಮ್ಮ ದುಷ್ಕೃತ್ಯಕ್ಕೆ ಧರ್ಮಪ್ರಸಾರದ ಹೆಸರುಕೊಟ್ಟು, ಕದ್ದು-ಮುಚ್ಚಿ ಸ್ತುತಿಸುತಿದ್ದರು. ಅದರಿಂ ದಂತೂ ನಮ್ಮ ನೀಚ ವಿಷಯವಾಸನೆಗೂ ಧನಲೋಭಕ್ಕೂ ಧರ್ಮೋ ನ್ಮಾದದ ಶಿಷ್ಟತನವೂ ಉತ್ಸಾಹವೂ ಉಂಟಾಗಿ, ಮನಸ್ಸಿನ ಲಜ್ಜೆಯು ಇಲ್ಲ ದಂತಾಯಿತು; ಮತ್ತು ಜನಲಜ್ಜೆಯೂ ಹೋಯಿತು. ಭಯವೆಂಬದೊಂದು ಸರಕಾರೀ ಶಿಕ್ಷೆಯ ಬಗ್ಗೆ ಮಾತ್ರ ಉಳಿಯಿತು ಅದರಲ್ಲೂ ಬ್ರಿಟಿಷ ಹಾಗು ಕೆಲ ಕರ್ತವ್ಯನಿಷ್ಠ ಹಿಂದೀ ಪೋಲೀಸ ಅಧಿಕಾರಿಗಳದೇ ವಿಶೇಷವಾಗಿತ್ತು.

ನಮ್ಮ ದಕ್ಷಿಣ ದೇಶದ ಮುಸಲ್ಮಾನರನ್ನು ಉತ್ತರ ಕಡೆಯ ಈ ಪಠಾಣ-ಬಲೂಚೀ ದರೋಡೆಖೋರರು ಅವಿಶ್ವಾಸಿಗಳೆಂದು ತಿಳಿಯುತ್ತಾರೆ. ನಮ್ಮ ವೇಷ, ಭಾಷೆ, ರೀತಿ-ರಿವಾಜುಗಳೆಲ್ಲ ಹಿಂದುಗಳಂತೆಯೇ ಇವೆ. ನಮ್ಮ ಕೈಯಿಂದ ಕ್ರೂರತನವು ಲಗುಬಗನೆ ಆಗುತ್ತಿರುವುದಿಲ್ಲ. ಅದಕ್ಕಾಗಿಯೇ ಅವರು ನಮ್ಮನ್ನು ಹೇಡಿಗಳೆಂದೂ 'ಅರ್ಧ ಕಾಫರ'ರೆಂದೂ ತಿಳಿಯುತ್ತಾರೆ. ಅವರುಗಳ ದರವಡೆಯಲ್ಲಿ ನಮಗೆ ಪ್ರತ್ಯಕ್ಷ ಭಾಗ ವಹಿಸಗೊಡುತ್ತಿದ್ದಿಲ್ಲ; ಆದರೆ ಬಿಹಾರದೊಳಗೆ ಆ ತಂಡವು ಒಂದು ದರವಡೆಯಲ್ಲಿ ಸಿಕ್ಕಿಬೀಳಲು, ರಫೀಉದ್ದೀನನು ಕೆಲ ಜನ ಸಂಗಡಿಗರೊಡನೆ ಪಾರಾಗಿ ಖಾನದೇಶಕ್ಕೆ ಬಂ ದನು. ಅಂದಿನಿಂದ ಆತನು ನನ್ನ ತಂಡದೊಡನೆ ಕೂಡಿಕೊಳ್ಳಲೇಬೇಕಾ ಯಿತು. ಆತನು ಅಂದಿನಿಂದ ಹಿಂದೂ ಗೋಸಾವಿಯ ವೇಷದಿಂದ ಅಡ್ಡಾಡ ಹತ್ತಿದನು. ಆತನು ಪ್ರಸಿದ್ಧ ಬಹುರೂಪಿಯಾಗಿರುತ್ತಾನೆ. ಇಂಗ್ಲಿಷ, ಸಂಸ್ಕೃತ, ಬಂಗಾಲೀ, ಮರಾಠೀ ಮುಂತಾದ ಯಾವದು ಬೇಕಾದ್ದನ್ನು ಅಲ್ಪ ಸ್ವಲ್ಪ ಪಾಠಾಂತರ ಮಾಡಿಕೊಳ್ಳುತ್ತಾನೆ. ಹಾಡುವನು, ಕುಣಿಯುವನು;

ಲಾವಣಿಯೆಂದರೆ ಲಾವಣಿ, ಭಜನವೆಂದರೆ ಭಜನ ಇವುಗಳನ್ನು ಆತನು ಬಹು ಚೆನ್ನಾಗಿ ಬೊಟ್ಟು ಮುರಿವಂತೆ ಅಂದು ರಂಜಿಸುತ್ತಾನೆ. ಯೋಗಾನಂದವೇಷದಲ್ಲಿ ಆತನು ಸಾವಿರಾರು ಹಿಂದೂಜನರನ್ನು ಕೇವಲ ಮಬ್ಬಿಗೆ ಹಾಕಿಬಿಟ್ಟಿದ್ದನು. ಆತನಿಗೆ ಹತ್ತೆಂಟೇ ಭಜನೆಗಳು ಬರುತ್ತಿರುತ್ತವೆ, ಶಾಸ್ತ್ರ-ಗೀಸ್ತ್ರಗಳೇನೂ ಬರುವದಿಲ್ಲ. ಅಂತೆಯೇ ಆತನು ಮೌನದ ಸೋಗುಹಾಕಿಕೊಂಡು, ಬರಿಯ ಭಜನಗಳನ್ನೇ ಅನ್ನುವನು ಹತ್ತಿಪ್ಪತ್ತು ಸಂಸ್ಕೃತ ಶ್ಲೋಕಗಳು ಆತನಿಗೆ ಮುಖೋದ್ಗತವಾಗಿದ್ದವು ಅವುಗಳನ್ನು ಆತನು ಒಳ್ಳೇ ಮಾನಭಾವೀತನದಿಂದ ನಡುವೇ ಅಂದು, ನಡುವೇ ತೆಪ್ಪಗಾಗಲು, ಇವನೊಬ್ಬ ಮಹಾಪಂಡಿತನಿದ್ದರೂ ಕೂಡ ಅತ್ಯಂತ ವಿನಯಶೀಲನಿರುವನೆಂದು ಪ್ರತಿಯೊಬ್ಬರಿಗೂ ಅನಿಸುತ್ತಿತ್ತು. ಆತನ ಆ ಯೋಗಾನಂದಸ್ವರೂಪವು ನಮಗೆ ಬಹಳೇ ಪಥ್ಯಕರವಾಗಿ ಪರಿಣಮಿಸಿದ್ದಿತು; ಯಾಕಂದರೆ ಸಾವಿರಾರು ರೂಪಾಯಿಗಳನ್ನು ಕೈಯೊಡ್ಡದಿದ್ದರೂ ಹಿಂದುಜನರು ನಮಗೆ ಕೊಟ್ಟು ಹೋಗುತ್ತಿದ್ದರು. ಈತನು ಸ್ವತಃ ಯಾವುದನ್ನೂ ಮುಟ್ಟುತ್ತಿರಲಿಲ್ಲ; ಆದರೆ ಯಾರು ಏನೇನು ಇಟ್ಟುಹೋಗುತ್ತಿದರೋ ಆ ಎಲ್ಲ ಕಾಣಿಕೆಗಳನ್ನು ಒಟ್ಟುಗೂಡಿಸಿ, ಆತನೂ ಮಿಕ್ಕ ನಾವೆಲ್ಲರೂ ಕೂಡಿ ಹಂಚಿಕೊಳ್ಳುತ್ತಿದ್ದೆವು ಭಜನೆಯ ಕಾಲಕ್ಕೆ ಆಗುತ್ತಿದ್ದ ದಟ್ಟಣೆಯಲ್ಲಿ ನೂರಾರು ಮಂದಿ ಹಿಂದೂ ಹುಡುಗಿಯರನ್ನಾದರೂ ನಾವು ಕಳೆದ ಒಂದು ವರ್ಷದಲ್ಲಿ ಓಡಿಸಿ, ಗುಲಾಮಹುಸೇನ ಎಂಬ ಹೆಸರಿನ ಬಲೂಚಿಯ ಮೂಲಕ ಉತ್ತರದ ಕಡೆಗೆ ಸಾಗಿಸಿದೆವು. ಆ ಪ್ರತಿಯೊಂದು ಬೇಟೆಗಾಗಿ ನಮಗೆ ಪ್ರತ್ಯೇಕ ಇನಾಮು ದೊರೆಯುತ್ತಿತ್ತು. ಈತನು ಮುಸಲ್ಮಾನರನ್ನು ಲೂಟಿ ಮಾಡದಿರುವದನ್ನು ಬಹಿರಂಗವಾಗಿ ತೋರುತ್ತಿದ್ದರೂ, ಅದೂ ಕೂಡ ಈತನ ಪ್ರತ್ಯಕ್ಷ ಸಂಬಂಧವು ನಮ್ಮ ತಂಡದೊಡನೆ ಯಾವಾಗ ಆಯಿತೋ ಆಗ ಎಷ್ಟು ಸುಳ್ಳೆಂಬದು ನಮಗೆ ತಿಳಿಯಿತು. ಯಾವನೊಬ್ಬ ಮುಸಲ್ಮಾನನನ್ನು ಈತನು ಸುಲಿಯಬೇಕಾಗಿದ್ದರೆ, ಆತನಿಗೆ 'ಕಾಫರರ ದೋಸ್ತ' ಎಂದು ಬೈದು, ತನ್ನ ಪ್ರತಿಜ್ಞೆಯೊಳಗಿಂದ ಮುಕ್ತನಾಗುತ್ತಿದ್ದನು. ಆ ಅನುಕೂಲ ಶಾಸ್ತ್ರವು ನಮಗಾದರೂ ಮನಃಪೂರ್ವಕವಾಗಿ ರುಚಿಸುತ್ತಿತ್ತು. ಈತನು ಎಷ್ಟು ಕ್ರೂರನಿರುವನೋ ಅಷ್ಟೇ ವಿನೋದಿಯಾಗಿರುತ್ತಾನೆ; ಆದರೆ ಬಹುರೂಪ ಧರಿಸುವದರಲ್ಲಿ ಈತನು ಹೆಚ್ಚು ನಿಪುಣನಿರುವದರಿಂದ, ಈತನ ಮೂಲ ಸ್ವಭಾವವು ವಿನೋದಿಯೋ ಕ್ರೂರವೋ ಎಂಬದನ್ನು ನನಗೂ ಕೂಡ ಹೇಳಲಿಕ್ಕೆ ಬರುವದಿಲ್ಲ. ಹುಚ್ಚುಚ್ಚಾರದ ವೇಷಕ್ಕೂ ಈತನ ಈ ವಿನೋದೀ ಗುಣವು ಬಹಳೇ ಅನುಕೂಲವಾಗುತ್ತದೆ. ಅದು ಏನೇ ಇದ್ದರೂ ಈತನು

ಅತ್ಯಂತ ಕ್ರೂರ ಕೃತ್ಯ ಮಾಡುತ್ತಿರುವಾಗಲೇ ಈತನೊಳ್ಳೇ ವಿನೋದಿಯಾಗುವನೆಂಬದು ಮಾತ್ರ ಖಂಡಿತವು!

ಈತನ ಕ್ರೌರ್ಯದ ಬಗ್ಗೆ ನನಗೂ ಮೈ ಮೇಲೆ ಮುಳ್ಳೆದ್ದಂತಹ ಎರಡು ಪ್ರಸಂಗಗಳನ್ನು ನಾನು ಕಂಡ ಪ್ರತ್ಯಕ್ಷ ಪುರಾವೆಯೆಂದು ಹೇಳುತ್ತೇನೆ. ಖಾನ ದೇಶದೊಳಗಿನ ಯಾವ ಮುಸಲ್ಮಾನ ಡಾಕ್ಟರನ ಮನೆಯ ದರವಡೆಯು ಒಂದು ಆರೋಪವು ಈ ಖಟ್ಲೆಯಲ್ಲಿ ನಮ್ಮ ಮೇಲೆ ಮಾಡಲಾಗಿದೆಯೋ, ಆ ದರವಡೆಯಲ್ಲಿ ನಾನೂ ಇದ್ದೆನು. ನಾವು ಬಾಗಿಲು ಮುರಿದು ಒಳನುಗ್ಗುತ್ತಲೆ ಮಾಳಿಗೆಯ ಮೇಲಿಂದ ಪಾರಾಗಿ ನಡೆದಿದ್ದ ಡಾ. ರಹಿಮಾನ ಇವರ ಕಾಲ ಮೇಲೆ ಈತನು ಕೊಡ್ಲಿಯಿಂದ ಹೊಡೆದನು. ಕಾಲು ಕತ್ತರಿಸಿ ಬಿದ್ದಿತು. ಆ ಡಾಕ್ಟರನು ಅಲ್ಲಿಯೇ ಸತ್ತನು. ಆದರೂ ಕೂಡ ಈತನು ಕೊಡಲಿಯಿಂದ ಕಡಿಯುವ ತೋಷಾನಂದದಲ್ಲಿ ಗಟ್ಟಿಗಟ್ಟಿಯಾಗಿ ನಗುತ್ತ, ನಾನು ಬೇಡಬೇಡೆಂದು ಹೇಳುತ್ತಿರುವಾಗಲೇ ಆ ಡಾಕ್ಟರನ ದೇಹವನ್ನು ತುಂಡುತುಂಡಾಗಿ ಮಾಡಿದನು! ಇಷ್ಟರಲ್ಲಿ ಮಂಚದ ಕೆಳಗೆ ಅವಿತುಕೊಂಡಿದ್ದ ಆತನ ಎರಡು ಮಂದಿ ಮಕ್ಕಳು ಕಾಣಿಸಿದವು. ಅವು ಸುಮ್ಮನಿದ್ದವು. ನಾನು ಕಳವಳದಿಂದ “ಅವರ ಮೈಗೆ ಕೈ ಹಚ್ಚಬೇಡ. ಭಯದಿಂದ ಅವು ಅರಿಜೀವಿಗಳಂತೆ ಸುಮ್ಮನೆ ನಿಶ್ಚೇಷ್ಟಿತವಾಗಿ ಬಿದ್ದುಕೊಂಡಿವೆ” ಎಂದೆನು.

ಅದಕ್ಕೆ ಇವನು “ಸ್ಮೃತಿದಪ್ಪಿದಾಗ ಎಲ್ಲರೂ ಕಣ್ಣುಮುಚ್ಚಿಕೊಂಡು ಸುಮ್ಮನೆ ಬಿದ್ದುಕೊಂಡಿರುತ್ತಾರೆ; ಮತ್ತು ಆ ಮೇಲೆ ಕೋರ್ಟಿನಲ್ಲಿ ದರವಡೆಗಾರರಾರೆಂಬದನ್ನು ಆ ತೆರೆದ ಕಣ್ಣುಗಳೂ ಮಾತಾಡ ಬಂದ ಬಾಯಿಯೂ ಗುರ್ತುಹೇಳಿ, ನಿನ್ನ ಕುತ್ತಿಗೆಗೆ ಶೂಲ ತೋರಿಸುವವು.” ಎಂದಂದು, ಅದೇ ಕೊಡಲಿಯು ಒಂದೊಂದೇ ಹೊಡತದೊಡನೆ ಆ ಮಕ್ಕಳುಗಳ ಎರಡೆರಡು ತುಂಡು ಮಾಡಿಬಿಟ್ಟನು! ಆ ಘೋರ ಕೃತ್ಯ ನೋಡಿದೊಡನೆ ನನಗೂ ಕೂಡ ಬವಳಿ ಬಂದಿತು; ಆದರೆ ಆ ದರವಡೆಯಲ್ಲಿ ಹತ್ತು ಸಾವಿರ ರೂಪಾಯಿಗಳು ನಮ್ಮ ಕೈ ಸೇರಿದವು ಆದರಿಂದಲೇ ಆ ಬವಳಿಯ ಉನ್ಮಾದವು ನನ್ನ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಲಿಲ್ಲ!

ಎರಡನೇ ಯಾವ ದುಷ್ಟ ಘಟನೆಯನ್ನು ನಾನು ಪ್ರತ್ಯಕ್ಷ ನೋಡಿರುವೆನೋ, ಅದಂತೂ ಮೇಲಿನ ಉದಾಹರಣೆಯನ್ನು ಮೀರಬಹುದಾಗಿದೆ. ರಫೀಉದ್ದೀನನು ಯಾವಾಗಲೂ ಒಳ್ಳೇ ಡೌಲಿನಿಂದ ನನಗೆ ಹೇಳುತ್ತಿದ್ದನೇನೆಂದರೆ, ಇತ್ತೀಚೆಗೆ ತಾನು ಪ್ರತಿಯೊಂದು ವರ್ಷಕ್ಕೆ ಒಬ್ಬ ಸುಂದರ ತರುಣಿಯನ್ನಿಟ್ಟುಕೊಳ್ಳುತ್ತಿರುತ್ತೇನೆ. ವರ್ಷ ಮುಗಿದ ಕೂಡಲೆ ಅವಳನ್ನು ಕೊಲೆಗೆಯು

ಬೇರೆಯುವಳನ್ನಿಡುತ್ತೇನೆ! ಕೆಲ ಜನರು ತಮ್ಮ ಸತ್ಕೃತ್ಯಗಳನ್ನು ಬೇರೆಯುವರಿಗೆ ಹೇಗೆ ಪುಷ್ಟೀಕರಿಸಿ ಹೇಳುವರೋ ಹಾಗೆಯೇ ಈ ವಿಕ್ಷಿಪ್ತನು ತನ್ನ ದುಷ್ಕೃತ್ಯಗಳನ್ನು ಒಳ್ಳೇ ಡೌಲಿನಿಂದ ಪುಷ್ಟೀಕರಿಸಿ ಹೇಳುತ್ತಿದ್ದನು. ಆದ್ದರಿಂದ ಆತನ ಆ ರಾಕ್ಷಸೀ ಪ್ರತಿಜ್ಞೆಯು ನಿಜತ್ವವನ್ನು ನನ್ನಿಂದ ಹೇಳಲಾಗದು; ಆದರೆ ಈತನು ಖಾನದೇಶಕ್ಕೆ ಓಡಿ ಬಂದಾಗ ಮಾತ್ರ ಈತನೊಡನೆ ಬಿಹಾರದಿಂದ ಬಲಾತ್ಕಾರಪೂರ್ವಕವಾಗಿ ಓಡಿಸಿ ತಂದ ಒಬ್ಬ ಹಿಂದು ಕಾಯುಸ್ಥರ ತರುಣ ಕನ್ನಿಕೆಯಿದ್ದದ್ದು ನಿಜವು. ಅವಳು ಈತನ ಕಠಿಣ ಪಹರೆಯಲ್ಲಿರುತ್ತಿದ್ದಳು. ಆಕೆಯ ಮೇಲೆ ಈತನ ಪ್ರೇಮವು ಅತಿರೇಕವಾಗಿದ್ದಿತು. ಅದರಿಂದ ಈ ಮನುಷ್ಯನಷ್ಟು ಬೇರೆ ಯಾವನೂ ಮಮತೆಯ ಸ್ವಭಾವದವನಿರಲಿಕ್ಕಿಲ್ಲೆಂದೆನಿಸುತ್ತಿತ್ತು. ಅದರಂತೆಯೇ ಈತನು ನಮ್ಮ ತಂಡದ ಜನರೊಡನೆ ಇರುವ ವರೆಗೆ ಒಳ್ಳೇ ದೃಢಮೈತ್ರಿಯಿಂದಿರುತ್ತಿದ್ದನು. ಆ ತರುಣ ರಮಣಿಯಲ್ಲಿ ಈತನೊಳ್ಳೇ ಲುಬ್ಧನಿದ್ದರೂ ಕೂಡ ಆಕೆ ಮಾತ್ರ ದುಃಖದಿಂದ ಕೊರಗಿ ಸಾಯುವ ಪಂಥ ಹಿಡಿದಿದ್ದಳು. ಒಮ್ಮೊಮ್ಮೆ ಜೀವಕ್ಕುದಾರಳಾದಂತೆಯೂ ಭಾಸವಾಗುತ್ತಿತ್ತು. ಆಕೆಯೊಮ್ಮೆ ಹಿಂದೂ ಪದ್ಧತಿಯಿಂದ ದೇವರಿಗೆ ಕೈ ಜೋಡಿಸಿ ಪ್ರಾರ್ಥಿಸುತ್ತಿರುವದನ್ನು ರಫೀ ಉದ್ದೀನನು ಕಂಡನು. ಆತನು ಆಗ ಆಕೆಯನ್ನು ಅಪ್ಪಿಯಿಂದ ಬಿಗಿದಪ್ಪಿಕೊಂಡು: "ಪ್ರಿಯೇ, ನಿನಗೆ ಏನು ದೊರಕಬೇಕೆಂದು ನೀನು ನಿನ್ನೀ ಕಲ್ಲುದೇವರನ್ನು ಕುರಿತು ಪ್ರಾರ್ಥಿಸುತ್ತೀ?"

ಆ ಕೂಡಲೆ ಆಕೆಯು ಸಿಟ್ಟುಬೆಂಕಿಯಾಗಿ: "ನಿನಗೆ ಗಲ್ಲಾಗಬೇಕೆಂದು ಬೇಡಿಕೊಳ್ಳುತ್ತೇನೆ."

ಗಲ್ಲೆಂಬ ಶಬ್ದ ಕೇಳುತ್ತಲೆ ರಫೀ ಉದ್ದೀನನು ಬಾಲ ತುಳಿದ ನಾಗರ ಹಾವಿನಂತಾದನು! ಕ್ರೋಧದ ಆವೇಶ ಬಂದಾಗ ಆತನು ನಗುತ್ತಿರುವಂತೆ ನಕ್ಕು "ಓಹೋ! ಈಕೆಯ ವರ್ಷವು ಮುಗಿಯ ಬಂದಿತಲ್ಲವೆ?" ಎಂದಂದು, ನನ್ನನ್ನು ಕುರಿತು " ಈ ದಿನ ಸಾಯಂಕಾಲದಲ್ಲಿ ಹೊಳೆಯ ಧಡದಲ್ಲಿ ನಾನು ನಿನಗೊಂದು ಮೋಜು ತೋರಿಸುವೆನು. ಕಾನನದೊಳಗಿನ ಆ ಘಾಟದ ಎತ್ತರವಾದ ಬುರುಜಿನ ಮೇಲೆ ಹೋಗಿ ಕುಳಿತಿರು" ಎಂದು ಹೇಳಿದನು.

ಸಾಯಂಕಾಲದ ಸಮಯದಲ್ಲಿ ನಾನು ಆ ಅಡವಿಯೊಳಗಿನ ಹೊಳೆಯ ದಂಡೆಯ ಆ ಘಾಟಿನ ಮೇಲಿನ ಎತ್ತರವಾದ ಬುರುಜನ್ನು ಹತ್ತಿ ಕುಳಿತಿದ್ದೆನು. ಮಳೆಯು ಸರವಿನ ಮೇಲೆ ಸರವುಗಟ್ಟಿ ಸುರಿಯುತ್ತಿತ್ತು. ಹೊಳೆಗೆ ನೆರೆ ಬಂದು ಎರಡೂ ಕಡೆಯ ದಂಡೆಗಳನ್ನು ಮೀರಿ ಹರಿಯುತ್ತಿತ್ತು. ಆ ಗಿಡ-ಗಂಟೆ ಬೆಳೆದ ಕಾನನದೊಳಗಿನ ಘಾಟಿನ ಬುರುಜಿಗೆ ನೀರು ಬಡಿಯಹತ್ತಿ

ತೆಂದರೆ, ಆ ಹೊಳೆಗೆ ನೆರೆ ಬಂದಿತೆಂದು ತಿಳಿಯುತ್ತಿದ್ದರು. ಆ ಪ್ರಕಾರ ಆ ದಿನ ಹೊಳೆಯ ನೀರು ಆ ಬುರುಜಿಗೆ ತಾಕುತ್ತಿದ್ದಿತು. ಅಲ್ಪಾವಧಿಯಲ್ಲೇ ರಫೀ ಉದ್ದೀನನು ತನ್ನ ಆ ಸುಸ್ವರೂಪ ತರುಣಿಯೊಡನೆ ಅಲ್ಲಿಗೆ ಬಂದನು. ಅಂದು ಆತನು ಆಕೆಯ ಬುರುಕಿ ಕೂಡ ತೆಗೆದು, ಹಿಂದೂ ತರುಣಿಯರಂತೆ ಹೆಗಲ ಮೇಲೆ ಸೆರಗು ಇಳಿಬಿಡಿಸಿ, ನೆರೆಹಾವಳಿಯ ಮೋಜು ತೋರಿಸುವದಕ್ಕೆಂದು ತೀರ ಬಂಧಮುಕ್ತ ಸ್ಥಿತಿಯಲ್ಲಿ ಅವಳನ್ನು ಅಲ್ಲಿಗೆ ಕರೆತಂದಿದ್ದನು. ಎಷ್ಟೋ ದಿನಗಳ ತರುವಾಯ ಮುಖದ ಮೇಲಿನ ಆವರಣವು ಹೊರಟು ಹೋಗಿ, ಶುದ್ಧವಾಯುವು ಆಕೆಗೆ ಉಸುರಾಡಿಸಲು ದೊರೆತದ್ದರಿಂದ, ಆಕೆ ಕೊಂಚ ಸಮಾಧಾನಗೊಂಡವಳ ಹಾಗೆ ತೋರುತ್ತಿದ್ದಳು. ರಫೀ ಉದ್ದೀನನು ಅಚ್ಛದ ಹಾಗು ಮಮತೆಯ ಪರಾಕಾಷ್ಠೆಯಿಂದ ಆಕೆಯನ್ನು ಆರಾಧಿಸುತ್ತಿದ್ದನು. ನನ್ನೆದುರಿಗೆ ಅವಳನ್ನು ಹೀಗೆ ಬುರುಕಿಯಿಲ್ಲದೆ ಏಕಾಂತದಲ್ಲಿ ಕರೆತಂದುದು ನನಗೂ ಕೌತುಕವನ್ನುಂಟು ಮಾಡಿತು. ಅದರಲ್ಲಿಯೂ ಆತನು ವಿಷಯಾಂಧನಾದಂತಾಗಿ, ಆಕೆಯನ್ನು ಯಾವಾಗ ಒಮ್ಮೆ ಬಿಗಿದಪ್ಪಿಕೊಂಡನೋ ಆಗಂತೂ ನಾನು ಏನೆನ್ನಬೇಕು, ಏನು ಮಾತಾಡಬೇಕೆಂಬುದೇ ತಿಳಿಯದಾಯಿತು! ಆ ಸುಂದರ ತರುಣಿಯನ್ನು ಅವನಂತೆಯೇ ಆಲಿಂಗಿಸುವ ಬಗ್ಗೆ ನನ್ನ ಮನಸ್ಸಿನಲ್ಲಿಯೂ ಅನಿವಾರವಾದ ಇಚ್ಛೆಯುಂಟಾಯಿತು.

ತನ್ನ ಕೈಯಿಂದ ಆಕೆಯು ಬಿಡಿಸಿಕೊಳ್ಳಲಿಕ್ಕೆ ಯತ್ನಿಸುತ್ತಿರುವಾಗಲೆ ರಫೀ ಉದ್ದೀನನು ಅವಳನ್ನು ಮತ್ತೊಮ್ಮೆ ಅಪ್ಪಿಕೊಂಡು ಮೇಲಕ್ಕೆತ್ತಿದನು; ಹಾಗು ಎಡಹುಡುಗರನ್ನು ಎರಡೂ ಕೈಗಳಲ್ಲಿ ಮಲಗಿಸಿಕೊಳ್ಳುವಂತೆ ಅವಳನ್ನು ತಕ್ಕೊಂಡು "ಏ ಪ್ರಿಯೇ, ಎಲೇ ಪ್ರಿಯಕರಿಣೇ" ಮುಂತಾಗಿ ಅಂದು, ಆಕೆಯನ್ನು ತೂರಿದನು; ಮತ್ತು ಒಮ್ಮೆಲೆ ಆಕೆಯ ಸೀರೆಯನ್ನು ಕೊಸರಿ ಜಗ್ಗಿ, ಆಕೆಯನ್ನು ಬಹುತರವಾಗಿ ನಗ್ನಗೊಳಿಸಿದನು; ಮತ್ತು ಆ ಕಾಮೋನ್ಮತ್ತನು ನಿರ್ಲಜ್ಜೆಯಿಂದ ನನಗೆ ಹೇಳಿದನೇನಂದರೆ:—"ನೋಡು, ನೋಡು, ಈ ಅಪ್ಸರೆಯನ್ನು ಕಣ್ತುಂಬಾ ನೋಡಿಕೋ!"

ಈ ವಿಷಯಾಂಧನು ಈ ವಿಕೃತ ಲಹರಿಯಲ್ಲಿ ಈಕೆಯನ್ನೇನು ಮಾಡುವನೆಂದು ಕಾಮಾವೇಶದಲ್ಲಿ ನಡುಗುತ್ತಿರುವ ನಾನು ಆಕೆಯನ್ನು ಕಣ್ತುಂಬ ನೋಡುತ್ತಿರುವಾಗಲೇ, ನಾವು ಕಲ್ಲನ್ನು ತೂರಿ ಎಸೆಯುವಂತೆ ಆತನು ಆ ಹುಡುಗೆಯನ್ನು ಆ ಬುರುಜಿನ ಮೇಲಿಂದ ಆ ಹೊಳೆಯ ನೆರೆಹಾವಳಿಯಲ್ಲಿ ದೂರ ಎಸೆದುಬಿಟ್ಟನು! ಹಾಗು 'ಈಕೆಯ ವರ್ಷವು ಮುಗಿದಿತ್ತು!' ಎಂದಂದು ಗಟ್ಟಿಯಾಗಿ ನಕ್ಕುಬಿಟ್ಟನು!

'ರಾಕ್ಷಸಾ!' ಎಂದು ನಾನು ಒಮ್ಮೆಲೆ ಚೀರಿದೆನು.

'ಮೊದಲು ಆ ಮೋಜು ನೋಡು! ಅದನ್ನು ತೋರಿಸುವ ಸಲುವಾಗಿಯೇ ನಿನ್ನನ್ನು ಇಲ್ಲಿಗೆ ಬರಹೇಳಿದ್ದು' ಎಂದು ಆತನು ಹೇಳಿದನು.

ಆ ನಿರಪರಾಧಿಯಾದ ಸುಂದರ ತರುಣಿಯು ಎರಡುಸಾರೆ ಮುಳು-ಮುಳುಗಿ ಎದ್ದಳು; ಹಾಗು ಆನೆರಡು ಸಾರೆಯೂ ಆಕೆಯು ಕೂಡಲೆ ಕೆಳಗಿಳಿದಳು. ಆ ನೆರೆಹಾವಳಿಯಲ್ಲಿ ನದಿಯೊಳಗಿನ ಒಂದು ಬಂಡೆಗಲ್ಲು ಮೇಲೆ ಮುಖಮಾಡಿಕೊಂಡು ನಿಂತಿದ್ದಿತು. ಒಂದು ಪ್ರಚಂಡ ತೆರೆಯು ಅವಳನ್ನು ಅತ್ತ ಬಲವಾಗಿ ದೂಡಿತು. ಅದರ ಬಳಿಯಲ್ಲಿ ಆಕೆಯ ದೇಹವೂ ಅವಳ ಗುಲಾಬಿ ಬಣ್ಣದ ಸೀರೆಯೂ ಅಡಗಿಕೊಂಡವು. ಎತ್ತರದಲ್ಲಿ ತೂಗುಗಟ್ಟಿದ್ದ ಸುಂದರ ಕಾಜಿನ ದೀಪವು ಆಕಸ್ಮಾತ್ತಾಗಿ ಕೆಳಗೆ ಬಿದ್ದು ಒಡೆದಾಗ ಅದರ ಕಾಜಿನ ಚೂರುಗಳು ಹೇಗೆ ಕಣಕಣವಾಗಿ ಹಾರುವವೋ ಮತ್ತು ಅವುಗಳ ಜ್ಯೋತಿಯ ಕಿಡಿಗಳು ಹಬ್ಬಿ ಪರಕ್ಷಣದಲ್ಲಿ ಅವು ಹೇಗೆ ನೊಂದಿ ಹೋಗುವವೋ, ಅದರಂತೆಯೇ ಆ ಪ್ರಚಂಡ ತೆರೆಯು ಆ ಬಂಡೆಗಲ್ಲ ಮೇಲೆ ಅಪ್ಪಳಿಸುತ್ತಲೆ ಆ ಜಲೌಘದ ಅಚ್ಚ ಬಿಳೀಕಣಗಳು ಹಾರಿದವು; ಮತ್ತು ಆ ಅತ್ಯಂತ ಚೆಲುವೆಯಾದ ಗೌರವರ್ಣದ ತರುಣಿಯ ತಲೆಯು ಚೂರುಚೂರುಗಳಾಗಿ ಆಕೆಯ ಪಂಚಪ್ರಾಣಗಳು ಒಮ್ಮೆಲೆ ಹಾರಿ ಹೋದವು! ಅವಳು ಮತ್ತೆ ನೀರ ಮೇಲೆ ಬಂದದ್ದು ಕಾಣಿಸಲಿಲ್ಲ.

'ರಾಕ್ಷಸಾ ಇದೇನು ಮಾಡಿದೆ? ಮರಣದ ಮಡುವಿನಲ್ಲಿ ಆಕೆಯನ್ನೇಕೆ ಬಿಸುಟಿದೆ?' ಎಂದು ಶೋಕ-ತ್ವೇಷಗಳಿಂದ ಬೆಂದಿದ್ದ ನಾನು ಆತನಿಗಂದೆನು.

''ಹುಚ್ಚಾ! ಮರಣದ್ದಲ್ಲ; ಆಕೆಯ ಬಗ್ಗೆ ಹೇಳಬೇಕಾದರೆ, ಆಕೆಯ ಭಾಷೆಯಲ್ಲೇ ಮಾತನಾಡು. ಅವಳ ಸಂಸ್ಕೃತ ಭಾಷೆಯಲ್ಲಿ ನೀರಿಗೆ ಮರಣವೆನ್ನುತ್ತಿರುವದಿಲ್ಲ; ನೀರಿಗೆ ಜೀವನವೆನ್ನುತ್ತಾರೆ!! ನಾನು ಆಕೆಯನ್ನು ಜೀವನದ ಮಹಾಪೂರದಲ್ಲಿ ಎಸೆದೆನು'' ಎಂದಂದು, ನಕ್ಕು ಆತನು—''ಆಕೆಯು ಇಂದು ಸಾಯದಿದ್ದರೆ ನಾಳೆಯ ದಿನ ಗುಪ್ತ ಪೋಲೀಸರಿಗೆ ನನ್ನ ಪತ್ತೆ ತಿಳಿಸುತ್ತಿದ್ದಳು. ಮೂರ್ಖಾ, ನಿನಗೇನು ಗೊತ್ತಿದೆ?''

ಮಹಾರಾಜ! ನಾನು ಈತನಂಥ ಪರಮ ನೀಚನಿರದಿದ್ದರೂ ಪಾಪಕೃತ್ಯಗಳ ಚಟದವನಿದ್ದೆನು. ಆದರಲ್ಲಿಯೂ ಅಲೌಕಿಕ ಸತ್ಕೃತ್ಯಗಳಂತೆ ಅಲೌಕಿಕ ದುಷ್ಕೃತ್ಯಗಳಿಂದಲೂ ಮಂದಿಯ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡುವ ದುಶ್ಶಕ್ತಿಯು ಇದ್ದೇ ಇರುತ್ತದೆ. ಆದರ ಪರಿಣಾಮವು ನಮ್ಮ ಮೇಲಾಗಿ, ಈತನ ದುಷ್ಕೃತ್ಯಗಳ ಮೂಲಕ ನಮ್ಮ ಮೇಲಿನ ಈತನ ಪ್ರಭಾ

ವವು ಹೆಚ್ಚುತ್ತ ನಡೆಯಿತು; ಮತ್ತು ಈತನ ಯೋಗಾನಂದತ್ವದ ವೇಷದಲ್ಲಿಯೂ ನಮ್ಮಗಳ ಸ್ವಾರ್ಥವು ಯಥೇಚ್ಛವಾಗಿ ಸಾಧಿಸುತ್ತಿದ್ದದರಿಂದ ನಾವು ಈತನ ಸಹವಾಸದಲ್ಲಿಯೇ ಇದ್ದವು.

........ಬಳಿಕ ನಾವು ಮಥುರೆಗೆ ಬಂದೆವು. ಈತನು ಕರ್ಣಪುತಳಿ ಯಂತಹ ಒಂದು ಜಲಾದರ್ಶ ಯಂತ್ರದ ಢೋಂಗು ನಡೆಯಿಸಿದ್ದನು; ಮತ್ತು ಭೂತ-ಭವಿಷ್ಯ-ವರ್ತಮಾನ ಮುಂತಾದವುಗಳನ್ನು ಈತನು ಆ ಯಂತ್ರದ ಮೂಲಕ ತಪ್ಪದೇ ಹೇಳುವನೆಂದು ಅಲ್ಲಿ ನಾವು ಹುಲುಬು ಮಾಡಿದ್ದೆವು. ಎಲ್ಲಿಗೆ ಹೋದರೂ ನಾವು ಪರಸ್ಥರು, ವ್ಯಾಪಾರಿಗಳು, ಡಾಕ್ಟರರು, ವಕೀಲರು ಹೀಗೆ ಹೀಗೆ ವಿಧವಿಧದ ವೇಷಗಳಿಂದ ಬೇರೆ ಬೇರೆಯಾಗಿ ಊರಲ್ಲಿ ಅಡ್ಡಾಡು ತ್ತಿದ್ದೆವು; ಮತ್ತು ಯೋಗಾನಂದಜಿಯವರು ಇಂಥ ಚಮತ್ಕಾರವನ್ನು ನಮ್ಮ ಸಮಕ್ಷಮ ಮಾಡಿದರು, ಇಂಥ ಭವಿಷ್ಯವನ್ನು ತಪ್ಪದೆ ಹೇಳಿದರು. ಹೀಗೆ ಸುಳ್ಳು ಹುಲುಬು ಊರೊಳಗಿನ ಬೇರೆ ಬೇರೆ ಸ್ಥಳಗಳಲ್ಲಿ ಸ್ವತಂತ್ರ ರೀತಿ ಯಿಂದ ಹುಲುಬಿಸಹತ್ತಿದೆವು. ಯಾರಾದರೂ ತಮ್ಮ ಭೂತ-ಭವಿಷ್ಯತ್ತನ್ನು ಕೇಳಲಿಕ್ಕೆ ಹೊರಡುತ್ತಿರುವದೆಂಬದು ಗೊತ್ತಾದ ಕೂಡಲೆ ನಮ್ಮೊಳಗಿನ ಯಾರಾದರೊಬ್ಬರು ಒಬ್ಬ ಪರಸ್ಥ ಶ್ರೀಮಂತರೆಂದು ಆತನ ಬಳಿಗೆ ಹೋಗಿ ಆತನಿಗೇನಾದರೂ ಕೇಳಬೇಕು; ಮತ್ತು ಆತನು ಅದಕ್ಕೆನೊಂದು ಉತ್ತರ ವಿತ್ತರೂ "ಏನರಿ? ಪರಮ ಸೋಜಿಗ! ಎಂಥ ಅದ್ಭುತವಾದ ದೈವೀ ದೃಷ್ಟಿ ಯಿದು? ತಾವು ಹೇಳುವದು ಕೇವಲ ಸತ್ಯವಾಗಿದೆ!" ಹೀಗೆ ಆತನ ಸ್ತುತಿ ಗೈದು, ಒತ್ತಾಯದಿಂದ ಒಂದು ದೊಡ್ಡ ರಕಮನ್ನು ಆತನ ದೇವಸ್ಥಾನಕ್ಕೆಂದು ಕೊಟ್ಟು ಹಿಂದಿರುಗಬೇಕು; ಅಂದರೆ ಯಾರ ಎದುರಿನಲ್ಲಿ ನಾವು ಈ ಫಾರ್ಸು ಮಾಡುವೆವೋ ಆ ಮಂಡಲಿಯಲ್ಲಿಯ ಬಹುತರ ಸ್ತ್ರೀ-ಪುರುಷರು ವಿಶ್ವಾಸ-ಭೋಳೇತನಗಳ ಮಾನಸಿಕ ಸುಂಕುರೋಗಕ್ಕೆ ಖಂಡಿತವಾಗಿ ಬಲಿಬೀಳುತ್ತಿ ದ್ದರು. ಯಾವ ಪ್ರಶ್ನೆಗಳ ಬಾಬತು ಯೋಗಾನಂದನ ಉತ್ತರಗಳು ಸುಳ್ಳಾಗು ವವೋ ಅವುಗಳ ಕಡೆಗೆ ದುರ್ಲಕ್ಷಿಸಿ, ಯಾವವು ಯೋಗಾಯೋಗಗಳ ಮೂಲ ಕವೂ ಗೋಲಾರ್ಥದಿಂದಲೂ ನಿಜವಾಗುವವೋ ಅವುಗಳನ್ನೇ ನಾವು ಎಲ್ಲೆಲ್ಲಿ ಯೂ ಬೇರೆ ಬೇರೆ ರೀತಿಯಿಂದ ಹುಲುಬುತ್ತ ಅಡ್ಡಾಡಬೇಕು. ಮಥುರೆಯಲ್ಲೂ ನಮ್ಮ ಈ ಬಗೆಯ ಫಾರ್ಸುಗಳು ಭರಭರಾಟಿಗೆ ಬರಲು, ಡಾ. ನಾಯುಡೂ ಎಂಬ ಹೆಸರಿನ ಹೆಣ್ಣುಮಗಳು ನಮ್ಮ ಜಾಲದಲ್ಲಿ ಸಿಕ್ಕಳು. ಅವಳು ಮಾತಾ ಡುತ್ತಿರುವಾಗ ತನ್ನ ಋಣಾನುಬಂಧದ ನಾಗಪೂರ ಕಡೆಯ ಒಬ್ಬ ಹೆಣ್ಣು ಮಗಳ ಹಾಗು ಆಕೆಯ ಒಬ್ಬೊಂಟಿಗಳಾದ ಮಗಳ ಸಂಗತಿಯನ್ನು ತಿಳಿಸಿ

ದಳು; ಮತ್ತು ಅವರನ್ನು ಮಥುರೆಗೆ ಕರೆತಂದಿರುತ್ತೇನೆಂದೂ ಹೇಳಿದಳು.

ಆ ಸಂಗತಿಯನ್ನು ಕೇಳಿ ಆ ಯೋಗಾನಂದನು ನಕ್ಕನು. ಏಕಾಂತದಲ್ಲಿ ಆತನು ನನ್ನನ್ನು ಕುರಿತು:"ನಾನು ಕರಿನೀರಿಗೆ ಹೋದಾಗ ನನ್ನ ಜೊತೆಗೊಬ್ಬ ಸೈನ್ಯದೊಳಗೆ ಶಿಕ್ಷೆಹೊಂದಿ ಬಂದವನಿದ್ದನು. ಬೇರೆ ಯಾವನನ್ನೂ ನನ್ನ ಜೊತೆಗಿರಿಸದ್ದರಿಂದ, ನನ್ನ-ಅವನಲ್ಲಿ ಹೆಚ್ಚಾಗಿ ಸ್ನೇಹವುಂಟಾಯಿತು. ಅವನು ಮನೆಯ ಎಲ್ಲ ಸಂಗತಿಯನ್ನೂ ತನ್ನ ನನಗೆ ಆಗಾಗ್ಗೆ ಹೇಳಿರುತ್ತಾನೆ ಡಾ. ನಾಯಡೂ ಬಾಯಿಯು ನಾಗಪುರದ ಯಾವ ಹೆಣ್ಣುಮಗಳನ್ನು ಹಾಗು ಅವಳ ಮಗಳನ್ನು ಕರೆಯಿಸಿರುವೆನೆಂದು ಹೇಳಿರುವಳೋ, ಆಕೆಯೇ ಆ ಬಂದಿವಾನನ ತಾಯಿ; ಆ ನವತರುಣಿಯೇ ಆತನ ತಂಗಿಯಾಗಿರಲಿಕ್ಕೆ ಬೇಕು! ಡಾ ನಾಯಡೂ ಬಾಯಿಯು ಹೇಳಿದ ಸಂಗತಿಯೊಳಗಿನ ಹೆಸರು-ದೆಸೆಗಳೆಲ್ಲ ಆ ಬಂದಿಯು ತಿಳಿಸಿದ್ದ ಸಂಗತಿಗೆ ಸಂಪೂರ್ಣವಾಗಿ ಸರಿಹೋಗುತ್ತವೆ. ಅದೇ ಹುಡುಗಿಯೇ ಇವಳು! ಇವಳು ನನ್ನ ಆಧೀನಳಾದಳು! ನಾನು ಆಕೆಯನ್ನು ಆಲಿಂಗಿಸಿದೆನು ಸಹ! ಆ ನಾಯಡೂ ಬಾಯಿಯು ಆಕೆಯ ಹೆಸರೇನೆಂದು ಹೇಳಿದಳು? ಮಾಲಾ-ಮಾಲಾ-ಮಾಲತಿ? ಅಹುದೇ ಅಹುದು. ಅದೇ ಮಾಲತಿಯಿವಳು! ಎಲೆ ಮಾಲತೀ! ನಾನು ನಿನ್ನನ್ನು ಹತ್ತುತ್ತು ಸಾರೆ ಮಗ್ಗಲಲ್ಲಿ ಮಲಗಿಸಿಕೊಂಡಿರುತ್ತೇನೆ! ಮಾಲತಿ! ಮೋರೀ ಮಾಲತಿ!"

"ಎಲಾ, ನೀನು ಕರಿನೀರಿಗೆ ಹೋಗಿದ್ದೆಯಲ್ಲವೆ? ಮತ್ತು ಆಕೆಯನ್ನು ಮಗ್ಗಲಲ್ಲಿ ಮಲಗಿಸಿಕೊಂಡೆಯೆನ್ನುತ್ತಿರುವುದೇನು ಕನಸಿನಲ್ಲೋ? ಆಕೆಯ ಬರಿಯ ಹೆಸರಿನಲ್ಲೇ ನೀನಿಷ್ಟು ಲಂಪಟನು!" ಎಂದು ನಾನು ಉಪಹಾಸ ಪೂರ್ವಕವಾಗಿ ನುಡಿಯಲು, "ಹಸನ, ಹಿಂಸ್ರಪಶುವಿಗೆ ಮಾಂಸ ಕೊಡದೆ ಉಪವಾಸ ಕೂಡಿಡು. ಬಳಿಕ ನೆತ್ತರ ಹತ್ತಿದ ಒಂದು ಎಲುಬಿನ ತುಂಡನ್ನು ಅದರ ಮುಂದೆ ಚೆಲ್ಲು; ಅಂದರೆ ಆಗ ಆ ಹಿಂಸ್ರಪಶುವು ಆ ಎಲುಬನ್ನೇ ಎಷ್ಟು ಅಕ್ಕರತೆಯಿಂದ ಮತ್ತೆ ಮತ್ತೆ ಕಡಿಯುತ್ತದೆಂಬದನ್ನು ನೋಡು. ಹಾಗೆಯೇ ಕಾಮವಿಕಾರವು ಮನಸ್ಸಿನ ಪಂಜರದೊಳಗೆ ಎಲ್ಲಿ ವರ್ಷಾನುವರ್ಷ ಉಪವಾಸ ಬಂಧಿತವಾಗುವದೋ, ಆ ಕರಿನೀರಿನ ಮೇಲೆ ಸ್ತ್ರೀಯರ ಯಾವ ಹೆಸರು ಕಿವಿಗೆ ಬಿದ್ದೀತೋ ಆ ಹೆಸರೇ ಮನಸ್ಸಿನಲ್ಲಿ ಹೆಚ್ಚಾಗಿ ಬಿಂಬಿಸಲು, ಆ ಸ್ತ್ರೀಯು ಒಂದು ಮೂರ್ತಿಯಾಗಿ ಪರಿಣಮಿಸುವಳು; ಆ ಕಾಲ್ಪನಿಕ ಮೂರ್ತಿಯಲ್ಲೇ ಮನಸ್ಸು ಆ ಮೇಲೆ ಲಂಪಟವಾಗಿ ಬೀಳುತ್ತದೆ; ನಿಜವಾಗಲ್ಲದಿದ್ದರೂ ಕನಸಿನಲ್ಲಾದರೂ ಆಕೆಯೊಡನೇ ರಮಿಸುತ್ತದೆ! ಹಿಂದೂ ಜನರೊಳಗಿನ ಉಷೆಯ ಸುಂದರ ಆಖ್ಯಾನವನ್ನು ನೀನು ಕೇಳಿರುತ್ತೀಯೋನು? ಕನಸಿನೊಳಗಿನ ಪ್ರಿಯ ಪುರು

ಷನು ಆಕೆಗೆ ಪ್ರತ್ಯಕ್ಷ ಕಾಣಿಸುವ ಮನುಷ್ಯನಿಗಿಂತಲೂ ಹೆಚ್ಚು ವಿರಹವ್ಯಥೆಯು ನ್ನುಂಟುಮಾಡಿದನು. ಅದರಂತೆಯೇ ನನ್ನ ಅವಸ್ಥೆಯಾಯಿತು. ಆಗಾಗ್ಗೆ ಆ ಒಬ್ಬನೇ ಜೊತೆಗಾರನಾದ ಬಂದಿವಾನನೊಡನೆ ಮಾತಾಡುವ ಪ್ರಸಂಗ ಬಂದದ್ದರಿಂದಲೂ, ಆ ಸಂಭಾಷಣದಲ್ಲಿ ಉಸವರ ಹುಡುಗಿಯ ಸಂಬಂಧದ ಈಕೆಯ ಸಂಗತಿಯಷ್ಟೇ ಆಗಾಗ್ಗೆ ಹೊರಡುತ್ತಿದ್ದರಿಂದಲೂ, ನನ್ನ ಕೂಳಿಲ್ಲದ ಕಾಮೇಚ್ಛೆಗೆ ಆ ಕಾಲ್ಪನೀಕ ಹೆಸರಿನ ಯಾವ ಒಂದು ಪರಿಣಾಮ ವಾಯಿತೋ ಬೇರೆ ಯಾವ ಪ್ರತ್ಯಕ್ಷ ಸ್ತ್ರೀಯಿಂದಲೂ ಅಷ್ಟು ಪರಿಣಾಮ ಉಂಟಾಗಲಾರದು! ಮತ್ತು ಸೋಜಿಗವೆಷ್ಟು ನೋಡು; ಆ ಹೆಸರಿನ ಆ ಸ್ತ್ರೀಯು ಆ ಕಾಮಾತುರ ಕಲ್ಪನೆಯೇ ಇನ್ನೂ ಪ್ರತ್ಯಕ್ಷ ಸಂಭೋಗಿಸ ದೊರೆಯು ವುದು! ಹಸನ, ಖಂಡಿತವಾಗಿಯೂ ಇನ್ನು ಆಕೆಯನ್ನು ಓಡಿಸುವುದೇ!"

ಆಕೆಯನ್ನು ಓಡಿಸುವದು ಗೊತ್ತಾದ ಕೂಡಲೆ ನಾವು ನಮ್ಮ ನಿತ್ಯದ ಯುಕ್ತಿಯನ್ನು ಅನುಸರಿಸಿದೆವು. ಭಜನವು ಮುಗಿದು ಜನಸಮ್ಮರ್ದವು ಹಿಂದಿರುಗುವಾಗ ಮಾಲತಿಯು ತನ್ನ ತಾಯಿಯೊಡನೆ ಎಲ್ಲಿ ದಟ್ಟಣೆಯಲ್ಲಿ ಸಾಗಿದ್ದಳೋ, ಅಲ್ಲಿ ನಮ್ಮವರಲ್ಲಿಯೇ ಇಬ್ಬರು-ಮೂವರು ತೋರಿಕೆಯ ಬಡಿ ದಾಟಕ್ಕೆ ಪ್ರಾರಂಭಿಸಿದೆವು. ಆದರಿಂದ ದಟ್ಟಣೆಯಲ್ಲಿ ಗೊಂದಲವೆದ್ದಿತು. ಆಗ ಅವಳನ್ನು ಅವಳ ತಾಯಿಯಿಂದ ವಿಂಗಡಿಸಿದೆವು. ಆ ಮೇಲೆ ನಮ್ಮ ಯೋಗಾನಂದ ಗುರುವಿನ ಒಬ್ಬ ಶಿಷ್ಯನು ಏನೂ ಅರಿಯದವನಂತೆ ಆಕೆ ಯನ್ನು ಆಕೆಯ ಮನೆಗೆ ಕಳಿಸುವದಕ್ಕೆಂದು ಅವಳನ್ನು ತಕ್ಕೊಂಡು ಹೋಗಿ, ನೆಟ್ಟಗೆ ಗುಲಾಮಹುಸೇನನ ಬೀಡಾರಕ್ಕೇ ಒಯ್ದುಬಿಟ್ಟನು! ಆ ರಾತ್ರಿಯನ್ನು ಈ ದುಷ್ಟನು ಅಲ್ಲಿಯೇ ಮಾಲತಿಯನ್ನು ಬಲಾತ್ಕಾರದಿಂದ ತನ್ನ ಮಗ್ಗಲಲ್ಲಿ ಮಲಗಿಸಿಕೊಂಡು ಕಳೆದನು!

ಮರುದಿನ ಆ ಅಪಹರಣದ ಬೊಬ್ಬಾಟವೇನೂ ಆಗಬಾರದೆಂದು ಮಾಲತಿಯ ಆಪ್ತೇಷ್ಟರನ್ನು ನಾವು ಮಾಯಾ-ಮಮತೆಯ ಜಾಲದಲ್ಲಿ ಸಿಲು ಕಿಸಿ ದೂರದ ಯಾವುದೋ ಒಂದು ದಾರಿಗೆ ಕಳಿಸಿಬಿಟ್ಟೆವು. ಈ ಧೂರ್ತನಿಗೆ ಕರಿನೀರಿಗೆ ಹೋಗಿದ್ದಾಗ ಮಾಲತಿಯ ಅಣ್ಣನ ರೂಪ-ಬಣ್ಣ-ಕಲೆಗಳೆಲ್ಲವೂ ಗೊತ್ತಾಗಿದ್ದವು. ಇವನು ಆ ಸಂಗತಿಯನ್ನೆಲ್ಲ ಅಂತರ್ದೃಷ್ಟಿಯವನಂತೆ ಅವರಿಗೆ ತಿಳಿಸಿದನು. ಆತನ ತಾಯಿಗೆ ಕೂಡ ತನ್ನ ಮಗನ ಹಣೆಯ ಮೇಲಿದ್ದ ಕಲೆಯ ಬಗ್ಗೆ ನೆನಪಿರಲಿಲ್ಲ. ಅದನ್ನು ಇವನು ಯಾವಾಗ ಜಲಾದರ್ಶ ಯಂತ್ರ-ಮಂತ್ರಗಳ ಆಡಂಬರಮಾಡಿ ಅಂತರ್ಜ್ಞಾನದಿಂದ ತನಗೆ ಕಾಣುತ್ತ ದೆಂದು ತಿಳಿಸಿದನೋ, ಆಗಂತೂ ಆ ಭೋಳೇಭಾವಿಕ ಹೆಣ್ಣುಮಕ್ಕಳು

ಈತನ ದೈವೀ ಅಂತರ್ದೃಷ್ಟಿಯ ಬಗ್ಗೆ ಕೇವಲ ಮರುಳಾಗಿಹೋದರು! ಆ ಕೂಡಲೆ 'ಮಾಲತಿಯು ನಾಗಪುರ ಕಡೆಗೆ ತನ್ನೊಬ್ಬ ಗುಪ್ತ ಪ್ರಿಯಕರನ ಸಂಗಡ ಓಡಿಹೋಗಿರುತ್ತಾಳೆ. ಇಲ್ಲಿ ನೀವು ಆ ಬಗ್ಗೆ ಕೊಂಚವೂ ಬೊಬ್ಬಾಟ ಮಾಡದೆ, ಸುಮ್ಮನೆ ಅತ್ತ ಹೊರಟುಹೋದರೆ ಮಾತ್ರ ನೀವು ಆಕೆಯನ್ನು ಮರಳಿ ಹೊಂದಬಹುದು' ಎಂಬ ಭೂತ-ಭವಿಷ್ಯದ ಸಂಗತಿಗಳನ್ನು ಈತನು ತಿಳಿಸಿದನು. ಅದನ್ನು ನಂಬಿ ಅವರು ಮಥುರೆಯ ಪೋಲೀಸರಿಗೆ ಸುದ್ದಿ ಕೂಡ ಹೇಳದೆ, ನಾಗಪುರದ ಕಡೆಗೆ ಹೊರಟು ಹೋದರು. ನಾವೂ ಮಥುರೆಯಿಂದ ಪಲಾಯನ ಹೇಳಿಸುವ ಬೇತಿನಲ್ಲಿದ್ದೆವು; ಆದರೆ ಆಕಸ್ಮಿಕವಾಗಿ ಬೇರೆ ಪಾಪಕೃತ್ಯಗಳ ಪರಿಸ್ಫೋಟವಾಗಿ, ಅದರ ಈ ಫಲವನ್ನು ನಾವು ಭೋಗಿಸಬೇಕಾಯಿತು. ಈ ಅಲಹಾಬಾದದ ವಾರಂಟು ಹೊರಟು, ನಾವು ಆ ಕೂಡಲೆ ಪ್ರತಿಬಂಧಿಸಲ್ಪಟ್ಟೆವು. ಆ ಗೊಂದಲದಲ್ಲಿ ಆ ಉಪವರ ಮಾಲತಿಯನ್ನು ಕಟ್ಟಿಕೊಂಡು ಆ ರಾಕ್ಷಸ ಗುಲಾಮಹುಸೇನನು ಎತ್ತ ಮಾಯವಾದನೆಂಬದು ಇದುವರೆಗೆ ಯಾರಿಗೂ ತಿಳಿದಿಲ್ಲ. ಆ ಕೇವಲ ನಿಷ್ಪಾಪ, ನಿರಪರಾಧ, ಅಸಹಾಯ್ಯ, ಕೋಮಲ ಕನ್ನಿಕೆಯು ಅವನಿಂದ ಯಾವ ಯಾವ ವಿಡಂಬನೆಗಳನ್ನು ಹೊಂದಿರುವಳೋ, ಆತನು ಏನೇನು ಅತ್ಯಾಚಾರ ನಡೆಸಿರುವನೋ ದೇವರೇ ಬಲ್ಲ!"

ನ್ಯಾಯಸಂಯುತನಾಗಿದ್ದರೂ ಆ ನ್ಯಾಯಾಧೀಶನ ತುಟಿಗಳು ಸಿಟ್ಟಿನಿಂದ ಒತ್ತಟ್ಟಿಗೆ ಸ್ಫುರಣಗೊಂಡರೆ, ಇನ್ನೊತ್ತಟ್ಟಿಗೆ ಕಣ್ಣೊಳಗಿಂದ ಕರುಣಾಶ್ರುಗಳು ಟಪಟಪನೆ ಉದುರಹತ್ತಿದ್ದವು! ಶ್ರೋತೃಗಳಲ್ಲಿಯ ಹಲವರ ಕಣ್ಣುಗಳೂ ಅಶ್ರುಗಳಿಂದ ತುಂಬಿದವು. ಮತ್ತೊಬ್ಬನ ಕಣ್ಣೊಳಗಿಂದ ದಯೆಯ ಹನಿಗಳು ಒಂದೇಸವನೆ ಸುರಿಯುತ್ತಿದ್ದವು; ಆದರೆ ಆತನು ನ್ಯಾಯಾಧೀಶನೂ ಆಗಿರಲಿಲ್ಲ, ನ್ಯಾಯಾಲಯದೊಳಗಿನ ಶ್ರೋತೃವೂ ಆಗಿರಲಿಲ್ಲ. ಆತನು ಆರೋಪಿತ ದರವಡೆಗಾರರೊಳಗಿನವನೇ ಒಬ್ಬ ಆರೋಪಿಯು. ಪಶ್ಚಾತ್ತಾಪಗೊಂಡ ಕಿಶನ್ನನು!

ಆತನು ತೋರಿಕೆಯಲ್ಲಿ ಕುರೂಪಿಯು; ಮಾತಿನಲ್ಲಿ ವಾಚಾಳನಲ್ಲ; ವಯಸ್ಸಿನಿಂದ ತರುಣನು; ಮನಸ್ಸಿನಿಂದ ಕೋಮಲನು; ಮತ್ತು ವರ್ತನದಲ್ಲಿ ಒಗರಿನವನೂ ಆಗಿ ತೋರುತ್ತಿದ್ದನು. ಆತನು ತನ್ನ ಹೇಳಿಕೆ (Statement) ಹೇಳಲಿಕ್ಕೆ ಯಾವಾಗ ಎದ್ದನೋ, ಆಗ ತನ್ನ ಎದೆಯನ್ನು ಸೆಟಿಸಿ ನಿಂತುಕೊಂಡು, ಶಾಂತರೀತಿಯಿಂದ ಒಂದೊಂದೇ ಶಬ್ದವನ್ನು ಆರಿಸಿ ಆರಿಸಿ ಯೋಜಿಸುತ್ತ ಮತ್ತು ಮೇಲೆ ಉಲ್ಲೇಖಿಸಿದ ಮಾಲತಿಯ ವಿಡಂಬನೆಯ ಶ್ರವಣ

ದಿಂದ ಸುರಿಯುತ್ತಿದ್ದ ತನ್ನ ಕಣ್ಣೀರನ್ನೊರಸಿಕೊಳ್ಳುತ್ತ:—"ನಾನು ಕಾಶಿಯಲ್ಲಿ ವೇದಾಂತ ವಿದ್ಯೆ ಕಲಿಯುವ ಒಬ್ಬ ಅನಾಥ ವಿದ್ಯಾರ್ಥಿಯಿದ್ದೆನು. ನನ್ನ ಮನಸ್ಸಿಗೆ ವಿರಕ್ತಿಯುಂಟಾಗಿ, ಯಾವನಾದರೊಬ್ಬ ಗುರುವಿನ ಸಾನ್ನಿಧ್ಯದಲ್ಲಿ ಭಕ್ತಿ ಮತ್ತು ಯೋಗ ಇವುಗಳ ಕೆಲ ಸಾಧನೆ ಮಾಡಿಕೊಳ್ಳಬೇಕೆಂದೆನಿಸಿತು. ನಾನು ಮುಂದೆ ಮಥುರೆಗೆ ಹೋದೆನು. ಅಲ್ಲಿ ಅದೇ ಕಾಲಕ್ಕೆ ಈ ಯೋಗಾನಂದ ಗೋಸಾವಿಯ ಭಜನೆಯ ಹಾಗು ಅಂತರ್ಜ್ಞಾನದ ಒಳ್ಳೇ ಹುಲುಬು ಹಬ್ಬಿದ್ದಿತು. ಅದಕ್ಕೆ ಬಲಿಬಿದ್ದು ನಾನು ಇವನ ಶಿಷ್ಯನಾದೆನು. ನನಗೆ ಸಾರಂಗಿಯನ್ನು ಉತ್ತಮವಾಗಿ ನುಡಿಸಲು ಬರುತ್ತದೆ. ಭಜನೆಯೂ ಬರುತ್ತದೆ. ಆದ್ದರಿಂದ ನಾನು ಭಜನೆಯ ಕಾಲಕ್ಕೆ ಇವನ ಹಿಂದೆ ನಿಂತು ಸಹಾಯ ಮಾಡತೊಡಗಿದೆನು. ಒಂದು ವಾರ ಕೂಡ ದಾಟಿರಲಿಕ್ಕಿಲ್ಲ; ಅಷ್ಟರಲ್ಲಿ ಈ ತಂಡದೊಳಗಿನ ಕೆಲ ಜನರು 'ಈತನು ಹಿಂದುವು, ಹೊಸಬನು; ಅದಕ್ಕಾಗಿ ಈತನನ್ನು ಹತ್ತಿರಿರಗೊಡದೆ ದೂರಿರಿಸಬೇಕು.' ಹೀಗೆ ಗುಣಗುಟ್ಟುತ್ತಿರುವದು ನನಗೆ ಕೇಳಿಸಿತು. ಇವರೇನಾದರೂ ಗುಪ್ತ ಒಳಸಂಚುಗಳನ್ನು ನಡೆಸಿರುತ್ತಾರೆಂದು ನನಗೆ ಸಂದೇಹವುಂಟಾಯಿತು; ಆದರೆ ಈ ಯೋಗಾನಂದನೆನಿಸಿಕೊಳ್ಳುವ ಮನುಷ್ಯನ ಕಡೆಗೆ ನಾನು ಅಗ್ಗ ಗುರುದೇವನ ಭಾವನೆಯಿಂದ ನೋಡುತ್ತಿದ್ದ ಮೂಲಕವೂ, ಈತನ ಯಾವ ಅವಿವೇಕತನವೂ ನನಗೆ ಕಾಣಿಸದ್ದರಿಂದಲೂ ಬೇರೆ ಶಿಷ್ಯರ ಅಪರಾಧದ ದೋಷವನ್ನು ನಾನು ಈತನ ಮೇಲೆ ಹೊರಿಸಲಿಲ್ಲ. ಕರೆಯದ ಹೊರತು ನಾನು ಈತನ ಖಾಸಕೋಣೆಯಲ್ಲಿ ಅಥವಾ ಗುಪ್ತ ಸಂಭಾಷಣದಲ್ಲಿ ಪ್ರವೇಶಿಸಲಿಲ್ಲ. ಮುಂದೆ ಎರಡು-ಮೂರು ದಿನಗಳ ನಂತರ ರಾತ್ರಿ ಭಜನೆಯು ಮುಗಿದ ಬಳಿಕ ಜನರು ಹಿಂದಿರುಗುತ್ತಿರುವಾಗ ಗೊಂದಲವುಂಟಾಯಿತು. ಆ ರಾತ್ರಿಯಲ್ಲಿ ಯೋಗಾನಂದನು ನನ್ನನ್ನು ಕರೆದು ಹೇಳಿದನೇನಂದರೆ:—

"ಮಾಲತಿಯು ಈ ಗೊಂದಲದ ಮೂಲಕ ತನ್ನ ತಾಯಿಯಿಂದ ವಿಂಗಡಿತಳಾಗಿದ್ದಳೆ. ಇವಳನ್ನು ಇವಳ ಇಲ್ಲವೆ ನಾಯುಡೂ ಬಾಯಿಯ ಮನೆಗೆ ಸುರಕ್ಷಿತವಾಗಿ ಕಳಿಸಬೇಕು. ನಾಯುಡೂ ಬಾಯಿಯೊಡನೆ ಈಕೆಯು ಇಲ್ಲಿಗೆ ಯಾವಯಾವಾಗ ಬಂದಳೋ, ಆಗಾಗ ನಿನಗೇ ಇವರೊಡನೆ ಇವರ ಮನೆಗೆ ಕಳಿಸುತ್ತಿದ್ದೆನು. ಆದರಿಂದ ಇವಳ ನಂಬಿಗೆಯು ನಿನ್ನಲ್ಲಿರುವುದೆಂದು ಇವಳು ಅನ್ನುತ್ತಾಳೆ; ಮತ್ತು ನೀನು ಜೊತೆಗೆ ಇದ್ದೆಯೆಂದರೆ, ಈಕೆಯು ಈಗಲೆ (ಈ ರಾತ್ರಿಯಲ್ಲೇ) ನನ್ನ ಮೋಟರ ಡ್ರಾಯವ್ಹರನೊಡನೆ ನನ್ನ ಮೋಟರಿನಲ್ಲಿ ತನ್ನ ಮನೆಗೆ ತಿರುಗಿ ಹೋಗಲಿಚ್ಛಿಸುತ್ತಾಳೆ. ಆದಕಾರಣ ನೀನು ಇವಳನ್ನು

ಕರಕೊಂಡು ಹೋಗು."

ನಾನು ಅದಕ್ಕೇ ಸಂತೋಷದಿಂದ ಸಮ್ಮತಿಸಿದೆನು. ಮಾಲತಿಯೊಡನೆ ಹೋಗಿ ಮೋಟರಿನಲ್ಲಿ ಕುಳಿತುಕೊಂಡೆನು. ಆಕೆಯೊಡನೆ ಸಾಂತ್ವನದ ಮಾತುಗಳನ್ನಾಡುವದರಲ್ಲಿ ತೊಡಗಿದೆನು. ಅಷ್ಟರೊಳಗೆ ಆ ಮೋಟರು ಮಥುರೆಯ ಯಾವುದೊಂದು ಗುರ್ತಿಲ್ಲದ ಭಾಗದಲ್ಲಿ ಹೊಕ್ಕು, ಗುರುತಿಲ್ಲದ ಮನೆಯ ಎದುರಿಗೆ ಹೋಗಿ ನಿಂತುಕೊಂಡಿತು. ನಾನು ಆ ಬಗ್ಗೆ ಕೇಳಲು, ಮೋಟರ ಡ್ರಾಯವ್ಹರನು:—"ನಾಯುಡೂ ಬಾಯಿಯವರು ಇಲ್ಲಿಗೇ ಬರ ಹೇಳಿರುತ್ತಾರೆ. ಅವರು ಒಳಗೆ ಇರುತ್ತಾರೆ. ಹೊರಡೋಣಿನ್ನು" ಎಂದಂದನು. ಇಂಥ ಯಾವ ವಿಶ್ವಾಸಘಾತಕೀ ಹಾಗು ಪಾತಾಳಯಂತ್ರದ ಕಟ್ಟುಗಳ ಅತ್ಯಲ್ಪ ಪರಿಚಯವಾಗಲಿ ಶಂಕೆಯಾಗಲಿ ಇರದ್ದರಿಂದ, ಮೋಟರಿನೊಳಗಿಂದ ಇಳಿಯುವಾಗ ಮಾಲತಿಯು ನನ್ನನ್ನು ಒಳಗೆ ಕರೆಯುತ್ತಿದ್ದರೂ ನಾನು ಅವ ಳೊಡನೆ ಒಳಗೆ ಹೋಗದೆ, ಮೊಟರ ಡ್ರಾಯವ್ಹರನ ಸೂಚನೆಯ ಮೇರೆಗೆ ಕೂಡಲೆ ಹಿಂದಿರುಗಿದೆನು; ಆದರೆ ಆ ಮೇಲೆ ನನ್ನನ್ನು ಮಠದಲ್ಲಿ ಬರಗೊಡದೆ, ಬೇರೆ ಯಾವ ಒಂದು ಗುಡಿಯಲ್ಲಿ ಇಡಲಾಯಿತೋ, ಮರುದಿನ ರಾತ್ರಿ ಭಜ ನೆಯ ಕಾಲಕ್ಕೆ ಮಾತ್ರ ಹಿಂದೆ ಸಹಾಯ ಮಾಡುವದಕ್ಕೆಂದೇ ಆ ಸಭೆ ಯಲ್ಲಿ ಕರೆತಂದಾಯಿತು. ಆ ಸಭೆಯ ಕೊನೆಗೆ ಆ ತಂಡದೊಳಗೇ ನಾನಿರಲು, ನನ್ನನ್ನು ಪ್ರತಿಬಂಧಿಸಲಾಗಿದೆ. ಮಾಲತಿಯ ನಂಬುಗೆಗೆ ಅಪಾತ್ರನೂ ಸಹಾ ಯಕ್ಕೆ ಅಕ್ಷಮನೂ ಆದ ಬಗ್ಗೆ ನನಗೆ ಅತ್ಯಂತ ಖೇದವೆನಿಸುತ್ತದೆ. ನನ್ನ ದಾವುದಾದರೂ ಅಪರಾಧವಿದ್ದರೆ, ನನ್ನ ಅಭಿಪ್ರಾಯದ ಮೇರೆಗೆ ಇದೇ ಆಗಿದೆ! ನ್ಯಾಯಾಧೀಶರ ಅಭಿಪ್ರಾಯದಂತೆ ನಾನು ಯಾವ ಅಪವಾದಕ್ಕೆ ಗುರಿಯಾಗು ವೆನೋ ಆಗಲಿ!

ಆರೋಪಿಗಳೊಳಗಿನ ಎಲ್ಲರ ಹೇಳಿಕೆಗಳೂ ಪೋಲೀಸರ ಪುರಾವೆಯೂ ಆಗಿ ಖಟ್ಲೆಯ ಕೆಲಸವೆಲ್ಲ ಮುಗಿಯಬಂದಿತು; ಆದರೆ ರಫೀ ಉದ್ದೀನ ಅರ್ಥಾ ತ್ ಯೋಗಾನಂದನು ಸ್ವಂತದ ಸಂರಕ್ಷಣೆಯದೆಂದು ಇದುವರೆಗೆ ಏನೂ ಮಾತಾಡಿರಲಿಲ್ಲ. ಆಗಾಗ್ಗೆ ಚೇಷ್ಟೆಗಳನ್ನಷ್ಟೇ ಮಾಡುತ್ತ ನಗುತ್ತಿದ್ದನು ಮಾತ್ರ! ಆ ಎಲ್ಲ ಆರೋಪಿಗಳ ವತಿಯಿಂದಲೂ ಸರಕಾರವು ತಾನಾಗಿಯೇಒಬ್ಬ ವಕೀಲನನ್ನು ನಿಯಮಿಸಿದ್ದಿತು; ಆದರೆ ರಫೀ ಉದ್ದೀನನು ಆತನಿಗೆ ಕೂಡ ನಡುನಡುವೆ ಅವಮಾನಗೊಳಿಸುವದಕ್ಕಷ್ಟೇ ಆತನೊಡನೆ ಸಂಬಂಧವಿಡು ತ್ತಿದ್ದನು. ಆತನ ವಿರುದ್ಧವಾಗಿ ಆತನ ತಂಡದೊಳಗಿಂದ ಒಡೆದ ಸಾಕ್ಷಿದಾ ರರು ಆತನ ಕ್ರೂರ ಕೃತ್ಯಗಳ ಬಗ್ಗೆ ಯಾವ ಸಂಗತಿ ತಿಳಿಸಿದ್ದರೋ, ಆಗಲೂ

ಕೂಡ ಆತನು ಅವರ ಮೇಲೆ ಸಿಟ್ಟಾದಂತೆ ತೋರುತ್ತಿರಲಿಲ್ಲ. ನ್ಯಾಯಾಧೀಶನದು ಮಾತ್ರ ಆತನಿಗೆ ಹೆಚ್ಚಾಗಿ ಗುರುತಾದಂತೆ ತೋರುತ್ತಿತ್ತು. ಈ ಪೈಶಾಚಿಕ ಮನುಷ್ಯನ ಅಘಟಿತ ಮನಸ್ಸಿಗೆ-ಯಾವದೊಂದು ಶಾಸ್ತ್ರೀಯ ವಿಷಯವನ್ನು ಮನಸ್ಸುಗೊಟ್ಟು ಅಭ್ಯಾಸಿಸಲಿಕ್ಕೆಂದು ನ್ಯಾಯಾಧೀಶನು ಆತನೊಡನೆ-ಕೆದಕೆದರಿ ಪ್ರಶ್ನ ಮಾಡುತ್ತಿದ್ದನು. ಆತನನ್ನು ನಗಗೊಡುತ್ತಿದ್ದನು. ಮಾತಾಡಗೊಡುತ್ತಿದ್ದನು. ದಿಟ್ಟಿಸಿ ನೋಡುತ್ತಿದ್ದನು. ಕಟ್ಟಕಡೆಗೆ ಖಟ್ಲೆಯ ಕೆಲಸ ಮುಗಿಸುವ ಮೊದಲು ಮಾತ್ರ ಒಮ್ಮೆ ಆತನು ರಫೀ ಉದ್ದೀನನನ್ನು ಕುರಿತು: "ನಿನ್ನ ಮೇಲಿನ ಆರೋಪಗಳ ಬಗ್ಗೆಯೂ ಸಂರಕ್ಷಣದಬಗ್ಗೆಯೂ ನೀನು ಸ್ವತಃ ಏನಾದರೂ ಹೇಳುವದಿದೆಯೇನು?" ಎಂದು ಕೇಳಿದನು.

"ತುಸ ಹೇಳುತ್ತೇನೆ" ಎಂದು ಸಭೆಯ ಅತ್ಯಾಗ್ರಹಕ್ಕಾಗಿಯೇ ಮಾತನಾಡಲಿಕ್ಕೆಂದು ಎದ್ದೇಳುವ ಯಾವನೊಬ್ಬ ಪ್ರತಿಷ್ಠಿತ ಭಾಷಕನಂತೆ ಅಂದು, ರಫೀ ಉದ್ದೀನನು ಹಿಂದೀ ಉರ್ದುಭಾಷೆಯಲ್ಲಿ ಹೇಳತೊಡಗಿದನು:—"ಈ ಮೂವತ್ತು-ನಾಲ್ವತ್ತು ಜನ ಸಾಕ್ಷಿದಾರರು ನನ್ನ ಮೇಲೆ ಯಾವ ಅಸಭ್ಯ ಆರೋಪಗಳನ್ನು ಮಾಡಿರುವರೋ, ಇಂದು ಅವುಗಳು ನನಗೆ ಬೇರೆ ಬೇರೆಯಾಗಿ ನೆನಪು ಕೂಡ ಉಳಿದಿರುವುದಿಲ್ಲ. ಆದರಿಂದ ನಾನು ಅವುಗಳ ಪ್ರತ್ ಪ್ರತ್ಯೇಕಗಳಾದ ಉತ್ತರಗಳನ್ನೆಂತು ಕೊಡಲಿ? ಅವುಗಳನ್ನೆಲ್ಲ ಒಟ್ಟುಗೂಡಿಸಿ ಒಂದು ಸರ್ವಸಾಮಾನ್ಯವಾದ ಆರೋಪವೆಂದು ಹೇಳಬರುವಂತಹದೆಂದರೆ 'ನಾನೊಬ್ಬ ಭಯಂಕರ ಅಪರಾಧಿಯಿದ್ದು ನನಗೆ ಕಠಿಣತಮ ಕಠಿಣ ಶಿಕ್ಷೆ ಕೊಡುವುದೇ ನ್ಯಾಯ ಸಮ್ಮತವಾಗುವದು' ಆ ಸರ್ವಸಾಮಾನ್ಯ ಆರೋಪಕ್ಕೆ ನನ್ನ ಸರ್ವಸಾಮಾನ್ಯ ಉತ್ತರವಿಷ್ಟೇ, ನಾನು ಸಂಪೂರ್ಣ ನಿರ್ದೋಷಿಯಿದ್ದು, ನನಗೆ ಯಾವ ಶಿಕ್ಷೆಯನ್ನೂ ವಿಧಿಸದೆ, ನಿಷ್ಕಾರಣವಾಗಿ ನನಗಾದ ದುರ್ಲೌಕಿಕದ ಮಾರ್ಜನಕ್ಕೆಂದು ಒಂದು ಬಹು ದೊಡ್ಡ ರಕಮು ಪೋಲೀಸರಿಂದ ನನಗೆ ದೊರೆಯತಕ್ಕದ್ದೇ ನ್ಯಾಯವಾದೀತು. ಈ ಪೋಲೀಸರೂ ಈ ಆರೋಪಿಗಳೂ ನಾನು ಇಪ್ಪತ್ತು ಜನರನ್ನು ಕೊಲೆಮಾಡಿದೆನೆಂದೂ, ಇಷ್ಟು ಜನ ಕನ್ನಿಕೆಯರನ್ನು ಬಲಾತ್ಕಾರಪಡಿಸಿದೆನೆಂದೂ ಹೇಳುತ್ತಿರುವದನ್ನು ನೋಡಿದರೆ, ನಾನೊಬ್ಬ ಕಾದಂಬರಿಕಾರನೋ, ನಾಟಕ ಕರ್ತನೋ ಅಥವಾ ನ್ಯಾಯಾಧಿಪನೋ ಎನ್ನುವಂತಿದೆ! ತನ್ನ ಕಾದಂಬರಿಯ ಒಂದು ಪುಟದಲ್ಲಿ ಬೇಕಾದಂತಹ ಕನ್ನೆಯರ ಬೇಕಾದಂತಹ ಬರೀಬತ್ತಲೆ ವಿಟಂಬನೆಯನ್ನು ಬೇಕಾದವರಿಂದ ಮಾಡಿಸುತ್ತ, ತಾನು ಪರಭಾರೆ ಆ ಮಾನಸಿಕ ಕಾಮಚೇಷ್ಟೆಯನ್ನು ಸಭ್ಯತನದಿಂದ ಉಪಭೋಗಿಸುತ್ತಿರುವಾಗ; ಇಲ್ಲವೆ ತನ್ನ ನಾಟಕದ ಯಾವುದೊಂದು ಪ್ರವೇಶದಲ್ಲಿ

ರಂಗಭೂಮಿಯ ಮೇಲೆ ಹಿಡಿಸಲಾರದಷ್ಟು ಹೆಣಗಳನ್ನು ಪಟಪಟನೆ ಕೆಡ ಹುತ್ತಿರುವಾಗ; ಅಥವಾ ತನ್ನ ನಿರ್ಣಯ ಪತ್ರಕದ ಒಂದು ಕಲಮಿನಲ್ಲಿ 'ಗಲ್ಲು ಈ ಎರಡಕ್ಕರಗಳ ಕೊಳದಲ್ಲಿ ನೂರಿನ್ನೂರು ಜೀವಗಳನ್ನು ಜೀವಸಹಿತ ವಾಗಿ ಹುಗಿದು ಬಿಡುವಾಗ, ಸುರಿದರೆ ಅವರ ಲೆಕ್ಕಣಿಕೆಯೊಳಗಿಂದ ಸುರಿವ ಮಸಿಯ ಹನಿಗಳೇ ಸುರಿದಾವು; ಆದರೆ ಕಣ್ಣೊಳಗಿಂದ ಒಂದು ಹನಿ ಕೂಡ ಕಣ್ಣೀರು ಬೀಳಲಿಕ್ಕಿಲ್ಲ. ಇಂಥ ಯಾವನೊಬ್ಬ ಸಭ್ಯ ಕಾದಂಬರಿಕಾರನ ಹೊರತು, ಹೆಸರುಗೊಂಡ ನಾಟಕ ಕರ್ತನ ಹೊರತು ಅಥವಾ ಸದಯ ನ್ಯಾಯ ಮೂರ್ತಿಯ ಹೊರತು ಬೇರೆ ಯಾವನೊಬ್ಬ ಮನುಷ್ಯನು ಇಷ್ಟು ಭೀಷಣ ಕೃತ್ಯಗಳನ್ನು ಇಷ್ಟು ಸಹಜವಾಗಿ ಇಷ್ಟು ಲಗುಬಗನೆ ಹೇಗೆ ಮಾಡಿಯಾ ನೆಂಬದನ್ನು ನೀವೇ ಹೇಳಿರಿ ನೋಡೋಣ!"

"ಹಾಗಾದರೇನು? ಈ ಎಲ್ಲ ಪೋಲೀಸರೂ ಸಾಕ್ಷಿದಾರರೂ ಆರೋಪಿ ಗಳೂ ತಿಳಿದೂ ತಿಳಿದು ಒಕ್ಕಟ್ಟಿನಿಂದ ಈ ಎಲ್ಲ ಖೊಟ್ಟಿ ಆರೋಪಗಳನ್ನು ನನ್ನ ಮೇಲೆ ಮಾಡಿರುತ್ತಾರೆಂದು ನನ್ನ ಅಂಬೋಣವಿದೆಯೇ? ಹಾಗಲ್ಲ ಮಹಾ ರಾಜ! ನಾನು ಸ್ವಂತಕ್ಕೆ ಎಷ್ಟು ಪಾಪಭೀರುವೂ ಸಜ್ಜನನೂ ಎಂದು ತಿಳಿ ದಿರುವೆನೋ, ಅಷ್ಟೇ ಈ ಪೋಲೀಸಾದಿಕರನ್ನೂ ತಿಳಿಯುತ್ತೇನೆ. ನಾನೂ ನಿರ್ದೋಷಿಯು; ಇವರೂ ನಿರ್ದೋಷಿಗಳು. ಹಾಗಾದರೆ ಈ ಎಲ್ಲ ವಿಕ್ಷಿಪ್ತ ಗೊಂದಲವುಂಟಾದ ಕಾರಣವೇನು? ಆ ಕಾರಣವನ್ನು ಯಾವ ಒಂದೇ ಶಬ್ದ ದಲ್ಲಿ ಹೇಳಬಂದೀತೋ, ಯಾವ ಒಂದು ಶಬ್ದವನ್ನುಚ್ಚರಿಸುತ್ತಲೆ ಪೋಲೀ ಸರ ನನ್ನ ವಿರುದ್ಧವಾದ ಈ ಎಲ್ಲ ಬಲಿಷ್ಠ ಪುರಾವೆಯು ಖೊಟ್ಟಿಯೆಂದಾ ಗದಿದ್ದರೂ, ನನ್ನನ್ನು ನಿರ್ದೋಷಿಯೆಂದು ನಿಶ್ಚಯಿಸುವ ಗುರುಕೀಲವು ತಮ ವಿವೇಕಬುದ್ಧಿಗೆ ದೊರೆತೀತೋ ಆ ಶಬ್ದವೆಂದರೆ, ತಪ್ಪು ತಿಳುವಳಿಕೆ! ತಿಳು ಕೊಂಡದ್ದೇ ತಪ್ಪು!! ಮತ್ತು ಅದಕ್ಕೆ ಕಾರಣವೆಂದರೆ, ನನ್ನಲ್ಲಿ ನನ್ನ ಸರ್ವ ಥೈವ ನಿರುಪಾಯದಿಂದ ವಾಸಿಸಿರುವ ಅದೊಂದೇ ದೋಷವು! ದೇವರು ನನಗೆ ಯಾವನೊಬ್ಬ ಸಭ್ಯ, ಸದಯ ಹಾಗು ಸಬಕಾರ ಹಚ್ಚಿತೊಳೆದ ನ್ಯಾಯಾ ಧೀಶನಂತಹ ಮುಖವನ್ನೂ ದೇಹಯಷ್ಟಿಯನ್ನೂ ಕೊಡದೆ, ಯಾವನೊಬ್ಬ ಭಯಂಕರ ದರವಡೆಗಾರನಂತೆ ಕೊಟ್ಟಿರುತ್ತಾನೆ! ಆದರೆ ಈ ದೋಷದವುಟ್ಟಿಗೆ ನನಗೆ ಯಾವ ಶಿಕ್ಷೆ ವಿಧಿಸಬೇಕಾಗಿದೆಯೋ ಅದನ್ನು ನನಗೆ ಕೊಡದೆ, ಆ ದೇವರಿಗೇ ಕೊಡತಕ್ಕದ್ದು!"

ಪಂಜಾಬದಲ್ಲಿ ದರವಡೆ ಮಾಡಿ ಕರಿನೀರ ಮೇಲೆ ಹೋದ, ಕರಿನೀರಿ ನಿಂದ ಓಡಿ ಬಂದ, ಆ ಮೇಲೆ ಬಿಹಾರ-ಖಾನದೇಶಾದಿ ಪ್ರಾಂತಗಳಲ್ಲಿ ಅಕ್ರಮ.

ಅಪರಾಧಗಳ ಭೀಷಣ ಗೊಂದಲವೆಬ್ಬಿಸಿದ ಯಾವನೊಬ್ಬ ರಫೀ ಉದ್ದೀನ ಅಹಮ್ಮದ ಎಂಬ ಹೆಸರಿನ ಅಧಮಾಧಮನೂ ಹತ್ಯಾಕಾರಿಯೂ ನೃಶಂಸನೂ ಆದ ದರವಡೆಗಾರನ ಮುಖಲಕ್ಷಣಗಳಂತೆಯೇ ನನ್ನ ಮುಖವೂ ವ್ಯೈಕಟ್ಟೂ ದುರ್ದೈವದಿಂದ ಹೋಲುತ್ತಿರಲಿಕ್ಕೆ ಬೇಕು; ಮತ್ತು ಅದರಕ್ಕಾಗಿಯೇ ಈ ಎಲ್ಲ ಸಜ್ಜನರಿಗೆ ನಾನೇ ಆ ಪಾಪಿಯೆಂದು ಸಾತ್ವಿಕ ಸಂತಾಪದ ಭರದಲ್ಲಿ ಪ್ರಾಮಾಣಿಕತನದಿಂದ ಅನಿಸರಬಹುದಾಗಿದೆ!"

"ಮಹಾರಾಜ! ನನ್ನ ಹೇಳಿಕೆಯನ್ನು ಸಾಕಷ್ಟು ಪುರಾವೆಯಿಂದ ಸಿದ್ಧಗೊಳಿಸಲಿಕ್ಕೆ ನಾನು ಇಚ್ಛಿಸುತ್ತೇನೆ; ಆದುದರಿಂದ ಆ ಮೊಟ್ಟಮೊದಲಿನ ನಿಜವಾದ ಪಾಪಿ ದರವಡೆಗಾರ ರಫೀ ಉದ್ದೀನ ಅಹಮ್ಮದನು ನನಗೆ ದೊರಕುವ ವರೆಗಾದರೂ ನನ್ನನ್ನು ನಿರ್ದೋಷಿಯೆಂದು ಬಿಟ್ಟುಬಿಡಬೇಕು; ಇಲ್ಲದಿದ್ದರೆ ಪೋಲೀಸರಾದರೂ ಆತನನ್ನು ಹಿಡತರಬೇಕು; ಅಂದರೆ ಆತನನ್ನು ಕಂಡ ಕೂಡಲೆ ನನ್ನ ಅಂಬೋಣದ ಪ್ರತಿಯೊಂದು ಅಕ್ಷರವೂ ಕೂಡ ಹೇಗೆ ಸತ್ಯವಿದೆಯೆಂಬುದು ತಮ್ಮೆಲ್ಲರ ಲಕ್ಷ್ಯಕ್ಕೆ ಬಂದೀತು! ಮಹಾರಾಜ! ಆರೋಪಿಗೆ ಸ್ವಂತ ರಕ್ಷಣಕ್ಕಾಗಿ ಅವಶ್ಯಕವಾದ ಪುರಾವೆ ದೊರಕಿಸಿಕೊಡಲಿಕ್ಕೆ ಶಕ್ಯವಾದಷ್ಟು ಸಹಾಯ ಮಾಡುವದು ನ್ಯಾಯಾಧೀಶರ ಕರ್ತವ್ಯವಾಗಿರುತ್ತದೆ; ಮತ್ತು ನನಗೆ ನನ್ನ ಯಾವ ಒಂದು ಪುರಾವೆ ಕೊಡುವದಿದೆಯೋ, ಅದನ್ನು ಕೊಡುವ ಸಲುವಾಗಿ ಯಾವ ಸಹಾಯವನ್ನು ನಾನು ಕೋರುವೆನೋ, ಅದನ್ನು ಕೊಡುವದು ತೀರ ಶಕ್ಯವಾಗಿದೆ. ನನ್ನನ್ನು ನಿರ್ದೋಷಿಯೆಂದು ಬಿಟ್ಟು ಬಿಟ್ಟ ಕೂಡಲೆ ನಾನು ಆ ನಿಜವಾದ ರಫೀ ಉದ್ದೀನನನ್ನು ಹಿಡತರುತ್ತೇನೆ! ಇಲ್ಲದಿದ್ದರೆ ನಾನು ಆತನ ಸಾಕ್ಷಿಯನ್ನೇ ಕೊಡುತ್ತೇನೆ. ತಾವು ಕೋರ್ಟ ಮಾರ್ಫತ ಆತನಿಗೆ ಶಮನು ಮಾಡಿ ಕರೆತರುವ ವರೆಗೆ ನನ್ನನ್ನು ಜಾಮೀನಿನ ಮೇಲೆ ಬಿಡಿರಿ! ಆಯಿತು. ನನ್ನದಿಷ್ಟೇ ಸಂರಕ್ಷಣವು. My Defence!" ಬಳಿಕ ಪೋಲೀಸರ ಕಡೆಗೆ ಹೊರಳಿ, "ಕ್ಯಾಂ ದಸ ಸೋನಾರಕೀ, ಔರ ಏಕ ಲೋಹಾರಕೀ! ಹೈ ಕೀ ನಹಿ?" ಎಂದಂದು, ಗಲ್ಲದೊಳಗೇ ಕಿರಿನಗೆ ನಕ್ಕು, ಆ ರಫೀ ಉದ್ದೀನ ಅಥವಾ ಯೋಗಾನಂದನು ಕೆಳಗೆ ಕುಳಿತನು.

ನ್ಯಾಯಾಲಯದೊಳಗಿನ ಜನರ ಇದುವರೆಗಿನ ಅವರಿಸಲ್ಪಟ್ಟಿದ್ದ ನಗೆಯು ಕಡಿಮೆಯಾಗುವವರೆಗೆ ನ್ಯಾಯಾಧೀಶನು ಅಖಂಡ ಲೆಕ್ಕಣಿಕೆಯ (ಫೌಂಟನ್ ಪೆನ್ನಿನ) ಬುಡವನ್ನು ತುಟಿಗೆ ಹಚ್ಚಿಕೊಂಡು, ಛತ್ತಿನ ಕಡೆಗೆ ವಿಚಾರಪೂರ್ವಕವಾಗಿ ನಿರೀಕ್ಷಿಸುತ್ತಿದ್ದನು. ಆ ಮೇಲೆ ಮತ್ತೆ ಕೇಳಿದನೇನಂದರೆ,

"ಎಲವೋ, ರಫೀ ಉದ್ದೀನ ಅರ್ಥಾತ್ ಯೋಗಾನಂದ! ನಿನಗೆ ಕೆಲವು ಸಾಮಾನ್ಯ ಮಾಹಿತಿಯ ಪ್ರಶ್ನೆಗಳನ್ನು ಈಗಲೂ ಕೇಳಬೇಕೆಂದಿರುತ್ತೇನೆ. ನೀನು ಸತ್ಯ ಹಾಗು ಸುಸಂಬದ್ಧ ಉತ್ತರಗಳನ್ನು ಕೊಟ್ಟರೆ, ಅದರಲ್ಲಿ ನಿನ್ನದೇ ಹಿತವಿರುತ್ತದೆ."

ಆ ಆರೋಪಿಯು ಕೈಜೋಡಿಸಿ ಎದ್ದು ನಿಂತು, ನಮ್ರವಾಗಿ—"ಮಹಾ ರಾಜ, ಕೇಳಬಹುದು"

"ನಿನ್ನ ನಿಜವಾದ ಹೆಸರೇನು?" "ಯೋಗಾನಂದ ಗೋಸಾವಿ."

"ನೀನು ಏನು ಉದ್ಯೋಗ ಮಾಡುತ್ತಿದ್ದೆ? ನಿನ್ನ ಕಸಬೇನು?"

"ಕಸಬು-ಉದ್ಯೋಗವೆಂಬುದಾವದೂ ನನಗೆ ಇರಲೇ ಇಲ್ಲ. ದೇವರ ಭಜನೆಯನ್ನಷ್ಟು ಮಾಡುತ್ತಿದ್ದೆನು."

"ಈ ಆರೋಪಿಗಳಲ್ಲಿಯ ಕೆಲವರು ದರವಡೆಗಾರರು ನಿನ್ನ ಶಿಷ್ಯರಾಗಿದ್ದ ರೆಂಬದು ನಿಜವೇ?"

"ಇವರಲ್ಲಿ ಕೆಲವರು ನನ್ನ ಶಿಷ್ಯರಾದುದೇನೋ ನಿಜವು; ಆದರೆ ಇವರು ದರವಡೆಗಾರರಿರುವರೋ ಇಲ್ಲವೋ ಇದು ನನಗೇನು ಗೊತ್ತು?"

"ಅದಿರಲಿ ನಿನ್ನ ವಿರುದ್ಧವಾಗಿ ಸಾಕ್ಷಿಕೊಡುವ ಈ ಹಸನಭಾಯಿಯು ನಿನ್ನ ಗುರುತಿನವನಷ್ಟೆ? ಈತನ ಬಗ್ಗೆ ನಿನಗೇನೇನು ಮಾಹಿತಿಯಿದೆ?"

"ಈತನನ್ನು ನಾನು ಗುರುತಿಸುತ್ತೇನೆ; ಆದರೆ ಈತನ ಆ ಹೆಸರನ್ನು ಮಾತ್ರ ಗುರ್ತಿಸುವದಿಲ್ಲ! ಅದು ಜೇಲಿಗೆ ಬಂದ ನಂತರವೇ ನನಗೆ ಕೇಳಿಸ ಹತ್ತಿದೆ. ಈತನ ವಿಷಯಕ ನನಗಿರುವ ಮಾಹಿತಿಯೇನಂದರೆ, ಈತನು ತನ್ನ 'ರಾಮುಲಾಲ' ಎಂಬ ಹೆಸರನ್ನು ಹೇಳಿ ನನ್ನ ಶಿಷ್ಯನಾಗಿದ್ದುದೇ ಮೊದ ಲನೇ ಸಂಗತಿ; ಮತ್ತು ಎರಡನೇ ಸಂಗತಿಯೆಂದರೆ, ಈತನಿಗೆ ಭಂಗಿ, ಗಾಂಜಿ ಹಾಗು ಸೆರೆ ಮುಂತಾದ ಮಾದಕ ದ್ರವ್ಯಗಳ ವ್ಯಸನವು ಹೆಚ್ಚಾಗಿ ಇದೆ. ಅವು ಗಳ ನಿಶೆಯಲ್ಲಿ ಈತನಿಗೆ ಇಲ್ಲದ ಸಲ್ಲದ ಆಭಾಸಗಳಾಗುತ್ತವೆ. ಆ ನಿಶೆಯಲ್ಲಿ ಎಲ್ಲರಿಗೂ ಹಾಗಾಗುತ್ತದೆ; ಆದರೆ ಈತನ ವೈಶಿಷ್ಟ್ಯವೇನಂದರೆ, ನಿಶಯೊಳ ಗಾದ ಆ ಆಭಾಸಗಳ ಪರಿಣಾಮವು ಈತನ ಚಿತ್ತದ ಮೇಲೆ ಭೂತಗಳ ಪರಿ ಣಾಮವು ಅಂಜುವವರ ಮೇಲೆ ಹೇಗಾಗುವದೋ ಹಾಗೆ ಬಹು ಚೆನ್ನಾಗಿ ಆಗುವದರಿಂದ, ಎಚ್ಚತ್ತ ನಂತರವೂ ಈತನಿಗೆ ಅವು ಆಭಾಸಗಳಲ್ಲ, ಸತ್ಯ ಘಟನೆಗಳೇ Facts ಆಗಿದ್ದವೆಂದು ಖಂಡಿತವಾಗಿ ಅನಿಸುತ್ತದೆ. ನನ್ನ ಬಗ್ಗೆ ಈತನು ನಿಜವೆಂದು ಏನೇನು ಹೇಳಿದನೋ, ಅವೆಲ್ಲವೂ ಈತನ ಗಾಂಜಿಯ ಗುಂಗಿನೊಳಗಿನವೂ ಭಂಗಿಯ ನಿಶಯೊಳಗಿನವೂ ಆದ ಆಭಾಸಗಳೇ ಆಗಿವೆ.

ಜೇಲಿನೊಳಗೂ ಈತನಿಗೆ ಭಂಗಿ, ಗಾಂಜಿ, ಸೆರೆಗಳು ದೊರಕಿರದಿದ್ದರೆ, ಪೋಲೀಸರು ಈತನಿಗೆ ಆ ಗುಂಗಿನಲ್ಲಿ ಹೇಳಿದ್ದ ಎಲ್ಲ ಸುಳ್ಳು-ಸೊಟ್ಟ ಸಂಗತಿಗಳು ನಿಜವೇ ಎಂದೆನಿಸಿದೆ, ಇವನು ಅವುಗಳನ್ನು ತನ್ನ ಸಾಕ್ಷಿಯಲ್ಲಿ ಹೀಗೆ ಪುರಾಣ ಹೇಳುವವರಂತೆ ಕೊಚ್ಚಿಕೊಳ್ಳುತ್ತಿರಲಿಲ್ಲ."

"ಒಳ್ಳೇದು. ನಿನಗೆ ಮಾಲತಿಯ ಮಾಹಿತಿಯಿದೆಯೊ?"

"ಇರದೇನು? ಮಹಾರಾಜ! ನೀವು ಅದನ್ನೇನು ಕೇಳುತ್ತೀರಿ? ಮಾಲತಿಯು ನನಗೆ ಚೆನ್ನಾಗಿ ಗೊತ್ತಿರುತ್ತಾಳೆ. ಇಷ್ಟೇ ಅಲ್ಲ, ಅವಳು ನನಗೆ ಹೆಚ್ಚಾಗಿ ರುಚಿಸುತ್ತಾಳೆ."

"ಮಾಲತಿಯನ್ನು ನೀನು ಮೊದಲು ಎಲ್ಲಿ ಕಂಡೆ?"

"ರಾಣಿಯ ತೋಟದಲ್ಲಿ! ಮುಂಬಯಿಯೊಳಗಿನ ವ್ಹಿಕ್ಟೋರಿಯಾ ಗಾರ್ಡನ್ನಿನಲ್ಲಿ. ಅಲ್ಲಿ ಅವಳನ್ನು ನಾನು ಮೊಟ್ಟಮೊದಲು ನೋಡಿದಾಗಲೆ ಆಕೆಯು ನನಗೆ ಹೆಚ್ಚು ರುಚಿಕರಳಾಗಿ ತೋರಿದ್ದರಿಂದ, ನಾನು ಅವಳದೊಂದು ಕಲಮು ತಂದು, ನನ್ನ ಸ್ವಂತದ ತೋಟದಲ್ಲಿ ಹಚ್ಚಿದೆನು. ಮಹಾರಾಜ! ನನಗೆ ಮಲ್ಲಿಗೆ-ಜಾಜಿಗಳಿಗಿಂತಲೂ ಮಾಲತಿಯು ಅತಿಶಯವಾಗಿ ರುಚಿಸುತ್ತಾಳೆ. ಭಜನೆಯ ಕಾಲಕ್ಕೆ ನಾನು ಮಾಲತೀ ಪುಷ್ಪದ ಹಾರವನ್ನಷ್ಟೇ ನನ್ನ ಕೊರಳಿಗೆ ಹಾಕಿಕೊಳ್ಳುತ್ತಿದ್ದೆನು. ಅದೊಳ್ಳೇ ಪ್ರಿಯ ಗಿಡವಾಗಿರುವದಲ್ಲವೆ?"

ಇಚ್ಛೆ ಇರದಿದ್ದರೂ ಶ್ರೋತೃಗಳದಷ್ಟೇ ಅಲ್ಲ, ನ್ಯಾಯಾಧೀಶನ ಮೋರೆಯ ಮೇಲೂ ಆ ನಿಗರಗಟ್ಟ ಆರೋಪಿಯ ಆ ಅನಪೇಕ್ಷಿತ ಕೋಟಿಕ್ರಮದ ಮೂಲಕ ನಗುವು ಸಹಜವಾಗಿಯೇ ತೋರದೆ ಇರಲಿಲ್ಲ. ಅದನ್ನು ಕೂಡಲೆ ಹತ್ತೊತ್ತಿಕೊಂಡು, ನ್ಯಾಯಾಧೀಶನು:—

"ನೀನು ನಿನಗೆ ಭೂತ-ಭವಿಷ್ಯ-ವರ್ತಮಾನ ಹೇಳುವ ಅಂತರ್ದೃಷ್ಟಿಯು ಜ್ಞಾನವಿರುವದೆಂದು ಹೇಳಿ ಜನರನ್ನು ಮೋಸಗೊಳಿಸುತ್ತಿದ್ದುದು ನಿಜವೇನು?"

"ಮಹಾರಾಜ! ನಾನು ದೇವರ ಭಜನೆಯಲ್ಲಿ ತಲ್ಲೀನನಾದ ಕೂಡಲೆ ನನ್ನ ಅಂತರ್ದೃಷ್ಟಿಯು ಎದುರಿಗೆ ಇಚ್ಛಾಮಾತ್ರದಿಂದ ಭೂತ-ಭವಿಷ್ಯಗಳ ಚಿತ್ರಪಟ ನಿಲ್ಲುತ್ತಿರುವುದೇನೋ ತೀರ ಸತ್ಯವು; ಆದರೆ ನಾನು ಅದರ ಬಗ್ಗೆ ಜನರಲ್ಲಿ ಹುಲುಬಿ, ಜನರನ್ನು ಮೋಸಗೊಳಿಸಿರುತ್ತೇನೆಂಬದು ಮಾತ್ರ ತೀರ ಸುಳ್ಳು. ನನ್ನ ಭವಿಷ್ಯಗಳು ನಿಜವಾಗುವವೋ ಸುಳ್ಳಾಗುವವೋ ಎಂಬದನ್ನು ಕೂಡ ನಾನು ಯಾರಿಗೂ ಕೇಳುತ್ತಿರಲಿಲ್ಲ; ನಾನು ಯಾರೊಡನೆಯೂ ಹೆಚ್ಚಾಗಿ ಮಾತು ಕೂಡ ಆಡುತ್ತಿರಲಿಲ್ಲ. ನಾನು ಜನರನ್ನು ಠಕ್ಕಿಸಿಲ್ಲ;

ತದ್ವಿರುದ್ಧವಾಗಿ ಒಬ್ಬರು ಮತ್ತೊಬ್ಬರನ್ನು ಠಕ್ಕಿಸಿದ್ದೇ ನಿಜವಾದರೆ, ನನ್ನಂಥ ಭೋಳೇಭಾವಿಕ ಗೃಹಸ್ಥನನ್ನು ಈ ಲಫಂಗ ಬದ್‌ಮಾಷ ಜನರೇ ಠಕ್ಕಿಸಿರುತ್ತಾರೆಂದು ಈಗ ನನಗನಿಸಹತ್ತಿದೆ; ಯಾಕೆಂದರೆ, ಸಾಧುಶೀಲ ಶಿಷ್ಯರೆಂದು ನನ್ನ ಸುತ್ತುಮುತ್ತು ನೆರೆದು, ಈ ಲಫಂಗರು ನನ್ನ ಹೆಸರಿನಿಂದ ನನಗೆ ಗೊತ್ತಾಗದಂತೆ ಗುರುಬಾಜಿಯ ದಂಭವನ್ನು ಬೀರಿ, ಎಷ್ಟು ಜನರನ್ನು ಸುಲಿದರು, ಛಲನಗೊಳಿಸಿದರು, ಠಕ್ಕಿಸಿದರು ಎಂಬದನ್ನು ದೇವರೊಬ್ಬರೇ ಬಲ್ಲನು! ನನ್ನ ಲಕ್ಷ್ಯವೇ ಅತ್ತಕಡೆಗಿರಲಿಲ್ಲ.''

''ಆ ನಿನ್ನ ಅಂತಃಚಕ್ಷುವು ಇಂದಿಗೂ ತೆರೆದಿರುತ್ತದೇನು? ತೆರೆದಿದ್ದರೆ, ಈಗಿಂದೀಗಲೆ ನನ್ನ ವಿಷಯದ ಒಂದೆರಡು ಭವಿಷ್ಯಗಳನ್ನು ಹೇಳುತ್ತೀಯಾ?''

''ಅಹುದು ಸರಕಾರ! ಆ ಎದುರಿಗಿನ ಕಂಬವು ಹೇಗೆ ನಮ್ಮ-ನಿಮ್ಮ ಕಣ್ಣುಗಳಿಗೆ ಈಗ ಸ್ಪಷ್ಟವಾಗಿ ಕಾಣುತ್ತಿದೆಯೋ, ಅದರಂತೆಯೇ ತಮ್ಮ ಭವಿಷ್ಯದೊಳಗಿನ ಎರಡು ಸಂಗತಿಗಳಂತೂ ನನ್ನ ಅಂತಃಚಕ್ಷುಗಳೆದುರಿಗೆ ನಿನ್ನಿನಿಂದ ತೀರ ಸ್ಪಷ್ಟವಾಗಿ ಕಾಣಿಸಹತ್ತಿರುತ್ತವೆ. ಆ ಭವಿಷ್ಯಗಳನ್ನು ನಾನೇ ಇಷ್ಟರಲ್ಲಿ ತಮಗೆ ಹೇಳತಕ್ಕವನಿದ್ದೆನು. ಆದರೆ........''

''ಆದರೆ ಆ ಎರಡು ಭವಿಷ್ಯಗಳು ಸಟಿಯಾದರೆ?''

''ಅಂದರೆ ನೀವು ನನಗೆ ನಿಮ್ಮ ಮೂರನೇ ಭವಿಷ್ಯವನ್ನು ಕೇಳಬೇಡಿರಿ! ಅಂದರಾಯಿತಲ್ಲವೆ?''

''ಒಳ್ಳೇದು. ಹೇಳು ನೋಡೋಣ, ನನ್ನ ವಿಷಯದ ಆ ನಿನ್ನ ಎರಡು ಭವಿಷ್ಯಗಳನ್ನಾದರೂ. ಇಬ್ಬಗೆಯ ಅರ್ಥದ ಕಾರಣಿಕ ಭಾಷೆಯಲ್ಲಿ ಮಾತ್ರ ಹೇಳಬೇಡ ತೀರ ಸ್ಪಷ್ಟ ಅರ್ಥವಾಗುವ ಹಾಗೆ ಗಟ್ಟಿಯಾಗಿ ಹೇಳಿಬಿಡು!''

''ತೀರ ಸ್ಪಷ್ಟವಾದ, ಸರಳವಾದ, ಅನ್ವಯ ಹತ್ತುವ ಭಾಷೆಯಲ್ಲೇ ಮಹಾರಾಜ, ತಮಗೆ ಶುಭವಾಗಿರುವ ಒಂದು ಭವಿಷ್ಯವನ್ನು ವರ್ಣಿಸುತ್ತೇನೇನೆಂದರೆ, ತಮ್ಮ ಮೃತ್ಯುವನ್ನು ತಮ್ಮ ಕಣ್ಣುಗಳಿಂದಲೇ ನೋಡುವ ದುಃಖದ ಪ್ರಸಂಗವು ತಮಗೆಂದೂ ಒದಗಲಾರದು! ಇನ್ನು ಎರಡನೇ ಭವಿಷ್ಯವಾದರೂ ಅಷ್ಟೇ ದಿಟವಾದದ್ದು; ಆದರೆ ನನಗೆ ಅಶುಭವಿರುವ ಆ ಭವಿಷ್ಯವೇನಂದರೆ, ಈ ಖಟ್ಲೆಯ ಠರಾವಿನಲ್ಲಿ ತಾವು ನನ್ನನ್ನು ನಿರ್ದೋಷಿಯೆಂದು ನಿಶ್ಚಯಿಸಿ ಬಿಡಲಾರಿರಿ!! ತಮ್ಮಲ್ಲಿ ಎದೆಗಾರಿಕೆಯೇ ಇದ್ದರೆ, ಈ ನನ್ನ ಭವಿಷ್ಯವನ್ನು ಸಟಿಗೊಳಿಸಿ ತೋರಿಸಿರಿ, ನೋಡೋಣ!''

ಆಗಿನ ಆ ನಿಗರಗಟ್ಟಿ ಆರೋಪಿಯ ಆ ತೋರಿಕೆಯ ವೀರರಸದ ಹಾಗು ಆ ಮೋಸದ ಕಿರುನಗೆಯ ಆವಿರ್ಭಾವವನ್ನು ನೋಡುತ್ತಿರುವಾಗ

ಗಾಂಭೀರ್ಯವನ್ನು ಕಳಚಿಕೊಂಡು ಖೊ-ಖೊಕ್ಕೆಂದು ಗಟ್ಟಿಯಾಗಿ ನಗದ ಹೊರತು ಆ ನ್ಯಾಯಾಲಯದಲ್ಲೂ ಯಾರಿಂದಲೂ ಸುಮ್ಮನಿರಲಾಗಲಿಲ್ಲ. ಚಿಂತೆಯಿಂದಲೂ ಭಯದಿಂದಲೂ ಥರಗುಟ್ಟಿ ನಡುಗುತ್ತಿದ್ದ ಆರೋಪಿಗಳೂ ಕೂಡ ನಕ್ಕರು. ಆ ಜನಸಮೂಹದಲ್ಲಿ ನಗದೆಯಿದ್ದವನೆಂದರೆ, ಕಿಶನನೊಬ್ಬನೇ!

ಆ ಖಟ್ಲೆಯೊಳಗಿನ ಆರೋಪಿಗಳಿಗೆ ನಗುವಂತಹ ಪ್ರಸಂಗವು ಅದೇ ಕೊನೆಯದಾಗಿತ್ತು. ನಗನಗುತ್ತ ಮಾಡಿದ್ದ ಭಯಂಕರ ಪಾಪಗಳ ಭಯಂಕರ ಫಲಗಳನ್ನುಣ್ಣುವ ಕಾಲವು ತೀರ ಈಗ ಸಮೀಪಿಸಿತ್ತು? ಯಾಕೆಂದರೆ ನ್ಯಾಯಾಧೀಶನು ಆ ದಿನದ ಕೆಲಸ ಮುಗಿಸಿದವನೇ ಎದ್ದನು; ಹಾಗು ಖಟ್ಲೆಯ ಶೇಷಭಾಗವನ್ನು ತೀರಿಸಿಕೊಂಡು 'ಇಂದಿನಿಂದ ನಾಲ್ಕನೇ ದಿವಸ ತೀರ್ಪು ಹೇಳಲಾಗುವದು.' ಎಂದು ಸಾರಿಬಿಟ್ಟನು!

---

## ೭ನೇ ಪ್ರಕರಣ.

ಇಡೀ ಭೂಮಂಡಲದಲ್ಲಿ ಯಾವ ಖಾಲ್ಡಿಯನ್, ಗ್ರೀಕ, ಪಾರಶೀ, ಯಹುದೀ, ಖ್ರಿಸ್ತೀ, ಮುಸಲ್ಮಾನೀ ಮುಂತಾದ ಧರ್ಮಕ್ಷೇತ್ರಗಳಿವೆಯೋ, ಅವುಗಳಿಗಿಂತ ಅತ್ಯಂತ ಪ್ರಾಚೀನವಿದ್ದರೂ ಅತ್ಯಂತ ಆಧುನಿಕ ಕಾಲದವರೆಗೂ ತನ್ನ ಮಹತ್ವ ಮತ್ತು ಆಕರ್ಷಣಗಳನ್ನು ಅಬಾಧಿತವಾಗಿರಿಸಿಕೊಂಡ ಹಾಗು ದ್ವಾಪರದಲ್ಲಿ ಹೇಗೋ ಇಂದೂ ಹಾಗೆಯೇ ಕೋಟಿಗಟ್ಲೆ ಹಿಂದುಗಳ ಜ್ಞಾನ ತೀರ್ಥವಾಗಿರುವ ಶ್ರೀ ಕಾಶೀಕ್ಷೇತ್ರದ ಸಮೀಪದ ಒಂದು ಉಪವನದಲ್ಲಿ ಏಕಾಂತವಾಗಿ ಪ್ರವಹಿಸುತ್ತಿರುವ ಗಂಗಾನದಿಯ ದಂಡೆಯಲ್ಲಿ ಒಂದು ಪ್ರಾಚೀನ ಘಾಟವಿದ್ದಿತು. ಸಮೀಪದಲ್ಲಿ ಜನವಸತಿಯೆಂಬುದಿರಲೇ ಇಲ್ಲ. ಒಂದು ಚಿಕ್ಕ ಮಹಾದೇವರ ಹಾಳು ಗುಡಿಯೂ ಅದರ ಬಳಿಯಲ್ಲಿ ಕೆಲ ಬಿಲ್ವದ ಹಾಗು ಸಂಪಿಗೆಯ ಹಳೇ ಗಿಡಗಳೂ ಇಷ್ಟೇ ಆ ಸ್ಥಳದೊಳಗಿನ ದರ್ಶನೀಯ ಅಲಂಕಾರವಾಗಿದ್ದಿತು.

ಯಾವಳೊಬ್ಬ ಮಹಾರಾಣಿಯು ರಾಜಸಭೆಯೊಳಗಿನ ಸಾಮಂತ ನೃಪತಿಗಳ, ಸೇನಾಪತಿಗಳ, ಮಂತ್ರಿಮಂಡಲದವರ ಮಾನ-ಸನ್ಮಾನಗಳನ್ನು ರಾಜಕೀಯ ಪದ್ಧತಿಯ ಮೇರೆಗೆ ಹಗಲೆಲ್ಲ ಸ್ವೀಕರಿಸಿ ದಣಿದ ನಂತರ, ಸಾಯಂಕಾಲದಲ್ಲಿ ತನ್ನ ಅಂತಃಪುರಕ್ಕೆ ಬಂದು, ಕೂದಲು ಬಿಚ್ಚಿಕೊಂಡು ಅಲಂಕಾರ, ವೇಷ ಮುಂತಾದವುಗಳನ್ನು ತೆಗೆದಿಡುವಳು; ಹಾಗು ತೀರ ಸಾದಾ ಮನೆಯಲ್ಲುಡುವ ಸೀರೆ-ಕುಪ್ಪಸಗಳನ್ನುಟ್ಟುಕೊಂಡು ಏಕಾಂತದುದ್ಯಾನದಲ್ಲಿ ಮನ ದಣಿಯಾಗಿ ಪುಷ್ಪಗಳ ಗಿಡ-ಬಳ್ಳಿಗಳೊಳಗೆ ಅಡ್ಡಾಡಬೇಕೆಂದೆನಿಸಿದರೆ ಅಲ್ಲಿ

ಅಡ್ಡಾಡುವಳು; ಕೋಚದ ಮೇಲೆ ಅಡ್ಡಾಗಬೇಕೆಂದೆನಿಸಿದರೆ ಅಡ್ಡಾಗುವಳು. ಇದೇ ಮೇರೆಗೆ ಭಾಗೀರಥಿಯು ಕಾಶೀಪಟ್ಟಣದೊಳಗಿನ ಸಾರ್ವಜನಿಕ ಘಾಟು ಗಳ ಮೇಲೆ ಲಕ್ಷಗಟ್ಲೆ ಭಕ್ತಜನರ, ರಾಜ-ಮಹಾರಾಜರ, ಸೈನಿಕರ, ಪುರೋ ಹಿತ-ಪಂಡೆಗಳ ಪೂಜೆ-ಪುರಸ್ಕಾರಗಳನ್ನು ಒನಪು-ಒಯ್ಯಾರಗಳಿಂದ ಸ್ವೀಕರಿ ಸುತ್ತ ಬಂದ ನಂತರ, ಇನ್ನು ಈ ಸಂಧ್ಯಾಕಾಲದಲ್ಲಿ ಆ ಏಕಾಂತ ಸ್ಥಳದಲ್ಲಿ ಮನ ಬಂದಂತೆ ಹರಿಯುತ್ತಿದ್ದಳು ಎದುರಿಗಿನ ಆಕಾಶದಲ್ಲಿ ಅಸ್ತಮಾನ ಸೂರ್ಯನು ಕೆಂಪು ಗುಲಾಬೀ ಬಣ್ಣದಿಂದ ಸೂಸಮುಟ ತುಂಬಿದ ಪಶ್ಚಿಮ ಕ್ಷಿತಿಜದ ಕುಂಡದೊಳಗಿಂದ ಬಣ್ಣ-ಬಣ್ಣಗಳನ್ನು ಹಾರಿಸುತ್ತ, ಬಣ್ಣಗಳನ್ನು ಜೀಕಳಿ ಯಿಂದ ಚಿಮ್ಮುತ್ತ, ಪಶ್ಚಿಮದಿಕ್ಕನ್ನು ಕೇವಲ ಓಕಳಿ ಹಬ್ಬದ ಕ್ಷೇತ್ರವನ್ನಾಗ ಮಾಡಿಬಿಟ್ಟಿದ್ದನು.

ಆ ಏಕಾಂತಸ್ಥಳದಲ್ಲಿ ಆ ಪ್ರಾಚೀನ ಘಾಟಿನ ಮೇಲೆ, ಆ ಭಾಗೀರಥಿಯು ಸಲಿಲ ಸಂಥ ಪಾತ್ರದಲ್ಲಿ ಒಬ್ಬ ಬ್ರಾಹ್ಮಣ ಯುವಕನು ಸ್ನಾನವಿಧಿಯ ಮಂತ್ರ ಗಳನ್ನುಚ್ಚರಿಸುತ್ತ ಆ ಸಂಧ್ಯಾಕಾಲದಲ್ಲಿ ತನ್ನ ಸಾಯಂ ಸ್ನಾನವನ್ನು ಮಾಡು ತ್ತಿದ್ದನು. ಸ್ನಾನಕ್ಕೆ ಮೊದಲೇ ಆತನು ತನ್ನ ಬಟ್ಟೆ-ಬರೆಗಳನ್ನೆಲ್ಲ ತೊಳೆದು, ಆ ಶಿವಾಲಯದ ಸುತ್ತುಮುತ್ತಲಿರುವ ಸಂಪಿಗೆಯ ಗಿಡಗಳ ಮೇಲೆ ಆರ ಹಾಕಿದ್ದನು. ಸ್ನಾನವು ಮುಗಿದೊಡನೆ ಮೈ ಮೇಲಿನ ಒದ್ದೆ ಪಂಜೆಯಿಂ- ದಲೇ ಆತನು ಸೂರ್ಯನಿಗೆ ಅರ್ಘ್ಯಪ್ರದಾನ ಮಾಡಿದನು. ಆ ಮೇಲೆ ಆತನು ಅರೆವಾಸಿಯಾಗಿ ಆರಿದ್ದ ಒಗೆದ ಬಟ್ಟೆಗಳನ್ನು ಧರಿಸಿಕೊಂಡು, ಕೆಲ ಬಿಲ್ವದಳ ಗಳನ್ನೂ ಸಂಪಿಗೆಯ ಹೂಗಳನ್ನೂ ಹರಿದುಕೊಂಡು ಮಹಾದೇವನ ಗುಡಿಯೊ ಳಗೆ ಹೋಗಿ ಅಲ್ಲಿಯ ಶಿವಲಿಂಗಕ್ಕೆ ಅವುಗಳನ್ನು ಭಕ್ತಿಭಾವದಿಂದ ಅರ್ಪಿಸಿ, ತನ್ನ ಮನಸ್ಸಿನಲ್ಲಿಯೇ ಪ್ರಾರ್ಥಿಸಿದನೇನಂದರೆ:—

"ದೇವಾ, ನನ್ನ ಮೂರ್ಖತನದಿಂದ ನನ್ನ ಮೇಲೆ ಬಂದ ಆರೋಪದ ನಿರಸನವಾಗಿ, ಆ ರಾಕ್ಷಸೀ ಯೋಗಾನಂದನ ಪಂಜರದೊಳಗಿಂದ ನನ್ನ ಬಿಡು ಗಡೆ ಮಾಡಿದೆ. ಆ ಪಾಪಿಯ ಸಂಸರ್ಗದೋಷದಿಂದ ನನ್ನ ಮೇಲೆ ಬಂದಿದ್ದ ದರವಡೆಯ ಹಾಗು ಮಾನವ ಕೊಲೆಯ ಭಯಂಕರ ಆರೋಪಗಳೊಳಗಿಂದ ನ್ಯಾಯಾಧೀಶನು ಸಂಪೂರ್ಣ ನಿರ್ದೋಷಿಯೆಂದು ನನ್ನನ್ನು ಬಿಟ್ಟದ್ದು ನಿನ್ನ ಕೃಪೆಯಿಂದಲೇ. ಆ ದುಷ್ಟರು ಒಡ್ಡಿದ್ದ ಗಂಡಾಂತದೊಳಗಿಂದ ನಿರಪರಾಧಿ ಯೆಂದು ನನ್ನ ಪುನರ್ಜನ್ಮವಾದದ್ದು ನಿನ್ನ ನ್ಯಾಯದ ಲೌಕಿಕ ಮೆರೆಯಿಸುವ ನಿನ್ನದೇ ಈ ಕೃಪೆಯು"

"ಆದರೆ ದೇವಾ, ನ್ಯಾಯದ ದಯೆಯು ಕೂಡ ನಿಷ್ಪಕ್ಷಪಾತಿಯೇ

ಇರಬೇಕಲ್ಲವೆ?" ಎಂದೆಂದು ಆತನು ತಡವರಿಸುತ್ತ—"ಅಂದಬಳಿಕ ನನಗಿಂತ ಲೂ ತೀರ ನಿರಪರಾಧಳಾದ ಆ ಕುಮಾರಿಕೆಯು ದಯೆಯು ನಿನಗಿನ್ನೂ ಏಕೆ ಬರಲಿಲ್ಲ? ನ್ಯಾಯಾಧೀಶನು ನನ್ನನ್ನು ಈ ಖಟ್ಲೆಯೊಳಗಿಂದ ನಿರ್ದೋಷಿ ಯೆಂದು ಬಿಡುಗಡೆ ಮಾಡಿದ್ದರೂ ನನ್ನ ಮನಸ್ಸು ನನ್ನದೊಂದು ದೋಷ ಕ್ಕಾಗಿ ಒಂದೇಸವನೆ ಕಟಿಯುತ್ತಿದೆ! ನನ್ನ ಕೈಯಿಂದ ತಿಳಿಯದಲೇ ಏಕಾಗ ಲೊಲ್ಲದು, ಆದರೆ ಮಾಲತಿಯನ್ನು ಆಕೆಯು ಮನೆಗೆ ಕಳಿಸುವದನ್ನು ಬಿಟ್ಟು, ಆ ಯಾವದೊಂದು ಮನೆಗೆ-ಅದು ಅವಳ ಮನೆಯಲ್ಲವೆಂಬದನ್ನು ತಿಳಿದೂ ತಿಳಿದು-ನಾನು ಅವಳನ್ನು ಅಲ್ಲಿ ಬಿಟ್ಟುಬಂದೆನು. ಅವಳು 'ಒಳಗೆ ನನ್ನೊಡನೆ ಬಾ' ಎಂದೆನ್ನುತ್ತಿದ್ದರೂ ಅಸಮರ್ಥನೀಯ ನಂಬಿಗೆಯಿಂದ ಅವಳೊಡನೆ ಆ ಯಾವುದೊಂದು ಮನೆಯೊಳಗೆ ಹೋಗಲಿಲ್ಲ; ಮತ್ತು ಕೆಲವಂಶದಿಂದಾದರೂ ಆ ದುಷ್ಟ ನರಪಶುವಿನ-ಆ ಗುಲಾಮ ಹುಶೇನನ-ಕೈಯೊಳಗೆ ಆ ಅಸ ಹಾಯ್ಯ ಕುಮಾರಿಕೆಯನ್ನೊಪ್ಪಿಸಿ ಬರುವ ದೋಷಕ್ಕೆ ನಾನು ಭಾಗಶಃ ಹೊಣೆಗಾರನಾದೆನು! ತಿಳಿದು ಆಗದಿದ್ದರೂ, ಯಾವದು ನನಗೆ ತಿಳಿಯ ಬೇಕಿದ್ದಿತೋ, ಯಾವುದನ್ನು ತಿಳಕೊಳ್ಳುವದು ಆಗ ನಾನು ಸ್ವೀಕರಿಸಿದ್ದ ಕರ್ತವ್ಯದಲ್ಲಿ ನನ್ನ ಆದ್ಯಕರ್ತವ್ಯವಾಗಿದ್ದಿತೋ, ಅದನ್ನು ಮಾಡಲಿಕ್ಕೆ ನಾನು ತಪ್ಪಿದೆನು ಆ ನನ್ನ ಅಸಡ್ಡೆತನ ಕೂಡ ಒಂದು ದಂಡನೀಯ ಅಪರಾಧ ವಾಗಿದೆ. ನೈರ್ಬಂಧಿಕ ಅಪರಾಧವಾಗಿರದಿದ್ದರೂ ನೈಸರ್ಗಿಕ ಅಪರಾಧವಂತೂ ಆಗಿಯೇ ಆಗಿದೆ!"

"ನನ್ನದಲ್ಲದ ಅಪರಾಧದ ಆರೋಪಗಳೊಳಗಿಂದ ನನ್ನ ಮೊದಲಿನ ಹರಕೆಗೆ ವರಪ್ರದಾನ ಮಾಡಿ ನನ್ನನ್ನು ಬಂಧಮುಕ್ತಗೊಳಿಸಿರುವ ದೇವಾ! ನನ್ನದು ನನಗೇ ಯಾವುದು ಘಟಿಸಿರುತ್ತದೆಂದು ತೋರುವುದೋ, ಆ ಅಪ ರಾಧದ ದೋಷದೊಳಗಿಂದಲೂ ನನ್ನನ್ನು ಮುಕ್ತಗೊಳಿಸುವೆಯಾ? ಈ ನನ್ನ ಎರಡನೇ ಹರಕೆಗೂ ವರವೀಯುವೆಯಾ? ಆ ಹಿಂಸ್ರ ನರ ಪಶುವಿನ ಕೈ- ಯೊಳಗಿಂದ ಪಾಪ! ಆ ಬಡ ಮಾಲತಿಯನ್ನು ಬಿಡಿಸುವ ಸಾಮರ್ಥ್ಯವನ್ನು ನನಗೆ ನೀನು ದಯಪಾಲಿಸಬೇಕಾದ ಮೊದಲನೇ ವರವು. ಆದರೂ ಅದು ಬಹುಮಟ್ಟಿಗೆ ದುರ್ಘಟವೇ ಆಗಿದೆ! ಆಕೆಯು ಎಲ್ಲಿರುತ್ತಾಳೆಂಬದು ಕೂಡ ಯಾರಿಗೂ ಗೊತ್ತಾಗಿರುವದಿಲ್ಲ! ಅದರಲ್ಲಿ ನಾನು ಇನ್ನೂ ದುರ್ಬಲನೂ ಯುಕ ಕ್ತಿತನೂ ಆಗಿರುತ್ತೇನೆ. ಆ ನಿಗರಗಟ್ಟ ಪಾಪಿಯ ಸಶಸ್ತ್ರ ಕಪಟಾಚರಣೆ ಗಳಿಗೆ ತೀರ ಅಪರಿಚಿತನು; ಆದ್ದರಿಂದ ಆ ಸಂಧಿಯೂ ಆ ಸಾಮರ್ಥ್ಯವೂ ನನಗ ಲಭಿಸುವದು ದುರ್ಘಟವೇ ಆಗಿದ್ದರೆ ದೇವಾ! ನನ್ನ ಸ್ವಾಮಿಯೇ ನಿನ್ನ

ದಯದ ಸುದರ್ಶನವನ್ನಾದರೂ ಆಕೆಯ ಹಿಂದಿನಿಂದ ಕಳಿಸಿ, ಆ ದುಷ್ಟರನ್ನು ಸಂಹರಿಸಬೇಕು; ಅವಳನ್ನು ನೀನೇ ಮುಕ್ತಗೊಳಿಸಬೇಕು!! ದೇವಾ, ನೀನು ಸರ್ವ ಸಮರ್ಥನಿರುತ್ತೀ! ಸಜ್ಜನರ ಸಂಕಟಗಳನ್ನು ನೀನು ನಿವಾರಿಸುತ್ತೀ ಯೆಂದು ನಿನಗೆ ದಯಾಸಾಗರನೆಂದೆನ್ನುತ್ತಾರೆ!"

ಹೀಗೆ ಭಕ್ತಿಗದ್ಗದ ವಾಣಿಯಿಂದ ಆ ತರುಣನು ದೇವರನ್ನು ಪ್ರಾರ್ಥಿಸುತ್ತಿರುವಾಗ, ಆತನ ಹೃದಯವು ಆ ಕೊನೆಯ ವಾಕ್ಯದಿಂದ ಸ್ಫುರಿಸಲು, "ನೀನು ಸರ್ವ ಸಮರ್ಥನಿರುತ್ತೀ! ನೀನು ಸಜ್ಜನ ಸಂರಕ್ಷಕನೂ ಪರಮ ದಯಾಳುವೂ ಆಗಿರುತ್ತೀ" ಎಂದು ಒಳ್ಳೇ ತಲ್ಲೀನತೆಯಿಂದ ಒಂದೊಂದೇ ಶಬ್ದವನ್ನುಚ್ಚರಿಸುತ್ತ ಕೈಜೋಡಿಸಿ ನಿಂತಿರಲು, ಆತನ ಮನಸ್ಸು ಕ್ಷಣಕಾಲ ಕೇವಲ ನಿಸ್ತಬ್ಧ ನಿಶ್ಶಬ್ದವಾಗಿ ಬಿಟ್ಟಿತು! ಆದರೆ ಆತನ ಆ ಬಹಿರ್ಮನದ ಮುಂದಿನಲ್ಲಿ ಆತನ ಅಂತರ್ಮನದೊಳಗೆ ಆ ವಾಕ್ಯದ ಬಗ್ಗೆ ಆತನಿಗೂ ತಿಳಿಯದ ಹಾಗೆ ಯಾವ ಚರ್ಚೆಯಾಯಿತೋ ಅದಾರು ಹೇಳಬೇಕು? ಆದರೆ ಆ ತಲ್ಲೀನ ಮುಂದು ಇಲ್ಲದಂತಾಗಲು, ಒಂದು ಸ್ಪಷ್ಟ ಶಂಕೆಯು ಆತನ ಚಿತ್ತದೊಳಗಿಂದ ಆತನನ್ನು ಕೂಗುತ್ತ ಕೇಳಹತ್ತಿತೇನಂದರೆ:

"ದೇವರು ಸಜ್ಜನರ ಸಂಕಟ ನಿವಾರಣ ಮಾಡುವಷ್ಟು ಪರಮ ದಯಾಲುವೂ ಸರ್ವ ಸಮರ್ಥನೂ ಆಗಿದ್ದರೆ, ಆತನು ಆ ನಿರಪರಾಧೀ ಸುಜನರನ್ನು ಮೊಟ್ಟಮೊದಲು ಸಂಕಟದಲ್ಲಿ ನೂಕುತ್ತಿದ್ದನೇಕೆ? ದುರ್ಜನರನ್ನು ಆ ಸುಜನರ ಛಲನೆ ಮಾಡುವದಕ್ಕಾಗಿ ಪ್ರಬಲವೇಕೆಗೊಳಿಸುವನು? ಸಜ್ಜನರ ಮನೋದಾರ್ಢ್ಯ ನೋಡುವದಕ್ಕೇ? ಹಾಗಾದರೆ ದೇವರ ಸರ್ವಜ್ಞತ್ವವೆಂತುಳಿಯಿತು? ಭಕ್ತನು ಸಟೆಯೋ ದಿಟವೋ ಎಂಬದು ದುಷ್ಟರಿಂದ ಆ ಭಕ್ತರನ್ನು ಹೆಚ್ಚಾಗಿ ಪೀಡಿಸಿದ ಹೊರತು ದೇವರಿಗೆ ತಿಳಿಯುವದಿಲ್ಲೆಂದು ಅನ್ನುವದೆಂದರೆ, ದೇವರ ಸರ್ವಜ್ಞತ್ವಕ್ಕಷ್ಟೇ ಅಲ್ಲ, ಪರಮ ದಯಾಲುತ್ವಕ್ಕೂ ಕಲಂಕ ಹಚ್ಚಿದಂತಲ್ಲವೆ? ದರವಡೆಗಾರರಿಂದ ಊರನ್ನು ಸಂರಕ್ಷಿಸುವ ಸಾಮರ್ಥ್ಯವು ತನ್ನಲ್ಲಿದ್ದರೂ ಯಾವ ಅಧಿಕಾರಿಯು ಮೊದಲು ದರವಡೆಗಾರರಿಂದ ಊರೊಳಗೆ ನಿರಪರಾಧಿ ಜನರನ್ನು ಮನಸೋಕ್ತ ಸುಲಿಯಗೊಡುವನೋ, ಹೊಡೆ-ಬಡೆ ಸುಟ್ಟು ನಾಶಗೊಳಿಸಲಿಕ್ಕೆ ಆಸ್ಪದವೀಯುವನೋ ಮತ್ತು ಆ ಮೇಲೆ ಜನರ ಕನಿಕರದ ಕೂಗುಗಳಿಗೂ ಹರಕೆಗಳಿಗೂ ಪ್ರಸನ್ನನಾಗಿ, ಅವರ ನೆತ್ತರ ಸುರಿವ ಗಾಯಗಳಿಗೆ ಪುಕ್ಕಟಿ ಔಷಧಿ ಲೇಪಿಸುವ ವ್ಯವಸ್ಥೆ ಮಾಡುವನೋ, ಆ ಅಧಿಕಾರಿಯ ಆ ದಯಾಲುತ್ವವು ಸ್ತುತಿಗೆ ಪಾತ್ರವಾದುದೆನ್ನಬೇಕೇ?"

ಒಂದರಹಿಂದೊಂದರಂತೆ ಸಾಲುಗಟ್ಟಿಕೊಂಡು ಬರುತ್ತಿರುವ ಆ ಸಂ-

ದೇಹಗಳ ನೆರೆಹಾವಳಿಯಲ್ಲಿ ಆ ಯುವಕನು ತೀರ ಮುಳುಗಹತ್ತಿದನು; ಮತ್ತು ಆತನು ಅವುಗಳ ಆ ತೆರೆಗಳನ್ನು ಒಳ್ಳೇ ನಿಕರದಿಂದ ತಡೆದು, ಅವು ಗಳಲ್ಲಿ ಮುಳುಗಿದ್ದರೂ ತನ್ನ ಚಿತ್ರವನ್ನು ಅದರೊಳಗಿಂದ ಪಾರುಮಾಡಿದನು.

"ಪಾಖಂಡ! ಪಾಖಂಡ!" ಎಂದು ತನ್ನಷ್ಟಕ್ಕೆ ತಾನೇ ಗಟ್ಟಿಗಟ್ಟಿಯಾಗ ಅಂದುಕೊಳ್ಳುತ್ತ, ಆತನು ಲಗುಬಗನೆ ಅಲ್ಲಿಯೇ ಎಡತಾಕಹತ್ತಿದನು. ಆತನ ಚಿತ್ತವು ಸ್ವಲ್ಪಮಟ್ಟಿಗೆ ಸ್ಥಿರವಾದ ಮೇಲೆ ಆತನು ಆ ಸಂದೇಹ-ವಿಚಾರಗಳಿಂದ ಮಲಿನವಾದ ಚಿತ್ತವನ್ನು ಅಕ್ಷರಶಃ ಪ್ರಕ್ಷಾಲನಗೊಳಿಸುವ ಸಲುವಾಗಿಯೇ ಗಂಗೆಯ ಆ ಪವಿತ್ರವೂ ಶೀತಲವೂ ಆದ ನೀರಿನ ಆಚಮನ ಮಾಡಿದನು; ಮತ್ತು ವಿಚಾರಗಳ ಓಘವನ್ನು ಬೇರೆ ಕಡೆಗೆ ಹೊರಳಿಸಲಿಕ್ಕೆಂದು ಸೂರ್ಯನು ಪಶ್ಚಿಮದಿಕ್ಕಿನಲ್ಲಾಡುತ್ತಿದ್ದ ಓಕಳಿಯ ಆಟವನ್ನು ನೋಡುತ್ತ ನಿಂತನು.

ಆ ಕೆಂಪು ಗುಲಾಬಿ ಬಂಗಾರದ ಸಲಾಕಿಯಂತಹ ಕಿರಣಗಳ ಸಮೂಹಕ್ಕೆ ಸಮೂಹವೇ ಭಾಗೀರಥಿಯ ಪ್ರವಾಹದಲ್ಲಿ ಕೆಳಗೆ ಹೆಚ್ಚಾಗಿ ಪ್ರತಿಬಿಂಬಿಸುತ್ತಿದ್ದವು. ತೆರೆತೆರೆಗಳಲ್ಲಿ ಆ ಬಣ್ಣವು ಕುಣಿಯುತ್ತಿತ್ತು. ಆ ತೆರೆಗಳು ಎತ್ತರವಾಗಿ ಒಡೆದು, ಅವುಗಳ ಸಹಸ್ರಾವಧಿ ತುಷಾರಗಳು ಹಾರುತ್ತಲೆ, ಚಿಕ್ಕಪುಟ್ಟ ಕಾಮನ ಬಿಲ್ಲಿನ ಮಳೆಯು ಪ್ರವಾಹದೊಳಗಿನ ನೀರ ಮೇಲೆ ಬಿದ್ದು ತೇಲುತ್ತಿತ್ತು. ಮೆಲ್ಲಮೆಲ್ಲನೆ ಪಶ್ಚಿಮದ ಕ್ಷಿತಿಜದ ಮೇಲಿನ ಆ ಗುಲಾಬಿ ಚಿನ್ನದ ಬಣ್ಣಗಳು ಮಸಕು-ಮಸಕಾಗಹತ್ತಿತು. ತೇಜಸ್ವಿಯಾದ ಧುರಂಧರ ಪುರುಷನು ಇಲ್ಲದಂತಾದ ಕೂಡಲೆ ರಾಷ್ಟ್ರದ ಜೀವನವೇ ಹೇಗೆ ಮ್ಲಾನವಾಗುತ್ತದೋ, ಹಾಗೆಯೇ ಆ ಸೂರ್ಯನು ತನ್ನ ಆ ಬಂಗಾರದ ಕಿರಣ ಸಮೂಹಗಳನ್ನು ಸಂಪೂರ್ಣವಾಗಿ ಆವರಿಸಿಕೊಂಡು ಅಸ್ತಾಚಲದ ಹಿಂದುಗಡೆಗೆ ತೀರ ಕಾಣದಂತಾಗಲು, ಆ ಗಂಗೆಯ ಪ್ರವಾಹವೂ ಕಾಂತಿಹೀನವಾಗಿ ತೋರತೊಡಗಿತು! ಯಾವಳೊಬ್ಬ ಸುಂದರಿಯ ಶರೀರದೊಳಗಿನ ಚೈತನ್ಯವು ಹೊರಟು ಹೋಗಲು, ಅವಳಲ್ಲಿ ಆ ಕೂಡಲೆ ಪ್ರೇತಕಳೆ ತೋರುವಂತೆ, ಪಶ್ಚಿಮದ ಮುಖಮಂಡಲದ ಮೇಲೆ ಆ ಕೂಡಲೆ ಕಪ್ಪುಛಾಯೆಯು ಹಬ್ಬಿತು. ಯಾವ ಪ್ರಫುಲ್ಲ ಮೋಡಗಳು ಗುಲಾಬೀ ಹೂಗಳ ಬುಟ್ಟಿಗಳಂತೆ ಶೋಭಿಸುತ್ತಿದ್ದವೋ, ಅವು ಆ ಕ್ಷಣವೇ ಬಾಡಿ, ಕೊಳೆತ ರವದಿಯ ಹಸೀ ಗುಡ್ಡೆಗಳಂತೆ ತೋರಹತ್ತಿದವು.

ಅಂಧಕಾರದ ಗವಸಣಿಗೆಯಿಂದ ಮುಚ್ಚಲ್ಪಟ್ಟ ಬಂಗಾರದ ವರ್ಣದ ಪಶ್ಚಿಮ ದಿಕ್ಕು ಹಾಗೆ ಕಪ್ಪಾಗಲು, ಆ ಮೊದಲು ಅದರ ಬಣ್ಣದ ಬೆಡಗಿನಲ್ಲಿ ಗುಂಗಾಗಿ ಹೋಗಿದ್ದ ಆ ತರುಣನ ಆನಂದಮಗ್ನ ಸ್ಮೃತಿಗಳೂ ಮುಳುಗಿ,

ಆತನ ಚಿತ್ತದಲ್ಲಿಯೂ ದುಃಖದ ಸ್ಮೃತಿಗಳ ಕಾರ್ಗತ್ತಲೆಯು ಹಬ್ಬಹತ್ತಿತು. 'ಒಂದು, ಎರಡು, ಮೂರು, ನಾಲ್ಕು! ಅಹುದು; ನಾಲ್ಕೇ ದಿನಗಳ ಮುಂಚೆ ಇದೇ ವೇಳೆಯಲ್ಲಿ ನಾನು ಆ ಅಲಹಾಬಾದದ ಜೇಲಿನೊಳಗಿನ ಭಯಂಕರ ವಾದ ಆ ಒಂಟಿಗರ ಕೋಣೆಯಲ್ಲಿ ಅಂಧಕಾರದೊಳಗೂ ಮುಂದೇನಾಗುವ ದೆಂಬ ಚಿಂತೆಯಲ್ಲೂ ಮುಳುಗಿದ್ದೆನು. ನನ್ನ ಕಾಲೊಳಗಿನ ಆ ಬೇಡಿಗಳು ಕತ್ತರಿಸಿ, ನಿರ್ದೋಷಿಯೆಂದು ಬಿಡುಗಡೆ ಹೊಂದಿ, ಇಂದು ನಾನು ಇಲ್ಲಿ ಬಂಧರಹಿತನಾಗಿ ಈ ಬಯಲೊಳಗಿನ ತಾಜಾ ವಾಯುವನ್ನು ಉಸುರಾಡಿಸು ತ್ತಿದ್ದೆನೆ; ಆದರೆ ಮಾಲತಿ? ಎಲಲಲ! ಆ ಗುಲಾಬೀ ಪಶ್ಚಿಮ ದಿಕ್ಕು ಈ ಕಾರ್ಗತ್ತಲೆಯ ಆವರಣದಲ್ಲಿ ಸಿಕ್ಕ ಕೂಡಲೆ ಹೇಗೆ ಕಪ್ಪಾಗಿ ಬಿಟ್ಟಿತೋ, ಹಾಗೆಯೇ ಆ ಸುಂದರ ಕಿಶೋರಿಯು ಆ ಹಿಂಸ್ರ ರಾಕ್ಷಸನ ವಶದಲ್ಲಿ ಇಂದು ಕಪ್ಪಾಗಿ, ಅಸ್ತವ್ಯಸ್ತವಾದ ಕೂದಲುಗಳಿಂದ, ಅಂಜಿಕೆಯಿಂದ ಸಂಪೂರ್ಣ ನಗೆಯ ಕೊಲೆಗೆಯ್ದು ಮತ್ತು ಅದಕ್ಕಾಗಿಯೇ ಚಿಂತೆಯ ಪ್ರೇತ ಕಳೆಯು ಯಾವಳ ಮೋರೆಯ ಮೇಲೆ ಒಡೆದು ಕಾಣುವದೋ ಅಂಥ ಅವಳು ಎಲ್ಲಿ ಯಾದರೂ ಬಿದ್ದುಕೊಂಡಿರಬಹುದು! ಅವನು ಅವಳನ್ನೆಲ್ಲಿಗೆ ಓಡಿಸಿಕೊಂಡೊ ಯ್ದಿರಬೇಕೆಂಬ ಬಗ್ಗೆ ಯಾವ ತರ್ಕವನ್ನೂ ಮಾಡಬರುವಂತಿಲ್ಲ.'

ಆತನು ಎದ್ದು ನಿಂತು ಆ ಘಾಟದ ಮೇಲೆ ಇತ್ತಿಂದತ್ತ ಅತ್ತಿಂದಿತ್ತ ಎಡತಾಕ ಹತ್ತಿದನು. ಎಷ್ಟೋ ದಿನಗಳ ರೂಢಿಯ ಮೂಲಕ ಆತನಿಗೆ ಮೊದಲು ಅನಿಸಿದ್ದೇನಂದರೆ, ತನ್ನ ಕಾಲಲ್ಲಿ ಇನ್ನೂ ಬೇಡಿಗಳಿವೆ! ನಡೆಯು ವಾಗ ಅವುಗಳನ್ನು ಸಾವರಿಸಿ ಹಿಡಿಯುವ ಸಲುವಾಗಿ ಆತನ ಕೈಯು ಟೊಂಕದ ಕೆಳಗೆ ಅಲೆದಾಡಹತ್ತಿತು! ಆದರೆ ತನ್ನ ಬಿಡುಗಡೆಯಾಗಿದೆ; ಬೇಡಿಗಳು ಕತ್ತರಿಸಿ ಬಿಟ್ಟಿವೆ; ತಾನು ಜೇಲಿನ ಕೋಣೆಯಲ್ಲಿಲ್ಲ ಮುಂತಾದವುಗಳ ನೆನ ಪಾಗಲು, ಆತನು ಮನದಲ್ಲಿಯೇ ನಕ್ಕನು! ದೂರ ಬಹು ದೂರದ ನರೆಗೆ ನೋಡುತ್ತ, ಮಾಲತಿ ಎಲ್ಲಿರಬಹುದೆಂಬದರ ಬಗ್ಗೆ ಬಗೆಹರಿಯದ ತರ್ಕ ಮಾಡುತ್ತ, ಅವಳ ವಿಷಯದ ಹಲವು ಕಾಲ್ಪನಿಕ ಪ್ರಸಂಗಗಳನ್ನು ಕಲೆ ಹಾಕುತ್ತ, ಕೆಲ ಹೆಜ್ಜೆ ನಡೆಯುತ್ತ, ಕೆಲ ಹೊತ್ತು ನಿಲ್ಲುತ್ತ ಕಾಲಕ್ರಮಿಸುತ್ತಿ ದ್ದನು.

ಆತನು ಕಿಶನನಿದ್ದನು! ಯೋಗಾನಂದ ಅರ್ಥಾತ್ ರಫೀ ಉದ್ದೀನನ ದರವಡೆಯ ಖಟ್ಲೆಯಲ್ಲಿ ಸಿಕ್ಕುಬೀಳುವ ಮೊದಲು ನ್ಯಾಯವೇದಾಂತ ಶಾಸ್ತ್ರ ಗಳ ಅಧ್ಯಯನಕ್ಕೆಂದು ಆತನು ಯಾವಾಗ ಕಾಶಿಗೆ ಬಂದು ಇರಹತ್ತಿದ್ದನೋ, ಆಗ ಇದೇ ಮಹಾದೇವನ ಗುಡಿಯಲ್ಲಿ ಆತನು ಏಕಾಂತವಾಗಿ ಬಂದು ಕೂಡ್ರು

ತ್ತಿದ್ದನು. ಈ ದೇವರನ್ನೇ ಆತನು ತನ್ನ ಆರಾಧ್ಯದೈವತವೆಂದು ಮನ್ನಿಸು ತ್ತಿದ್ದನು. ಮುಂದೆ ಆತನು ಯೋಗಾನಂದನ ಮೋಸಕ್ಕೆ ಬಲಿಯಾದನಂತರ ಯಾವಾಗ ಅವನೊಡನೆ ಬಂಧಿಸಲ್ಪಟ್ಟನೋ, ಆಗ ಜೇಲಿನಲ್ಲಿ ಆತನು ಇದೇ ದೇವರಿಗೆ ತಾನು ನಿರ್ದೋಷಿಯೆಂದು ಬಿಡುಗಡೆ ಹೊಂದುವ ಸಲು ವಾಗಿ ಹರಕೆ ಕಟ್ಟಿದ್ದನು. ಆ ಖಟ್ಲೆಯ ತೀರ್ಪು ಅಲಹಾಬಾದದ ನ್ಯಾಯಾ ಲಯದಲ್ಲಿ ನಾಲ್ಕೈದು ದಿನಗಳ ಮುಂಚೆ ಹೇಳಲಾಗಿತ್ತು. ರಫೀ ಉದ್ದೀನ ಅಹಮ್ಮದನಿಗೆ ಜೀವಾವಧಿ ಕರಿನೀರು; ಮತ್ತು ಆತನ ಸಹಕಾರಿಗಳಲ್ಲಿ ಬಹು ಜನರಿಗೆ ಏಳರಿಂದ ಹತ್ತು ವರ್ಷಗಳವರೆಗೆ ಕರಿನೀರು, ಈ ಬಗೆಯ ಕಠಿಣ ಶಿಕ್ಷೆವಿಧಿಸಲ್ಪಟ್ಟಿತು ಆ ಖಟ್ಲೆಯಲ್ಲಿ ಬಿಡುಗಡೆ ಹೊಂದಿದವರೆಂದರೆ, ಇಬ್ಬರೇ. ಒಬ್ಬನು ಸರಕಾರೀ ಮಾಫೀ ಸಾಕ್ಷಿದಾರನಾಗಿದ್ದ ಹಸನಭಾಯಿಯು; ಮತ್ತು ಎರಡನೆಯವನೇ ಸಂಪೂರ್ಣ ನಿರ್ದೋಷಿಯಾದ ಈ ಕಿಶನನು.

ಅಲ್ಲಿಂದ ಬಿಡುಗಡೆಯಾದ ಕೂಡಲೆ ಆತನು ನೆಟ್ಟಗೆ ಕಾಶಿಗೆ ಬಂದು ತನ್ನ ಆ ಪ್ರೀತಿಯ ಏಕಾಂತದ ದೇವಾಲಯದಲ್ಲಿಳಿದನು. ಆತನಿಗೆ ಮನೆ-ಮಾರು, ಕುಟುಂಬ ಮೊದಲಾದವುಗಳೇನೂ ಉಳಿದೇ ಇರಲಿಲ್ಲ. ಆತನು ತೀರ ದರಿದ್ರನಾದ್ದರಿಂದ, ಆತನನ್ನು ಎಂದೂ ಯಾರೂ ವಿಚಾರಿಸುತ್ತಿರಲಿಲ್ಲ. ಆತನು ಕೆಲಮಟ್ಟಿಗೆ ಕುರೂಪಿಯೆಂದು ಆತನನ್ನು ಯಾರೂ ಎಂದೂ ಮೋಹಿಸಿರ ಲಿಲ್ಲ. ಮಥುರೆಯಲ್ಲಿರುವಾಗ ಮಾಲತಿಯನ್ನು ಕರೆತರುವಾಗ, ಕಳಿಸಿ ಬರು ವಾಗ ಆ ಮಹಾ ಮೋಸುಗಾರ ರಫೀ ಉದ್ದೀನನು ಯೋಗಾನಂದನ ವೇಷ ದಲ್ಲಿರುತ್ತಿರುವಾಗ ಈ ಕಿಶನನನ್ನೇ ಆಕೆಯೊಡನೆ ನೆರವಿಗೆ ಕಳಿಸಲಿ ಕ್ಕೆಂದು ನಾಲ್ಕೈದು ಸಾರೆ ಯೋಜಿಸಿದ್ದನು; ಆದರೆ ಅದು ಕಿಶನನೊಳಗಿನ ಬೇರೆ ಯಾವ ಸದ್ಗುಣಗಳ ಬಗ್ಗೆಯೂ ಆಗಿರದೆ, ಆತನ ಆ ಅಲ್ಪ ಕುರೂಪೀ ತನದ ಅವಗುಣಕ್ಕಾಗಿಯೇ ಆರಿಸಿದ್ದನು. ಆ ಮೂಲಕವಾದರೂ ತನ್ನಲ್ಲಿಯ ಆ ಕುರೂಪದ ಉಪಕಾರವು ಕಿಶನನ ಮೇಲೆ ಆದಂತಾಗಿತ್ತು; ಯಾಕಂದರೆ, ಆ ಕುರೂಪದ ಮೂಲಕವೇ ಮಾಲತಿಯೊಡನೆ ಆತನ ಪರಿಚಯವಾಯಿತು; ಮತ್ತು ಆ ಪರಿಚಯದಲ್ಲಿ ಈತನೊಡನೆ ದಯಾಳು ಪ್ರೇಮಲತನದಿಂದ ಮಾತ ನಾಡುವವಳೂ, ಈತನನ್ನು ಒಳ್ಳೆಯವನೆನ್ನುವ ಮೊದಲನೇ ಮನುಷ್ಯಳೂ ಇವನಿಗೆ ಭೆಟ್ಟಿಯಾದಳು! ಮಾಲತಿಯೂ ಅವಳ ತಾಯಿಯೂ ಕಿಶನನ ಸು-ಶೀಲಸ್ವಭಾವವನ್ನು ಎಷ್ಟೋ ಹೊಗಳುತ್ತಿದ್ದರು. ಆ ನಾಲ್ಕೈದು ಸಾರೆ ಘಟಿ ಸಿದ ಅಲ್ಪ ಸಹವಾಸದಿಂದ ಅವರಿಬ್ಬರದೂ ನಿಜವಾಗಿಯೇ ತನ್ನ ಮೇಲೆ ದಯಾಲೋಭವಿದೆಯೆಂದು ಕಿಶನನಿಗೆ ಅನಿಸಿತು. ಇಡಿ ಜನ್ಮದಲ್ಲಿ ಆತನ

ಸ್ಥಿತಿಗತಿಗಳ ಬಗ್ಗೆ ಇವರಂತೆ ಯಾರೂ ವಿಚಾರಿಸಿರಲಿಲ್ಲ. ಅದರಿಂದ ಮಾಲತಿಯೂ ಆಕೆಯ ತಾಯಿಯೂ ಯಾವ ಒಂದೆರಡು ಸವಿಮಾತುಗಳಿಂದ ಅವನೊಡನೆ ವ್ಯವಹರಿಸುತ್ತಿದ್ದರೋ ಅವನಿಗೆ ಅದೇ ವಿಶೇಷವೆನಿಸುತ್ತಿದ್ದಿತು. ಅದರಿಂದಲೇ ಅವನು ಅವರಿಬ್ಬರಲ್ಲಿ ಲೋಭ ತಾಳಿದ್ದನು; ಮತ್ತು ಇಡೀ ಜನ್ಮದಲ್ಲುಂಟಾದ ಆ ಮೊದಲನೇ ಲೋಭಕ್ಕೂ ಆತನು ಯಾವಾಗ ಹೀಗೆ ಅಂತರಿಸಬೇಕಾಯಿತೋ, ಮತ್ತು ಆತನ ತಪ್ಪಿನಿಂದಲೇ ಆತನ ಮೇಲೆ ದಯಾಲೋಭ ಮಾಡುತ್ತಿದ್ದ ಆ ವ್ಯಕ್ತಿಗಳ ಮೇಲೆ ಇಂಥ ಭಯಂಕರ ಸಂಕಟವುಂಟಾಗಿ ಅವರ ಸತ್ಯಾನಾಶವಾಗಿದ್ದಿತೋ ಅದರಿಂದಲೇ ಆ ಅಳುಕು ಆತನ ಮನಸ್ಸಿನಲ್ಲಿ ಒಂದೇಸವನೆ ಅಳುಕಹತ್ತಿತ್ತು. ಮಾಲತಿಯು ತೀರ ಸಹಜವಾಗಿ ಆತನನ್ನು ಹೇಗೆ ಕರೆಯುತ್ತಿದ್ದಳೋ, ಅಂಥ ಸವಿ ಕೂಗಿನಿಂದ ಆತನ ಆಯುಷ್ಯದಲ್ಲಿ ಆತನನ್ನಾರೂ ಕರೆದಿರಲಿಲ್ಲ.

"ಮಾಲತೀ, ಮತ್ತೊಮ್ಮೆ ಇಂಪಾದ ದನಿಯಿಂದ ಕೂಗೇ ನನ್ನನ್ನು! ಕಿಶನನ." ಆತನು ಮಾಲತಿಯಂತೆ ಸವಿಕೂಗನ್ನು ತನ್ನಷ್ಟಕ್ಕೆ ತಾನೇ ಕೂಗಿಕೊಂಡನು; ಹಾಗು ತುಸ ವಿಸಂಗತ ವಿಚಾರದ ಪ್ರವಾಹದಲ್ಲಿ ಗುಡಿಗೆ ಬಂದನು. ಅಲ್ಲಿಯೂ ಎಡತಾಕಹತ್ತಿ ಕಡೆಗೆ ತನ್ನನ್ನೇ ಕುರಿತು ಗಟ್ಟಿಯಾಗಿ:—"ಛೇ! ಮಹಾನ್ ಮಹಾನ್ ಪೋಲೀಸರಿಗೇ ಆ ನೀಚ ಗುಲಾಮ ಹುಸೇನನ ಪತ್ತೆ ಹತ್ತದಿರಲು, ಅವನು ನನ್ನಂಥವನಿಗೆ ಹೇಗೆ ಸಿಗಬೇಕು? ಮತ್ತು ಪತ್ತೆ ಹತ್ತಿದರೂ ಕೂಡ ಅಸಹಾಯ್ಯ ಪಾಮರನಾದ ನಾನು ಆ ಚಂಡಾಲರ ಗುಂಪಿನ ಕೈಯೊಳಗಿಂದ ಮಾಲತಿಯ ಬಿಡುಗಡೆಯನ್ನೇನು ಮಾಡುವೆನು? ಅಶಕ್ಯ! ಅಶಕ್ಯ! ತೀರ ಅಶಕ್ಯವು! ದೇವಾ, ಅದು ಶಕ್ಯವಿದ್ದರೆ ನಿನಗೊಬ್ಬನಿಗೇ ಶಕ್ಯ. ಆಕೆಯನ್ನು ಅವರಿಂದ ಬಿಡಿಸಿ ನನಗೆ ಭೆಟ್ಟಿಮಾಡಿಸು. ದೇವಾ! ನಿನ್ನ ಇಚ್ಛೆಯೇನೆಂಬದು ಪಾಮರನಾದ ನನಗೆ ಹೇಗೆ ತಿಳಿಯಬೇಕು? ಏನಿದ್ದರೂ ನಾನು ಅದನ್ನು ಕೇಳುವದೇ ಇಲ್ಲ; ಆದರೆ ನನ್ನ ಇಚ್ಛೆ ಮಾತ್ರ ನನಗೆ ತಿಳಿಯುತ್ತದೆ; ಮತ್ತು ನಾನು ಅದನ್ನು ನಿನ್ನೆದುರಿಗೆ ಹೇಳದೆ ಇರಲಾರೆನು. ಮಾಲತಿಗೂ ನನಗೂ ಭೇಟಿ ಮಾಡಿಸಪ್ಪಾ ದೇವರೇ!"

ಕಿಶನನು ದೇವರಿಗೆ ಸಾಷ್ಟಾಂಗ ನಮಿಸಿದನು. ಕಣ್ಣೊಳಗಿಂದ ಹರಿಯುತ್ತಿರುವ ಕಂಬನಿಗಳನ್ನೊರಸಿದನು. ನಿಷ್ಪ್ರಯೋಜಕವಾದ ವಿಚಾರಗಳನ್ನು ಮಾಡಿ ಮಾಡಿ ದಣಿದಿದ್ದ ಆತನ ಮಿದುಳು ಸುಂದಾಗಿದ್ದಿತು. ಒಳಗಿನ ವಿಚಾರಗಳು ಕೆಲ ಮಟ್ಟಿಗೆ ಕುಂಠಿತವಾಗಿದ್ದರೂ ಆತನು ಒಂದು ಬಿಲ್ವದ ಗಿಡದ ಬೊಡ್ಡೆಗೆ ಆತು ನಿಂತು, ಮರದಿಂದ ಹಾರಿ ಬರುತ್ತಿದ್ದ ಕೆಲ ಪಕ್ಷಿಗಳು ತಮ್ಮ

ಹೊದರುಗಳನ್ನು ಹುಡುಕುತ್ತಿರುವ ಮೋಜು ನೋಡಹತ್ತಿದನು. ಆಗ ಕತ್ತ ಲಾಗ ಹತ್ತಿದ್ದರೂ ಇನ್ನು ಒಬ್ಬರ ಮೋರೆಯು ಮತ್ತೊಬ್ಬರಿಗೆ ಕಾಣಿಸದಷ್ಟು ಕತ್ತಲು ಗವಿದಿರಲಿಲ್ಲ.

ಇಷ್ಟರಲ್ಲಿ ಆ ಘಾಟಿನ ಮೆಟ್ಟಲುಗಳ ಕಡೆಗೆ ಯಾರೋ ಮೆಲ್ಲಮೆಲ್ಲನೆ ಸಿಳ್ಳುಹಾಕುತ್ತಿರುವ ಹಾಗೆ ಆತನಿಗೆ ಭಾಸವಾಯಿತು. ಆತನು ಹೊರಳಿ ನೋಡಲು, ಮೆಟ್ಟಲಿನ ಮೇಲಿಂದ ಬೊಗ್ಗಿ ನೀರಲ್ಲಿ ಹಣಿಕಿ ಹಾಕುತ್ತಿರುವದು ಮುಸಮುಸಕಾಗಿ ಕಾಣಿಸುವಷ್ಟರಲ್ಲಿ, ಕೊಡ ತುಂಬುವ ಸಲುವಾಗಿ ಒಬ್ಬನು ಮುಳುಗಿಸುತ್ತಿದ್ದ ಕೊಡದ ಬುಡುಬುಡು ಸಪ್ಪಳವೂ ಆಗಹತ್ತಿತು. "ಇಂಥ ಕಗ್ಗತ್ತಲೆಯಲ್ಲಿ ನೀರು ತುಂಬಿಕೊಳ್ಳಲಿಕ್ಕೆ ಆದಾರು ಬಂದಿರುವರು? ಇಲ್ಲಿ ಮನು ಷ್ಯರ ಸುಳಿದಾಟವೇ ವಿರಳ! ಇದು ನೀರು ತುಂಬತಕ್ಕ ಘಾಟೀ ಅಲ್ಲ! ಇಂಥ ಮಕಮಕ ಮುಚ್ಚಿಂಜೆಯ ಕಾಲಕ್ಕೆ ನೀರ ಕೊಡ ತುಂಬಿಕೊಂಡೊಯ್ಯುವ ಮನುಷ್ಯನು ಹತ್ತಿರದಲ್ಲೆಲ್ಲಿಯೋ ಉಳಕೊಂಡಿರಬೇಕು! ಯಾವನಾದರೂ ದಾರಿಕಾರನೇ ಈತನಿರಲಿಕ್ಕೆ ಬೇಕು" ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತ, ಕಿಶನನು ಆ ಕೊಡ ತುಂಬಿಕೊಂಡು ಎದ್ದು ನಿಂತ ಮನುಷ್ಯನ ಆಕೃತಿಯ ಕಡೆಗೆ ಸಹಜವಾಗಿ ನೋಡುತ್ತ ನಿಂತನು; ಆದರೆ ಕೊಡ ಹೆಗಲ ಮೇಲೆ ಹೊತ್ತು ಸಿಳ್ಳು ಹಾಕುತ್ತಿದ್ದ ಆ ಮನುಷ್ಯನು ಅತ್ತ ಕಡೆಯ ಬಂದ ದಾರಿಯಿಂದ ಹೋಗದೆ, ಗುಡಿಯ ಬಳಿಯ ದಾರಿ ಹಿಡಿದು ಬಂದು ಹೇಗೆ ಹೇಗೆ ಸಮೀಪಿಸಹತ್ತಿದನೋ, ಹಾಗೆ ಹಾಗೆ ಕಿಶನನು ಮನಸ್ಸಿನಲ್ಲಿ ಹೆಚ್ಚೆಚ್ಚು ಸೋಜಿಗಗೊಳ್ಳುತ್ತ ದಿಟ್ಟಿಸಿ ನೋಡತೊಡಗಿದನು; ಬಿಲ್ವವೃಕ್ಷಕ್ಕೆ ಮರೆಯಾಗಿ ನಿಲ್ಲಹತ್ತಿದನು; ಮುತ್ತು ಮನ ರಂಜನೆಗೆಂದು ಬಾಯಿಂದ ಸಿಳ್ಳು ಹೊಡೆಯುತ್ತ ಹೆಗಲ ಮೇಲೆ ಕೊಡ ಹೊತ್ತು ಕೊಂಡು ನಡೆದಿದ್ದ ಆ ಮನುಷ್ಯನು ತನ್ನ ಲಹರಿಯಲ್ಲೇ ಗುಡಿಯ ಹತ್ತಿರ ದಿಂದ ಕಾಲದಾರಿಯಲ್ಲಿ ತುಸ ಮುಂದಕ್ಕೆ ಹೋದ ಕೂಡಲೆ, ಕಿಶನನು ಸಂತಾ ಪಾತಿರೇಕದಿಂದಲೂ ಭಯದಿಂದಲೂ ಹಾಗು ಇಲ್ಲದ ಆನಂದದ ಭರವಲ್ಲಿಯೂ ಗುಣುಗುಟ್ಟಹತ್ತಿದನು:

"ಈತನೇ! ಇದೇ ನಿಜ! ಇವನೇ ಆ ಗುಲಾಮ ಹುಸೇನನು! ಖಟ್ಲೆಯಲ್ಲ ಹಸನಭಾಯಿಯು ಹೇಳಿದ್ದ ಸಂಗತಿಯೇ ನಿಜವಿದ್ದರೆ, ಮಾಲತಿಯನ್ನು ಓಡಿಸಿ ಕೊಂಡೊಯ್ವ ಕೆಲಸ ಮಾಡಿದ ನೀಚನು ಈತನೇ ಇರಬೇಕು! ಆದರೆ ಈತನು ಆಕೆಯನ್ನು ಬಲೂಚಿಸ್ತಾನದಂತಹ ದೂರಿನ ಪ್ರದೇಶಕ್ಕೆ ಕಳಿಸಿರುವನೆ? ಬಹುಶಃ ಆತನೇ ಕಳ್ಳರಂತೆ ಹುದುಗಿಕೊಂಡು ವಾಸಿಸುತ್ತಿರುವನೀ ನಿರ್ಜನ ಪ್ರದೇಶದಲ್ಲಿ; ಆದರೆ ಆಕೆಯು ಈತನ ಜೊತೆಗೇ ಇದ್ದರೆ? ಆಕೆ ನನಗೆ ಕಂಡಾ

ಳೇನು? ಆ ಮಾಲತಿಯು ಮತ್ತೆ ಒಮ್ಮೆಯಾದರೂ ನನಗೆ ಕಂಡಾಳೇನು? ಎಲ, ಈತನು ಕತ್ತಲೆಯಲ್ಲಿ ನಡೆದೇ ಬಿಟ್ಟನಲ್ಲ! ನಾನು ಇಲ್ಲಿ ಮೂರ್ಖನಂತೆ ನಿಂತಿರುವೆನೇಕೆ? ನನ್ನ ಮನಸ್ಸು ಎಷ್ಟು ಹೇಡಿಯಿದೆಯಲ್ಲ! ನನ್ನ ಕೈಯಲ್ಲಿ ಏನೂ ಇರುವದಿಲ್ಲ; ಮತ್ತು ಈತನು ನೃಶಂಸನಾದ ಶಸ್ತ್ರಧಾರಿಯೇ ಇರಬಹುದು! ಅತಿ ವಿಚಾರವು ಒಮ್ಮೊಮ್ಮೆ ಮನುಷ್ಯನನ್ನು ಹೇಡಿಯನ್ನಾಗ ಮಾಡುತ್ತದೆಂಬದಿದಕ್ಕೇ! ಈತನು ಮಾಲತಿಯನ್ನು ಇಲ್ಲಿಯೇ ಸಮೀಪದಲ್ಲೆಲ್ಲಾದರೂ ಅಡಗಿಸಿಟ್ಟಿದ್ದರೆ? ಯೋಗವು ಹೇಗಿದೆಯೊ? ಪ್ರಾಣ ಹೀರೇನು-ಪ್ರಾಣಕೊಟ್ಟೇನು! ಏನು ಮಾಡಿದರೂ ನಾನು ಆಕೆಯನ್ನು ಬಂಧಮುಕ್ತಗೊಳಿಸೇನು?"

ಈ ಕೊನೆಯ ವಾಕ್ಯದಿಂದ ಆವನಿಗೆ ಆನೆಯ ಬಲವೂ ಹುಲಿಯ ಧೈರ್ಯವೂ ಪ್ರಾಪ್ತವಾದವು. "ಕಿಶನ್, ನನ್ನನ್ನು ಬಂಧಮುಕ್ತಗೊಳಿಸು" ಎಂಬ ಮಾಲತಿಯ ಆರ್ತ್ರಕೂಗು ಆತನಿಗೆ ಕೇಳಿಸುತ್ತಿರುವಂತೆ ಭಾಸವಾಯಿತು!

ಕಿಶನನು ಮೊದಲು ಲಗುಬಗನೆ, ಆದರೆ ಆ ಕೊಡ ಹೊತ್ತಿದ್ದ ಮನುಷ್ಯನು ಕಾಣಹತ್ತಿದ ಕೂಡಲೆ ಮೆಲ್ಲ ಮೆಲ್ಲನೆ ಸಾಗಹತ್ತಿದನು. ಮುಂದೆ ನಡೆದಿರುವ ಮನುಷ್ಯನು ಗುಲಾಮ ಹುಸೇನನೆಂಬ ಬಗ್ಗೆ ಇನ್ನು ಕಿಶನನಿಗೇನೂ ಸಂಶಯವುಳಿದಿರಲಿಲ್ಲ. ಗುಲಾಮ ಹುಸೇನನು ಕೆಲ ದಾರಿ ಆ ಕಾಲುದಾರಿಯಿಂದ ಕ್ರಮಿಸಿದ ನಂತರ, ಅದನ್ನು ಬಿಟ್ಟು ಒಂದು ಬೈಲನ್ನು ಹೊಕ್ಕನು. ಮುಂದೆ ಒಂದು ಅರೆವಾಸಿ ಬಿದ್ದಿದ್ದ ದೊಡ್ಡಕಲ್ಲುಕಟ್ಟೆ ಅಥವಾ ದಿನ್ನೆಯು ಮರೆಯಿದ್ದರೂ ಅದನ್ನು ಸುತ್ತಿಕೊಂಡು, ಆತನು ಒಣ ಕಲ್ಲನ್ನೇರಿಸಿ ಕಟ್ಟಿದ ಒಂದು ಗೋಡೆಯ ಹತ್ತರ ಬಂದನು. ಬಳಿಕ ಆತನು ತನ್ನ ಹೆಗಲ ಮೇಲಿನ ಕೊಡವನ್ನು ಆ ಕಟ್ಟೆಯ ಮೇಲಿಟ್ಟು, ಕಲ್ಲುಗೋಡೆಹತ್ತಿ, ಒಳಗೆ ತಗ್ಗಿನಲ್ಲಿ ಹಾರಿಕೊಂಡು, ಮತ್ತೆ ಆ ಕೊಡವನ್ನು ಹೆಗಲ ಮೇಲೆ ಹೊತ್ತುಕೊಂಡು ಒಂದು ಬಹು ದೊಡ್ಡ ಆಲದ ಮರದ ಬೊಡ್ಡೆಯ ಮರೆಗಿದ್ದ ಒಂದು ಚಿಕ್ಕ ಹಂಚಿನ ಮನೆಯ ಬಾಗಿಲಿಗೆ ಬಂದನು. ಆತನ ಹಿಂದಿನಿಂದ ಮೆಲ್ಲ ಮೆಲ್ಲನೆ ದಾರಿ ತುಳಿಯುತ್ತ ಸುರಕ್ಷಿತ ಅಂತರದ ಮೇಲೆ ಬರಹತ್ತಿದ್ದ ಕಿಶನನು ಅದುವರೆಗೆ ಆ ಕಲ್ಲು ಗೋಡೆಯ ಸಮೀಪಕ್ಕೆ ಬಂದು, ಗುಲಾಮ ಹುಸೇನನ ಆ ಮನೆಯೊಳಗಿಂದ ಯಾರಾದರೂ ಬಾಗಿಲ ತೆರೆದು ಎದುರಿಗೆ ಬರುತ್ತಿರುವರೋ ಏನೋ ಎಂಬದನ್ನು ಕಣ್ಣು ಕೆಕ್ಕರಿಸಿ ಕೆಕ್ಕರಿಸಿ ನೋಡತೊಡಗಿದನು. ಮನೆಯೊಳಗಿನ ಬೆಳಕು ಚಲಿಸಹತ್ತಿದ್ದನ್ನು ಕಂಡು, ಆತನ ಮನಸ್ಸಿನಲ್ಲಿ ಒಮ್ಮೆಲೆ ಬಂದದ್ದೇನಂದರೆ, 'ಒಳಗೆ ಯಾರಾದರೂ ಮನುಷ್ಯರು-ಅಲ್ಲಲ್ಲ-ಮಾಲತಿಯೇ

ಬೇರೆ ಇರಲಿಕ್ಕಿಲ್ಲವಷ್ಟೇ?' ಔತ್ಸುಕ್ಯದಿಂದ ಆತನ ಎದೆಯು ಹಾರತೊಡಗಿತು; ಆದರೆ ಗುಲಾಮ ಹುಸೇನನು ಕೊಡ ಕೆಳಗಿಳಿಸಿ, ನಡುವಿನಲ್ಲಿಯ ಏನನ್ನೋ ಬಿಚ್ಚಿ, ಆ ಮುಚ್ಚಿದ ಬಾಗಿಲ ಮೇಲ್ಬದಿಯ ಚೌಕಟ್ಟಿನ ಚಿಲಕದ ಹತ್ತರ ಕೈಯನ್ನೊಯ್ಯುತ್ತಲೆ ಕಿಶನ್ನನಿಗೆ ತಿಳಿಯಿತೇನಂದರೆ, ಆ ಬಾಗಿಲಿಗೆ ಹೊರಗಿನಿಂದಲೇ ಕೀಲಿ ಹಾಕಲ್ಪಟ್ಟಿದೆ! ಆದರಿಂದ ಒಳಗೆ ಯಾರೂ ಇಲ್ಲವೆಂಬದು ಗೋಚರವಾಗಲು ಆತನಿಗೆ ಒಮ್ಮೆಲೆ ಅಸಮಾಧಾನವಾಯಿತು. ಮಾಲತಿಯು ತನ್ನ ಕೈಯಲ್ಲಿಯೇ ಬಂದು ಮತ್ತೆ ಇಲ್ಲದಂತಾದಂತೆ ತಳಮಳವಾಯಿತು! ಇಷ್ಟರಲ್ಲಿ ಗುಲಾಮ ಹುಸೇನನು ಕೀಲಿ ತೆಗೆದು ಬಾಗಿಲವನ್ನು ಸಂಪೂರ್ಣವಾಗಿ ತೆರೆದನು; ಮತ್ತು ತುಸ ಅಧಿಕಾರಯುಕ್ತವಾಣಿಯಿಂದ:-"ರೋಶನ್! ಏ ರೋ-ಶ-ನ್! ಬತ್ತೀ ಬಾಹೇರ ಲಾವ! ಕ್ಯಾ? ನಹಿ ಲಾತಿ? ಘಸೆಟಕೆ ಲೇ ಆವೂ?"

ಈ ನುಡಿಗಳನ್ನು ಆಲಿಸುತ್ತಲೆ ಕಿಶನನ ಪ್ರಾಣಗಳು ನಡುಗಿದವು! "ಒಳಗೆ ಯಾರಾದರೂ ಸ್ತ್ರೀಯಿರುವಳು! ಅವಳು ಒಳ್ಳೇ ಬಲವಾದ ಪಹರೆಯಲ್ಲಿ ಬಂಧಿಸಲ್ಪಟ್ಟಿರಬೇಕು! ಹೊರಗೆ ಹೋಗುವದಾದರೆ, ಈ ರಾಕ್ಷಸನು ಅವಳನ್ನು ಒಳಗೆಳೆದು, ಬಾಗಿಲಿಗೆ ಹೊರಗಿನಿಂದ ಕೀಲಿ ಹಾಕಿಯೇ ಹೋಗುತ್ತಿರಬೇಕು! ಅವಳು ಈತನ ಮಾತನ್ನು ಮನಮುಟ್ಟಿ ಕೇಳುವದಿಲ್ಲ. ಈತನು ಪ್ರಸಂಗ ವಿಶೇಷದಲ್ಲಿ ಆಕೆಯನ್ನು ಜಗ್ಗುತ್ತ ಎಳೆಯುತ್ತ ಒಯ್ಯಲಿಕ್ಕೂ ಹಿಂದುಮುಂದೆ ನೋಡುವವನಲ್ಲ" ಇಷ್ಟು ವಿಸ್ತೃತವಾದ ಮಾಹಿತಿಯು ಅದೊಂದೇ ನಾಲ್ಕು ಶಬ್ದಗಳ ವಾಕ್ಯದಿಂದ ಕಿಶನನಿಗೆ ಕೇಳಿಸಿತು. ಆತನ ಅಪೇಕ್ಷೆಗೆ ಅದು ಸರಿಯೆಂದು ತೋರಲು, ಆತನು ತನ್ನಷ್ಟಕ್ಕೆ ತಾನೇ ಗುಣಗುಟ್ಟಿದನೇನಂದರೆ, "ಹೌದಪ್ಪ ಹೌದು! ಮಾಲತಿಯೇ ಒಳಗಿರಲಿಕ್ಕೆ ಬೇಕು! ರೋಶನ್ ಅಂದರೇ ಮಾಲತಿ! ಅವಳು ದೀಪದೊಡನೆ ಹೊರಗೆ ಬಂದಾಳೇನು?.... ....ಅಥವಾ ಈತನು ಅವಳನ್ನು ಎಳೆದೇ ತರುವನೊ?...."

ಸಚಿಂತ ಉತ್ಸುಕತೆಯಿಂದ ಆತನ ಎದೆಯು ನಡುಗಹತ್ತಿತು! ಸಿಟ್ಟಿನಿಂದ ಆತನ ತುಟಿಗಳು ಸ್ಫುರಣಗೊಂಡವು. ದೀಪವು ಬಾಗಿಲ ಬಳಿಗೆ ಬರಹತ್ತಿತೆಂಬದು ಗೊತ್ತಾಗುತ್ತಲೆ, ಆತನು ಆ ಕಲ್ಲುಗೋಡೆಯ ಮರೆಗೆ ಕತ್ತಲಲ್ಲಿ ಮರೆಯಾಗಿ, ಅಲ್ಲಿಂದಲೇ ದೀಪದ ಕಡೆಗೆ ದಿಟ್ಟಿಸಿ ನೋಡಹತ್ತಿದನು.

ಹೊಗೆ ಹೊರಡುತ್ತಿದ್ದ ಬೆಂಕಿಯನ್ನು ಚುಚ್ಚಿದರೆ ಹೇಗೆ ಅಷ್ಟರ ಮಟ್ಟಿಗೆ ತುಸ ಉರಿ ಏಳುವದೋ, ಅದರ ಜ್ಯೋತಿಯು ತುಸ ಅಲೆದಾಡುವದೋ, ಹಾಗೆ ಗುಲಾಮ ಹುಸೇನನ "ಆತಾ ಕೀ ನಹಿ ಇಧರ! ಔರ ಆಗೆ?"

ಎಂಬ ಬೆದರಿಕೆಯ ನುಡಿಗಳ ಮಟ್ಟಿಗೇ ತನ್ನ ಹಟವಾದೀ ಹೆಜ್ಜೆಗಳನ್ನಿಕ್ಕುತ್ತ, ಮತ್ತೆ ಹಟದಿಂದ ನಿಲ್ಲುತ್ತ, ದೀಪ ಹಿಡಿದಿದ್ದ ಯಾವನೀ ವೇಷದ ಹರೆಯದ ಹೆಂಗಸು ಕೊನೆಗೆ ಹೊರಗೆ ಬಂದಳು. ಆ ದೀಪವನ್ನು ಗುಲಾಮ ಹುಸೇನನು ತೋರಿಸಿದ್ದ ಮೊಳೆಗೆ ತೂಗ ಹಾಕಿ ಅವಳು ಮತ್ತೆ ಮನೆಯೊಳಗೆ ನಡೆದಳು. ಅಷ್ಟರಲ್ಲಿ ಗುಲಾಮ ಹುಸೇನನು ಆಕೆಯನ್ನು ಹಿಡಿದು, ಸಮೀಪದಲ್ಲಿಯೇ ಬಿದ್ದಿದ್ದ ಒಂದು ಬಹು ದೊಡ್ಡ ಮರದ ತುಂಡಿನ ಮೇಲೆ ಕುರ್ಚಿಯ ಮೇಲೆ ಕಾಲು ಇಳಿಬಿಟ್ಟು ಕೂಡ್ರುವಂತೆ ಕುಳಿತನು; ಮತ್ತು ಅವಳನ್ನು ತನ್ನ ತೊಡೆಯಮೇಲೆ ಒತ್ತಾಯದಿಂದ ಎಳೆದುಕೊಳ್ಳುತ್ತ:-"ಆವ! ತೂ ಹಸ ಯಾ ರೋ ಪಡ. ಪರ ಮೈ ಅಭೀ ತೇರಿ ಸಾಥ ಪ್ರೇಮಕೀ ಮಜಾ ಲುಟೂಂಗಾಹೀ. ದೇಖಬೇ ತೋ ತೇರಾ ಬಹು ಸುಂದರ ಮೂಹ! ನಹಿ ಉಠಾತೀ ಮೂಹ ಉಪರ? ತೋ ಐಸಾ ಮೈ ಜಬರಸೆ ಉಸೆ ಉಪರ ಉಠಾವೂಂಗಾ, ಔರ ಮೇರಿ ಆಖೆ ಭರಭರಕೆ ತೇರೀ ಖುಬ-ಸೂರತೀ ಕೀ ಶರಾಬ ಪೀಲೂಂಗಾ!"

ಹೀಗೆ ಅಚ್ಛದಿಂದ ಅನ್ನುತ್ತ, ಆ ಸ್ತ್ರೀಯ ಮುಖವನ್ನು ಬಲಾತ್ಕಾರದಿಂದ ಮೇಲಕ್ಕೆತ್ತಿ ಎರಡೂ ಕೈಗಳಿಂದ ಆ ದೀಪದ ಬೆಳಕಿನಲ್ಲಿ ಹಿಡಿದು ಕಣ್ಣುತುಂಬಾ ಆಕೆಯ ಆ ರೂಪರಾಶಿಯ ಮಧ್ಯವನ್ನು ಆತನು ಸೇವಿಸ ತೊಡಗಿದನು; ಮತ್ತು ಆ ಮುಖವನ್ನು ಮತ್ತೆ ಮತ್ತೆ ಚುಂಬಿಸುತ್ತ:— "ವಾಹವ್ವಾ! ವಾಹವ್ವಾ! ಇಸ ಅಂಧೇರೀ ರಾತಮೇ ನಯಾ ಚಾಂದ! ಐ ರೋಶನ್, ಕ್ಯಾ ಬೋಲತೀ ಥೀ ತುಝೀ ತೇರೀ ಮಾ? ಮಾಲತೀ? ಐ ಮಾಲತೀ! ಮೇರೀ ಜಾನ!"

ಗುಲಾಮ ಹುಸೇನನಿಗೆ ಆ ಕಾರ್ಗತ್ತಲೆಯಲ್ಲಿ ಹೊಸ ಚಂದ್ರನುದಯಿಸಿದಂತೆಯೇ ಆ ಮಾಲತಿಯ ಮುಖಮಂಡಲವು ಸುಂದರವಾಗಿ ಭಾಸವಾಯಿತು. ಅದನ್ನು ದೃಷ್ಟಿಸುತ್ತಲೆ ಆ ಕಾರಿರುಳು ಕಿಶನನಿಗೆ ಇನ್ನಿಷ್ಟು ಕಪ್ಪಾಗಿ ಕಾಣಿಸಹತ್ತಿತು! ಆ ದೀಪದ ಬೆಳಕಿನಲ್ಲಿ ಎತ್ತಿ ಹಿಡಿದಿದ್ದ ಆಕೆಯ ಮುಖಮಂಡಲವು ಸ್ಪಷ್ಟವಾಗಿ ಕಾಣಿಸುತ್ತಲೆ, ಆಕೆಯು ಮಾಲತಿಯೇ ಎಂಬದು ಕಿಶನನಿಗೆ ನಿಸ್ಸಂದೇಹವಾಗಿ ತೋರಿ ಬಂದಿತು; ಮತ್ತು ಯಾವ ಮಾಲತಿಯನ್ನು ಯಾವುದೋ ದು ಬಂಗಾರದ ತಬಕದಲ್ಲಿ ಪೂಜೆಗಾಗಿ ಮಾಡಿಟ್ಟ ಶುಭ್ರ ಹಾಗು ಪವಿತ್ರ ಪುಷ್ಪಮಾಲಿಕೆಯಂತೆ ಆತನು ಮಥುರೆಯಲ್ಲಿ ಕಂಡಿದ್ದನೋ, ಅವಳನ್ನೇ ಆ ಮಲಿನನೂ ಅಡಮುಟ್ಟನೂ ಆದ ಲಫಂಗನ ತೊಡೆಯ ಮೇಲೆ ಹೊಲಸು ಕೆಸರಿನಲ್ಲಿ ಬಿದ್ದಿರುವ ನಿರ್ಮಾಲ್ಯದಂತೆ ಆ ಗಲಿಚ್ಛಾವಸ್ಥೆಯಲ್ಲಿ ಕಂಡೊಡನೆಯೇ ಆತನ ಕಣ್ಣಿಗೆ ಒಮ್ಮೆಲೆ ಬವಳಿ ಬಂದಿತು!

"ಮಾಲತಿ! ತುಝೆ ಮೇರೀ ಬೋಲಿ ಸಮಝತೀ ನಹಿ? ಅಚ್ಛಾ! ಮೈ ತೇರೆ ತುಟಿಫುಟಿ ಕನಡೀಮೇ ಬೋಲತೋ ಸುನ! ನೀನು ಐಸೀ ದುಃಖಿ ಮೇ ಯಾಕ? ನಿನ್ನ ಅವ್ವ ನಿನಗೆ ನೆನಪ ಹೋತಾ ಹೈ? ಇಸಲಿಯೇ ನೀನು ಅಬಿತಕ್ ದಾಂಡಗಾಯಿಕ ಕರತೆ, ಹೀಗೆ ಅಳತೀ, ನನ್ನ ಝಿಡಕಾರತೀ? ರೋಜ ತೋ ಮೇರೆ ಬಿಛೊನೇಮೇ ತೇರೆಕೀ ಲೇತಾಹಿ ಹೈ? ಫೇರ ಬಲಸೆ ಹಮ ನಿನ್ನಿಂದ ಯಾವುದನ್ನು ಕಸಿಯುತ್ತಿರುವನೋ, ಆ ಸುಖವನ್ನು ನೀನು ಹಮನೇ ಹಸತೇ ಹಸತೇ ಕ್ಯೊಂ ದೇತ ನಹಿ ಮುಝೆ? ನಿನ್ನ ಮಾಳನ್ನು ನಿನ್ನ ಜೊತೆ ತಂದಿಡಲೊ? ಬೋಲ! ನಿನ್ನವ್ವನನ್ನು ನಾನು ಓಡಿಸಿಕೊಂಡು ಬರುತ್ತೇನೆ ನೋಡು. ಫೇರತೋ ಸುಖಮೇ ಹಸತೇ ಸೋಯೇಂಗೀ ನನ್ನ ಮಗ್ಗಲಲ್ಲಿ? ನಿನ್ನವ್ವನ...."

"ಮಂಗಾ! ನನ್ನ ಅವ್ವನ ಹೆಸರನ್ನು ಇನ್ನೊಮ್ಮೆ ಎತ್ತಬೇಡ ಈ ನಿನ್ನ ನೀಚ ಬಾಯಿಂದ! ನಿನ್ನ ಮುಸುಡಿಗೆ ಬೆಂಕೀಹಚ್ಚಲಿ!" ಮಾಲತಿಯು ಗುಲಾಮಹುಸೇನನಿಂದ ಎತ್ತಿ ಹಿಡಿಯಲ್ಪಟ್ಟಿದ್ದ ಹಾಗು ಈಗ ಸಂತಾಪದಿಂದ ಕೆಂಪಾಗಿದ್ದ ತನ್ನ ಮುಖವನ್ನು ಒಮ್ಮೆಲೆ ಕೊಸರಿಕೊಳ್ಳಹೋದಳು. ಆ ಕೂಡಲೆ ಆಕೆಯ ತಲೆಯು ಆತನ ಗದ್ದಕ್ಕೆ ಬಡಿದು, ಆತನ ಹಲ್ಲುಗಳು ಒಂದರ ಮೇಲೊಂದು ಭೀಕರದಿಂದ ಅಪ್ಪಳಿಸಲು, ಅದರಿಂದ ಅವನಿಗೆ ಒಮ್ಮೆಲೆ ಛಟಕು ಹಿಡಿಯಿತು. ಆ ಕೂಡಲೆ ಅವನು ಕ್ರೋಧಭರದಿಂದ ಮಾಲತಿಯ ಕೆನ್ನೆಯ ಮೇಲೊಮ್ಮೆ ಚನ್ನಾಗಿ ಬಿಗಿದು, ಆಕೆಯನ್ನು ತನ್ನ ತೊಡೆಯ ಮೇಲಿಂದ ನೂಕುತ್ತಲೆ, ಆಕೆಯು ದೊಪ್ಪೆಂದು ನೆಲದ ಮೇಲೆ ಬಿದ್ದಳು!

"ರಾಕ್ಷಸಾ! ನಿನ್ನ ಕುತ್ತಿಗೆ ಹಿಚುಕುತ್ತೇನೆ!" ಎಂದು ದಯೆಯ ಹಾಗು ದ್ವೇಷದ ಲಹರಿಯಲ್ಲಿ ಗುಣುಗುಟ್ಟುತ್ತ ಕಿಶನನು ಒಮ್ಮೆಲೆ ಆ ಕಲ್ಲು ಗೋಡೆಯನ್ನೇರಹತ್ತಿದನು. "ನಿನ್ನ ಪ್ರಾಣವನ್ನಾದರೂ ತಕ್ಕೊಳ್ಳುತ್ತೇನೆ; ಇಲ್ಲವೆ ನಾನಾದರೂ ಸಾಯುತ್ತೇನೆ." ಎಂಬ ಊರ್ಮಿಯೊಡನೆ ಅತನು ಆ ಗೋಡೆಯ ಮೇಲೆ ತನ್ನದೊಂದು ಕಾಲಿಡುವಷ್ಟರಲ್ಲಿ ಕೆಳಗಿನ ಕಲ್ಲು ಜಾರಿ ಅದರ ಕೆಳಗಿನ ಒಂದು ಕಲ್ಲಿನ ಸಂದಿಯೊಳಗೆ ಕಾಲು ಸಿಕ್ಕಿತು. ಆ ಕೂಡಲೆ ಆತನ ದ್ವೇಷದ ಊರ್ಮಿಯೂ ಅಲ್ಲಿಯೇ ಸಿಕ್ಕುಬಿದ್ದಿತು! ಕಾಲು ಕಿತ್ತುಕೊಳ್ಳುತ್ತಿರುವಾಗ ಆತನ ಮನಸ್ಸಿನಲ್ಲಿ ಬೇರೊಂದು ವಿಚಾರವು ತಲೆದೋರಿತು. "ನನ್ನ ಪ್ರತಿಜ್ಞೆಯೊಳಗಿನ ಗುಲಾಮಹುಸೇನನ ಪ್ರಾಣವನ್ನಾದರೂ ಹೀರುತ್ತೇನೆ; ಎಂಬ ವಿಕಲ್ಪಕ್ಕಿಂತ, ಇಲ್ಲದಿದ್ದರೆ ನನ್ನ ಪ್ರಾಣವನ್ನಾದರೂ ಕೊಡುತ್ತೇನೆ" ಎಂಬ ವಿಕಲ್ಪವೇ ಇಂಥ ಸಾಹಸದಲ್ಲಿ ಫಲಿಸುವದು ಹೆಚ್ಚು ಸಂಭವವು! ಈ ಅಥವ

ಹುಸೇನನು ಸಶಸ್ತ್ರನಿದ್ದೇ ಇರುವನು! ನಾನು ಮಾತ್ರ ನಿಶ್ಯಸ್ತ್ರನು! ಈ ಬಡಿದಾಟದಲ್ಲಿ ನನ್ನ ಮೇಲಿನ ಸಿಟ್ಟನ್ನು ಆತನು ಮಾಲತಿಯ ಮೇಲೆ ಹಾಯಿಸಿ ಆಕೆಯನ್ನು ಕೊಲೆಗೆಯ್ಯಲಾರನೆಂದು ಹೇಗೆ ತಿಳಿಯಲಿ! ಮತ್ತು ಈ ಮನೆಯಲ್ಲಿ ಈತನ ಇನ್ನೊಬ್ಬನಾವನಾದರೂ ಜೊತೆಗಾರನಿರಲಿಕ್ಕಿಲ್ಲವೆಂದು ಹೇಗೆ ಅನ್ನಬೇಕು? ಇಂಥ ಲಜ್ಜೆಗೆಟ್ಟ ಅಧಮರ ಶೃಂಗಾರವು ಬಹುಮಟ್ಟಿಗೆ ಸಾಮೂಹಿಕವಾಗಿಯೂ ಇರುತ್ತದೆಂದು ಇವರ ಸಹಕಾರಿಯಾದ ಹಸನಭಾಯಿಯು ಆ ಖಟ್ಲೆಯಲ್ಲಿ ಆಣೆಮಾಡಿ ಹೇಳಿರುತ್ತಾನೆ! ಛೆ! ಇಂಥ ಈ ಸಾಹಸ ಮಾಡುವದೆಂದರೆ, ಮಾಲತಿಯನ್ನು ಸಂಕಟದಿಂದ ಪಾರು ಮಾಡಲಿಕ್ಕೆ ದೊರೆತಿರುವ ಈ ಅನಾಯಾಸದ ಅದ್ಭುತ ಯೋಗಾಯೋಗದ ಸುಸಂಧಿಯನ್ನು ಕಳಕೊಳ್ಳುವುದೇ ಸರಿ!'' ಆ ಕಲ್ಲೋಳಗಿಂದ ತನ್ನ ಕಾಲನ್ನು ಕಿತ್ತಿಕೊಂಡವನೇ ಮತ್ತೆ ಕತ್ತಲೆಯಲ್ಲಿ ಆ ಅಧಮನಿಗೆ ಕಾಣದ ಹಾಗೆ ಹೇಗೆ ಮರೆಯಾಗುವೆನೋ ಎಂಬದೇ ಕಿಶನನಿಗೆ ಗಡಚಾಯಿತು. ಆತನು ಪುನಃ ಆ ಗೋಡೆಯ ಮರೆಗೆ ಕುಳಿತು ಮತ್ತೇನಾಗುವದೆಂಬದನ್ನು ಒತ್ತಟ್ಟಿಗೆ ನೋಡುತ್ತಿರುವಾಗಲೇ ಇನ್ನೊತ್ತಟ್ಟಿಗೆ ಆತನ ಮನಸ್ಸಿನಲ್ಲ ''ನಾನು ಇನ್ನು ಏನು ಮಾಡಲಿ?'' ಈ ವಿಷಯದ ತಿರುವು-ಮುರುವು ಸ್ಥಿರವಿಲ್ಲದ ವಿಚಾರಗಳು ಒಂದೇಸವನೆ ತಾಕಲಾಡಹತ್ತಿದವು.

ನೆಲದ ಮೇಲೆ ದೊಪ್ಪೆಂದು ಬಿದ್ದ ಮಾಲತಿಯು ಅಳುತ್ತಳುತ್ತ ಕೈಯನ್ನು ತಲೆಗಿಂಬಿಗೆ ತಕ್ಕೊಂಡು ಅಲ್ಲಿಯೇ ಬಿದ್ದಿದ್ದಳು. ಗುಲಾಮ ಹುಸೇನನು ನೆಟ್ಟಗೆ ಸೆಟೆದು ಎದ್ದು ನಿಂತು, ಹಾಗೆ ಅಲ್ಲಿ ಬಿದ್ದವಳನ್ನೇ ಕ್ಷಣ ಕಾಲ ಕಣ್ಣು ತುಂಬ ನೋಡಿ, ವಿಶೇಷ ಆತುರತೆಯಿಂದ ನಕ್ಕು:—''ಆಹ ರೇ ಖುಬಸುರತೀ! ಛೋಕರೀ, ಚಿತ್ರದಂತೆ ಒಳ್ಳೇ ನಯನಮನೋಹರವಾಗಿರುವ ನಿನ್ನೀ ಮ್ಯೆಕಟ್ಟು ಕೀತನೀ ಪ್ಯಾರೀ ಲಗತೀ ಹೈ! ನೀನು ಎದ್ದು ನಿಲ್ಲುವಾಗಿನಿಗಿಂತಲೂ ಹೀಗೆ ಚಿಗರೆಯಂತೆ ನೀನು ನಿನ್ನ ಈ ಉದ್ದನ್ನ ದುಂಡಾದ ಸುಂದರ ಕಾಲುಗಳನ್ನು ಮಗ್ಗಲಲ್ಲಿ ಜೋಡಿಸಿಕೊಂಡು ಬಿದ್ದಿರುವಾಗಲೆ ನಿನ್ನ ದೇಹಲತೆಯು ಅದೊಂದು ಹೊಸ ಶೋಭೆಯಿಂದ ಮನಸ್ಸನ್ನು ಮೋಹಿಸಿ ಬಿಡುತ್ತದೆ! ಔರ ಶಂಭರ ಔರತಾ ಖಿಲಖಿಲಕೆ ಹಂಸನೇಸೆ ಜಿತನಾ ಆನಂದ ನಹಿ ಆತಾ, ಅಷ್ಟು ಆನಂದವು ನೀನು ಹೀಗೆ ಬಿಕ್ಕಿ ಬಿಕ್ಕಿ ಅಳುತ್ತ ಮಗ್ಗುಲಾಗಿ ಕ್ಷಣಕಾಲ ಮಲಗಿರುವದನ್ನು ನೋಡಿ ನನಗೆ ಹೋತಾ ಹೈ! ತೇರೀ ಛಾತೀ ಸ್ಪಂದನಮೇ ಕೈಸೀ ಉಂಚಾವತೇ, ಕೈಸೀ ನೀಚಾವತೇ, ಬಿಖರೇ ಕುರಲ ಕೈಸೆ ಹಕ್ಕಿಯ ಗುಂಪಿನ ಹಾಗೆ ತೇರೆ ಭಾಲಕೆ ಮಂಡಪಪರ ಖಿದಳತ ಊಡತೇ ಹೈ! ಅಬ

ಸಮುಝಾತೀ ಹೈ ನನ್ನ ಕನ್ನಡ ನುಡಿ ನಿನಗೆ? ಏಳು! ದಂಭವನ್ನು ಬಿಟ್ಟು ಬಿಡು! ನೀನು ತಿರಸ್ಕರಿಸುತ್ತಿರುತ್ತೀ ಎಂದು ನಾನು ನಿನ್ನನ್ನು ಬಿಡುವೆನೇ? ಪ್ಯಾರಿ! ಕೇಳು. ಹೆಚ್ಚು ಹಾಲು ಕರೆಯುವ ಆಕಳು ಇರುವದಿಲ್ಲವೇ? ಅದು ಯಾವಾಗ ಹಟದಿಂದ ನೆಲಕ್ಕೆ ಕುಳಿತುಬಿಡುವದೋ, ಗೌಳಿಗನು ಆಗ ಅದರ ಕಾಲು ಕಟ್ಟಿ ಬಲಪೂರ್ವಕವಾಗಿ ಎಬ್ಬಿಸಿ ನಿಲ್ಲಿಸಿ ಹಿಂಡಿಕೊಳ್ಳದಿರುವನೇ? ಆಕಳು ಒದೆಯುವದೆಂದು ಯಾವ ಗೌಳಿಗನು ಅದರ ಕೊಡದಂತಹ ಕೆಚ್ಚಲ ದೊಳಗಿನ ಹಾಲು ಕರೆಯದಿರುವನೋ, ಅಂಥ ಆ ಹೆ[illegible]ಯು ಆ ಆಕಳನ್ನು ಸಾಕಬೇಕೇಕೆ? ಊಠ ಪ್ಯಾರೀ, ಊಠ, ತೇರೀ ಜವಾನೀಕೀ ಖುಬಸೂರತ ಗಾಯು ವ್ಹೈ ದೋಹಣಂಗಾಹೀ ದೋಹೂಂಗಾ!"

ಗುಲಾಮಹುಸೇನನು ಸ್ವತಃ ಕೆಳಗೆ ಕುಳಿತು ಅವಳನ್ನು ಮತ್ತೆ ಬಲ ಪೂರ್ವಕವಾಗಿ ಎಬ್ಬಿಸಿ ಹತ್ತರ ಕೂರಿಸಿಕೊಂಡು, ಚೆನ್ನಾಗಿ ರಮಿಸತೊಡಗಿ ದನು. "ಪ್ರಿಯ ಮಾಲತೀ! ಹಗಲೆಲ್ಲ ಬೀಗ ಹಾಕಿ ಸೆರೆಯಿರಿಸುವೆನೆಂದು ನೀನು ಸಿಟ್ಟಾಗುತ್ತೀಯೇನು? ಆದರೆ ಪೋಲೀಸರಿಗೆ ನಿನ್ನ ಪತ್ತೆ ಹತ್ತಬಾರದು; ನಿನ್ನನ್ನು ಹಿಡಿದೊಯ್ದರೆ ಅವರು ನಿನಗೆ ಹೊಡೆ-ಬಡೆಯುವರು! ಮತ್ತೆಯಾವ ನೊಬ್ಬ ದುಷ್ಟನ ಸೆರೆಯಲ್ಲಿ ಈ ಹಕ್ಕಿಯು ಸಿಕ್ಕೀತು! ನಿನ್ನೀ ದಂಭದ ರೆಕ್ಕೆ ಗಳನ್ನು ನನ್ನ ಪ್ರಿಯಕರಣೀ, ಅವರು ಕತ್ತಿಬಿಟ್ಟಾರು ನೋಡು! ಯಾವ ತೋಳನೂ ಹಿಡಿದೊಯ್ಯಬಾರದೆಂದು ಈ ಕುರಿಯ ದಡ್ಡಿಯಲ್ಲಿ ಕೀಲಿ ಹಾಕಿ ಇಟ್ಟಿರಬೇಕಾಗುವದು ನನ್ನೀ ಅಚ್ಚದ ಪುತ್ತಳಿಯನ್ನು! ಆದರೆ ಇನ್ನು ೩-೪ ದಿನಗಳಲ್ಲೇ ನಾನು ನಿನ್ನನ್ನು ಅತಿ ದೂರ ಹಾಗು ಒಳ್ಳೇ ರಮ್ಯವಾದ ವನದಲ್ಲಿ ಒಯ್ಯುತ್ತೇನಾದ್ದರಿಂದ, ಅಲ್ಲಿ ಇತ್ತಕಡೆಯ ಪೋಲೀಸ-ಪ್ಯಾದೆಗಳ ಅಜ್ಜ ಮುತ್ತಜ್ಜಂದಿರು ಬಂದರೂ ಅವರಿಗೆ ನಮ್ಮ ಪತ್ತೆ ಹತ್ತಲಾರದು. ಆ ಹರಾಮ ರಫೀಉದ್ದೀನನಂತೂ ಜೀವಾವಧಿ ಕರಿನೀರಿಗೆ ಹೋಗಿಬಿಟ್ಟನು! ಇನ್ನು ನಮ್ಮಗಳ ಮರವು ಪೋಲೀಸರಿಗೆ ಸಹಜವಾಗಿಯೇ ಆಗುವದು. ಅದರಲ್ಲಿಯೂ ಆ ರಮ್ಯವನದೊಳಗೆ ನನಗೆ ದೊರೆತ ಸ್ಥಳವು ಬಹು ಗುಪ್ತವಾಗಿರುವದರಿಂದ, ನೀನು ಅಲ್ಲಿ ಬಹಿರಂಗವಾಗಿ ಮನಬಂದಂತೆ ವಿಹರಿಸಬಹುದು ದರವಡೆಗಳಲ್ಲಿ ಸಂಪಾದಿಸಿರುವ ಈ ಎರಡು ರತ್ನಮಾಲೆಗಳು, ಈ ಚಿನ್ನವು ಮತ್ತು ಈ ನನ್ನ ಚಿನ್ನೆಯು! ಅಲ್ಲಿ ವಿಲಾಸವೇ ವಿಲಾಸ! ಭೋಗವೇ ಭೋಗ! ನನ್ನ ಆಯುಷ್ಯದ ವರೆಗೂ ನೀನು ನನ್ನೊಡನೆ ಬೇಕಾದಷ್ಟು ರಮಿಸು ಇದುವರೆಗೆ ಸಂಪಾ ದಿಸಿದ್ದಾಯಿತು; ಇನ್ನು ಉಪಭೋಗಿಸುವದೇ ಕೆಲಸ. ಪ್ಯಾರೀ, ತುಸ ನಗ ಬಾರದೇ? ನಗು-ನಗು" ಎಂದಂದು ಆತನು ಆಕೆಯನ್ನು ಕಟ್ಟಾಡಿಸಹತ್ತಿದನು

ಮಾಲತಿಗೆ ಆತನ ಕಟ್ಟಾಡಿಸೋಣವು ಕರಡಿಯ ಪ್ರಾಣಘಾತಕ ಕಟ್ಟಾಡಿಸುವಿಕೆಯಂತೆ ಅನಿಸಿತು. ಆಕೆಯು ಕಸವಿಸಿಯಿಂದ ನಕ್ಕಳು; ಆದರೆ ಆ ಕಟ್ಟಾಡಿಸೋಣದರಿಂದ ಕಿಶನನಿಗೆ ಮಾತ್ರ ನಗೆ ಬಂದಿತು. ಆದರಿಂದ ಆತನು ಅತ್ಯಂತ ಸಂತೋಷದಿಂದ ನಕ್ಕನು! ಪೋಲೀಸರ ಹೆಸರು ಗುಲಾಮ ಹುಸೇನನ ಬಾಯಿಂದ ಹೊರಟ ಕೂಡಲೆ ಆತನಿಗೆ ಒಮ್ಮೆಲೆ ಗುರುಮಂತ್ರ ಲಭಿಸಿದಂತಾಯಿತ.! ಕಾರಿರುಳಲ್ಲಿ ಆಕಸ್ಮಿಕವಾಗಿ ಹ್ಯಾಂಡ ಬ್ಯಾಟರಿ ದೊರೆತಂತಾಗಿ ತನ್ನ ಚಿತ್ತದೊಳಗಿನ ಅವರ ಗುಂಡಿಯನ್ನು ಒತ್ತುತ್ತಲೇ ಆತನಿಗೆ ಮುಂದಿನ ಉಪಾಯಗಳ ದಾರಿಯು ಸ್ಪಷ್ಟವಾಗಿ ಕಾಣಿಸಿತು. ಭಲೆ! ಈಗಿಂದೀಗಲೆ ಪೋಲೀಸ ಚಾವಡಿಗೆ ಹೋಗಿ, ಈ ಸಂಗತಿಯನ್ನು ಗುಪ್ತವಾಗಿ ತಿಳಿಸತಕ್ಕದ್ದು ಹದಿನೆಂಟು ವರ್ಷದೊಳಗಿನ ಕುಮಾರಿಕೆಯನ್ನೋಡಿಸಿದುದು ಗುಲಾಮ ಹುಸೇನನವೊಂದು ನೈರ್ಬಂಧಿಕ ಘೋರ ಅಪರಾಧವು; ಆದರೆ ಮಾಲತಿಯದಲ್ಲ! ಅದರಲ್ಲಿ ಗುಲಾಮ ಹುಸೇನನ ಮೇಲೆ ದರೋಡೆಯ ವಾರಂಟೂ ಇರತಕ್ಕದ್ದೇ! ಈತನು ಹಿಂದಿನ ಖಟ್ಲೆಯೊಳಗಿನ ಫರಾರೀ ಆರೋಪಿಯು! ಅದರಿಂದ ಈತನಿನ್ನು ಗಲ್ಲಿಗೆ ತೂಗುಬೀಳುವವನೇ! ಮಾಲತಿಯು! ಮಾಲತಿಯು ಮತ್ತೆ ತನ್ನ ಮಾಧುರಿಯೊಳಗಿನ ಆ ಆನಂದದ ತೂಗುಮಣೆಯ ಮೇಲೆ ಕುಳಿತು, ಆಗಿನಂತೆಯೆ ಮತ್ತೆ ಪ್ರೇಮಗೀತಗಳನ್ನು ಹಾಡುತ್ತ ಆಕಾಶದೊಳಗಿನ ಸುಂದರ ಹಕ್ಕಿಗಳಂತೆ ಹಾರಿ-ಹಾರಿ ಝುರುಕೆ ತಕ್ಕೊಳ್ಳುತಕ್ಕವಳು. ಅವಳ ಪ್ರೇಮಲ "ಕಿಶನ್" ಎಂಬ ಕೂಗು ತನಗೆ ಮತ್ತೆ ಕೇಳುವದು.

ಕಿಶನನು ಆನಂದದ ಭರದಲ್ಲಿ ಆ ಸುದ್ದಿಯನ್ನು ಪೋಲೀಸರಿಗೆ ತಿಳಿಸುವ ಸಲುವಾಗಿ ಸ್ವಲ್ಪವೂ ಸಪ್ಪಳವಾಗದ ಹಾಗೆ ಮುಚ್ಚುಮರೆಯಿಂದ ಆ ಕಲ್ಲುಗೋಡೆಯ ಮರೆಯಿಂದ ದಾರಿಯ ಕಡೆಗೆ ಹೊರಳಿದನು; ಅಷ್ಟರಲ್ಲಿ ಕಿಶನನು ಅಕಸ್ಮಾತ್ತಾಗಿ ಒಮ್ಮೆಲೆ ಭಯಂಕರವಾಗಿ ಚೀರುತ್ತ "ಅಯ್ಯಯ್ಯೋ!" ಎಂದು ಕಿರಚಿದನು.

"ಭೊಂ, ಭೊಂ, ಗುರ್‍ರ್‍ರಗುರ್‍ರ್‍ರ!" ಎಂದೆನ್ನುತ್ತ ಕಿಶನನ ಮೀನಗಂಡವನ್ನು ಬಾಯಲ್ಲಿ ಹಿಡಿದ ಒಂದು ವಿಕರಾಳ ನಾಯಿಯು ಅದನ್ನು ಒಂದೇ ಸವನೆ ಕಡಿಯಹತ್ತಿತು! ಅದು ಆ ಮನೆಯ ಬಳಿಯಲ್ಲಿ ಸಾಕಿದ್ದ ಗುಲಾಮ ಹುಸೇನನ ಬೇಟೆಯ ನಾಯಿಯಾಗಿದ್ದಿತು.

ಕಲ್ಲುಗೋಡೆಯ ಹತ್ತರ ಒಳಗಡೆಗೆ ಅಡ್ಡಾಡುತ್ತಿದ್ದ ಆ ನಾಯಿಗೆ ಹೊರಗಡೆಗೆ ಏನೋ ನಾತವು ಬರಲು, ಅದು ಕತ್ತಲಲ್ಲಿಯೋ ಗೋಡೆ ಹತ್ತಿತು; ಹಾಗು ಕಿಶನನು ತನ್ನ ಸ್ಥಳದಿಂದ ಅಲ್ಲಾಡಿದೊಡನೆಯೋ ಅದರ ದೃಷ್ಟಿಯು

ಅತ್ತ ಹೊರಳಿ, ಕೂಡಲೆ ಅದು ಕಿಶನನ ಮೇಲೆ ಒಂದೇ ಹಾರಿಕೆ ಹಾರಿ ಬಂದು ಆತನ ಮೊಣಗಂಡವನ್ನು ಹಿಡಿದು ಕರಕರನೆ ಕಡಿಯಹತ್ತಿತು! ಕತ್ತಲಲ್ಲಿ ಆ ನಾಯಿಯು ಅರಿವಿಲ್ಲದೆ ಕಚ್ಚಲು, ಹೇತುವಿರದಿದ್ದರೂ ಕಿಶನನು ಅಷ್ಟು ಗಟ್ಟಿಯಾಗಿ ಕಿರಚಿಕೊಂಡನು; ಆದರೂ ಆ ನಾಯಿಯು ಹಿಡಿದ ಮೊನ ಗಂಡವನ್ನು ಬಿಡಲೊಲ್ಲದು. ಇಷ್ಟೇ ಅಲ್ಲ, ಅದು ತ್ವೇಷದಿಂದ ಅದನ್ನು ಒಂದೇಸವನೆ ಕಚ್ಚುತ್ತ ಗುರುಗುಟ್ಟುತ್ತ ಕಾದಾಡತೊಡಗಿತು.

ಕಲ್ಲುಗೋಡೆಯ ಬಳಿಯಲ್ಲಿ ಯಾರೋ ಕಿರಚಿದ ಧ್ವನಿ ಕೇಳಿ ಆ ಕಾಮಾತುರನಾದ ಗುಲಾಮ ಹುಸೇನನು ಬೆರಗಾದನು. ತನ್ನ ಆ ನ್ಯಾಯಗಂಟ ನಾಯಿಯೇ ಯಾವನೊಬ್ಬ ದಾರಿಕಾರನನ್ನು ಕಾರ್ಗತ್ತಲೆಯಲ್ಲಿ ಕಚ್ಚಿರ ಬಹುದೆಂಬದು ಲಕ್ಷ್ಯಕ್ಕೆ ಬರಲು, ತನ್ನ ಕಳ್ಳ ವಸತಿಯ ಬಳಿಯಲ್ಲಿ ಗದ್ದಲ ವೆದ್ದು, ಇತ್ತಕಡೆಗೆ ಜನರ ಲಕ್ಷ್ಯ ವೇಧಿಸುವ ಸಂಕಟವು ಆತನಿಗೆ ಬೇಡಾದ್ದ ರಿಂದ, ಆ ಪ್ರಕರಣವನ್ನು ಕೂಡಲೆ ಸಾಮೋಪಚಾರದಿಂದ ಬಗೆಹರಿಸಿ ಬಿಡ ಬೇಕೆಂದು ಲಾಂದರವನ್ನು ತಕ್ಕೊಂಡು ಹಾಗು ಮಾಲತಿಗೆ "ಮನೆಯೊಳಗೆ ಹೋಗು" ಎಂದು ಹೇಳಿ, ಆತನು ಓಡುತ್ತೋಡುತ್ತ ಆ ಕಲ್ಲುಗೋಡೆಯ ಬಳಿಗೆ ಬಂದನು. ಅಷ್ಟರಲ್ಲಿ ಕಿಶನನು ಆ ಗೋಡೆಯೊಳಗಿನದೊಂದು ಕಲ್ಲು ತಕ್ಕೊಂಡು ಆ ವಿಕರಾಳ ನಾಯಿಯ ತಲೆಗೆ ಹೊಡೆದದ್ದರಿಂದ, ಅದು ಮೊನ ಗಂಡವನ್ನು ಬಿಟ್ಟು ಕುಂಯಿಗುಟ್ಟುತ್ತ ತುಸ ಹಿಂಜರಿಯಿತು; ಆದರೆ ಅದು ಒದರುತ್ತ ಗುರುಗುಟ್ಟುತ್ತ ಕಿಶನನನ್ನು ಮತ್ತೆ ಕಚ್ಚುವ ಸಲುವಾಗಿ ಓಡಾಡ ಹತ್ತಿತು.

ಕಿಶನನ ಮೊಣಗಂಡದೊಳಗಿಂದ ರಕ್ತವು ಸುರಿಯಹತ್ತಿತ್ತು. ಅಸಹ್ಯ ವೇದನೆಗಳಾಗಹತ್ತಿದ್ದವು. ಅಲ್ಲಿಂದ ಹೆಜ್ಜೆ ಕಿತ್ತಿಕ್ಕುವದು ಕೂಡ ಆಗದಾಯಿತು ಗುಲಾಮ ಹುಸೇನನು ಸಮೀಪಕ್ಕೆ ಬಂದೊಡನೆಯೇ ಕಿಶನನು "ಸುತ್ತಲೂ ಕಾರ್ಗತ್ತಲೆ ಬಿದ್ದಿರಲು, ಇಲ್ಲಿ ದೀಪದ ಛಾಯೆ ತೋರಿತು. ಇಲ್ಲಿ ಈ ರಾತ್ರಿ ಕಳೆಯುವ ಸಲುವಾಗಿ ನಾನು ಆಶ್ರಯಬೇಡಬರುತ್ತಿರಲು, ಈ ನಿಮ್ಮ ದುಷ್ಟ ನಾಯಿಯು ಒಮ್ಮೆಲೆ ಭಯಂಕರವಾಗಿ ಕಚ್ಚಿತು! ಇನ್ನು ನಾನು ಬದುಕಲಾರೆ! ಅಯ್ಯೋ! ಅಯ್ಯೋ! ಅಯ್ಯಯ್ಯೋ!" ಎಂದು ಪ್ರತ್ಯಕ್ಷ ನೋವಿಗಿಂತ ಹೆಚ್ಚಾಗಿಯೇ ನರಳಹತ್ತಿದನು

"ನರಳಬೇಡ; ಒದರುತ್ತೀಯೇಕೆ?" ಗುಲಾಮ ಹುಸೇನನು ಗದ್ದಲ ವಾಗಬಾರದೆಂದು ಮೆಲ್ಲನೆ ಆತನಿಗೆ ಹೇಳಿ, ಆತನನ್ನು ಸಂತೈಸಗೊಳಿಸಹತ್ತಿದನು. "ಈ ದುಷ್ಟ ನಾಯಿಯು ನಾನು ಸಾಕಿದ್ದಲ್ಲದಿದ್ದರೂ ನಾನು ನಿನ್ನ

ಕಾಲ ಗಾಯವನ್ನು ಕಟ್ಟಿ ಔಷಧವನ್ನು ಹಚ್ಚುತ್ತೇನೆ. ನೀನು ಇಲ್ಲಿಯೇ ಈ ಮನೆಯ ಬಳಿಯಲ್ಲಿ ಬೆಳತನಕ ಮಲಗಿಕೋ; ಹಾಗು ಬೆಳಿಗ್ಗೆ ನಿನ್ನ ದಾರೀ ಹಿಡಿ; ಇಲ್ಲದಿದ್ದರೆ ಆಸ್ಪತ್ರೆಗೆ ಹೋಗು!! ಆ ಪ್ರಕರಣವನ್ನು" ವಿಶೇಷ ಬೊಬ್ಬಾಟವಾಗದಂತೆ ಮುಚ್ಚಲಿಕ್ಕೆ ಗುಲಾಮ ಹುಸೇನನಿಗೆ ಇದೇ ಹಂಚಿಕೆಯು ತೋಚಿತು. ಅಂತೆಯೇ ಅವನು ಹಾಗೆ ಅಂದನು.

ಗುಲಾಮ ಹುಸೇನನು ಬಹು ಪ್ರಯಾಸದಿಂದ ಕಿಶನನನ್ನೆತ್ತಿ ಕಲ್ಲು ಗೋಡೆಯನ್ನು ದಾಟಿಸಿ, ಮಿಣಕು ಮಿಣುಕಾದ ಲಾಂದರದ ಬೆಳಕು ಅಲ್ಪ ಸ್ವಲ್ಪಾಗಿ ಬಿದ್ದಿದ್ದ ಆ ಮನೆಯ ಅಂಗಳದಲ್ಲಿ ತಂದು ಇಳಿಸಿದನು. ನೀರಿನಿಂದ ಆತನ ಕಾಲು ತೊಳೆದು, ಒರಸಿ, ತನ್ನ ನಿತ್ಯದ ರಾಮಬಾಣ ಔಷಧಿಗಳನ್ನು ಕಿಶನನ ಗಾಯಕ್ಕೆ ಹಚ್ಚಿ ನೆತ್ತರ ಹರಿಯುವದನ್ನು ನಿಲ್ಲಿಸಿದನು. ಬಳಿಕ ಆ ಗಾಯಕ್ಕೆ ಪಟ್ಟಿಕಟ್ಟಿದನು. ಆತನನ್ನು ಆ ಬೊಡ್ಡೆಯ ಮೇಲೆ ತೆಕ್ಕೆಗೆ ಆತು ಕೂಡ್ರುವಂತೆ ಕುಳ್ಳಿರಿಸಿದನು; ಮತ್ತು ಗುಲಾಮ ಹುಸೇನನು ಆ ಲಾಂದರವನ್ನು ಮೊಳೆಗೆ ತೂಗಹಾಕಿದನು.

ಲಾಂದರವು ಕೆಳಗಿರುವವರೆಗೆ ಆ ಔಷಧೋಪಚಾರದ ಗಡಿಬಿಡಿಯಲ್ಲಿ ಗುಲಾಮ ಹುಸೇನನ ಲಕ್ಷ್ಯವು ಕಿಶನನ ಗಾಯಗೊಂಡ ಕಾಲಿನ ಕಡೆಗೆ ಇತ್ತು. ಆದರಿಂದ ಅವನಿಗೆ ಆತನ ಬಗ್ಗೆ ಯಾವ ಸಂಶಯವೂ ಬರಲಿಲ್ಲ; ಅಲ್ಲದೆ ಮಥುರೆಯಲ್ಲಿ ಯೋಗಾನಂದನ ಶಿಷ್ಯನಾಗಿದ್ದ ಕಿಶನನನ್ನು ಆತನು ಹಲವು ಸಾರೆ ಕಂಡಿದ್ದರೂ ಇಂದಿನ ಕಿಶನನ ವೇಷವು ಹಾಗಿರದೆ, ಯಾವನೊಬ್ಬ ಕೇವಲ ದರಿದ್ರನಂತಿದ್ದಿತು. ಆದರಿಂದ ಈತನ ಗುರ್ತು ಹತ್ತುವದು ಕಠಿಣವೇ ಆಗಿತ್ತು. ದೀಪವನ್ನು ಮೇಲೆ ಮೊಳೆಗೆ ತೂಗ ಹಚ್ಚಿದ್ದರಿಂದ ಬೊಡ್ಡೆಯ ಮೇಲೆ ಆತು ಕುಳಿತ ಕಿಶನನ ಮೋರೆಯ ಮೇಲೆ ಆ ಪ್ರಕಾಶವು ನಿಚ್ಚಳವಾಗಿ ಬಿದ್ದಿತು!

ಇದು ವರೆಗೆ ಮನೆಯಲ್ಲೇ ಇದ್ದರೂ ಕಿಟಕಿಯೊಳಗಿಂದ ಹೊರಗೆ ನಡೆದ ಚಲನವಲನವನ್ನು ನೋಡುತ್ತಿದ್ದ ಮಾಲತಿಯ ಮನಸ್ಸಿನಲ್ಲಿ ಈ ದಾರಿಕಾರ ನಾರು? ಎಂಬ ಬಗ್ಗೆ ಹತ್ತೆಂಟು ಸಾರೆ ಸಂದೇಹ ಬಂದು ಹೋಗಿದ್ದಿತು ಆ ಲಾಂದರದ ಬೆಳಕಿನಲ್ಲಿ ಕಿಶನನ ಮುಖವನ್ನು ಈಗ ನೋಡದೊರೆತೊಡನೆಯೇ ಮಾಲತಿಯಲ್ಲಿ ಈ ಮೊದಲು ಉಂಟಾಗಿದ್ದ ಸಂದೇಹವು ದೃಢವಾಗಿ "ಕಿಶನ" ಎಂಬ ಕೂಗು ಆಕೆಯ ತುಟಿಗಳಲ್ಲಿಯೇ ನಿನಾದಗೊಂಡಿತು! ಅವನನ್ನು ಮಥುರೆಯಲ್ಲಿ ಕಂಡ ಬಳಿಕ ಆತನದೇನಾಯಿತೆಂಬದು ಆಕೆಗೇನೂ ಗೊತ್ತಿರಲಿಲ್ಲ. ತನ್ನ ತಾಯಿಯ ವೃತ್ತಾಂತವು ಈತನಿಗೆ ಗೊತ್ತಿರಲಿಕ್ಕೇ ಬೇಕು, ಎಂಬ ವಿಚಾರವು ಅವನನ್ನು ಚೆನ್ನಾಗಿ ಗುರುತಿಸಿದೊಡನೆಯೆ ಒಮ್ಮೆಲೆ ಉಂಟಾ

ಯಿತು! ಆದರೆ ಪರಪುರುಷನೊಡನೆ ಅವರಲ್ಲಿಯೂ ಯೋಗಾನಂದ-ಗುಲಾಮ ಹುಸೇನಾದಿ ಯಾವ ಚಂಡಾಲರು ಅವಳನ್ನು ಓಡಿಸಿಕೊಂಡೊಯ್ದಿದ್ದರೋ, ಅವರ ಆ ಅಧಮ ಅಪರಾಧದ ಮಾಹಿತಿಯು ಯಾರಿಗೆ ಚೆನ್ನಾಗಿ ಗೊತ್ತಿರ ಬೇಕೋ, ಅಂಥ ಆ ತಮ್ಮ ಋಣಾನುಬಂಧದವನಿಗೆ ಸ್ಪಷ್ಟವಾಗಿ ಕೇಳಿದರೆ, ಅದಕ್ಕಾಗಿ ಆ ಹಿಂಸ್ರ ಗುಲಾಮ ಹುಸೇನನು ತನ್ನದಷ್ಟೇ ಅಲ್ಲ, ಆ ಪಾಂಥ ಸ್ಥನದೂ ಕೊಲೆ ಮಾಡಲಿಕ್ಕೆ ಹಿಂಜರಿಯಲಾರನೆಂಬ ಅಂಜಿಕೆಯು ಆಕೆಗನಿಸಿತು. ಆದರಿಂದ ಅವಳು ನಡುಗಿದಳು; ಆದರೆ ತನ್ನ ಉತ್ಸುಕತೆಗಾಗಿ ಕಿಶನನ ಭೆಟ್ಟಿಯನ್ನು ಬಹಿರಂಗವಾಗಿ ಈಗಲ್ಲದಿದ್ದರೂ, ಈ ನೀಚ ಗುಲಾಮ ಹುಸೇನನು ನಿದ್ದೆ ಹತ್ತಿ ಮಲಗಿದ ಬಳಿಕಾದರೂ ತಕ್ಕೊಂಡೇ ತಕ್ಕೊಳ್ಳ ಬೇಕೆಂದೂ, ಅದಕ್ಕಾಗಿ ಏನಾಗುವದು ಆಗಲೆಂದೂ ಅವಳು ಆಗಿಂದಾಗಲೇ ನಿಶ್ಚಯಿಸಿದಳು. ಅವಳು ಕಂಬನಿಗಳನ್ನು ದುರಿಸುತ್ತ ಕಿಶನನ ಕಡೆಗೆ ಟಕ ಮಕವೆಂದು ನೋಡುತ್ತ ಕಿಟಕಿಯ ಒಳಮಗ್ಗಲು ನಿಂತುಕೊಂಡಿದ್ದಳು. ಅಷ್ಟರಲ್ಲಿ ಗುಲಾಮ ಹುಸೇನನು ಆ ಕಿಟಕಿಯ ಕಡೆಗೆ ಕೆಂಗಣ್ಣಿನಿಂದ ನೋಡುತ್ತಲೆ ಮಾಲತಿಯು ಸರ್ರನೆ ಒಳಗೆ ಸರಿದು ನಿಂತು, ತನ್ನನ್ನೇ ಕುರಿತು ಪ್ರಶ್ನೆ ಮಾಡಿದಳು. "ಅಪ್ಪಯ್ಯಾ! ಈ ರಕ್ಕಸನು ಒಮ್ಮೆಲೆ ಇಷ್ಟೇಕೆ ಸಿಟ್ಟಿಗೆದ್ದನು? ಈ ಮುಂಡೇ ಮಗನಿಗೇನಾದರೂ ಸಂದೇಹವುಂಟಾಯಿತೇನು?"

ಕಿಟಕಿಯ ಬಳಿಯಿಂದ ಹಿಂದೆ ಸರಿದು ಅವಳು ಬಾಗಿಲ ಪಟಕಿನೊಳಗಿಂದ ಇಣಿಕಿ ನೋಡುವ ಸಲುವಾಗಿ ಬಾಗಿಲ ಬಳಿಗೆ ಹೋಗುತ್ತಿರಲು, ಗುಲಾಮ ಹುಸೇನನು ಹೊರಗೆ ಅದಾರ ಮೇಲೋ ಗದ್ದರಿಸುತ್ತಿರುವಂತೆ, ಆ ವಿಕರಾಳ ನಾಯಿಗಿಂತಲೂ ಹೆಚ್ಚಾಗಿ ಕ್ರೂರತನದಿಂದ ಗುರುಗುಟ್ಟುತ್ತಿರುವಂತೆ ಆಕೆಗೆ ಕೇಳಿಸಿತು! ಯಾಕಂದರೆ ಆ ಲಾಂದರದ ಬೆಳಕು ನಿಶ್ಶಕ್ತಿಯಿಂದ ಕಣ್ಣುಮುಚ್ಚಿಕೊಂಡು ಬೊಡ್ಡೆಗೆ ಆತು ಕುಳಿತಿದ್ದ ಕಿಶನನ ಮೋರೆಯ ಮೇಲೆ ಬಿದ್ದ ಕೂಡಲೆ ಮಾಲತಿಗೆ ಯಾವ ಸಂದೇಹವು ಬಂದಿತ್ತೋ, ಗುಲಾಮ ಹುಸೇನನಿಗೂ ಅದೇ ಶಂಕೆ ಬಂದಿತ್ತು! ಅದರಲ್ಲಿಯೂ ಕಿಟಕಿಯೊಳಗಿಂದ ಅತ್ಯಂತ ಆಸ್ಥೆಯಿಂದ ಕಿಶನನನ್ನು ಟಕಮಕವೆಂದು ನೋಡುತ್ತಿದ್ದ ಮಾಲತಿಯನ್ನು ಕಂಡ ಬಳಿಕಂತೂ ಆತನ ಆ ಸಂದೇಹವು ಶತಗುಣಿತವಾಯಿತು. ಅದರ ನಿರ್ಣಯ ಮಾಡಿಕೊಳ್ಳಬೇಕೆಂಬ ಯುಕ್ತಿಯು ಆತನಿಗೆ ಆ ಕೂಡಲೆ ಹೊಳೆಯಿತು. ಎಚ್ಚರಿಲ್ಲದೆ ಗುಂಗಿನಲ್ಲಿ ಬಿದ್ದುಕೊಂಡಿದ್ದ ಆ ಗಾಯಗೊಂಡವನನ್ನು ಹೇತು ಪುರಸ್ಸರವಾಗಿ "ಕಿಶನ! ಏ ಕಿಶನ!" ಎಂದು ಗುಲಾಮ ಹುಸೇನನು ಸಂಶಯಿತ ಹೆಸರಿನಿಂದ ಕೂಗಿದನು.

ಕಿಶನನು ಒಮ್ಮೆಲೆ ಎಚ್ಚತ್ತು ನೆಟ್ಟಿಬಿದ್ದು, ತನ್ನ ಹೆಸರಿನ ಪರಿಚಯು ಹತ್ತಗೊಡಲಾಗದೆಂಬದು ಧ್ಯಾನದಲ್ಲಿ ಬರುವ ಮೊದಲೇ 'ಓ-ಓ' ಎಂದಂದನು.

"ಎಲಾ ಹರಾಮಖೋರಾ? ನಾನು ನಿನ್ನನ್ನು ಹಿಡಿದೆನೋ ಇಲ್ಲವೋ? ಛದ್ಮವೇಷದಿಂದ ಹೆಸರು ಬದಲಿಸಿಕೊಂಡು ಇತ್ತ ಹುಡುಕಲಿಕ್ಕೆ ಬಂದಿದ್ದೆಯೇನು? ಕಿಶನ, ಮಾತಾಡು!" ಎಂದು ಮುಷ್ಟಿಯನ್ನು ಹುರಿಮಾಡಿ, ಸಿಟ್ಟಿನಿಂದ ನಡುಗುವ ಗೊಗ್ಗರ ದನಿಯಿಂದ ಗುಲಾಮ ಹುಸೇನನು ಮತ್ತೆ ಕೇಳುತ್ತಾನೆ: "ಹೇಳು, ನೀನು ಮಾಲತಿಯ ಪತ್ತೆಹಚ್ಚುವದಕ್ಕೆಂದೇ ಇಲ್ಲಿಗೆ ಬಂದೆಯಲ್ಲವೆ? ನೀನೂ ಆ ಬುದ್ಧಿಹೀನ ಹಸನಭಾಯಿಯೂ ನೀವಿಬ್ಬರೂ ನಮ್ಮಗಳ ವಿಶ್ವಾಸಘಾತ ಮಾಡಿದ್ದ ಕೋರ್ಟಿನೊಳಗಿನ ಸಾಕ್ಷಿದಾರರಲ್ಲವೆ? ನನ್ನ ಕೊರಳಿಗೂ ನೇಣುಹಾಕಬಯಸುತ್ತೀರೇನು? ಕಾಫರ! ಬೇಇಮಾನ!"

"ನಿಮ್ಮಪ್ಪ ಬೇಇಮಾನ! ನಿನ್ನೊಡನೆ ಇಮಾನವೇ?" ಎಂದು ತ್ವೇಷದಿಂದ ನುಡಿದು, ಕಿಶನನು ಎದ್ದು ನಿಂತನು.

"ಚೂರಿ ಚುಚ್ಚಿ ನಿನ್ನ ಕರಳು ಕತ್ತರಿಸಿದೆನೆಂದೇ ತಿಳಿ! ನನ್ನ ಚೂರಿ! ಚೂರಿ!" ಎಂದು ಕೂಗುತ್ತ, ಗುಲಾಮ ಹುಸೇನನು ಅವನ್ನು ಆ ಬೊಡ್ಡೆಯ ಮೇಲೆ ಹುಡುಕಿದನು. ಅಲ್ಲಿ ಚೂರಿ ಇರಲಿಲ್ಲ! ಅದು ಮನೆಯೊಳಗೆ ಹೊರಸಿನ ಮೇಲೆ ತಲೆಗಿಂಬಿಗಿರುವುದೆಂಬದು ಆತನಿಗೆ ನೆನಪಾಯಿತು. ಒಳಗೆ ಬಾಗಿಲ ಹಿಂದೆ ನಿಂತುಕೊಂಡಿದ್ದ ಮಾಲತಿಗೂ ಅದು ಆಗಲೆ ನೆನಪಿಗೆ ಬಂದಿತು ಆ ಕೂಡಲೆ ಅವಳು ಆ ಚೂರಿಯನ್ನು ತನ್ನ ಸೀರೆಯೊಳಗೆ ಲಗುಬಗನೆ ಬಚ್ಚಿಟ್ಟು ಕೊಂಡು ಒಂದು ಮೂಲೆಯಲ್ಲಿ ಹೋಗಿ ಅವಿತುಕೊಂಡು ನಿಂತಳು. ಅದೇ ಚೂರಿಯಿಂದ ಗುಲಾಮ ಹುಸೇನನು ಮಥುರೆಯಿಂದ ಬರುತ್ತಿರುವಾಗ ತನ್ನ ಒಬ್ಬ ವಿಶ್ವಾಸಘಾತಕಿ ಸಂಗಡಿಗನನ್ನು ಒಂದು ಅಡವಿಯಲ್ಲಿ ಕಣ್ಣುಮುಚ್ಚಿ ಕಣ್ಣು ತೆರೆಯುವಷ್ಟರೊಳಗೆ ಮಾಲತಿಯ ಸಮಕ್ಷ ತಿವಿದು ಕೊಂದುಬಿಟ್ಟಿದ್ದನು. ಅದರಂತೆಯೇ ಈಗ ಕಿಶನನನ್ನೂ ಕೊಲ್ಲುವನೆಂಬ ಅಂಜಿಕೆಯಿಂದ ಅವಳು ಗದಗುಟ್ಟಿ ನಡುಗುತ್ತಿದ್ದಳು-ಸಿಟ್ಟಿನಿಂದ ಕಂಪಿಸುತ್ತಿದ್ದಳು!

ಅಷ್ಟರಲ್ಲಿ ಚೂರಿ ಒಯ್ಯುವದಕ್ಕೆಂದು ಗುಲಾಮ ಹುಸೇನನು ತಟ್ಟನೆ ಬಾಗಿಲ ತೆರೆದು ಒಳ ಹೊಕ್ಕನು. ಆತನ ಹಿಂದಿನಿಂದಲೇ ಕಿಶನನೂ ತ್ವೇಷದಿಂದ ಒಳಹೊಕ್ಕು, ಗುಲಾಮಹುಸೇನನನ್ನು ಬಿಗಿಯಾಗಿ ಹಿಡಿದುಕೊಂಡನು. ಗುದ್ದಾಟದಲ್ಲಿ ಅವರಿಬ್ಬರೂ ಕೂಡಿಯೇ ಆ ಹೊರಸಿನ ಮೇಲೆ ಬಿದ್ದರು. ಕತ್ತು ಕತ್ತರಿಸಿ ಚಲ್ಲಿದ ಧಡವೂ ಕೂಡ ರಣಭೂಮಿಯಲ್ಲಿ ಕೆಲಹೊತ್ತು ಕಾದುತ್ತ ತಿರುಗುವಂತೆ, ಅಷ್ಟು ಗಾಯಗೊಂಡಿದ್ದ ಕಿಶನನೂ ಆಗ ಆ ದುಷ್ಟನೊಡನೆ ಹಾಗೆ

ಯೇ ಗುಂದ್ರಾಡಿದನು. ಆಗ ಆ ತರುಣನಿಗೆ ತನ್ನ ಗಾಯದ ಪರಿವೆಯೇ ಇರಲಿಲ್ಲ!

ಆ ಜೀವದ ಮೇಲಿನ ಪ್ರಸಂಗದಲ್ಲಿ ಮಾಲತಿಗೂ ವಿಚಾರವೆಂಬುದು ಉಳಿದೇ ಇರಲಿಲ್ಲ. ದೇಹಭಾನವು ಎಷ್ಟೂ ಇರಲಿಲ್ಲ. ಒಂದಲ್ಲ, ಹಲವು ತ್ವೇಷಗಳು ಒಟ್ಟುಗೂಡಿದವು! ಗುಲಾಮು ಹುಸೇನನು ಕಿಶನನ ಕತ್ತಿಗೆ ಕೈ ಹಾಕುತ್ತಲೂ ಕಿಶನನು ಗುಲಾಮು ಹುಸೇನನ ಗಂಟಲ ಹಿಚುಕುತ್ತಲೂ ಆ ಹೊರಸಿನ ಮೇಲೆ ಹೋಗಿ ಧಡಲ್ಲೆಂದು ಬೀಳಲು, "ಕೊಡು-ಕೊಡು, ಮಾಲತೀ, ಆ ಚೂರಿ ಕೊಡು" ಎಂದು ಗುಲಾಮು ಹುಸೇನನು ಕೂಗಿದನು! ಆ ಕೂಡಲೆ ಮಾಲತಿಯು ಚೂರಿಯನ್ನೆತ್ತಿಕೊಂಡು ಓಡಿದಳು; ಆದರೆ ಇಷ್ಟು ಚಿಕ್ಕ ಚೂರಿಯಿಂದ ಈ ಟೊಣಪನು ಸಾಯುವದೆಂತು? ಎಂದು ಆ ದೇಹಭಾನ ವಿರಹಿತ ಅವಸ್ಥೆಯಲ್ಲೂ ಬಲವಾದ ಶಂಕೆಯಿಂದ ಆಕೆಯು ನಡುವೇ ನಿಂತುಕೊಂಡಳು.

"ಹೇಗಾದರೇನು, ಅಂಜುಬುರುಕ ಹುಡುಗೀ! ನಿನ್ನೆದುರಿಗೇ ಆ ವಿಶ್ವಾಸಘಾತಕಿಯನ್ನು ಇದೇ ಗುಲಾಮು ಹುಸೇನನು ಇದರ ಒಂದೇ ಏಟಿನಿಂದ ಕೊಂದು ಬಿಟ್ಟಿರಲಿಲ್ಲವೇ?" ಎಂದು ಆ ಮೇಲೆ ಅವಳ ಮನಸ್ಸೇ ಅವಳಿಗೆ ಹೇಳಿತು.

"ಕೊಡು, ಚೂರಿ ಕೊಡು!" ಗುಲಾಮು ಹುಸೇನನು ಬಿದ್ದು ಬಿದ್ದಿರಲಿಕ್ಕೆ ತನ್ನದೊಂದು ಕೈ ಬಿಡಿಸಿಕೊಳ್ಳುತ್ತ ಹಾಗು ಎತ್ತರಿಸುತ್ತ ಮಾಲತಿಯನ್ನು ಕುರಿತು ಮತ್ತೆ ಒದರಿದನು.

"ಇಕೋ, ಇದಕೋ-ಚೂರಿಯನ್ನು!" ಎಂದು ತುಟಿದವಡೆ ಕಚ್ಚುತ್ತ-ಕಚ್ಚುತ್ತ ಆ ದೇಹಭಾನ ತೊರೆದ ಮಾಲತಿಯು ಚೂರಿಯನ್ನು ಎತ್ತಿಕೊಂಡು ಹೋಗಿ ಕಿಶನನನ್ನು ಒತ್ತಿ ಹಿಡಿದಿದ್ದ, ಆದರೆ ಕಿಶನನಿಂದ ಹೊರಸಿನ ಮೇಲೆ ಅಂಗಾತ ಕೆಡವಲ್ಪಟ್ಟಿದ್ದ ಗುಲಾಮು ಹುಸೇನನ ವಿಶಾಲವಾದ ಹೊಟ್ಟೆಯಲ್ಲಿ ಆ ಇಷ್ಟುದ್ದನ್ನ ತೀಕ್ಷ್ಣ ಚೂರಿಯನ್ನು ಸಂಪೂರ್ಣ ಪ್ರಕಸುವಿನಿಂದ ಚುಚ್ಚಿಬಿಟ್ಟಳು!

"ಎಷ್ಟು ಸಹಜವಾಗಿ ಇದು ಒಳಸೇರಿತಲ್ಲ!" ಆ ಸ್ಮೃತಿವಿರಹಿತಾವಸ್ಥೆಯಲ್ಲೂ ಮಾಲತಿಯ ಬಾಯಿಂದ ಆ ವಿಸ್ಮಯೋದ್ಗಾರ ಹೊರಟು ಹೋಯಿತು! ಆಕೆಗೆ ಹಿಡಿಸಲಾರದಷ್ಟು ನಗೆ ಬಂದಿತು. "ನಾನು ಸುಮ್ಮನೆ ಇಷ್ಟು ಕಸುವಿನಿಂದ ಚುಚ್ಚಿದೆನು ಇದರರ್ಧ ಕಸುವಿನಿಂದ ಚುಚ್ಚಿದ್ದರೂ ಇದು ಆರುಪಾರಾಗಿ ಹೋಗುತ್ತಿತ್ತು!" ಎಂದಳು.

"ಅಯ್ಯೋ! ಅಯ್ಯೋ!! ಅಯ್ಯಯ್ಯೋ!!!" ಎಂದೆನ್ನುತ್ತ, ಗುಲಾಮು ಹುಸೇನನ ಅವಸಾನವು ಹಾರಿತು. ಅವನ ಬಾಯಿಂದ ಮತ್ತೆ ಶಬ್ದಗಳೇ ಹೊರಡ

ಲಿಲ್ಲ! ಆತನ ಹೊಟ್ಟೆಯೊಳಗಿಂದ ಚಿಮ್ಮಹತ್ತಿದ್ದ ರಕ್ತದಿಂದ ಆತನ ಕಣ್ಣು-ಮೂಗು-ಬಾಯಿಗಳೆಲ್ಲ ತುಂಬಿ, ಆತನ ಜೀವವು ಅದರೊಳಗೇ ಮುಳುಗಿ ಹೋಯಿತು!

"ಸತ್ತನು, ಪೂರಾ ಸತ್ತನು" ಎಂದು ಕಿಶನನು ಚಪ್ಪಾಳೆ ಬಾರಿಸಿದನು.

"ಕಿಶನ! ಆದರೆ ಮುಂದೇನು?" ಕಿಶನನ ದೃಷ್ಟಿಗೆ ದೃಷ್ಟಿ ಹಚ್ಚಿ ಮಾಲತಿಯು ಥರಗುಟ್ಟಿ ನಡಗುತ್ತ ಕೇಳಿದಳು

"ಮುಂದೆ? ಮಾಲತೀ ಮುಂದೆ?........"

ದೇಹಭಾನವಿಲ್ಲದ, ರಕ್ತಾಘಾತದ ನಿಶೆ ಹತ್ತಿದ, ವಿಚಾರವಿಹೀನರಾದ ಅವರಿಬ್ಬರೂ ಕ್ಷಣಕಾಲ ಕೇವಲ ದೃಷ್ಟಿಗೆ ದೃಷ್ಟಿ ಹಚ್ಚಿ ನೋಡುತ್ತ ನಿಂತು ಬಿಟ್ಟರು! ಸುತ್ತಲೂ ಕಾರಿರುಳ ಕತ್ತಲೆಯು ಘನೀಭೂತವಾಗಿತ್ತು!

---

## ೮ನೇ ಪ್ರಕರಣ.

"ಮುಂದೆ ಏನು?" ಮಾಲತಿಯು ಈ ಪ್ರಶ್ನೆಯಿಂದ ಕ್ಷಣಕಾಲ ಏನೂ ಉತ್ತರ ಹೊಳೆಯದ್ದರಿಂದ ಅಥವಾ ಹಲವು ಉತ್ತರಗಳು ಮನಸ್ಸಿನಲ್ಲಿ ಬರುತ್ತಿದ್ದರೂ ಒಂದೂ ಸ್ಥಿರವಾಗದೆ ಒಂದಕ್ಕೊಂದು ತಾಕಲಾಡಿ, ಯಾವುದನ್ನು ನಿರ್ಧರಿಸಬೇಕೆಂಬದು ತಿಳಿಯದ್ದರಿಂದ, ಕಿಶನನೂ "ಮುಂದೆ? ಮುಂದೆ?" ಎಂದೆನ್ನುತ್ತ, ಮಾಲತಿಯ ಮುಖದ ಕಡೆಗೆ ಶೂನ್ಯದೃಷ್ಟಿಯಿಂದ ನಿರೀಕ್ಷಿಸುತ್ತ ನಿಂತಿದ್ದನು; ಆ ಅಕರಾಳ-ವಿಕರಾಳಾದ ಹೆಣವು ನಡು ನಡುವೆ ಒಮ್ಮೊಮ್ಮೆ ಮಿಸುಗುತ್ತ, ಅವರ ಕಾಲ್ದೆಸೆಯಲ್ಲಿ ಬಿದ್ದಿತ್ತು; ಅದರ ಗಾಯದೊಳಗಿಂದ ರಕ್ತದ ಕಾರಂಜಿಯು ಬಿಟ್ಟುಬಿಟ್ಟು ಪುಟಿಯುತ್ತಿತ್ತು! ಹೀಗೆ ಹತ್ತೆಂಟು ನಿಮಿಷಗಳು ಕಳೆಯುತ್ತಿರುವಾಗಲೆ ಆ ನಾಯಿಯು ಆ ಕಲ್ಲುಗೋಡೆಯ ಮೇಲೆ ನಿಂತು ಗಟ್ಟಿಗಟ್ಟಿಯಾಗಿ ಒದರಹತ್ತಿತು.

ಗುಲಾಮ ಹುಸೇನ ಹಾಗು ಕಿಶನ ಇವರಲ್ಲಿ ಕಾದಾಟ ನಡೆದಾಗಿನಿಂದ ಆ ನಾಯಿಯು ಅವರ ಹತ್ತರ ಹೋಗಲಿಕ್ಕೆ ಅಂಜಿದ್ದಿತು. ಅವರೂ ಓಡಿ ಹೋಗುವದನ್ನು ರಹಿತಪಡಿಸಿ, ಎದುರಿಗಿನ ಕಲ್ಲುಗೋಡೆಯ ಮೇಲೆ ಅತ್ತಿಂದಿತ್ತ, ಇತ್ತಿಂದತ್ತ ಓಡಾಡುತ್ತ ನಡುನಡುವೆ ನಿಲ್ಲುತ್ತ, ಗಟ್ಟಿಗಟ್ಟಿಯಾಗಿ ಒದರುತ್ತ ನೆರೆಹೊರೆಯವರ ಯಾರದಾದರೂ ಸಹಾಯಪಡೆಯಬೇಕೆಂದೂ, 'ಬನ್ನಿರಯ್ಯಾ ಬನ್ನಿರೆ'ಂದು ಕೂಗಿ ಕರೆಯುತ್ತಿರುವಂತೆಯೂ ಆ ನಾಯಿಯು ಒದರುತ್ತಿತ್ತು; ಆದರೆ ಇದುವರೆಗಿನ ಆ ಭಯಂಕರವಾದ ಪ್ರಸಂಗದಲ್ಲಿ ಮಾಲತಿ-ಕಿಶನರಿಗೆ ನಾಯಿಯ ಆ ಶಬ್ದವು ಕೇಳಿಸಿರಲಿಲ್ಲ. ತಮ್ಮ ಹೊರತು ಅವರಿಗೆ

ಬಾಹ್ಯ ಜಗತ್ತಿನ ಸ್ಮರಣವೇ ಇರಲಿಲ್ಲ! ಆದರೆ ಈಗ ನಾಯಿಯು ಕೂಗಿನ ಕಡೆಗೆ ಲಕ್ಷ್ಯವೇಧಿಸಲು, ಕಿಶನನು ಬೆಚ್ಚಿಬಿದ್ದು ಅತ್ತ ಹೊರಳಿ ನೋಡಿದನು. ಇಡೀ ಬಾಹ್ಯ ಜಗತ್ತು ತಮ್ಮಿಬ್ಬರ ಕಡೆಗೂ, ನೆತ್ತರದಿಂದ ಮುಳುಗಿದ ತಮ್ಮ ಕೈಕಾಲುಗಳ ಕಡೆಗೂ, ತಮ್ಮ ಮಧ್ಯದಲ್ಲಿ ಬಿದ್ದಿರುವ ಹಾಗು ನೆತ್ತರದ ಕಾರಂಜಿ ಪುಟಿಸುತ್ತಿರುವ ಗುಲಾಮ ಹುಸೇನನ ದೇಹದ ಕಡೆಗೂ ಕೆಕ್ಕರಿಸಿ ನೋಡುತ್ತಿದೆ. 'ಇವರೇ ಕೊಲೆಗಡಕರು! ಹಿಡಿಯಿರಿ-ಕಟ್ಟಿರಿ' ಎಂದು ಬೊಟ್ಟು ತೋರಿಸಿ ತೋರಿಸಿ ಗದ್ದಲವೆದ್ದಿದೆ, ಎಂದು ಆಕಸ್ಮಿಕವಾಗಿ ಭಾಸವಾಯಿತು; ಆದರಿಂದ ಆತನ ಮನಸ್ಸಿನ ಗುಂಗು ಒಮ್ಮೆಲೆ ಇಳಿಯಿತು. ಇನ್ನು ನಾವು ಇಲ್ಲಿ ಒಂದು ಕ್ಷಣ ಸಹ ತಡೆದರೆ, ಈ ದುಷ್ಟನ ಚೂರಿಯಿಂದ ಪಾರಾದ ಜೀವವು ಗಲ್ಲಿಗೇ ಏರಬೇಕಾದೀತು. ಈ ಮಾಲತಿಯಾದರೂ ಅದೇ ಗತಿಗೆ ಮುಟ್ಟಬಹುದು. ಗಲ್ಲು! ಗಲ್ಲಿನ ಕಲ್ಪನೆಯೇ ಭಯಂಕರವು!!

ಆ ಕೂಡಲೆ ಕಿಶನನು ಒಂದು ದೊಡ್ಡ ದುಂಡಿಯನ್ನೆತ್ತಿ ನಾಯಿಗೆ ಹೊಡೆದನು; ಅಷ್ಟರಲ್ಲಿ ಎದುರಿಗಿರುವ ಹೊಲದೊಳಗಿನ ದೂರದ ದಿನ್ನೆಯ ಮೇಲಿನ ಇಬ್ಬರು-ಮೂವರು ಲಾಂದರವನ್ನು ಹಿಡಿದು ತಮ್ಮ ಕಡೆಗೇ ನೋಡುತ್ತ ಮಾತಾಡುತ್ತಿರುವ ಹಾಗೆ ತೋರಿತು. ಆ ನಾಯಿಯು ಆ ಭಯಂಕರ ಕೂಗಿನ ಮೂಲಕ ಆ ರೈತರು ತಮ್ಮ ಹೊಲದೊಳಗಿನ ಆ ಎತ್ತರದ ಪ್ರದೇಶದಲ್ಲಿ ಎಷ್ಟೋ ಹೊತ್ತಿನಿಂದ ಕುಳಿತಿದ್ದರು. ಅವರಿಗೆ ಗುಲಾಮ ಹುಸೇನ-ಕಿಶನರ ನಡುವೆ ಅಂಗಳದಲ್ಲಿ ನಡೆದಿದ್ದ ಹೊಡೆದಾಟ-ಗುದ್ದಾಟವು ಈ ಮೊದಲೇ ಕಂಡಿದ್ದಿತು ಅವರ ಒದರಾಟ-ಚೀರಾಟವೂ ಬೈದಾಟವೂ ಕೇಳಿಸಿದ್ದಿತು. ಇಷ್ಟೇ ಅಲ್ಲ, ಗುಲಾಮ ಹುಸೇನನ ಹೊಟ್ಟೆಯಲ್ಲಿ ಮಾಲತಿಯು ಚೂರಿ ಚುಚ್ಚಲು, ಆಗ ಆತನು ಪ್ರಾಣಾಂತಿಕವಾಗಿ ಕಿರಚಿದ್ದನ್ನೂ ಅವರು ಕೇಳಿಕೊಂಡಿದ್ದರು. ಅದರಿಂದ ಅಲ್ಲಿ ಏನಾದರೂ ಭಯಂಕರ ವ್ಯಾಪಾರ ನಡೆದಿದೆಯೆಂದು ಆ ರೈತರಿಗೆ ಅನಿಸುತ್ತಿತ್ತು; ಆದರೆ ಅಂಜಿಕೆಯ ಮೂಲಕ ಅವರ ಜಿಜ್ಞಾಸೆಯು ಮುಂದರಿಯಲಾರದಾಗಿತ್ತು. ತಾವು ಅಲ್ಲಿಗೆ ಹೋದರೆ, ತಾವು ಇಲ್ಲದ್ದೊಂದು ಪೇಚಿಗೆ ಸಿಕ್ಕಬೀಳಬೇಕಾದೀತೆಂಬ ಧೂರ್ತ ವಿಚಾರ ಮಾಡಿ, ಅವರು ಆ ದಿನ್ನೆಯ ಮೇಲೆ ಕುಳಿತೇ ಕಣ್ಣಿಗೆ ಕಂಡದ್ದನ್ನು ನೋಡುತ್ತ, ಕಿವಿಗೆ ಕೇಳಿಸಿದ್ದನ್ನು ಕೇಳುತ್ತಲಿದ್ದರು; ಅಲ್ಲದೆ ನಡುನಡುವೆ ಅಲ್ಲಿ ಕಾಣಿಸುತ್ತಿದ್ದ ಆ ಹರೆಯದ ಹೆಂಗುಸಿನ ಬಗ್ಗೆ ತಮ್ಮ ತಮ್ಮೊಳಗೆ ಚರ್ಚಿಸುತ್ತಿದ್ದರು.

ಅದನ್ನು ದೃಷ್ಟಿಸುತ್ತಲೆ 'ಈ ಕೊಲೆಗೆ ಬಾಯಿ ಬಂತು' ಎಂಬ ಹೆದರಿಕೆಯು ಕಿಶನನಿಗೆ ಉಂಟಾಯಿತು! ಆತನು ಹೇಳುವ ಮೊದಲೇ ಆತನ ಕೈಯು

ಆ ಲಾಂದರವನ್ನು ಒಮ್ಮೆಲೆ ನಂದಿಸಿಬಿಟ್ಟಿತು; ಹಾಗು ಅದೇ ಕೈಯಿಂದ ಆ ಕತ್ತಲೆಯಲ್ಲೇ ಮಾಲತಿಯ ಕೈ ಹಿಡಿದು:-"ಮೊಟ್ಟ ಮೊದಲು ನಾವು ಇಲ್ಲಿಂದ ಪಾರಾಗಿ ಹೋಗೋಣ ನಡೆ! ನಮ್ಮನ್ನು ಹಿಡಿಯುವ ಸಲುವಾಗಿ ಜನರು ಕಲೆಯುತ್ತಿರುವರು ಅಗೋ ನೋಡು, ಅತ್ತ ದಿನ್ನೆಯ ಕಡೆಗೆ. ಅವರು ಬೇಗನೆ ನಮ್ಮನ್ನು ಸುತ್ತುಗಟ್ಟಬಹುದಾಗಿದೆ. ನಡೆ ಬೇಗನೆ!"

"ಎಲ, ನಾವು ಹೋಗುವದೆಲ್ಲಿಗೆ?"

"ದಾರಿ ಸಿಕ್ಕತ್ತ! ಬೇಕಾದಲ್ಲಿ ಹೋಗೋಣ; ಆದರೆ ಇಲ್ಲಿಂದ ದೂರ-ದೂರ, ಅತ್ಯಂತ ದೂರ ನಾವು ಹೋಗಲೇಬೇಕು. ನಡೆ ಬೇಗನೆ!"

"ಆದರೆ ಅಷ್ಟು ದೂರ ನಡೆಯಲಾದೀತೇ? ನಿನ್ನ ಕಾಲು ನಾಯಿಯ ಕಡಿತದಿಂದ ಕುಂಟು ಬಿದ್ದಿಲ್ಲವೆ?"

"ಒಂದು ಕಾಲು ಕುಂಟು ಬಿದ್ದಿದ್ದರೂ ನನ್ನ ಎರಡನೇ ಕಾಲು ಇದೆಯಲ್ಲವೆ? ಅದೊಂದರಿಂದಲೇ ನಡೆದಷ್ಟು ನಡೆಯುವೆನು. ಹೂಂ, ಹೊರಡು ಮೊದಲು!"

"ಮತ್ತೆ ಈ ಹೆಣ?"

"ಸಾಯಲಿ, ಬೀಳಲಿ, ಕೊಳೆಯಲಿ, ಈ ದುಷ್ಟನು! ಇಲ್ಲದಿದ್ದರೆ ಈತನ ನಾಯಿಯೇ ಇದನ್ನು ಹರಿದು ತಿನ್ನಲಿ! ಹೊರಡು, ಇಲ್ಲಿಂದ ಮೊದಲು ಪಾರಾಗು; ಆದರೆ ಕೊಡು ಆ ಚೂರಿಯನ್ನಿತ್ತ. ಈತನ ಗುರ್ತು ಕೂಡ ಯಾರಿಗೂ ಹತ್ತಬಾರದು, ಹೀಗೆಂದು ಕಿಶನನು ಆ ಕತ್ತಲಲ್ಲಿಯೇ ಆ ಚೂರಿಯಿದ ಆ ಹೆಣದ ಮುಖದ ಮೇಲೆ ಹಲವು ಸಾರೆ ಕಚ್ ಕಚ್ಚೆಂದು ಚುಚ್ಚಿ, ಅದನ್ನು ವಿದ್ರೂಪಗೊಳಿಸಿದನು. ಬಳಿಕ ಆತನು "ಮಾಲತೀ, ಆ ಕೀಲಿಯಲ್ಲಿದೆ, ಕೊಡು ನೋಡೋಣ" ಎನ್ನಲು,

ಮಾಲತಿಯು ಕತ್ತಲೆಯಲ್ಲೇ ಆ ಕೀಲಿಯನ್ನು ಹುಡುಕಿಕೊಂಡು ಹೊರಗೆ ಬರುತ್ತಿರುವಾಗ ಆಕೆಯ ಕಾಲು ಆ ಕೋಣೆಯೊಳಗೆ ಸಂಚಯವಾಗಿದ್ದ ನೆತ್ತರದ ಗುಂಡಿಯಲ್ಲಿ ಬಿದ್ದಿತು; ಅದರಿಂದ ಅವಳದೂ ಮೈ ಜುಮ್ಮೆಂದಿತು. ಅವಳು ಆ ಚೂರಿಯನ್ನು ತನ್ನ ಟೊಂಕದಲ್ಲಿ ಚೆನ್ನಾಗಿ ಸಿಕ್ಕಿಸಿಕೊಂಡು, ಹೊರಗೆ ಬಂದು, ಆ ಹರಕು-ಮುರಕಾದ ಬಾಗಿಲವನ್ನು ಇಕ್ಕಿ, ಅದಕ್ಕೆ ಕೀಲಿ ಹಾಕಹತ್ತಿದಳು. ಆಗ ಆಕೆಯ ಕೈಗಳು ನಡುಗಹತ್ತಿದವು ಹೇಗಾದರೂ ಮಾಡಿ ಒಮ್ಮೆ ಕೀಲೀ ಹಾಕಿ, ಅದನ್ನು ತನ್ನ ಮನೆಯ ರೂಢಿಯಂತೆ ಟೊಂಕಕ್ಕೆ ಸಿಕ್ಕಿಸಿಕೊಂಡಳು; ಮತ್ತು ಈ ಮೊದಲು ಟೊಂಕದಲ್ಲಿ ಸಿಕ್ಕಿಸಿಕೊಂಡಿದ್ದ ಆ ರಕ್ತಮುಳುಗಿದ್ದ ಚೂರಿಯು ಅಲ್ಲಿ ಇದೆಯೋ ಇಲ್ಲವೋ ಎಂಬದನ್ನು ಅವಳು

ಮತ್ತೊಮ್ಮೆ ಕೈಯಾಡಿಸಿ ನೋಡಿದಳು. ಅದು ಬಳಿಯಲ್ಲಿದೆ ಎಂಬ ಧೈರ್ಯದಿಂದ ಅವಳಿಗೆ ಮತ್ತೆ ಮೊದಲಿನ ಧೈರ್ಯ ಬಂದಿತು. ಕೂಡಲೆ ಅವಳು "ಹೂ, ನಡೆ! ಕಿಶನ, ನಡುಗಬೇಡ. ಈ ನನ್ನ ಕೈಮೇಲೆ ಭಾರ ಹಾಕು; ಹಾಗು ಅದರ ಆಧಾರದಿಂದಲೇ ಸಾಗಿದಷ್ಟು ನಡೆ. ಈ ದಾರಿಯು ನನ್ನ ರೂಢಿಯದಾಗಿದೆ. ತಡೆ, ನಾಲ್ಕಾರು ಕಲ್ಲು ತೆಗೆದುಕೊಳ್ಳುತ್ತೇನೆ. ಆ ವಿಕರಾಳ ನಾಯಿಯ ಕಡೆಗೆ ಚೆನ್ನಾಗಿ ಲಕ್ಷ್ಯವಿರಿಸು. ಅದು ಹಿಂದುಮುಂದಿನಿಂದ ಬಂದು ಒಮ್ಮೆಲೆ ಕಚ್ಚಿಬಿಟ್ಟೀತು."

ಕಗ್ಗತ್ತಲೆಯಲ್ಲೇ ಆ ಕಲ್ಲು ಗೋಡೆಯನ್ನು ದಾಟಿ ಅವರು ಆ ದಿನ್ನೆಯನ್ನು ಸುತ್ತುವರಿದರು. ಅವರಿಬ್ಬರೂ ಹೇಗಾದರೊಮ್ಮೆ ಆ ದಾರಿಗೆ ಹತ್ತಿದರು. "ಇನ್ನು ಯಾವ ಕಡೆಗೆ ತಿರುಗುವೆ? ಪಟ್ಟಣದ ಕಡೆಗೊ........?'

"ಛೀ, ಹುಚ್ಚಾ! ಹೀಗೆ ರಕ್ತಮಯವಾದ ನಾವು ಮೊದಲು ಹೊಳೆಗೆ ಹೋಗಿ, ಮೈ-ಕೈ ತೊಳೆದು ಸ್ನಾನ ಮಾಡಿ ಸಭ್ಯರಂತಾಗೋಣ; ಕಾರಣ ಮೊದಲು ಹೊಳೆಗೆ ನಡೆ."

"ನಿಜ. ಅಲ್ಲಿಯೇ ಇದ್ದ ಗುಡಿಗೆ ಮೊದಲು ನಡೆ. ಇಂದಿನ ರಾತ್ರಿಯನ್ನು ಅಲ್ಲಿಯೇ ಕಳೆಯೋಣ. ನನ್ನ ವಾಸ್ತವ್ಯವಾದರೂ ಅಲ್ಲಿಯೇ ಇದೆ. ನಾನು ಆಗಲೆ ಅಲ್ಲಿಂದಲೇ ಇತ್ತ ಬಂದಿದ್ದೆನು! ಮೊದಲು ಅಲ್ಲಿ ತುಸ ಮಲಗೋಣ. ಬೆಳಗಾಗುವಷ್ಟರಲ್ಲಿ ಸ್ನಾನ-ಗೀನಗಳು; ಹಾಗು ದೈವದಲ್ಲಿ ಮತ್ತೆನಿರುವದೋ ಆದಾಗಲಿ! ಅಯ್ಯಯ್ಯೋ! ಕಾಲಿನ ನೋವನ್ನು ಸಹಿಸಲಾರೆ! ಮೊದಲು ಆ ಗುಡಿಗೇ ಹೋಗೋಣ."

ಗುಡಿಗೆ ತಲುಪುತ್ತಲೆ ಬರಿಯ ಕಿಶನನೇ ಅಲ್ಲ, ಇಷ್ಟು ಹೊತ್ತಿನ ಉತ್ತೇಜನದಿಂದ ಮನಸ್ಸು ಮತ್ತು ದೇಹಗಳು ಶಕ್ತಿಗುಂದ ತೊಡಗಿದ್ದ ಮಾಲತಿಯು ಒಮ್ಮೆಲೆ ನೆಲಕ್ಕೆ ಬಿದ್ದುಬಿಟ್ಟಳು! ಕಿಶನನು ತಾನು ಬಿದ್ದಿದ್ದ ಸ್ಥಳದಿಂದಲೇ ಅವಳಿಗೆ ಹೇಳಿದನೇನಂದರೆ:—"ನೀನು ಸ್ವಸ್ಥವಾಗಿ ಮಲಗು. ಆ ಚೂರಿಯನ್ನಿತ್ತ ಕೊಡು. ನಾನು ಪಹರೆ ಮಾಡುತ್ತಿರುತ್ತೇನೆ. ಇನ್ನು ದುಃಖ-ಶೋಕಗಳನ್ನೆಲ್ಲ ಕೆಲ ಹೊತ್ತು ಮರೆತೇ ಬಿಡು."

"ದುಃಖವೇ? ಛೀ! ನನಗೀಗ ಏನು ಅನಿಸುತ್ತಿದೆಯೆಂಬದನ್ನು ತಿಳಿಸಲೊ? ಆನಂದ! ಅವಸಾನ! ಎಷ್ಟೆಂದು ಹೇಳಲಿ? ನಮ್ಮ ಮನೆಯಲ್ಲೊಮ್ಮೆ ಒಂದು ನಾಗರಹಾವು ಬಂದಿತ್ತು. ಮನೆಯ ಮುಂದಿನ ಆಲದಮರದಡಿಯಲ್ಲಿ ಅದು ವಾಸಿಸುತ್ತಿತ್ತು. ನಮ್ಮ ತಾಯಿಯು ದೈವಭಕ್ತಿಯವಳು. ಅವಳು ಅದಕ್ಕೆ ಆಗಾಗ್ಗೆ ಬಟ್ಟಲಲ್ಲಿ ಹಾಲಿಡುತ್ತಿದ್ದಳು. ಅದು ಅದನ್ನು ಕುಡಿ

ಯುತ್ತಿರುವಾಗ ನಾವು ಎಷ್ಟೋ ಸಾರೆ ಆ ಹಾವನ್ನು ದೂರದಿಂದ ನೋಡು ತ್ತಿದ್ದೆವು. ಹಾವಾದರೂ ಅದು ಜೀವಧಾರಿ ಪ್ರಾಣಿಯಲ್ಲವೆ? ಅದಕ್ಕೂ ಕ್ರಿಯೆ ಇರುತ್ತದೆ ಅದು ಹಾಲುಕೊಟ್ಟವರಿಗೆಂದೂ ಕಚ್ಚುವದಿಲ್ಲ, ಎಂದು ನಮ್ಮ ವ್ವನು ಅನ್ನುತ್ತಿದ್ದಳು; ಆದರೆ ಒಂದು ದಿನ ಆ ಹಾವಿಗೇನಾಯಿತೋ ಯಾರು ಬಲ್ಲರು? ಅದು ನೆಟ್ಟಗೆ ನಮ್ಮ ಮನೆಯನ್ನು ಹೊಕ್ಕು, ನಮ್ಮೊಡನಾಡು ತ್ತಿದ್ದ ನನ್ನ ಅಬಚಿಯ ಮಗಳಿಗೆ ಕಚ್ಚಿ, ನನ್ನನ್ನೂ ಕಚ್ಚಲು ಧಾವಿಸಿ ಬಂದಿತು. ನಾವೆಲ್ಲರೂ ಹುಡುಗರು ಜೀವಕ್ಕೆ ಹೆದರಿ ಓಡಿದೆವು; ಹಾಗು 'ಹಾವು-ಹಾವು' ಎಂದು ಒಮ್ಮೆಲೆ ಕೂಗಿದೆವು. ಆ ಕೂಡಲೆ ನಮ್ಮ ಚಾಕರನು ಬಂದು ಒಂದೇ ಏಟಿನಿಂದ ಅದರ ತಲೆ ಒಡೆದುಬಿಟ್ಟನು! ಆ ಹಾವು ಒದ್ದಾಡುತ್ತ, ಆದರೆ ಅದು ಮೋರೆ ತಿರುವಿಕೊಂಡು ಬಿದ್ದಿದೆ ಎಂಬದನ್ನು ತಿಳಿದು, ಒಂದು ದೊಡ್ಡ ಕೋಲಿ ನಿಂದ ನಾನು ಅದಕ್ಕೆ ದೂರಿನಿಂದಲೇ ಒಳ್ಳೇ ಬಲವಾಗಿ ಹೊಡೆಯಲು, ಅದರ ಹೊಟ್ಟೆಯೊಡೆದು ಭಿನ್ನಭಿನ್ನವಾಯಿತು! ಸೇಡಿನ ಆನಂದವು ಎಷ್ಟು ಮಧುರವಿರುತ್ತದೆಂಬದು ಮೊಟ್ಟಮೊದಲು ಅಂದೇ ನನ್ನ ಅನುಭವಕ್ಕೆ ಬಂದಿತು. ಅಂಥ ಉನ್ಮತ್ತ ಆನಂದವೇ ಈಗ ನನಗುಂಟಾಗಿದೆ ನನ್ನ ಈ ಅವ ಸಾನವೆಲ್ಲ ಆನಂದದ್ದೇ ಆಗಿದೆ ಇದು ಈ ಸೇಡು ಹಾಯಿಸಿದ ಚೂರಿಯಿಂದಲೇ ಉಂಟಾಗಿದೆ. ಇದು ನನ್ನ ಬಳಿಯಲ್ಲಿರುವವರೆಗೇ ನನ್ನ ಜೀವದಲ್ಲಿ ಜೀವವಿರು ವದು. ಅದರಿಂದ ಇದು ಹೀಗೆ ನನ್ನ ತಲೆಗಿಂಬಿಗೇ ಇರಲಿ. ನನಗೆ ನಿದ್ದೆಯೇ? ಆದರೆ ಎಲಾ ಕಿಶನ, ನನ್ನ ತಾಯಿ? ನನ್ನ ಅವ್ವ ಎಲ್ಲಿರುವಳೆಂಬದನ್ನು ನನಗೆ ಮೊದಲು ತಿಳಿಸು ಆ ಬಗ್ಗೆ ನಿನಗೇನಾದರೂ ಗೊತ್ತಿದೆಯೇ? ನಾನು ಎದ್ದು ಕೂಡ್ರುವೆನು. ನನಗಾ ಸಂಗತಿಯನ್ನು ಹೇಳು," ಎಂದಂದು ಗ್ಲಾನಿ ಬರು ತ್ತಿದ್ದರೂ ಆಕೆಯು ಹೇಗಾದರೊಮ್ಮೆ ಎದ್ದು ಕುಳಿತಳು; ಆದರೆ ಆಕೆಯ ಆ ನುಡಿಗಳು ಕಣ್ಣಲ್ಲಿ ನಿದ್ದೆಯಿದ್ದವರ ಹಾಗೆ ಸುಸಂಗತವಾಗಿರಲಿಲ್ಲ.

ಮಾಲತಿಯನ್ನು ಗುಲಾಮಹುಸೇನನ ಮನೆಯಲ್ಲಿ ಪ್ರತಿಬಂಧಿಸಿದ ನಂ ತರ ಆ ಛದ್ಮವೇಷದ ಯೋಗಾನಂದನು ನಾಯುಡೂಬಾಯಿ ಹಾಗು ರಮಾ ಬಾಯಿಯರನ್ನು ಹೇಗೆ ಮೋಸಗೊಳಿಸಿದನು, ಅವನ ಮಾತನ್ನು ನಂಬಿ ಅವ ರಿಬ್ಬರೂ ಮಾಲತಿಯನ್ನು ಹುಡುಕುವ ಸಲುವಾಗಿ ಅಂದೇ ನಾಗಪೂರಕ್ಕೆ ಹೇಗೆ ಹೋದರು; ಮತ್ತು ಆ ಮೇಲೆ ಅವರ ಪತ್ತೆಯು ತನಗಿಂದಿಗೂ ಹತ್ತದಿ ದ್ದನ್ನು ಕಿಶನನು ಆಕೆಗೆ ಸಂಕ್ಷಿಪ್ತವಾಗಿ ತಿಳಿಸಿದನು; ಆದರೆ ಆತನ ಮಾತು ಮುಗಿಯುವಷ್ಟರಲ್ಲಿ ಮಾಲತಿಯ ಸುಂದಾದ ಮನಸ್ಸು ನಿದ್ರೆಯ ಗ್ಲಾನಿಯ ಮೂಲಕ ತನ್ನ ವ್ಯಾಪಾರವನ್ನು ಬಹು ಮಟ್ಟಿಗೆ ನಿಲ್ಲಿಸಿಬಿಟ್ಟಿತು. ಅವಳು ಆತನ

ಮಾತಿಗೆ ಹೂ ಹೂ ಅನ್ನುತ್ತ ಹ್ಯಾಗೆ ನೆಲಕ್ಕೆ ಬಿದ್ದಳೆಂಬದು ಅವಳದವಳಿಗೇ ಗೊತ್ತಾಗಲಿಲ್ಲ. ಬಳಿಕ ಕಿಶನನೂ ನೆಲದಮೇಲೆ ಬಿದ್ದುಕೊಂಡನು. ಆಗ ಆತನ ಮನಸ್ಸಿನಲ್ಲಿ ಆ ಕೃತ್ಯದ ಬಗ್ಗೆ ಭಾವೀ ಭಯಂಕರ ಪರಿಣಾಮದ ವಿಚಾರಗಳು ಒಂದೇಸವನೆ ಗೊಂದಲವೆಬ್ಬಿಸಿದ್ದವು. ನಡುನಡುವೆ ನಿದ್ರೆಯ ಗುಂಗು ಬರುತ್ತಿತ್ತು. ಮತ್ತೆ ಮನಸ್ಸಿನ ಕೋಲಾಹಲ. ತನ್ಮಧ್ಯೆ ಆ ಕಾಲಿನ ನೋವು. ಈ ತಾಪಗಳಿಂದ ಆತನು ಚಡಪಡಿಸುತ್ತ ಬಿದ್ದುಕೊಂಡಿದ್ದನು. ನಡುವೆ ಎರಡು ಸಾರೆ ಆತನಿಗೆ ಬೂಟುಗಳ 'ಟಪ್ ಟಪ್' ಎಂಬ ಸಪ್ಪಳವು ಕೇಳಿಸಲು, ಆತನು ಅಂಜಿಕೆಯಿಂದ ಎದ್ದನು; ಹೊರಗೆ ಹೋಗಿ ಯಾರೂ ಇಲ್ಲೆಂಬದನ್ನು ತಿಳಿದು ಮತ್ತೆ ಒಳಗೆ ಬಂದು ಮಲಗಿದನು! ಆತನ ಕಣ್ಣು ಮುಚ್ಚುತ್ತಲೇ ಕರೀ ಉಡುಪಿನ ಪೋಲೀಸರ ಆಕೃತಿಗಳು ಆತನೆದುರಿಗೆ ಬಂದು ನಿಲ್ಲುತ್ತಲೂ ಅವು ತನ್ನನ್ನು ಬಂಧಿಸುತ್ತಿರುವ ಹಾಗೂ ಆತನಿಗೆ ಭಾಸವಾಗುತ್ತಿತ್ತು. ಆಗ ಆತನು ಪುನಃ ಕಣ್ಣು ತೆರೆಯುವನು; ಧೈರ್ಯತಾಳುವನು, ಮತ್ತು ನಸುಕಿನಲ್ಲಿ ಅಲ್ಲಿಂದ ಫರಾರಿಯಾಗಲಿಕ್ಕೆ ಏನು ಹಂಚಿಕೆ ಮಾಡಬೇಕೆಂಬದನ್ನು ತನ್ನ ಆ ನಿದ್ದೆಯ ಗುಂಗಿನಲ್ಲೇ ಯೋಚಿಸುವನು.

ಮಾಲತಿಯು ಸಂಜ್ಞಾಮನಸ್ಸು ಕೀಲಿ ತೀರಿದ ಗಡಿಯಾರದಂತೆ ಕೇವಲ ಸುಮ್ಮನಾಗಿ ಹೋಗಿದ್ದರೂ, ಆ ಗ್ಲಾನಿಯ ನಿದ್ದೆಯಲ್ಲಿ ಆಕೆಯ ಅಸಂಜ್ಞಾ ಮನಸ್ಸಿನ ಪಡೆಯೊಳಗಿಂದ ಕಿಶನನ ಮನಸ್ಸಿನ ಕೋಲಾಹಲದಂತೆಯೇ ಧೃತಿ, ಭೀತಿ, ಮಾಯೆ, ಮಮತೆ, ಪ್ರೇಮ, ದ್ವೇಷ ಇವುಗಳ ನಾನಾ ಸ್ಮೃತಿಗಳೂ ಹಾಗೂ ಕನಸ್ಸಿಗಳ ಕೋಲಾಹಲವು ಏಕಪ್ರಕಾರ ನಡೆದಿರಲಿಕ್ಕೆಬೇಕು. ಅವಳು ನಡುನಡುವೆ ಬೆಚ್ಚಿಬೀಳುವಳು, ನಗುವಳು, ಗೊರಿಕೆಹೊಡೆಯುವಳು. ಅವಳಿಗೆ ಕಂಡ ಕನಸ್ಸಿನಲ್ಲಿ ಅವಳಿಗೆ ಅನಿಸಿದ್ದೇನಂದರೆ, ತಾನು ತನ್ನ ತಾಯಿಯ ಜೊತೆಗೆ ಮಥುರೆಯೊಳಗಿನ ಆ ತೂಗಮಂಚದ ಮೇಲೆ ಪ್ರೇಮಲ ಗೀತಗಳನ್ನನ್ನುತ್ತ ಆಗಾಗ್ಗೆ ಉದ್ದುದ್ದನ್ನ ಝುರಿಗಳನ್ನು ತಕ್ಕೊಳ್ಳುತ್ತಿದ್ದಾಳೆ! ಅಷ್ಟರಲ್ಲಿ ತೂಗಮಂಚವು ಒಮ್ಮೆಲೆ ಹಗ್ಗದಿಂದ ಕಳಚಿತು; ಮತ್ತು ಆ ಹಗ್ಗದಲ್ಲಿ ಆಕೆಯ ಗೋಣು ತೊಡಕಿತು. ಆ ಹಗ್ಗವು ಆಕೆಯ ಕುತ್ತಿಗೆಗೆ ಬಲವಾಗಿ ಬಿಗಿಯಾದ್ದರಿಂದ ಆಕೆ ಹಾಗೆಯೇ ತೂಗಾಡಹತ್ತಿದಳು! ಉರುಲುಬಿದ್ದು ಉಸಿರುಕಟ್ಟಲು, ಅವಳ ನಾಲಿಗೆಯು ಹಿರಿಯಿತು! ಮತ್ತು ಅಂಥ ಭೀಷಣ ಸ್ಥಿತಿಯಲ್ಲಿ ಅವಳು ತನ್ನನ್ನು ತಾನೇ ನೋಡಹತೊಡಗಿದ್ದಾಳೆ.! ಅದರಿಂದ ಅವಳ ಮನಸ್ಸು ತಳಮಳಗೊಂಡು "ಸತ್ತೆನು-ಸತ್ತೆನು! ಅವ್ವಾ, ಓಡಿ ಬಾ. ನನಗೆ ಉರುಲುಬಿದ್ದಿದೆ!" ಹೀಗೆ ಸ್ಪಷ್ಟವಾಗಿ ಕಿರಚಿ, ಮಾಲತಿಯು ಒಮ್ಮೆಲೆ

ಎದ್ದಳು! ಥರ ಥರನೆ ನಡುಗಹತ್ತಿದಳು! ಸಿಟ್ಟುಸಿರುಬಿಡುತ್ತ, ಇದುವರೆಗೆ ನಿರೋಧವಾದ ಶ್ವಾಸವನ್ನು ಬಲವಾಗಿ ಆಡಿಸಹತ್ತಿದಳು.

ಕಿಶನನೂ ತಟ್ಟನೆ ಎದ್ದನು. ಆಕೆಯು ಕತ್ತಲೆಯಲ್ಲೇ ಗಾಬರಿಗೊಂಡು ನಿಂತುಕೊಂಡಲ್ಲಿಗೆ ಕೈಯಾಡಿಸುತ್ತ ಹೋಗಿ, ಆಕೆಯ ಹೆಗಲ ಮೇಲೊಂದು ಕೈಯಿಟ್ಟು, ಎರಡನೇ ಕೈಯಿಂದ ಆಕೆಯ ಬೆನ್ನು ಚಪ್ಪರಿಸುತ್ತ ಆಕೆಗೆ ಧೈರ್ಯಕೊಡಹತ್ತಿದನು. ಆ ಕೂಡಲೆ ಮಾಲತಿಯು ತನ್ನ ನಡುಗುವ ಎರಡೂ ಕೈಗಳಿಂದ ಆತನ ಕೊರಳಿಗೆ ತೆಕ್ಕೆಬಿದ್ದು:-"ಕಿಶನ್, ನನ್ನಿಂದ ಎದ್ದು ನಿಲ್ಲಲಾಗುವದಿಲ್ಲ. ನನಗೆ ಏತರಿಂದಲೋ ನಡುಗು ಹುಟ್ಟಿದೆ. ನನ್ನನ್ನು ಬಲವಾಗಿ ಅವಚಿಕೊಂಡು, ನನ್ನ ಬಳಿಯಲ್ಲೇ ಮಲಗು. ನಾಚಿಗೊಳ್ಳಬೇಡ. ನಾನಾಗಿ ಯಾರನ್ನು ನನ್ನ ಮಗ್ಗಲಲ್ಲಿ ಮಲಗಿಸಿಕೊಳ್ಳುತ್ತಿರುವೆನೋ, ಅಂಥ ನೀನೇ ಪ್ರಥಮದ ಗಂಡಸಾಗಿರುತ್ತೀ."

ಕಿಶನನು ಅವಳನ್ನು ಅವಚಿಕೊಂಡು ಮಲಗುತ್ತಲೆ, ಅವಳಿಗೆ ಈ ಮೊದಲು ಎಚ್ಚರವೇ ಆಗಿರದಂತೆ ಒಳ್ಳೇ ಗಾಢವಾಗಿ ನಿದ್ದೆ ಹತ್ತಿತು! ನಿದ್ದೆಯಲ್ಲಿಯೋ ಬಡಬಡಿಸುವ ಅಥವಾ ಓಡಾಡುವ ಯಾವ ಒಂದು ರೋಗವಿರುವದೋ, ಅದರ ಪಿಡುಗೇ ಇಂದು ಅವಳಿಗೆ ಬಂದಂತಾಗಿತ್ತು!

ಕಿಶನನಿಗೆ ಸಮೀಪದ ಬಿಲ್ವಪತ್ರಿಯ ಗಿಡದ ಮೇಲಿನ ಕೋಗಿಲೆಯ ಬೆಳಗು ಮುಂಜಾನೆಯ ಕೂಗು ಯಾವಾಗ ಕೇಳಿಸಿತೋ, ಆಗ ಆತನು ಬಹು ಕಷ್ಟದಿಂದ ಮಾಲತಿಯನ್ನು ಅಲ್ಲಾಡಿಸಿ, ಸಂಪೂರ್ಣವಾಗಿ ಎಚ್ಚರಗೊಳಿಸಿ:- "ಮಾಲತೀ, ನಾನು ನಮ್ಮ ಮುಂದಿನ ಬೇತನ್ನು ಸಂಪೂರ್ಣವಾಗಿ ನಿರ್ಧರಿಸಿಬಿಟ್ಟಿದ್ದೇನೆ. ನೀನು ತುಸ ಧೈರ್ಯಮಾತ್ರ ಧರಿಸಬೇಕು. ನೀನು ಅಧೈರ್ಯ ಪಡಲಿಕ್ಕಿಲ್ಲವಷ್ಟೇ?"

"ಹುಚ್ಚಾ, ಈಗ ನಾನೇನು ಕನಸಿನಲ್ಲಿರುವೆನೇ? ಕನಸಿನೊಳಗಿನ ಉರ್ಲಿನಿಂದ ಯಾರು ಅಂಜುವರೋ, ಅವರೊಳಗಿನ ಎಷ್ಟೋ ಮಂದಿ ನಿಜವಾದ ಗಲ್ಲಿಗೆ ಕೊಂಚವೂ ಹೆದರುವದಿಲ್ಲ!"

"ಆದರೆ ಗಲ್ಲಿನ ವಿಷಯವನ್ನೇತಕ್ಕೆ ಎತ್ತುತ್ತೀ? ಸ್ವಲ್ಪದರಲ್ಲಿ ಕೇಳಿಕೋ. ನೀನು ಈಗ ಹೊಳೆಗೆ ಹೋಗಿ ನಿನ್ನೀ ಮುಸ್ಲೀಮ ವೇಷವನ್ನೂ ನೆತ್ತರದ ಕಲೆಬಿದ್ದ ಅರಿವೆಗಳನ್ನೂ ಮುಳುಗಿಸಿಬಿಡು; ಸ್ನಾನ ಮಾಡು; ಮತ್ತು ಈ ನನ್ನ ಗಂಟಿನೊಳಗಿನ ಈ ದೋತರವನ್ನು ಯಾವಳೊಬ್ಬ ಭಿಕ್ಷುಕಿಣಿಯು ಹಾಗೆ ಉಟ್ಟು, ಈ ಪರಟಿಯನ್ನು ಹಿಡಿದು ಈ ಅಡ್ಡದಾರಿಯಿಂದ ಪಾರಾಗು; ಮತ್ತು ಹಳ್ಳಿಪಳ್ಳಿಗಳೊಳಗಿಂದ ಸಂಚರಿಸುತ್ತ ನಿಮ್ಮ ಊರಿಗೆ ಹೋಗಿ, ನಿಮ್ಮ ಅವ್ವ

ನಿಗೆ ಬೆಟ್ಟಿಯಾಗು; ಮತ್ತು........"

"ಛೇ! ಊರೇ? ನೀನು ಇನ್ನು ನಮ್ಮವ್ವನ ಹೆಸರನ್ನು ಸಂಪೂರ್ಣವಾಗಿ ಮರೆತುಬಿಡು! ಎಲಾ, ಆಕೆಯು ನನ್ನನ್ನು ನೋಡಿದೊಡನೆ ನನ್ನ ಮೋರೆಯ ಮೇಲೆ ಕೈಯಾಡಲು ಮಮತೆಯಿಂದ ಮತ್ತೆ ಧಾವಿಸಿ ಬಂದರೆ, ಆಕೆಯ ಕೈಗಳು ಈ ನನ್ನ ಮುಸುಡೆಯ ಮೇಲಿನ ನೆತ್ತರದ ಕಲೆಗಳಿಂದ ರಕ್ತಬಂಬಾಳಾದಾವು ಆಕೆಯ ಮೈ ಮೇಲೆ ನನ್ನ ಕೃತಕರ್ಮಗಳ ತುಷಾರುಗಳು ಹಾರಿ, ಆ ಸಾಧ್ವಿಯ ನಿರ್ಮಲತೆಯೂ ಕಲಂಕಿತವಾದೀತು. ನಾನು ನನ್ನ ತಾಯಿಯ ಉದ್ಯಾನದೊಳಗಿನದೊಂದು ನಿರ್ಮಲವಾದ ಹೂವಾಗಿದ್ದೆನು; ಹಾಗು ಆಗ ನನಗೆ ಮಾಲತಿ ಎಂದೆನ್ನುತ್ತಿದ್ದರು! ಆದರೆ ಈಗ ನಾನು ಹೂವಾಗಿಲ್ಲ. ಈಗ ಸಮಾಜದ ದಾರಿಯೊಳಗಿನವೊಂದು ಕಂಟಕವಾಗಿರುತ್ತೇನೆ! ನಾನು ಬೇಕಾದಲ್ಲಿ ಧೂಳದಲ್ಲಿ ಬಿದ್ದೇನು; ಆದರೆ ಮತ್ತೆ ತಾಯಿಯ ಅಂಗಳದಲ್ಲಿ ಹೋಗಿ ಬಿದ್ದು, ಆಕೆಯ ಕಾಲಿಗಾದರೂ ಗಸಕ್ಕನೆ ನೆಟ್ಟು ಮುರಿಯಲಾರೆನು! ಇನ್ನು ನಾನು ನನ್ನ ಹೆಸರು ಕೂಡ ಬದಲಿಸತಕ್ಕವಳು. ಹೂವಲ್ಲ ಮುಳ್ಳು! ಮಾಲತಿಯಲ್ಲ ಕಂಟಕಿ! ಇನ್ನು ನೀನು ಚನ್ನಾಗಿ ನೆನಪಿಡು, ನನ್ನನ್ನು ಮಾಲತಿಯೆಂದು ಕರೆಯಕೂಡದು. ಕಂಟಕಿಯೆಂದೇ ನನ್ನನ್ನು ಸಂಬೋಧಿಸತಕ್ಕದ್ದು."

"ಹಾಗೆಯೇ ಆಗಲಿ; ಆದರೆ ನೀನು ನನ್ನೊಬ್ಬನನ್ನೇ ಬಿಟ್ಟು ತೆರಳು! ನಾನು ನಡೆಯಲಾರೆನು. ನಾನಾದರೂ ನಿನ್ನ ಹಿಂದಿನಿಂದ ಹೇಗಾದರೂ ಪಾರಾಗುತ್ತೇನೆ. ಒಂದುವೇಳೆ ಸಿಕ್ಕುಬಿದ್ದರೆ, ಈ ಕೊಲೆಯ ಅಪರಾಧವನ್ನೆಲ್ಲ ನಾನೇ ಒಪ್ಪಿಕೊಳ್ಳುತ್ತೇನೆ! ಪಾರಾಗಿ ಬಂದರೆ ನಿನಗೆ ಭೇಟಿಯಾಗುತ್ತೇನೆ! ನನ್ನ ಹೆಸರನ್ನಾದರೂ ಬದಲಿಸಿಕೊಳ್ಳಲೇಬೇಕಾಗಿದೆ! ನನ್ನ ಹೆಸರು ಕಂಟಕ ಎಂಬುದನ್ನು ಚನ್ನಾಗಿ ಲಕ್ಷ್ಯದಲ್ಲಿಡು; ಅಂದರೆ ಈ ಮೊದಲಿನ ಖಟ್ಲೆಯ ಎಳೆಗಳು ನನಗೂ ನಿನಗೂ-ನಿನ್ನ ತಾಯಿಗೂ ಸಹಸಾ ಸುತ್ತುಗಟ್ಟಲಿಕ್ಕಿಲ್ಲ. ಯಾವ ಅಧಮನ ತಲೆ ಜೆಜ್ಜಿ ಪಾರುಪತ್ಯಗೊಳಿಸಿದೆವೋ, ಆತನ ಹೆಸರನ್ನೂ ಹೇಳಲಾಗದು. ಆತನ ಬಗ್ಗೆ ಏನೂ ಗೊತ್ತಿಲ್ಲೆಂದು ಹೇಳುವದು. ಇನ್ನು ನಾವು ಕೂಡಿಯೇ ಸಂಚರಿಸಿದರೆ ಇಬ್ಬರೂ ಸಿಕ್ಕುಬೀಳುವೆವು! ಆದ್ದರಿಂದ ಈಗ ನೀನಾದರೂ ಪಾರಾಗಿ ಹೋಗು! ಮಾಲತಿ, ನಿನ್ನಿಂದ ಬೇರೆಯಾಗುವಾಗ ನೀರಿನಿಂದ ಹೊರಚಲ್ಲಲ್ಪಟ್ಟ ಮೀನದಂತೆ ನನ್ನ ಅವಸ್ಥೆಯಾಗುವದು. ಆದರೆ ನಿನ್ನ ಕೂದಲಿಗೆ ಕೂಡ ಧಕ್ಕೆಯಾಗದಿದ್ದರೆ, ಮತ್ತೆ ಕೆರೆಯಲ್ಲಿ ಬಿದ್ದ ಮೀನದಂತೆಯೇ ಆದು ಹರ್ಷಗೊಂಡೀತು! ಊಂ-ಹೂಂ, ಇನ್ನು ಈ ಎಲ್ಲ ಚರ್ಚೆ ಸಾಕು! ಆಗೋ, ಬೆಳಗಾಯಿತು ನೋಡು!"

ಅವರು ಇಷ್ಟು ಮಾತಾಡುತ್ತಿರುವಷ್ಟರಲ್ಲಿ ದೂರದಲ್ಲಿ ಕೆಲ ಗದ್ದಲವು ಕೇಳಿಸಿತು! ತನಗೆ ರಾತ್ರಿಯಲ್ಲಿ ಬೂಟಿನ ಸಪ್ಪಳ ಕೇಳಿಸಿದ ಭಾಸವು ಹೇಗೆ ಸುಳ್ಳಾಗಿದ್ದಿತೋ ಹಾಗೆಯೇ ಇದೂ ಆದೀತೆಂಬ ಆಶೆಯಿಂದ ಕಿಶನನು ಹೊರಗೆ ಹಣಿಕಿ ಹಾಕಿದನು; ಆದರೇನು? ನಿಜವಾಗಿಯೂ ಕೆಲ ಜನರು ಗದ್ದಲ ಮಾಡುತ್ತ ಆ ಗುಡಿಯ ಕಡೆಗೆ ಬರುತ್ತಿದ್ದವರು, ನಡುವೇ ಗಕ್ಕನೆ ನಿಂತುಕೊಂಡದ್ದು ಅವನಿಗೆ ಮುಸುಕು-ಮುಸುಕಾಗಿ ಕಾಣಿಸಿತು! ಚೆನ್ನಾಗಿ ದಿಟ್ಟಿಸಿ ನೋಡಲು, ಸಮೀಪದ ಒಂದು ದಿನ್ನೆಯ ಮೇಲೆ ಇಬ್ಬರು ನಿಂತಿದ್ದರು; ಮತ್ತು ಅವರು ವೇಷ-ಭೂಷಣಗಳಿಂದೊಪ್ಪುವ ಪೋಲೀಸರೇ ಆಗಿದ್ದರೆಂಬ ಬಗ್ಗೆ ಸಂದೇಹವೇ ಇರಲಿಲ್ಲ!'

ಅಪೇಕ್ಷಿತವಿದ್ದರೂ ಭಯಂಕರ ಸಂಕಟವು ಒಮ್ಮೆಲೆ ಪ್ರಾಪ್ತವಾಗಲು, ಮನಸ್ಸಿಗೆ ತಗಲುವ ಬಲವಾದ ಧಕ್ಕೆಯು ತಗಲದಿರುವುದಿಲ್ಲ. ತಮ್ಮ ಮೇಲಿನ ಸಂಕಟವು ತೀರ ನಿವಾರಣವಾದರೂ ಆದೀತೆಂಬ ಅಲ್ಪ-ಸ್ವಲ್ಪ ಆಶೆಯು ಕಿಶನನಿಗಿತ್ತು. ಆಗ ಆ ಭಯಂಕರ ಸಂಕಟವು ತೀರ ನಿವಾರಣವಾಗುವ ಸಂಧಿಯಲ್ಲೇ ಗಟ್ಟಿಯಾಗಿ, ಕೊರಳಿಗಂಟಿಕೊಂಡದ್ದು ಕಾಣಿಸುತ್ತಲೆ, ಆತನಿಗೆ ಒಮ್ಮೆಲೆ ನಡುಗು ಹುಟ್ಟುವದು ಸ್ವಾಭಾವಿಕವೇ ಆಗಿತ್ತು; ಆದರೆ ಆತನು ತನ್ನಲ್ಲಿಯ ಧೈರ್ಯವನ್ನೆಲ್ಲ ಒಮ್ಮೆಲೆ ಒಟ್ಟುಗೂಡಿಸಿ, ಸರ್ರನೆ ಒಳಗೆ ಸರಿದು ಮಾಲತಿಯನ್ನು ಕಂಡು ಒತ್ತಿದ ಕಂಠದಿಂದ "ಮಾಲತೀ, ಅವರು ಬಂದರು! ಕೇಳು, ಇನ್ನು ನಾನು ಅವರಿಗೆ ಮುಂದರಿದು ಹೇಳುವದನ್ನೇ ನೀನೂ ಹೇಳು. ಒಂದಕ್ಷರ ಕೂಡ ಹೆಚ್ಚು-ಕಡಿಮೆ ಎಲ್ಲಿಯೂ ಯಾವಾಗಲೂ ಹಿಂದೆ ಮುಂದೆ ಎಂದೂ ಹೇಳಬೇಡ. ಸಾವಿರಾರು ನಿಗರಗಟ್ಟಿ ಕಳ್ಳ-ದರವಡೆಖೋರರ ಗುಂಪಿನೊಡನೆ ಸೆರೆಮನೆಯಲ್ಲಿದ್ದು, ಈ ಅವಸ್ಥೆಯೊಳಗಿನ ಸಂದಿಗೊಂದಿಗಳನ್ನೆಲ್ಲ ಚನ್ನಾಗಿ ಕಂಡಿರುತ್ತೇನೆ! ಇಂಥ ಪ್ರಸಂಗದಲ್ಲಿ ಎಲ್ಲವನ್ನೂ ಇನ್‌ಕಾರ ಮಾಡುವದು ಸಂಪೂರ್ಣ ಅಶಕ್ಯವು! ಆ ರೈತಜನರು ನಿನ್ನೆ ರಾತ್ರಿಯಲ್ಲೇ ಈ ಸಂಗತಿಯನ್ನು ಪೋಲೀಸರಿಗೆ ತಿಳಿಸಿರಬೇಕು. ನೆತ್ತರದ ಹೆಜ್ಜೆಗಳು ಮೂಡಿರುವವು; ಕೈ-ಕಾಲು-ಬಟ್ಟೆಗಳು ನೆತ್ತರಮಯವಾಗಿವೆ!....."

ಇಷ್ಟರಲ್ಲಿ "ಅಂದರ ಕೋನ ಹೈ? ಚಲೋ ಬಾಹೇರ ಆವ!!" ಎಂದು ದೂರಿನಿಂದಲೇ ಪೋಲೀಸರ ಬೆದರಿಕೆಯ ಆಜ್ಞೆ ಹೊರಟಿತು.

ಕೂಡಲೆ ಕಿಶನನು ತಟ್ಟನೆ ಹೊರಗೆ ಬಂದನು. ಆ ಕೂಡಲೆ 'ಪಕಡೋ ಪಕಡೋ' ಎಂದು ಒದರುತ್ತ ಇಬ್ಬರು-ಮೂವರು ಪೋಲೀಸ ಅಧಿಕಾರಿಗಳು ಮುಂಬಂದು, ಕಿಶನನನ್ನು ಹಿಡಿದು, ಅಲ್ಲಿಂದಲ್ಲೇ ಕೈಬೇಡಿ ತೊಡಿಸಿದರು!

"ಕೈಬೇಡಿಗಳೇತಕ್ಕೆ? ಇಷ್ಟು ಗಟ್ಟಿಯಾಗಿ ಕಟ್ಟಿಹಿಡಿಯುತ್ತಿರುವುದೇಕೆ ನೀವು ಬರದಿದ್ದರೂ ನಾನಾಗಿ ಪೋಲೀಸ ಚಾಕಿಗೆ ಹೋಗಿ, ಈ ಸುದ್ದಿ ತಿಳಿಸ ತಕ್ಕವನೇ ಇದ್ದೆನು."

"ಹೀಗೆ ಸರಳ ರೀತಿಯಿಂದ ನಡೆದರೆ, ಅದರಿಂದ ನಿಮ್ಮದೇ ಅನವಶ್ಯಕ ಪೀಡೆ ತಪ್ಪೀತು." ಪೋಲೀಸ ಅಧಿಕಾರಿಯು ತಿಳುವಳಿಕೆಯ ಮಾತನ್ನು ಶಾಂತಸ್ವರದಲ್ಲಿ ಹೇಳಿದನು:-"ನೀವು ಆ ಬಳಿಯ ಗುಡಿಸಲೊಳಗಿನ ಮನುಷ್ಯ ನನ್ನು ಅಷ್ಟು ಭಯಂಕರ ರೀತಿಯಿಂದೇಕೆ ಕೊಂದಿರಿ? ಹೇಳಿರಿ ನಿಮ್ಮ ಹೆಸ ರೇನು? ಇವಳೇ ಆ ಸ್ತ್ರೀಯೇನು? ಈ ಹೆಂಗಸನ್ನೂ ಬಂಧಿಸಿರಿ"

"ತಾಳಿರಿ, ತುಸ ತಾಳಿರಿ. ನಾನೇ ಆ ಮನುಷ್ಯನ ಕೊಲೆಗೈದವನು; ಆ ಹೆಂಗುಸಲ್ಲ. ಆತನು ಮಾನವನೇ ಆಗಿರದ್ದರಿಂದ, ಆತನ ಕೊಲೆಗೈಯ್ಯ ಬೇಕಾಯಿತು. ಆತನು ಕೇವಲ ನೃಶಂಸ ರಾಕ್ಷಸನಾಗಿದ್ದನು. ನನ್ನ ಹೆಸರು ಕಂಟಕನೆಂದು ಈಕೆಯು ನನ್ನ ಭಗಿನಿಯಾದ ಕಂಟಕಿಯು. ನಾವು ಚಿಕ್ಕ ವರಿರುವಾಗ ಉಜ್ಜಯಿನಿಯ ಕಡೆಗೆ ಭಿಕ್ಷೆಯಿಂದ ಉಪಜೀವಿಸುತ್ತಿದ್ದೆವು. ನಮ್ಮ ತಾಯಿಯು ಮಹಾಮಾರಿಯಿಂದ ತೀರಿಕೊಂಡಳು. ಅದಕ್ಕಿಂತ ಮುಂಚಿನ ನಮ್ಮ ವಿಷಯದ ಮಾಹಿತಿಯು ನಮಗೆ ಗೊತ್ತಿಲ್ಲ ಅದರ ಮುಂದಿನ ಸಂಗತಿಯೆಂದರೆ, ನಾವು ತಿರಿದುಣ್ಣುತ್ತ ಊರೂರು ಸಂಚರಿಸುತ್ತ ಇದುವರೆಗೆ ಕಾಲಹರಣ ಮಾಡಿದೆವು. ಕೆಲ ದಿನಗಳ ಹಿಂದೆ ಈ ನನ್ನ ಭಗಿನಿಯು ಬಿಕ್ಕೆ ಬೇಡುತ್ತಿರಲು, ಒಬ್ಬೊಂಟಿಗಳನ್ನು ಕಂಡು ಆ ಮುಸ್ಲೀಮ ಬದ್ಮಾಷನು ಇವಳನ್ನು ಬಲಪೂರ್ವಕವಾಗಿ ಎಳೆದೊಯ್ದು ತನ್ನ ಮನೆಯಲ್ಲಿ ಸೇರಿಸಿ ಬಚ್ಚಿ ಟ್ಟನು. ಕ್ರೋಧ ಹಚ್ಚುತ್ತ ಹಚ್ಚುತ್ತ, ನಾನು ನಿನ್ನೆಯ ರಾತ್ರಿ ಆತನ ಮನೆಯ ಎದುರಿಗೆ ಹೋಗಿ ನಿಲ್ಲಲು ಹಾಗು ನನ್ನ ಭಗಿನಿಯನ್ನು ಬಿಟ್ಟುಕೊಡೆಂದು ಕೇಳಲು, ಆತನು ಚೂರಿ ಹಿರಿದು ನನ್ನ ಮೇಲೆ ಏರಿ ಬಂದನು ಬಡಿದಾಟ ದಲ್ಲಿ ಅದೇ ಚೂರಿಯನ್ನು ಕಸಿದು, ನಾನು ಆತನ ಕೊಲೆಗೈದೆನ; ಹಾಗು ಈ ನನ್ನ ಭಗಿನಿಯನ್ನು ಆತನಿಂದ ಬಿಡಿಸಿಕೊಂಡೆನು. ನಾನು ರಾತ್ರಿಯಲ್ಲಿ ಹೆಚ್ಚಾಗಿ ದಣಿದದ್ದರಿಂದ, ರಾತ್ರಿಯನ್ನು ಇಲ್ಲಿಯೇ ಕಳೆದು ಈಗ ಎದ್ದೆನು. ಇನ್ನು ನಾನಾಗಿಯೇ ಪೋಲೀಸ ಚಾಕಿಗೆ ಹೋಗಿ ಎಲ್ಲ ಸಂಗತಿಯನ್ನು ತಿಳಿಸ ತಕ್ಕವನಿದ್ದೆನು. ಅಷ್ಟರೊಳಗೆ ನೀವೇ ಬಂದಿರುತ್ತೀರಿ!"

ಈ ಬಗ್ಗೆ ಮಾಲತಿಯನ್ನು ಕೇಳಲು, ಆಕೆಯೂ ಪ್ರಸಂಗಾವಧಾನವನ್ನಿ ಟ್ಟುಕೊಂಡು ಒಳ್ಳೇ ದಿಟ್ಟತನದಿಂದ ಮೇಲೆ ಹೇಳಿದ ಕಿಶನನ ಜವಾಬಿಗೆ ತೀರ ಹೊಂದುವ ಹಾಗೆಯೇ ಹೇಳಿದಳು ಆ ಮುಸ್ಲೀಮ ಬದ್ಮಾಷನ ಹೆಸರು,

ದೆಸೆ, ಪೂರ್ವವೃತ್ತಗಳಾವವೂ ನನಗೆ ತಿಳಿಯವೆಂದು, ಪೋಲೀಸರು ತಿರುಗಿ ಮುರಿಗಿ ಎಷ್ಟೋ ಸಾರೆ ಕೆದರಿ ಕೆದರಿ ಕೇಳಿದರೂ ಅವಳು ಗಟ್ಟಿಮುಟ್ಟಾಗಿ ತಿಳಿಸಿಬಿಟ್ಟಳು.

ಅಂಗರ್ಖುಡತಿಯಲ್ಲಿ ನೆತ್ತರ ಮುಳುಗಿದ ಅರಿವೆ, ಕೈ, ಕಾಲು, ಮೋರೆಗಳೂ, ಹಾಗು ನಡಕ್ಕೆ ಸಿಗಿಸಿಕೊಂಡದ್ದ ಆ ಮನೆಯ ಬೀಗದ ಕೈ ಮತ್ತು ರಕ್ತ ಮುಳುಗಿದ್ದ ಚೂರಿ ಇವೆಲ್ಲ ಮಾಲತಿಯ ಬಳಿಯಲ್ಲಿ ದೊರೆತವು. ಅವರು ಅವನ್ನೆಲ್ಲ ಟಿಪ್ಪಣೆ ಮಾಡಿಕೊಂಡು, ಅವರಿಬ್ಬರನ್ನು ಬಂಧಿಸಿಕೊಂಡು ಊರ ಹಾದೀ ಹಿಡಿದರು. ಅವರೊಡನೆ ಆ ರೈತರೂ ನಡೆದರು ತಮ್ಮ ಮೇಲೆ ಈ ಲಿಗಾಡ ಬರಬಾರದೆಂದು ಅವರು ಆ ಮುರುಕ ಮನೆಯ ಕಡೆಗೆ ನಡೆದ ಆ ಭಯಂಕರ ಪ್ರಕಾರದ ಸುದ್ದಿಯನ್ನು ಆ ಮಧ್ಯರಾತ್ರಿಯಲ್ಲೇ ಪೋಲೀಸರಿಗೆ ತಿಳಿಸಿದ್ದರು ಅದರ ಹಾಗು ಇತರ, ಅಂದರೆ ತಮಗೆ ಗೊತ್ತಿದ್ದ ಮಾಹಿತಿಯನ್ನು ಅವರು ಪೋಲೀಸರಿಗೆ ತಿಳಿಸಿದ ಮೇಲೆ ಅವರಿಗೆ ತಂತಮ್ಮ ಮನೆಗೆ ಹೋಗಲಿಕ್ಕೆ ಅಪ್ಪಣೆ ದೊರೆಯಿತು. "ನಾನೇ ಅಪರಾಧಿಯು! ಆದ್ದರಿಂದ ನನ್ನ ಭಗಿನಿಯನ್ನು ಬಿಟ್ಟುಬಿಡಿರಿ ಆಕೆಯು ಹೊರಟು ಹೋಗಲಿ!" ಹೀಗೆ ಕಿಶನನು ಬಿನ್ನಯಿಸಿದೊಡನೆಯೆ "ದರ್ಶನೀ ಪುರಾವೆಯು ನಿಮ್ಮಿಬ್ಬರ ಮೇಲೆಯೂ ಇದೆ! ಆದ್ದರಿಂದ ನಾವು ನಿಮ್ಮಿಬ್ಬರನ್ನೂ ಬಂಧಿಸುವ ಭಾಗವಿದೆ. ನಿಜವಾದ ಅಪರಾಧಿಯಾರೆಂಬದನ್ನು ಕೊನೆಗೆ ನ್ಯಾಯಾಧೀಶರೇ ನಿರ್ಣಯಿಸತಕ್ಕವರು. ಆ ಕೆಲಸವು ನಮ್ಮ-ನಿಮ್ಮದಲ್ಲ." ಹೀಗೆಂದು ಹೇಳಿ, ಪೋಲೀಸರು ಕಿಶನನನ್ನು ಬೆದರಿಸಿದರು.

ಕಿಶನ ಮತ್ತು ಮಾಲತಿ ಇವರಿಬ್ಬರ ಮೇಲೂ ಖಟ್ಲೆ ಮಾಡಲಾಯಿತು. ಅಪರಾಧಿಗಳು ಕೂಡಲೆ ಹಿಡಿಯಲ್ಪಟ್ಟಿದ್ದರು. ಆ ಕೊಲೆಯಮಟ್ಟಿಗೆ ಸಾಕಷ್ಟು ಪುರಾವೆಯೂ ಇದ್ದಿತು ಅಪರಾಧದ ಎಳೆಗಳೆಲ್ಲೂ ಹರಿದಿರಲಿಲ್ಲ ಆ ಕೊಲೆಯಾದವನ ಪೂರ್ವವೃತ್ತವು ಸಂಪೂರ್ಣ ಅಜ್ಞಾತವು! ಚೂರಿಯ ಏಟಿನಿಂದ ಛಿನ್ನವಿಚ್ಛಿನ್ನವಾದ ಆತನ ಮುಖಮುದ್ರೆಯ ಮೂಲಕ ಆತನ ಗುರುತು ಹತ್ತುವದು ದುರ್ಘಟವಾಗಿತ್ತು! ಮತ್ತು ಅದರ ತಪಾಸಿನ ಭರಕ್ಕೆ ಬೀಳುವ ಕಾರಣವೂ ಆ ಖಟ್ಲೆಯ ಮಟ್ಟಿಗಿರಲಿಲ್ಲ. ಇವೆಲ್ಲ ಪರಿಸ್ಥಿತಿಗಳ ಮೂಲಕ ಯಾವ ಆತಂಕವೂ ಬಾರದೆ, ಪೋಲೀಸರು ಆ ಹತ್ಯೆಯ ಮಟ್ಟಿನೇ ಆರೋಪ ವಿಟ್ಟು ಖಟ್ಲೆ ನಡೆಯಿಸಿದರು. ಆರೋಪಿಗಳು ಬಚಾವಿನ ಗೊಂದಲಕ್ಕೆ ಹೋಗಲೇ ಇಲ್ಲ. ಕೊನೆಯ ದಿವಸ ನ್ಯಾಯಾಧೀಶನು ಠರಾವು ಹೇಳಿದ್ದೇನಂದರೆ, 'ಯಾವ ಆರೋಪಿಯಿಂದ ಪ್ರಾಣಘಾತವಾಯಿತೆಂಬದು ಚೆನ್ನಾಗಿ ಸಿದ್ಧ

ವಾಗಿಲ್ಲ. ಇವರಿಬ್ಬರು ಆ ಕೊಲೆಯ ಕಾಂಡದಲ್ಲಿ ನಡುನಡುವೆ ಭಾಗ ವಹಿಸಿದ ರೆಂಬದಿಷ್ಟೇ ಸಿದ್ಧವಾಗಿದೆ; ಆದ್ದರಿಂದ ನಾನು ಈ ಕಂಟಕ ಮತ್ತು ಕಂಟಕಿ ಇವ ರಿಬ್ಬ ಬಂಧು-ಭಗಿನಿಯರಿಗೂ ಜೀವಾವಧಿ ಕರಿನೀರಿನ ಶಿಕ್ಷೆ ವಿಧಿಸಿರುತ್ತೇನೆ."

ಆ ನುಡಿಗಳನ್ನು ಕೇಳುತ್ತಲೆ ಕಿಶನನ ಕಣ್ಣುಗಳಿಂದ ಪಟಪಟನೆ ಅಶ್ರು ಗಳುದುರಿದರೂ ಗಲ್ಲು ತಪ್ಪಿದ್ದರಿಂದ ಆತನಿಗೆ ಕೆಲಮಟ್ಟಿಗೆ ಹಾಯವೆನಿಸಿತು; ಆದರೆ ಆ ಶಬ್ದಗಳಲ್ಲಿ ಏನಾದರೂ ಭಯಂಕರ ಅರ್ಥತುಂಬಿದೆಯೆಂಬದು ತಿಳಿ ಯದೆ ಅನಿಸುತ್ತಿದ್ದರೂ, ಅದರ ಭೀಷಣತೆಯ ತೀರ ಸ್ಪಷ್ಟ ಚಿಹ್ನವು ಮಾಲ ತಿಯ ಮನಸ್ಸಿನಲ್ಲಿ ನಾಟದ್ದರಿಂದಲೋ ಏನೋ ಅವಳು 'ಜೀವಾವಧಿ ಕರಿ ನೀರು.' ಈ ಭಯಂಕರ ಶಬ್ದಗಳನ್ನು ಕೇಳಕೊಳ್ಳುವಾಗಲೂ ಸುಂದು ಹಿಡಿ ದವಳ ಹಾಗೆ ಸುಮ್ಮನೆ ನೋಡುತ್ತ ನಿಂತಿದ್ದಳು! ಆದರೆ ನ್ಯಾಯಾಧೀಶನು ಎದ್ದೇಳುವಾಗ ಆಕೆಯು ಒಮ್ಮೆಲೆ ಕಳವಳಗೊಂಡು ಬಿನ್ನಯಿಸಿದಳೇನಂದರೆ: "ತಡೆಯಿರಿ; ಮಹಾರಾಜ, ಒಂದು ಕ್ಷಣ ತಡೆಯಿರಿ. ಕರಿನೀರಿಗೆ ನಾನು ಹೋದರೂ ಕೂಡ ಈ ನನ್ನ ಬಂಧುವು-ಕಂಟಕನು-ನನ್ನೊಡನೆಯೇ ಇರುವ ನಲ್ಲವೆ? ತಾವು ಆ ಬಂದಿಶಾಲಸಿಗೆ ಹಾಗೆ ಆಜ್ಞೆ ಮಾಡಿ ಕರಿನೀರ ಮೇಲೂ ನಮ್ಮನ್ನು ಒತ್ತಟ್ಟಿಗೆ ಇರಿಸುವ ಕೃಪೆ ಮಾಡಬಲ್ಲಿರಾ?"

"ಅಜ್ಞ ಹುಡುಗೀ! ಅದೆಲ್ಲ ನ್ಯಾಯಾಧೀಶನ ಕೈಯಲ್ಲಿರುವವೇನು? ಕರಿನೀರಿನಲ್ಲಿ ಗಂಡಸರ ಹಾಗು ಹೆಂಗಸರ ಬಂದಿಗೃಹಗಳು ಬೇರೆ ಬೇರೆ ಕಡೆ ಗಿರುತ್ತವೆ. ಅದರಲ್ಲಿಯೂ ಒಂದೇ ಖಟ್ಲೆಯೊಳಗಿನ ಎಲ್ಲ ಅಪರಾಧಿಗಳನ್ನಂತೂ ಗಂಡಸು ಗಂಡಸರನ್ನೂ, ಹೆಂಗಸು ಹೆಂಗಸರನ್ನೂ ಬಹಳ ಮಾಡಿ ಒತ್ತಟ್ಟಿಗೆ ಇರಗೊಡುವದಿಲ್ಲ."

ನ್ಯಾಯಾಧೀಶನು ಹೀಗೆಂದು ಸಹಾನುಭೂತಿಯ ದನಿಯಲ್ಲಿ ನುಡಿ ದಿದ್ದರೂ ಈ ಮೊದಲಿನ ಆತನ ಶಿಕ್ಷೆವಿಧಿಸುವ ತೀರ್ಪಿನ ಭಾವನಾಶೂನ್ಯ ನುಡಿಗಳಿಗಿಂತಲೂ ಇವು ಮಾಲತಿಗೆ ಹೆಚ್ಚು ದಾರುಣವಾಗಿ ತೋರಿದವು 'ಜೀವಾವಧಿ ಕರಿನೀರು' ಈ ಶಬ್ದದೊಳಗಿನ ಭೀಷಣತೆಗಿಂತ ಇನ್ನು ಕಿಶನನು ನಿರಂತರ ದೂರಾಗುವನೆಂಬ ಕಲ್ಪನೆಯೊಳಗಿನ ಭೀಷಣತೆಯು ಆಕೆಯ ಮನ ಸ್ಸಿಗೆ ಅತ್ಯಂತ ಅಸಹನ ವೇದನೆಗಳನ್ನು ಸ್ಪಷ್ಟವಾಗಿ ಮನಗಾಣಿಸಿಕೊಳ್ಳಲಿಕ್ಕೆ ಹಚ್ಚಿದ್ದರಿಂದ, ಅವುಗಳ ಉಚ್ಚಾರದೊಡನೆ ಅವಳು ಅಕಸ್ಮಾತ್ತಾಗಿ ಕಳವಳ ಗೊಂಡಳು. ಅವಳು ಬಿಕ್ಕಿ ಬಿಕ್ಕಿ ಅಳುತ್ತ:—"ಬೇಡಿರಿ-ಬೇಡಿರಿ" ಎಂಬ ಅರ್ಧಮರ್ಧ ವಾಕ್ಯವನ್ನೇ ಮತ್ತೆ ಮತ್ತೆ ಅನ್ನುತ್ತ, ಪ್ರಾರ್ಥಿಸತೊಡಗಿದಳು. ನ್ಯಾಯಾಧೀಶನಿಗೆ ಮೊದಲಿನಿಂದಲೂ ಅವಳ ಅಪರಾಧದೊಳಗಿನ ನಿರಪರಾಧಿ

ತ್ವವು ಒಡೆದು ಕಾಣುತ್ತಿತ್ತು; ಆದರೆ ನಿರ್ಬಂಧವೆಂದರೆ, ನಿರ್ಬಂಧವು! ಅದು ಅನುಲ್ಲಂಘ್ಯವು! ಅಂತೆಯೇ ಆತನು ಖಟ್ಲೆ ನಡೆಯುವ ವರೆಗೆ ಮಮತೆಯ ಮಾತುಗಳನ್ನೇನೂ ಆಡಿರಲಿಲ್ಲ; ಆದರೆ ಇಡೀ ಖಟ್ಲೆಯಲ್ಲಿ ಧೈರ್ಯದಿಂದಲೂ ನಿಶ್ಚಲಳಾಗಿಯೂ ಇದ್ದಂಥ ಹಾಗು ಜೀವಾವಧಿ ಕರಿನೀರಿನ ಭಯಂಕರ ಶಿಕ್ಷೆ ಕೇಳಿಕೊಳ್ಳುವಾಗಲೂ ಕಳವಳಗೊಳ್ಳದ ಆ ಹುಡುಗಿಯು, ಅವಳ ಬಂಧುವಿನಿಂದ ವಿಂಗಡಿಸಲ್ಪಡುವಳೆಂಬದನ್ನು ಕೇಳಿದೊಡನೆಯೇ ಹೀಗೆ ಬಿಕ್ಕಿ ಬಿಕ್ಕಿ ಅಳಹತ್ತಿದ್ದನ್ನು ಕಂಡು, ಆ ನ್ಯಾಯಾಧೀಶನ ಮನಸ್ಸು ಕರಗಿತು. ಆತನು ಏನಾದರೊಂದು ಆಶ್ವಾಸನವಿತ್ತು ಆಕೆಯನ್ನು ಸಮಾಧಾನಗೊಳಿಸುವದಕ್ಕೆಂದು ಅಂದನೇನಂದರೆ:—

"ಹುಡುಗೀ, ಅಳಬೇಡ. ಕರಿನೀರಿನಲ್ಲಿ ನಿಮ್ಮ ನಡವಳಿಯು ಚನ್ನಾಗಿದ್ದರೆ ಕೆಲ ಎಂಟು-ಹತ್ತು ವರ್ಷಗಳ ನಂತರ ನಿಮಗೆ ಲಗ್ನಮಾಡಿಕೊಳ್ಳುವ ಅನುಕೂಲತೆಯಿದೆ; ಆ ಬಳಿಕ ಆ ಅಂದಮಾನ ದ್ವೀಪದಲ್ಲಿಯೇ ನೀವು ಒಟ್ಟಾಗಿದ್ದು ಸುಖದಿಂದಿರಬಹುದು."

ಈ ನುಡಿಗಳನ್ನು ಕೇಳುತ್ತಲೇ ಜೀವಾವಧಿ ಕರಿನೀರಿನ ಶಿಕ್ಷೆ ರದ್ದಾಗಿ, ತಾನು ಬಂಧಮುಕ್ತಳೇ ಆದೆನೆಂಬಂತೆ ಆ ಸಂಕಟದ ಪರಂಪರೆಗಳಲ್ಲಿ ಸಿಕ್ಕು ಮುಂದುಗಾಣದಾಗಿದ್ದ ಮಾಲಿತಿಗೆ ಅನಿಸಿ ಮನಸ್ಸಿನಲ್ಲಿಯೇ ಆನಂದವಾಯಿತು. "ಮಹಾರಾಜ, ನಿಮ್ಮ ಬಾಯಲ್ಲಿ ಸಕ್ಕರಿ ಬೀಳಲಿ! ಬೇಕಾದವರೊಡನೆ ನನಗೆ ಲಗ್ನವಾಗಬಂದೀತಲ್ಲವೇ? ನಾನು ಸೆರೆಮನೆಯ ಎಲ್ಲ ನಿಯಮಗಳನ್ನು ತಪ್ಪದೆ ಪಾಲಿಸುವೆನು!"

ಅವಳಲ್ಲಿಯ ಸ್ತ್ರೀಯರಿಗೆ ನಿಸರ್ಗದತ್ತವಾದ ಎಲ್ಲ ಯೌವ್ವನಸುಲಭ ಭಾವನೆಗಳು ಆ ಕಲ್ಪನೆಯೊಡನೆ ತೃಪ್ತವಾದಂತಾದವು ಕಿಶನನೊಡನೆ ತನ್ನ ಲಗ್ನವಾಗಿಯೇ ಹೋಯಿತೆಂದು ಅವಳಿಗನಿಸಿತು: ಆದರೆ ಹುಚ್ಚ ಮಾಲತೀ! ಕಲ್ಪನೆಯೆಂದರೇನೂ ವಸ್ತುಸ್ಥಿತಿಯಲ್ಲ. ಇಷ್ಟು ಕಠೋರ, ನಿರ್ದಯ, ನಿರ್ಘೃಣ ಅನುಭವದ ನಂತರವೂ ನಿನಗಿದು ಇನ್ನೂ ತಿಳಿಯಲಿಲ್ಲವೆ? ಮಾನವನು ಸ್ವಂತದ ಶಿಸ್ತಿನ, ಪಾಪ-ಪುಣ್ಯಗಳ, ಕರ್ಮಾಕರ್ಮಗಳ ಫಲವನ್ನಷ್ಟೇ ಭೋಗಿಸುತ್ತಿರದೆ, ಈ ಪ್ರತ್ಯಕ್ಷ ಜಗತ್ತಿನಲ್ಲಂತೂ ಸಮಾಜದ ಪಾಪ-ಪುಣ್ಯಗಳನ್ನು, ಕರ್ಮಾಕರ್ಮದ ಫಲಗಳನ್ನು ಇಚ್ಛೆಯಿರದಿದ್ದರೂ ಭೋಗಿಸುತ್ತಿದ್ದರೂ ಆತನು ಪ್ಲೇಗಿನ ಸೋಂಕು ರೋಗದಲ್ಲಿ ವಾತಾವರಣದ ಸಂಸರ್ಗದಿಂದ ನಿರೋಗಿಯೂ ಪ್ಲೇಗಿಗೆ ಆಹುತಿಯಾಗುತ್ತಿರುವಂತೆ, ಬೇರೆಯವರ ದುಷ್ಕೃತ್ಯದ ಫಲಗಳನ್ನೂ ಭೋಗಿಸಬೇಕಾಗಿದೆ.

ನಿನ್ನ ದೈವದಲ್ಲಾದರೂ ಅದನ್ನೇ ಬರೆದಿದೆಯೆಂಬದು ನಿನಗಿದುವರೆಗೂ ಅನುಭವಕ್ಕೆ ಬರಲಿಲ್ಲವೆ? ಇಲ್ಲದಿದ್ದರೆ ಈ ನಿನ್ನ ದೇಹದ, ಮನಸ್ಸಿನ, ಭಾವನೆಗಳ ಅಸಹ್ಯವೂ ಭಯಪ್ರದವೂ ಆದ ವಿಡಂಬನೆಯು ಇದುವರೆಗೆ ಈ ಕೋಮಲ ವಯಸ್ಸಿನಲ್ಲೇ ಅದೇಕೆ ಒಂದೇಸವನೆ ಆಗುತ್ತಿರಬೇಕು? ಅಂಥ ಆದಾವ ಪಾಪವನ್ನು ನೀನು ಸ್ವತಃ ಮಾಡಿರುತ್ತೀ? ನೀನಾವ ಅಪರಾಧ ಮಾಡಿದ್ದೆ? ಯಾರದೇನು ಹಾಳು ಮಾಡಿದ್ದೆ? ನಿನ್ನ ತಾಯಿಯ ಮಮತೆಯ ಉದ್ಯಾನದಲ್ಲಿ ಅರಳದ್ದ ಮಾಲತೀ, ನೀನೊಂದು ಮಾಲತಿಯ ಎಳೆ ಹಾಗು ನಿರ್ಮಲ ಹೂವಿನ ಅರೆವಾಸಿ ಅರಳಿದ ಮೊಗ್ಗು!-ಕೇವಲ ಶರದೃತುವಿನೊಳಗಿನ ಚಂದ್ರ ಬಿಂಬದಂತೆ! ಇಂಥ ನಿನ್ನನ್ನು ನಾವು ಮೊದಲು ನೋಡಿದಾಗ ಕೂಡ ನಿನಗೆ ನಿನ್ನ ಅಪರಾಧದ ಹೊರತು ಈ ದುರ್ದೆಸೆ ಪ್ರಾಪ್ತವಾದೀತೆಂಬ ಭವಿಷ್ಯ ವರ್ತಿಸಲಾಗುತ್ತಿದ್ದಿಲ್ಲ ದುಷ್ಟರೊಳಗಿನ ದುಷ್ಟ ಪಿಶಾಚಿಗೂ ನಿನಗಿಂತಹ ಶಾಪವನ್ನು ಸುಮ್ಮಸುಮ್ಮನೆ ಕೊಡಲಾಗುತ್ತಿದ್ದಿಲ್ಲ.

ನಿನ್ನ ಈ ದುರ್ದೆಶೆಯು ತೀರ ನಾಚಿಕೆಗೇಡಾದದ್ದು. ಅದನ್ನು ಸಹಾನುಭೂತಿಯ ಮುಂದೆ ಕೂಡ ಬಾಯಿಬಿಚ್ಚಿ ಹೇಳುವಂತಿಲ್ಲ! ಆ ಮುತ್ಸಾಳ, ಹೊಲಸು, ಅಭದ್ರ ನರಪಶುಗಳ ಅಘೋರ ವಾಸನೆಯು ಯಾವ ಯಾವಾಗ ನಿನ್ನ ಲಜ್ಜೆಯನ್ನು ಬಲಿಗೊಳ್ಳತೊಡಗಿದ್ದಿತೋ ಆಗಾಗ ನಿನ್ನ ಎಳೆ ಅಂಗಾಂಗಗಳ ದಾಹವೂ ಕೋಮಲ ಭಾವನೆಗಳ ಬೂದಿಯೂ ಎಷ್ಟಾಯಿತೋ ಅದು, ಎಲೈ ಅವಿವಾಹಿತ ಕುಮಾರಿಯೇ, ನೀನಾಗಿ ಯಾವುದೊಂದು ನೀತಿ, ನಿಯಮ, ವಿನಯ ಅಥವಾ ಶಿಸ್ತು ಪಾಲಿಸಲಿಲ್ಲೆಂದಾಯಿತೇನು? ಆ ಅಘೋರ ದುರ್ದೆಸೆಯೊಳಗಿಂದ ನಿನ್ನನ್ನೂ ನಿನ್ನಂತಹ ಹಲವರನ್ನೂ ಮುಕ್ತಗೊಳಿಸಲಿಕ್ಕೆಂದು ಈ ಕಿಶನನು ಮುಂದಾದನು. ಆತನಾದರೂ ನೀತಿ-ನಿಯಮಗಳ, ಪರೋಪಕಾರದ ಹಾಗು ವಿನಯದ ಪಕ್ಷವಹಿಸಿದವನು; ಮತ್ತು ನೀವಿಬ್ಬರೂ ಕೂಡಿ ಆ ರಕ್ಕಸನ ರಕ್ತದ ಕಾಲುವೆ ಹರಿಸಿ, ಆತನ ಅತ್ಯಾಚಾರದ ಬೆಂಕಿಯನ್ನು ನಂದಿಸಿದಿರಂತೆಯೇ ನೀವು ಅತ್ಯಾಚಾರಿಗಳೆಂದು ನಿರ್ಧರಿಸಲ್ಪಟ್ಟಿರಿ! ಸಮಾಜದಲ್ಲಿ ನಿಮ್ಮಿಬ್ಬರ ಮುಖಕ್ಕೂ ಕಪ್ಪು ಹತ್ತಿತು! ಇನ್ನು ನಿಮ್ಮನ್ನು ಕರಿನೀರ ಮೇಲೆ ಕಳಿಸಲಾಗುವದು! ಸಮಾಜಪೀಡಕ ಅತ್ಯಾಚಾರದ ನಾಮಶೇಷ ಮಾಡುವವರೂ ಒಮ್ಮೊಮ್ಮೆ ಸಮಾಜಪೀಡಕ ಅತ್ಯಾಚಾರಿಗಳೆಂದು ದಂಡಿಸಲ್ಪಡುತ್ತಾರೆ! ನೀತಿ-ನಿಯಮಗಳ ನಿಜವಾದ ಶಿಸ್ತು ಪಾಲಿಸುವುದೇ ಅಪರಾಧವೆಂದು ನಿಶ್ಚಿತವಾಗಿ, ಅದಕ್ಕಾಗಿಯೇ ಬೇಶಿಸ್ತಿನ ಫಲ ಭೋಗಿಸಬೇಕಾಗುತ್ತದೆ!

ಈ ತಪ್ಪು ಯಾರದು? ಇದು ಹೀಗೇಕಾಗುತ್ತದೆ? ಅಥವಾ ಇದು ಹೀಗಾದಂತೆ ಏನು ಉಪಾಯ ಮಾಡಬೇಕು? ಈ ಪ್ರಶ್ನೆಯು ಇಲ್ಲಿ ಕೇವಲ ಅಪ್ರಸ್ತುತವು. ಹೀಗೆ ಆಗುತ್ತದೇನೋ ನಿಜ. ಅಂತೆಯೇ ಮಾಲತಿ, ನೀನು ಸ್ವಂತ ಶಿಸ್ತು ಪಾಲಿಸಿದೆಯೆಂದರೆ, ಅದರ ಪಾರಿತೋಷಕವು ನಿನಗೆ ಸಿಗಲೇ ಬೇಕು; ನಿನಗೆ ಕಂಡ ಇನಿಗನಸು ಸತ್ಯವಾಗಲೇ ಬೇಕು, ಎಂದು ನೀನು ಖಂಡಿತವಾಗಿಯೂ ತಿಳಿಯಬೇಡ!

ಆದರೆ ಸುಸ್ವಪ್ನಗಳು ಸತ್ಯವಾಗುವದಿಲ್ಲವೆಂತಲೂ ಇಲ್ಲ! ಆದುದರಿಂದ ಇನಿಗನಸಿನಲ್ಲಿ ನಗುತ್ತಿರುವಂತೆ, ಗುಂಗಾಗಿರುವಂತೆ ಕ್ಷಣಕಾಲ ಮನಬಂದಂತೆ ನಗು; ರಮಮಾಣಳಾಗು! ಆದರೆ ಅದನ್ನೊಂದು ಸ್ವಪ್ನವೆಂದು ತಿಳಿವೇ ಅದರಲ್ಲಿ ರಮಮಾಣಳಾಗು! ಎಚ್ಚತ್ತ ಮೇಲೆ, ಆ ಸ್ವಪ್ನವೇ ನಿಜವಾದೀತೆಂದು ಮಾತ್ರ ಖಂಡಿತ ತಿಳಿಯಬೇಡ; ಅಂದರಾಯಿತು.

---

೯ನೇ ಪ್ರಕರಣ.

ಕಲಕತ್ತೆಯ ಬಂದರದೊಳಗಿನ ಒಂದು ಕಡೆಯ ಪಟಾಂಗಣವನ್ನು ತೆರವು ಮಾಡುವ ಕುರಿತು ಪೋಲೀಸರ ಗೊಂದಲವು ನಡೆದಿವೆ. ಎಲ್ಲ ಮನುಷ್ಯರನ್ನು ಅಲ್ಲಿಂದ ಓಡಿಸಲಾಯಿತು. ಹಾಗೆ ಓಡಿಸಲ್ಪಟ್ಟ ಜನರು ದೂರ ಹೋಗಿ ಸಿಕ್ಕಷ್ಟು ಸ್ಥಳದಲ್ಲಿ ದಟ್ಟವಾಗಿ ನಿಂತು, ಏನಾಗುವವೋ ಎಂಬದನ್ನು ನೋಡುವದಕ್ಕೆಂದು ಕೆಲವರು ಒಬ್ಬರ ಹೆಗಲ ಮೇಲೊಬ್ಬರು, ಕೆಲವರು ಮುಂದಿನವರನ್ನು ಬಲಪೂರ್ವಕ ಕೂಡ್ರಿಸುತ್ತ ನಿಗರಿ ಸಿಗರಿ ನಿಂತು ನೋಡಹತ್ತಿದರು.

ಇಷ್ಟರಲ್ಲಿ ಅತ್ತಿತ್ತ ಗೊಂದಲವೆದ್ದಿತು. "ಆಯಾ! ಚಲಾನ ಆಯಾ! ಚಲಾನ ಆಯಾ!"

'ಚಲಾನ' ಅಂದರೆ, ಹಲವು ಬಂದಿಗೃಹಗಳಲ್ಲಿ ಶೇಖರಿಸಲ್ಪಟ್ಟಿದ್ದ ಕರಿನೀರಿನ ಶಿಕ್ಷೆಯಾದ ಅಪರಾಧಿಗಳನ್ನು ಒಟ್ಟುಗೂಡಿಸಿ, ಅಂದಮಾನಕ್ಕೆ ಕಳಿಸುವ ಸಲುವಾಗಿ ಆ ಬಂದರದ ಮೇಲಿನ ಪಟಾಂಗಣಕ್ಕೆ ಯಾವ ಒಂದು ಸಮೂಹದಿಂದ ತರಲಾಗುವವೋ ಆ ಸಮೂಹವು!

ಎಲ್ಲ ಅಪರಾಧಗಳಲ್ಲಿ ಯಾರು ಅತ್ಯಂತ ಘಾತುಕರೂ ನೃಶಂಸರೂ ಆದ ಅಪರಾಧಿಗಳಿರುವರೋ, ಕೊಲೆಪಾತಕಿಗಳು, ಬೆಂಕಿಹಚ್ಚುವವರು, ವಿಷಕೊಡುವವರು, ದರವಡೆಗಾರರು ಮುಂತಾದ ಅಪರಾಧಗಳು ಯಾರಿಗೆ ಕೈಕಸಗಳಾಗಿರುವವವೋ, ಅಂಥ ನಿಗರಗಟ್ಟ ಪಾಪಿಗಳಿಗೆ ಬಹುಶಃ ಕರಿನೀರಿನ ಶಿಕ್ಷೆಯೇ

ವಿಧಿಸಲಾಗುತ್ತದೆ. ಅದರಲ್ಲಿಯೂ ಪುನಃ ಆಯ್ಕೆಯಾಗಿ ಯಾರು ಅತಿ ವೃದ್ಧರು, ಅಲ್ಪವಯಿಗಳು. ಈ ದೇಶದ ಬಂದಿಗೃಹಗಳಲ್ಲಿ ಸುಧಾರಣೇಯರೆಂದು ನಿರ್ಧರಿಸಲ್ಪಟ್ಟವರು ಇವರನ್ನೆಲ್ಲ ಬಿಟ್ಟು, ಉಳಿದ ನಿಗರಗಟ್ಟಿರಲ್ಲಿ ನಿಗರಗಟ್ಟಿರಾದವರನ್ನೇ ಬಹುಮಟ್ಟಿಗೆ ಕರಿನೀರಿನ ಮೇಲೆ ಕಳಿಸಲಾಗುತ್ತದೆ. ರಾಜಕೀಯ ಭಾಗವನ್ನು ಬಿಟ್ಟರೆ, ಯಾವ ಸುವ್ಯವಸ್ಥಿತ ಸಮಾಜಕ್ಕೂ ಯಾರ ಅಸ್ತಿತ್ವವು ಯಾವುದೊಂದು ಮಾರೀಬೇನೆಯ ಸೋಂಕಿನಂತೆ ಭೀತಿಪ್ರದವಾಗದಿರದೋ, ಅಂಥ ಉಗ್ರ, ಹಿಂಸ್ರ, ಉಚ್ಛೃಂಖಲ, ಖಲ ಜನರನ್ನು ಆ ಕರಿನೀರಿನ ಮೇಲೆ ಕಳಿಸಲಿಕ್ಕೆಂದು ಹೊರಡಿಸಿದ 'ಚಲಾನ' ದಲ್ಲಿ ಭರತಿ ಮಾಡಿರುತ್ತವೆ. ಅಪವಾದವನ್ನು ಬಿಟ್ಟರೆ ನಿಯಮ ಮಾತ್ರ ಹೀಗೆಯೇ ಇದೆ.

ಆದರೆ ಆ ಪಟಾಂಗಣಕ್ಕೆ ಆ 'ಚಲಾನ' ಬರುವಾಗ ಅದರದೇನೂ ಮಾಹಿತಿಯಿಲ್ಲದ ಯಾವನೊಬ್ಬ ಹೊಸಬನು ಇಲ್ಲವೆ ಭೋಳೇ ಭಾವಿಕ ಸಂತನು ಅದನ್ನು ನೋಡಿದ್ದರೆ? ಆತನಿಗೆ ಆ ಚಲಾನದ ಸಿಟ್ಟು ಬಾರದೆ, ತದ್ವಿರುದ್ಧ ಕಳವಳವೇ ಅನಿಸದಿರುತ್ತಿರಲಿಲ್ಲ! ಯಾಕಂದರೆ, ಅವರೆಲ್ಲರೂ ಎಷ್ಟು ಶಿಸ್ತಿನಿಂದ, ಎಷ್ಟು ತಲೆ ತಗ್ಗಿಸಿಕೊಂಡು, ಎಷ್ಟು ಕಣ್ಣೀರು ಸುರಿಸುತ್ತ ಅಥವಾ ಮನಸ್ಸಿನಲ್ಲಿ ಅಂಜುತ್ತ ಮೋರೆಯೊಣಗಿಸಿಕೊಂಡು ಪಕ್ಕದ ಮನುಷ್ಯನ ಕೂಡ ಚಕಾರ ನುಡಿಯದೆ ಅಥವಾ ನುಡಿದರೂ ಯಾವಳೊಬ್ಬ ಹೊಸ ಮದುವಣಗಿತ್ತಿಯ ಹಾಗೆ ನಾಚಿಕೊಂಡು ಗುಣಗುಟ್ಟುತ್ತಿದ್ದರು. ಅವರೆಲ್ಲರೂ ನಾಲ್ನಾಲ್ಕು ಜನರ ಸಾಲಿನಲ್ಲಿ, ಕೀರ ಸಾಮಾನ್ಯಗಣವೇಷ ಧರಿಸಿಕೊಂಡು ಎಣಿಸೆಣಿಸಿ ಹೆಜ್ಜೆಯಿಕ್ಕುತ್ತ ಬರುತ್ತಿದ್ದರು. ಶಿಪಾಯಿಯು ನಿಲ್ಲಿರೆಂದ ಕೂಡಲೆ ನಿಲ್ಲುತ್ತ, ಕೂಡ್ರಿರೆಂದ ಕೂಡಲೆ ಕೂಡ್ರುತ್ತ, ಏಳಿರೆಂದ ಕೂಡಲೆ ಏಳುತ್ತ ಆ ನೂರು ನೂರಿಪ್ಪತ್ತೈದು ಜನರು ಸ್ವಲ್ಪವೂ ಗದ್ದಲಮಾಡದಂತೆ ಆ ಪಟಾಂಗಣದಲ್ಲಿ ನಡೆದಿದ್ದರು! ಇಷ್ಟು ಶಾಂತ, ದಾಂತ, ಸಂಯುತ ಜೀವಗಳ ಹಿಂಡದು! ನೂರು ನೂರಿಪ್ಪತ್ತೈದು ಆಡು ಕುರಿಗಳನ್ನು ಕಟುಕರ ಮನೆಗೆ ಸಾಗಿಸುವಾಗ ಕೂಡ ಅವು ಇದಕ್ಕಿಂತಲೂ ಹೆಚ್ಚು ಗೊಂದಲ ಮಾಡುತ್ತ ನಡೆಯಬಹುದು; ಮತ್ತು ಇಷ್ಟು ಕಳವಳಗೊಂಡಂತೆ ಕಾಣುತ್ತಿರಲಿಕ್ಕಿಲ್ಲ. ಹೀಗೆ ಪಾಪ! ಆ ದೀನ ದುರ್ಬಲರನ್ನು ಅವರ ತಂದೆ-ತಾಯಿಗಳಿಂದ, ಮಕ್ಕಳು-ಮರಿಗಳಿಂದ, ಹೆಂಡಂದಿರಿಂದ ಆಜನ್ಮವಾಗಿ ಅಗಲಿಸಿ, ಕರಿನೀರ ಮೇಲಿನ ಅತ್ಯಂತ ಪೀಡನೆಗೂ ಕಷ್ಟಕ್ಕೂ ಬಲಿಗೊಡುವದಕ್ಕೆಂದು ಒಯ್ಯಲ್ಪಡಬೇಕಲ್ಲವೆ? ರಾಜನಿರ್ಬಂಧದ ಎಂಥ ನಿಷ್ಠುರತನವಿದು! ಶಿಕ್ಷೆಯ ಕ್ರೂರತನವೆಷ್ಟದು!

ಆ ಚಲಾನದೊಳಗಿನ ಜನರನ್ನು ಆಗಿನ ಮಟ್ಟಿಗೆ ನೋಡಿದವರಿಗೆ

ಅಥವಾ ಪೀಡೆಯೆಂದ ಕೂಡಲೆ ಅದು ರೋಗಹಾರಕ ಶಸ್ತ್ರಕ್ರಿಯೆಯ ಪರಿಣಾಮವೋ, ಅಥವಾ ಮಾರಕ ಶಸ್ತ್ರಾಘಾತವೋ ಇದನ್ನು ವಿವೇಚಿಸದೆ, ಸುಮ್ಮನೆ ಅಳುತ್ತ ಕೂಡ್ರುವ ಮಂದ ದಯೆಯವರಿಗೆ ಆ ಕಾಲಕ್ಕೆ ತೀರ ಸೌಮ್ಯವಾಗಿ ತೋರುವ ಚಲಾನದೊಳಗಿನ ದಂಡಿತರ ಬಗ್ಗೆ ಮನಃಪೂರ್ವಕವಾಗಿ ದಯೆಯೇ ಉಂಟಾಗುತ್ತಿತ್ತು; ಅವರ ಬಗ್ಗೆ ಹೃದಯಪೂರ್ವಕವಾದ ಸಹಾನುಭೂತಿಯೇ ಉಂಟಾಗುತ್ತಿತ್ತು; ಮತ್ತು ಅವರಿಗೆ ಸಿಟ್ಟು ಬಂದಿದ್ದರೆ, ಆ ಪೋಲೀಸರ ನಿರ್ದಯ ನೃಶಂಸ ದಂಡನೀಯತನದ್ದು ಬಂದೂಕದ ಸಂಗೀನಗಳನ್ನು ಹಿಡಿದಂತಹ ಪೋಲೀಸರ ತಂಡಗಳು ಹಿಂದು-ಮುಂದೆ, ಅಕ್ಕ-ಪಕ್ಕಗಳಲ್ಲಿ ಹೆಚ್ಚು-ಕಡಿಮೆ ಸಿಟ್ಟಿನ ದನಿಯಿಂದ ಒದರುತ್ತ ಕೂಗುತ್ತ. ಪಾಪ! ಆ ಬಂದಿಗಳ ತಂಡವನ್ನು ಕಟುಕರು ದನಗಳ ಹಿಂಡು ಒಯ್ಯುವಂತೆ ಚುಚ್ಚುತ್ತ ದೂಡುತ್ತ ಮುಂದಕ್ಕೆ ಸಾಗಿಸುತ್ತಿದ್ದರು ಯಾವನೊಬ್ಬನು ತುಸ ಗಟ್ಟಿಯಾಗಿ ಮಾತನಾಡಿದರೆ ಇಲ್ಲವೆ ತುಸ ಮಂದವಾಗಿ ನಡೆದರೆ ಚುಚ್ಚುವದೇ ಆತನಿಗೆ ದಂಡುಕದಿಂದ! ಯಾವನೊಬ್ಬನು ತುಸ 'ಏನು-ತಾನು' ಅಂದನೆಂದರೆ, ಪೋಲೀಸರ ೩-೪ ಬಂದುಕಗಳು ಆತನ ತಲೆಯ ಮೇಲೆ ಹಾರಿದವೇ! ಅಲ್ಲಿ ವಿಚಾರಣೆ ಇಲ್ಲ, ಸಾಕ್ಷಿ ಇಲ್ಲ, ಪುರಾವೆ ಇಲ್ಲ. ಒಮ್ಮೆಲೆ ದಂಡುಕದ ಪೆಟ್ಟೇ! ಎಲ್ಲ ನ್ಯಾಯ ನಿರ್ಬಂಧಗಳು ಆ ಮೋಟ ದಂಡುಕದಲ್ಲೇ ಸಮಾವೇಶಗೊಂಡಿದ್ದವು! ಮೇಲೆ ಮೇಲೆ ನೋಡುವವರಿಗೆ ನಿಜವಾದ ನಿರ್ದಯರೂ ನಿಜವಾದ ಅತ್ಯಾಚಾರಿಗಳೂ ಆ ಪೋಲೀಸರೇ ಎಂದೂ, ಆ ಚಲಾನದ ಜನರು ದೀನ-ದುರ್ಬಲರೆಂದೂ ತೋರುವಂತಿತ್ತು.

ಆದರೆ ಆ ಅಸಿಧಾರಾ ಸಂಗಿನಿ-ಬಂದುಕಗಳನ್ನು ಹಿಡಿದಂಥ ಪೋಲೀಸರ ತಂಡವನ್ನು ಒಂದು ಕ್ಷಣ ಕಾಲ ಹಾಗೆ ತಗ್ಗಿಸಿದ ಮೋರೆಯ ಹಾಗು ಕಣ್ಣೀರು ಸುರಿಸುವ ದೀನ ದುರ್ಬಲರಿಂದ ದೂರ ಕಳಿಸಿಬಿಟ್ಟರೆ? ಕಣ್ಣೊಳಗಿಂದ ದಯೆಯ ಒಂದು ಹನಿ ಸಹ ಹೊರಡಿಸದೆ ಆ ಚಲಾನದೊಳಗಿನ ಬಹುತರ ಎಲ್ಲ ದೀನ-ದುರ್ಬಲರು ಅಷ್ಟೇ ಅವಧಿಯಲ್ಲಿ ಅರ್ಧ ಕಲಕತ್ತಾ ಪಟ್ಟಣವನ್ನು ಸುಟ್ಟು ಸೂರೆಗೊಳ್ಳುತ್ತಿದ್ದರು. ಮಿಕ್ಕ ಅರ್ಧ ಕಲಕತ್ತೆಯ ಗೋಣು ಮುರಿದು ಹಾ ಹಾಕಾರವನ್ನುಂಟು ಮಾಡುತ್ತಿದ್ದರು! ಸರ್ಕಸ್ಸಿನ ಒಳಭಾಗದಲ್ಲಿ ಭಲ್ಲೆಗಳನ್ನೂ ಮುಳ್ಳು ಚಬಕಗಳನ್ನೂ ಚಟಗುಡಿಸುತ್ತಿರುವ ರಕ್ಷಕರು ಎಲ್ಲಿಯವರೆಗೆ ಎದುರಿಗೂ ಅಕ್ಕಪಕ್ಕಗಳಲ್ಲಿಯೂ ಇರುತ್ತಿರುವರೊ, ಅಲ್ಲಿಯವರೆಗೂ ಸಿಂಹ-ವ್ಯಾಘ್ರಾದಿಗಳು ಸುಸಭ್ಯ ನಾಗರಿಕರಂತೆ ಒಳಂಗಳದಲ್ಲಿ ಶಿಸ್ತಿನಿಂದ ನಡೆಯುತ್ತಿರುವ ಹಾಗೆ ಆ ಚಲಾನದೊಳಗಿನ ಜನರು ನಡೆಯುತ್ತಿದ್ದುದು,

ಆ ಸಂಗಿನಿ-ಬಂದೂಕಗಳು ಅವರನ್ನು ಸುತ್ತುಗಟ್ಟಿ ನಿಂತಿದ್ದವೆಂದೇ ಅವರು
ಹಾಗೆ ಸೌಮ್ಯರಾಗಿದ್ದರು. ಅಪವಾದಗಳಿಯುಲು, ಆ ಚಲಾನದೊಳಗಿನ ಬಹು
ತರರ ಆ ಸೌಮ್ಯತೆ, ಆ ದೈನ್ಯತೆ, ಆ ವಿನಯು, ಆ ಕಣ್ಣೀರು ಇವೆಲ್ಲ ನೀತಿಯು
ವಾಗಿರಲಿಲ್ಲ; ಆದರೆ ಅವೆಲ್ಲ ಕೇವಲ ನಿರುಪಾಯ ಅಂಜಿಕೆಯುವಾಗಿದ್ದವು!!
ಅಂಥ ಉಚ್ಛೃಂಖಲರಿಗೂ ಸಮಾಜಸ್ವಾಸ್ಥ್ಯಕ್ಕೆ ಪೋಷಕವಾದಂಥ ಶಿಸ್ತು
ಹಚ್ಚಲಿಕ್ಕೆ ಬರುತ್ತದೆ; ಆದರೆ ಅದು ಗೀತೆಯ ಪಾರಾಯಣದಿಂದಲ್ಲ; ಸಂಗಿನಿ
ದಂಡುಕಗಳ ಮಾರ್ಮಿಕ ಪೆಟ್ಟುಗಳಿಂದ!

ತೀರ ದೀನ-ದುರ್ಬಲರಾಗಿ ತೋರುತ್ತಿರುವ ಆ ಚಲಾನದೊಳಗಿನ
ಹತ್ತೆಂಟು ಜನರ ಗುರುತನ್ನಷ್ಟೇ ನಿಮಗೆ ಮಾಡಿಕೊಟ್ಟರೂ ನಿಮ್ಮಲ್ಲಿಯು
ಮಂದ ದಯೆಗೆ ಅವರ ಆ ದುರ್ದೆಶೆಯನ್ನು ಕಂಡು ಯಾವ ಕರುಣೆಯುಂಟಾ
ಗುವದೋ, ಅದೇ ಸಂತಾಪವುಂಟಾದೀತು; ಮತ್ತು ಇಂಥ ಹಿಂಸ್ರ ಮಾನವೀ
ಶ್ವಾಪದಗಳಲ್ಲಿಯೂ ಯಾವ ಮನುಷ್ಯತ್ವವು ಇದ್ದೇ ಇರುವದೋ, ಅದನ್ನಷ್ಟೇ
ಜೀವದಿಂದಿರಿಸಿ, ಆ ಹಿಂಸ್ರತೆ ರೋಗದ ಕ್ರಿಮಿಗಳನ್ನು ಪ್ರತಿರೋಧಿಸಲಿಕ್ಕೆಂದು
ಮೇಲೆ ಮೇಲೆ ಅತ್ಯಾಚಾರವಾಗಿ ತೋರುವ ಆ ಚೂಪಾದ ಸಂಗಿನಿಗಳ
ಚುಚ್ಚುವಿಕೆಯೇ (ಇಂಜಕ್ಶನ್ನೇ) ಹೇಗೆ ಅವಶ್ಯವಾಗಿದೆಯೆಂಬದು ಲಕ್ಷ್ಯಕ್ಕೆ
ಬಂದೀತು. ಅಗೋ ನೋಡಿರಿ, ಆ ಚಲಾನು ಬಂದೇ ಬಿಟ್ಟಿತು!

ಪೋಲೀಸರ ಸಂಗಿನಿ-ದಂಡುಕಗಳಿಂದ ಸುತ್ತುಗಟ್ಟಲ್ಪಟ್ಟಿದ್ದ ಆ ಚಲಾನ
ದಲ್ಲಿ ನೂರು-ನೂರಿಪ್ಪತ್ತೈದು ಹಿಂಸ್ರ ಶ್ವಾಪದಗಳು ನಾಲ್ಕು-ನಾಲ್ಕರ ಸಾಲಿ
ನಲ್ಲಿ ಆ ಪಟಾಂಗಣಕ್ಕೆ ಬಂದು ತಲುಪಿದವು. ಅದೊಂದು ಅಭೇದ್ಯವಾದ
ಪಂಜರವನ್ನೇ ಅವರು ದೂಡುತ್ತ ದೂಡುತ್ತ ಆ ಪಟಾಂಗಣಕ್ಕೆ ತಂದು ನಿಲ್ಲಿ
ಸಿದ್ದರು. ಆ ಪ್ರತಿಯೊಬ್ಬ ಕರಿನೀರಿಗೆ ನಡೆದಿರುವ ದಂಡಿತನ ಕಾಲಲ್ಲಿ
ಹಾಕಿದ್ದ ಹಾಗು ಚರ್ಮದ ಪಟ್ಟಿಯಿಂದ ಟೊಂಕಕ್ಕೆ ಬಿಗಿದಿದ್ದ ಎರಡೆರಡು
ಕಬ್ಬಿಣ ಬೇಡಿಗಳು ಖಣಗುಟ್ಟುತ್ತಲಿವೆ; ಪ್ರತಿಯೊಬ್ಬನ ಎದೆಯ ಮೇಲೂ
ಒಂದೊಂದು ತಗಡಿನ ಬಿಲ್ಲೆ. ಅವುಗಳ ಮೇಲೆ ಶಿಕ್ಷೆಯ ಅವಧಿ ಮತ್ತು ಹೆಸರು
ಗಳು ಕೊರಿಯಲ್ಪಟ್ಟವೆ. ಪ್ರತಿಯೊಬ್ಬನ ಬಗಲಲ್ಲಿ ಆತನ ಹಾಸಿಗೆ-ಹುಪ್ಪಡಿ
ಗಳ ಸುರಳಿ; ಒಂದು ಕೈಯಲ್ಲಿ ಅವರವರ ಟಿನ್ನಿನ ಥಾಲೀಪಾಟು; ಆ ಒಜ್ಜೆ
ಯಿಂದ ಯಾವನು ಅವರಲ್ಲಿ 'ಕಚ್ಚಾ'-ಸಾಮಾನ್ಯ-ನೋ, ಅಂಥ ದಂಡಿತನು
ಬೊಗ್ಗಿ ನರಳುತ್ತಲೂ, ಯಾರು ನಿಗರಗಟ್ಟಿ ಟೊಣಪರೋ ಅವರು ಎದೆಸೆಟಸಿ,
ಆದರೂ ಸಂತಪ್ತರಾಗಿ ದಂಡುಕಕ್ಕೆ ಬೆದರುತ್ತ ತಮ್ಮ ತಮ್ಮ ಸಾಲಿನಲ್ಲಿ
ನಿಂತುಕೊಂಡಿದ್ದರು! ಅವರಲ್ಲಿಯು ಆ ಮೊದಲನೇ ಸಾಲಿನಲ್ಲಿದ್ದ ಕರಿನೀರಿನ

ಬಂದಿಗಳ ಪರಿಚಯುವನ್ನು ಸ್ವಲ್ಪಮಟ್ಟಿಗೆ ಮಾಡಿಕೊಳ್ಳೋಣ.

ಈತನು ನೋಡಿರಿ; ಈ ಬಡಪ್ರಾಣಿಯು. ಈತನ ಹೆಸರು ರಾಮ ದಯಾಲನೆಂದೂ ಶಿಕ್ಷೆ ಹದಿನಾಲ್ಕು ವರ್ಷಗಳೆಂದೂ ಈತನ ಎದೆಯ ಮೇಲಿನ ಬಿಲ್ಲೆಯಿಂದ ತಿಳಿಯುವದು. ಈತನ ಖಾಸ ಅಣ್ಣನ ಮರಣದ ನಂತರ ಆತನ ಒಬ್ಬೊಂಟಿಗನಾದ ಚಿಕ್ಕಮಗನಿಗೆ ವಿಷಕೊಡಿಸಿ ಕೊಲ್ಲುವ ಒಳಸಂಚುಮಾಡಿದ್ದನು. ಆ ಹುಡುಗನನ್ನು ಹಾಗೆ ಕೊಲ್ಲುವ ಉದ್ದೇಶವೇನಂದರೆ, ಆ ಅಣ್ಣನ ಮಗನ ಮುಳ್ಳು ತನ್ನ ದಾರಿಯೊಳಗಿರಬಾರದು; ಅಂದರೆ, ಅಣ್ಣನ ನಿರ್ವಂಶವಾಗಿ ಎಲ್ಲ ಸಾಮೂಹಿಕ ಆಸ್ತಿಯನ್ನು ಇವನೊಬ್ಬನೇ ನುಂಗಬೇಕೆಂದಿದ್ದನು!

ಈ ಎರಡನೇ ದಂಡಿತನನ್ನು ಒಂದು ಬಗೆಯಿಂದ ಸುಧಾರಣೀಯ ಅಪರಾಧಿಯೆನ್ನಬಹುದು. ಆತನು ಹದಿನೇಳು-ಹದಿನೆಂಟು ವರ್ಷದವನು. ಹೆಸರು ಗೋಪಾಲ. ಮುಖಮುದ್ರೆಯು ಹುಚ್ಚುಚಾಕ್ಕರದ್ದು. ಆತನ ಮನೆಯ ತಂದೆ, ಕಕ್ಕ ಮೊದಲಾದ ಹಿರಿಯ ಜನರು ಅವರ ಹೊಲವನ್ನು ಲಿಲಾವು ಮಾಡಿಸಿದ ಸಿಟ್ಟಿನಿಂದ ಆ ಊರ ಸಾವುಕಾರನ ಸೇಡುತೀರಿಸಿಕೊಳ್ಳಬೇಕೆಂದು, ಆ ಸಾವುಕಾರನ ಮನೆಯ ಮೇಲೆ ದರಪಡೆ ಹಾಕಿದರು. ಹಿರಿಯ ಜನರೊಡನೆ ಈ ಹುಡುಗನೂ ಹೋದನು. ಅವರು ಸಾವುಕಾರನನ್ನು ನೆಲಕ್ಕೆ ಕೆಡವಿ ಹೊಡೆಯುತ್ತಿರುವಾಗ, ಈತನು ಬೀಸೀಕಲ್ಲ ಹೊಳಕೆಯನ್ನೆತ್ತಿ ಪಾಪ! ಆ ಸಾವುಕಾರನ ತಲೆಯ ಮೇಲೆ ಹಾಕಿದನು! ಅದರಿಂದ ಸಾವುಕಾರನ ಮಿದುಳೇ ಹೊರಚಿಮ್ಮಿತು! ಈತನ ಕುಟುಂಬದವರು ಆ ಸಾವುಕಾರನ ಋಣ ತೀರಿಸುವದಂತೂ ಒತ್ತಟ್ಟಿಗಿರಲಿ, ತದ್ವಿರುದ್ಧವಾಗಿ ಆತನ ಬಣಿವೆ-ಬಡುಕಲು, ತೆನೆ ರಾಶಿಗಳನ್ನಲ್ಲದೆ ದನಕರುಗಳನ್ನು ಕೂಡ ಸುಟ್ಟಿದ್ದರಿಂದ, ಆ ಸಾವುಕಾರನು ಇವರ ಮೇಲೆ ಖಟ್ಲೆ ಮಾಡಿದ್ದೇ ನೆವವು. ಆ ಖಟ್ಲೆಯಾದ ಮೇಲೆ ಸಾವುಕಾರನು ಇವರಿಂದ ತನಗೆ ಬರತಕ್ಕ ಹಣಕ್ಕಾಗಿ ರೀತಿಯಂತೆ ದಾವೆ ಮಾಡಿ, ಲಿಲಾವಿನಲ್ಲಿ ಇವರ ಹೊಲ ಮಾರಿಸಿದನು. ಸಾವುಕಾರನ ಆ ಕೊಲೆಯ ಗುಹ್ನೆಗಾಗಿ ಈ ಹುಡುಗನ ತಂದೆಗೆ ಗಲ್ಲಿನ ಶಿಕ್ಷೆಯಾಗಿತ್ತು. ಈತನು ಆ ಕೊಲೆಯ ಸಹಾಯಕ ಆರೋಪಿಯೆಂದು ಇವನಿಗೆ ಜೀವಾವಧಿ ಕರಿನೀರಾಗಿದ್ದಿತು.

ಆದರೆ ಈ ಮೂರನೇ ಪ್ರಾಣಿಯನ್ನು ನೋಡಿದಿರೇನು? ಇವನು ಎಷ್ಟು ಶಿಸ್ತಿನಲ್ಲಿ ನಿಂತಿರುವನು? ಎಷ್ಟು ನಿಯಮಶೀಲನು?(Law-abiding) ಎಷ್ಟು ವ್ಯವಸ್ಥಿತನಾಗಿರುವನೆಂಬದು ಆ ಸಂಗಿನಿಗಳ ಲಕಲಕಾಟದಲ್ಲಿ ಕಾಣುತ್ತದೇನು? ಆದರೆ ಸಂಗಿನಿಗಳ ಲಕಲಕಾಟವು ಆತನ ದಾರಿಯ ಮೇಲೆ ಬೀಳದಿದ್ದಾಗ ಆತನು ತನ್ನ ದಾರಿಯನ್ನು-ತನ್ನದೇ ಆದ ಅಂಧುಕ-ಪ್ರಕಾಶದಲ್ಲಿ ನೋಡಿ ನೋಡಿ ಸ್ವ-

ತಂತ್ರವಾಗಿ ನಡೆಯುತ್ತಿದ್ದಾಗ ಈತನು ಹೇಗೆ ನಡೆವಿದ್ದನೆಂಬದು ಗೊತ್ತಿದೆಯೇ? ಅದನ್ನು ಈತನ ಶಿಕ್ಷಾಲಿಖಿತವನ್ನು ನೋಡಿ ತಿಳಿದುಕೊಳ್ಳಿರಿ! ಈತನು ಬಲೂಚಿಯು; ಅತ್ತಕಡೆಯ ಅನಾಗರಿಕ ತಂಡದೊಳಗಿನವನೊಬ್ಬನು; ಈತನಿಗೆ ಅಲ್ಲಾಬಕ್ಷನೆನ್ನುವರು. ಈತನು ಸಿಂಧಪ್ರಾಂತದೊಳಗಿನ ಅಲ್ಪಸಂಖ್ಯಾಕ ಹಿಂದುಗಳ ವಸತಿಯ ಮೇಲೆ ಈ ಜನರ ಯಾವ ಎಡಬಿಡದೆ ದರವಡೆಗಳಾಗುವವೋ ಅವುಗಳಲ್ಲಿ ಭಾಗ ವಹಿಸಿ ವಹಿಸಿ ಅತ್ಯಂತ ಕ್ರೂರನಾದುದರಿಂದ, ಈತನಿಗೆ ಹಿಂದುಗಳ ಬಾಲ-ಬಾಲಿಕೆಯರ ಮಾಂಸವನ್ನು ಹರಿಹರಿದು ತಿನ್ನುವ ರಾಕ್ಷಸೀ ಚಟವೇ ಹತ್ತಿತು! ಕಟ್ಟಕಡೆಗೊಮ್ಮೆ ಪೇಶಾವರಕ್ಕೆ ನಡೆದಿರುವ ರೈಲಿನಲ್ಲಿ ಒಂದು ಹೆಣ್ಣುಮಕ್ಕಳ ದಬ್ಬಿಯಲ್ಲಿ ತನ್ನ ಚಿಕ್ಕ ಮಗುವಿನೊಡನೆ ಒಬ್ಬಳೇ ಕುಳಿತಿದ್ದ ಒಬ್ಬ ಹಿಂದೂ ಸ್ತ್ರೀಯುಳನ್ನುಕಂಡು, ಇವನು ಅದನ್ನೇರಿ, ಆಕೆಯ ತನ್ನಲ್ಲಿಯ ಚೂರಿಯ ಹೆದರಿಕೆ ತೋರಿಸಿ ಮರ್ಯಾದೆಯ ಬಲಿತಕ್ಕೊಂಡನು; ಹಾಗು ಆ ಆಸುರೀ ಆವೇಶದಲ್ಲಿ ಈತನು ಆಕೆಯ ಎರಡೂ ಗಲ್ಲಗಳ ಮಾಂಸವನ್ನು ತನ್ನ ಹಲ್ಲುಗಳಿಂದ ಕಡಿದು ಕರಕರನೆ ತಿಂದುಬಿಟ್ಟನು! ಅವಳೂ ಅವಳ ಮಗುವೂ ಗಟ್ಟಿಗಟ್ಟಿಯಾಗಿ ಅಳಹತ್ತಿದ್ದರಿಂದ ಈತನ ಸಿಟ್ಟು ಅನಿವಾರವಾಗಿ, ಇವನು ಆ ಅಸಹಾಯ ಸ್ತ್ರೀಯ ಅಜ್ಞಮಗುವಿನ ಹೊಟ್ಟೆಯಲ್ಲಿ ತನ್ನ ಚೂರಿ ಚುಚ್ಚಿದನು; ಹಾಗು ಒಳ್ಳೇ ಆವೇಶದಿಂದ ಅವಳ ಮೋರೆಯ ಮೇಲೂ ಚೂರಿಯಿಂದ ಚುಚ್ಚಹತ್ತಿದನು ಅವನ ಈ ಕೃತ್ಯವು ಒಳ್ಳೇ ಭಯಂಕರವಾಗಿ ನಡೆದದ್ದರಿಂದ, ರೈಲಿನ ವೇಗವು ಕಡಿಮೆಯಾಗಿ ಅದು ನಿಂತದ್ದು ಕೂಡ ಈತನಿಗೆ ಲಕ್ಷ್ಯವಿರಲಿಲ್ಲ! ರೈಲು ನಿಂತೊಡನೆಯೇ ಈತನು ಡಬ್ಬಿಯೊಳಗಿಂದ ಹೊರಗೆ ಹಾರಿಕೊಂಡನು; ಮತ್ತು ದಾರಿಯಲ್ಲಿ ಅತಂಕಪಡಿಸ ಬಂದವರನ್ನೆಲ್ಲ ಹೊಡೆ ಬಡೆಯುತ್ತ ಒಡಿದನು. ಇವನನ್ನು ಬಂಧಿಸಿದ ಪೋಲೀಸನ ಬೊಟ್ಟನ್ನು ಈತನು ಸವತೀಕಾಯಿಯಂತೆ ಕಟ್ಟನೆ ಕಡಿದು, ಅದನ್ನು ಕಡ ಕಡ ಎಂದು ತಿನ್ನುತ್ತಿರುವಾಗಲೇ ಈತನು ಸಂಪೂರ್ಣವಾಗಿ ಪ್ರತಿಬಂಧಿಸಲ್ಪಟ್ಟನು! ನ್ಯಾಯಾಲಯದಲ್ಲಿ ಈತನು ಹುಚ್ಚನ ವೇಷ ಧರಿಸಿದನು. ಆದರೆ ನರಮಾಂಸ ಭಕ್ಷಣದ ಅಘೋರ ಚಟದ ಹೊರತು ಈತನಲ್ಲಿ ಬೇರೆ ಯಾವ ಹುಚ್ಚಿನ ಚಿಹ್ನವೂ ಡಾಕ್ಟರರಿಗೆ ತೋರಲಿಲ್ಲ; ಅಲ್ಲದೆ ಹಿಂದುಗಳವೇ ಆದ ಎಳೆ ಬಾಲ-ಬಾಲಿಕೆಯರ ಮಾಂಸವನ್ನು ಹರಿಹರಿದು ತಿನ್ನುವ, ಗಟಗಟನೆ ರಕ್ತ ಕುಡಿಯುವ ಈತನಲ್ಲಿಯ ಅದೊಂದು ರಾಕ್ಷಸೀತನಕ್ಕೆ ಒಂದು ಸೈತಾನೀ ಧರ್ಮಬಂಧನವಿರುವದೂ, ಈ ಆ ಪಿಶಾಚಿತನಕ್ಕೊಂದು ವಿಶಿಷ್ಟ ಪದ್ಧತಿಯಿರುವುದೂ ಸಿದ್ಧವಾಯಿತು! ಈತನಿಗೆ ಜೀವಾವಧಿ ಕರಿನೀರಿನ ಶಿಕ್ಷೆಯಾಗಿ ಹುಚ್ಚರ ಆಸ್ಪತ್ರೆಯಲ್ಲಿ

ಕೆಲ ದಿನ ಪ್ರತಿಬಂಧಿಸಲಾಗಿತ್ತು. ವ್ರಾತ್ಯತನಕ್ಕಾಗಿ ಅಲ್ಲಿಯೂ ಎರಡುಸಾರಿ ೫೦-೬೦ ಘಟಕಿಗಳು ಹೊಡೆಯಲ್ಪಟ್ಟವು ಆಗಿನಿಂದ ಮಾತ್ರ ಈತನು ಹುಚ್ಚನ ವೇಷವನ್ನು ಬಿಟ್ಟುಬಿಟ್ಟಿರುವನು; ಶಿಸ್ತಿನಿಂದಿರಹತ್ತಿರುವನು; ಮತ್ತು ಈಗ ಕರಿ ನೀರ ಮೇಲೆ ಹೊರಟಿರುತ್ತಾನೆ! ಘಟಕಿ ಹೊಡೆದ ಮೇಲೆಯೇ ಈತನ ಹುಚ್ಚು ಇಳಿಯಿತು. ಸಂಗಿನಿಗಳ ಹರಿತದಿಂದ ಈತನಲ್ಲಿಯು ರಾಕ್ಷಸೀ ತನವು ಕೆತ್ತಲ್ಪಟ್ಟ ಕೂಡಲೆ, ರಾಕ್ಷಸರಿಗೂ ಒಮ್ಮೊಮ್ಮೆ ಮಾನವರ ಆಕಾರ ಬರುತ್ತದೆಂದೆನ್ನುವರಲ್ಲ, ಅದು ಹೀಗೆಯೇ! ಎಂಥ ಖಾತ್ರಿಯ ಮಂತ್ರದ ನೀರಿನಿಂದಲೂ ಮನುಷ್ಯರಿಗೀಲಾಗದಂತಹ ಹಿಂಸ್ರ ಶ್ವಾಪದಗಳನ್ನು ಸಂಗಿನಿಯ ಚೂಪಾದ ಮೊನೆಗಳಿಂದ ಮನುಷ್ಯರನ್ನಾಗಿ ಮಾಡಲಿಕ್ಕೆ ಬರುತ್ತದೆ. ಕಿಮಾನಪಕ್ಷ ನಿರುಪದ್ರವಿಗಳನ್ನಾದರೂ ಮಾಡಿಬಿಡಲಾಗುತ್ತದೆ. ಅದಕ್ಕೆ ಈತನೇ ಉದಾಹರಣವಾಗಿರುವನು

ನಮ್ಮಲ್ಲಿಯು ಮಂದ ದಯೆಯುವರಿಗೆ ಯಾರು ಅಭಿಪ್ರಾಣಿಗಳಾಗಿ ತೋರಿದರೋ ಅಂಥ ಆ ಕರಿನೀರಿನ ಚಲಾನದೊಳಗಿನ ಜನರು ಈಗ ಅಷ್ಟುಮೆತ್ತಗೇಕೆ ತೋರುತ್ತಿದ್ದರೆಂಬವನ್ನು ತಿಳಿಯುವ ವುಟ್ಟಿಗೇ ಅವರೊಳಗಿನ ಯಾವ ಮೂವರ ಅಲ್ಪ ಅಲ್ಪ ಪರಿಚಯವನ್ನು ಖಾತ್ರಿಗಾಗಿ ತೋರಿಸಿದೆವೋ, ಅವರ ಆ ಭೂಮಿಕೆಗಳು ಕಾದಂಬರಿಯೊಳಗಿನ ಕೇವಲ ಕಾಲ್ಪನಿಕ ರೋಮಹರ್ಷಣ ಅದ್ಭುತವನ್ನು ತೋರಿಸುವ ಭೂಮಿಕೆಗಳಲ್ಲ; ಅವು ಸೃಷ್ಟಿಯೊಳಗಿನ ನಿಜಸ್ವರೂಪಗಳು. ಕರಿನೀರಿನ ಬಂದಿಗಳ ಇತಿವೃತ್ತವನ್ನು (History-sheets) ತೆಗೆದು, ನೋಡಿದರೆ ನಿಮಗೆ ಆ ಅಘೋರ ನಗರದೊಳಗಿನ ಮುಕ್ಕಾಲುವಾಸಿ ಜನರ ವೃತ್ತಾಂತವು ಮೇಲಿನ ಮೂವರ ಸಂಗತಿಗೆ ಹೋಲುವಂತೆಯೇ ತೋರುವದು . ಇವಕ್ಕೆ ಅಪವಾದವೆಂದರೆ, ಬಹುಶಃ ಕಾಲುವಾಸಿ ಜನರಾಗಬಹುದು ಆದರೂ ಸಹ ನಮ್ಮ ಧಾರ್ಮಿಕ ಯಾತ್ರೆಗಳಲ್ಲಿ ಕೂಡ ಎಷ್ಟು ಗದ್ದಲವಾಗುವದೋ, ಅಷ್ಟು ಸಹ ಆ ರಾಕ್ಷಸೀ ರಾಜ್ಯದಲ್ಲಿ ಆಗುವದಿಲ್ಲ. ಅಲ್ಲಿಯ ಕೊಲೆ-ಸುಲಿಗೆಗಳ ವಾರ್ಷಿಕ ಪ್ರಮಾಣವು ಅಮೇರಿಕೆಗಿಂತಲೂ ಕಡಿಮೆಯಿರುತ್ತದೆ. ಅದಕ್ಕೆ ಕಾರಣವೇನು? ಮಂದ ಇಲ್ಲವೆ ಸಾನುಭೂತಿ ದಯೆಯಾಗಿರದೆ, ಸಂಗನಿ-ದಂಡುಕಗಳಾಗಿವೆ ಆ ದುರ್ಧರ್ಷ ದಂಡನವೇ ರಕ್ಕಸರನ್ನು ಮನುಷ್ಯರನ್ನಾಗಿ ಮಾಡುತ್ತದೆ!

ದೇಹದಲ್ಲಿ ವ್ಯಾಧಿಯು ಹೇಗೊ, ಹಾಗೆ ಮಾನವತ್ವದಲ್ಲಿ ರಾಕ್ಷಸತ್ವವು ಹುಟ್ಟುಗುಣವೇ ಆಗಿರುತ್ತದೆ. ರಾಕ್ಷಸತ್ವವನ್ನು ಸುಧಾರಿಸುವ ಉಪಾಯವು ದಂಡನವು; ಮನುಷ್ಯತ್ವವನ್ನು ಸುಧಾರಿಸುವ ಉಪಾಯವು ದಯೆಯು.

ಹೀಗೆ ಆ ಚಲಾನವು ಸೈನಿಕರ ಶಿಸ್ತಿನಂತೆ ತಂತಮ್ಮ ಕಾಲೊಳಗಿನ ಬೇಡಿಗಳ ಖಣಖಣಾಟದೊಡನೆ ನಾಲ್ಕು ನಾಲ್ಕು ಜನರ ಸಾಲಿನಲ್ಲಿ ಆ ಪ-ಟಾಂಗಣಕ್ಕೆ ಬರಲು, "ಠೈರೊ!" ಎಂಬ ಕಟ್ಟುನಿಟ್ಟಿನ ಆಜ್ಞೆಯು ಹೊರಟಿತು. ಆ ಕೂಡಲೆ ಆ ಎಲ್ಲ ಬಂದಿಗಳು ನಿಂತುಕೊಂಡರು. "ಬೈಠೊ!" ಎಂಬಾಜ್ಞೆ ಯಾದ ಕೂಡಲೆ ಬೇಡಿಗಳ ಖಣಖಣತ್ಕಾರದೊಡನೆ ಅವರೆಲ್ಲರೂ ಒಮ್ಮೆಲೆ ತುದಿಗುಂಡಿಯಿಂದ ಕುಳಿತರು. ಎದುರಿಗಿನ ಯಾವ ಸಮುದ್ರದ ಮೇಲೆ ಅವ ರಿನ್ನು ಆರೋಹಣ ಮಾಡತಕ್ಕವರಿದ್ದರೋ, ಆ ಸಮುದ್ರವು ದೊಡ್ಡ ದೊಡ್ಡ ತೆರೆಗಳನ್ನು ಎತ್ತಿ ತ್ವರವಾಗಿ ಉಗ್ಗುತ್ತ, ಬಳಿಕ ಆ ಬಂದರದ ಕಲ್ಲುಗಳಿಗೆ ಆ ತೆರೆಗಳಿಂದ ಧಡ ಧಡನೆ ಬಡಿಯುತ್ತ-ಅಪ್ಪಳಿಸುತ್ತ ನೊರೆಯನ್ನುಂಟು ಮಾಡಿ, ಅತಿ ಕ್ರೋಧದಿಂದ ರೇಗಿಗೆದ್ದವರ ಹಾಗೆ ಖಳ ಖಳ ಸಪ್ಪಳ ಗೆಯ್ಯುತ್ತಿದ್ದಿತು. ಆ ಬಂದಿಗಳಲ್ಲಿಯ ಬಹು ಜನರಿಗೆ ಸಮುದ್ರವನ್ನು ನೋಡುವದು ಅದೇ ಮೊದ ಲನೇ ಬಾರಿಯಾದ್ದರಿಂದ, ಆ ಮಹಾ ಜಲಾಶಯವು ಅಷ್ಟು ಸಿಟ್ಟಿನಿಂದ ಖಳ ಖಳಿಸುತ್ತಿರುವದನ್ನು ಕಂಡ ಕೂಡಲೆ ಕೇವಲ ಆ ಭೀಷಣ ದೃಶ್ಯದೊಡನೆ-ಆ ಬರಿಯ ಭೀಷಣ ನೋಟದ ಧಕ್ಕೆಯಿಂದಲೇ ಅವರ ಎದೆಯು ಟಣ್ಣ ಎಂದು ಹಾರಹತ್ತಿತು. ಬಂದಿಗಳು ಒಬ್ಬರೊಬ್ಬರೊಡನೆ ಮಾತನಾಡದಿರುವ ಸಕ್ತ ಮನಾಯಿ ಇದ್ದರೂ ಆ ಧಕ್ಕೆಯಿಂದ ಯಾರೊಡನೆಯಾದರೂ ಏನಾದರೂ ಉಚ್ಚರಿಸದ ಹೊರತು ಸಮಾಧಾನವೇ ಆಗದ್ದರಿಂದ ಪ್ರತಿಯೊಬ್ಬರು ನೆರೆಹೊರೆ ಯವರೊಡನೆ ಗುಜು ಗುಜು ಮಾತನಾಡಹತ್ತಿದರು. "ಇದೇ ಆ ಕರಿ ನೀರ ಸಾಗರವು! ಅಬ್ಬಾ! ಈ ದೊಡ್ಡ ದೊಡ್ಡ ತೆರೆಗಳು ಮೇಲೆ ಕೆಳಗಾಗುವ ದನ್ನು ನೋಡಿಯೇ ನನ್ನ ಹರಣವು ಹಾರಹತ್ತಿದೆ! ಎಲೋ, ಕರಿನೀರ ಮೇಲೆ ಕಳಿಸುವಾಗ ಈ ಪ್ರಚಂಡ ಸಮುದ್ರದ ಆಚೆಗೆ ಯಾವದೊಂದು ದ್ವೀಪವಿರುವು ದೆಂಬದಾದರೂ ನಿಜವೋ! ಅವೆಲ್ಲ ಕೇವಲ ಸುಳ್ಳೆಂದು ನಾನಂತೂ ಕೇಳಿರು ತ್ತೇನೆ ನಮ್ಮನ್ನು ಈ ಮಾತಿನಿಂದ ಮೋಸಗೊಳಿಸಿ, ದೊಡ್ಡ ದೊಡ್ಡ ಉಗೆ ಹಡಗಗಳ ಮೇಲೆ ಏರಿಸಿಕೊಂಡು ಸಮುದ್ರದಲ್ಲಿಯೇ ಮುಳುಗಿಸಿ ಬಿಡುವರಂತೆ!" ಹೊಸದಾಗಿ ಶಿಕ್ಷೆಯಾದವರನ್ನು ನಡುಗಿಸಿ ಬಿಡುವ ಈ ಶಂಕೆ-ಕುಶಂಕೆಗಳು, ನಿಗರಗಟ್ಟಿ ದಂಡಿತರು ಅವರಿಗೆ ಹೇಳುವ ಪ್ರತ್ಯುತ್ತರಗಳು ಇವು ಗಳ ಕಿಲಿಬಿಲಿಯು ಹೆಚ್ಚುತ್ತ ಹೆಚ್ಚುತ್ತ, ಮುಸುಕಿನೊಳಗಿನ ಗೊಂದಲದ ಸ್ವರೂಪವನ್ನು ಧರಿಸಿತು. ಆಗ ಪೋಲೀಸರ ಸಹನ ಶೀಲತೆಯು ಅಸ್ತವಾಗಿ, ಅವರು ಗಟ್ಟಿಯಾಗಿ 'ಚೂಪ್! ನಹೀ ತೋ ದಂಡುಕೇಸೆ ಪೀಟೇ ಜಾವೋಗೆ!"

ಆ ಕೂಡಲೆ ಮತ್ತೆ ಸರ್ವತ್ರದಲ್ಲಿ ಶಾಂತತೆ ನೆಲೆಗೊಂಡಿತು. ನಿಗರ

ಗಟ್ಟಿರೂ ಸೆರೆಮನೆಯನ್ನು ಪುನಃ ಪುನಃ ಸೇರಿದವರೂ ಆದ ಬಂದಿಜನರಿಗೆ ಕಾವಲುಗಾರರ ಕಣ್ಣು ತಪ್ಪಿಸಿ ಜೇಲಿನ ಶಿಸ್ತನ್ನು ಹೇಗೆ ಮುರಿಯಬೇಕೆಂಬದು ಚೆನ್ನಾಗಿ ಗೊತ್ತಿರುತ್ತದೆ; ಆದರೆ ಹೊಸ ಬಂದಿ ಜನರು ಅವರ ಅನುಕರಣ ಮಾಡ ಹೋಗಲು, ತಟ್ಟನೆ ಹಿಡಿಯಲ್ಪಡುವರು! ಅದರಲ್ಲಿಯೂ ಶಿಸ್ತು ಮುರಿಯುವ ನಿಗರಗಟ್ಟಿ ಪುಂಡರ ಉಸಾಬರಿಗೆ ಸಹಸಾ ಹೋಗದೆ, ಮೆತ್ತನ್ನ ಹೊಸಬರ ಮೇಲೆಯೇ ಶಿಸ್ತಭಂಗದ ಸಿಟ್ಟು ಹಾಯಿಸಿಕೊಳ್ಳುವದು ಕಾವಲುಗಾರರಿಗೂ ಸುಲಭವಿರುತ್ತದೆ ಆದ್ದರಿಂದ ಮತ್ತೆ ಯಾರಾದರೂ ಗೊಂದಲವೆಬ್ಬಿಸುವರೇನೆಂಬದನ್ನು ನಿರೀಕ್ಷಿಸುತ್ತಿದ್ದ ಒಬ್ಬ ಸಿಟ್ಟಿನ ಕಾವಲುಗಾರನು ಆತನ ಮಗ್ಗಲಲ್ಲಿ ಕುಳಿತಿದ್ದ ಇಬ್ಬರು-ಮೂವರು ನಿಗರಗಟ್ಟಿ ದಂಡಿತರು ಬಹುಮಟ್ಟಿಗೆ ಗುಣುಗುಟ್ಟುತ್ತಿದ್ದರೂ, ಅವರನ್ನು ಬಿಟ್ಟು ಬಿಟ್ಟು, ಅವರೊಡನೆಯೇ ಇದೀಗ ಬಂದಿಷ್ಟು ಮಾತನಾಡಹತ್ತಿದ್ದ ಹೊಸಬರಾದ ತರುಣರ ಮೇಲೆ ನಜರಿಟ್ಟನು. ಒಬ್ಬ ತರುಣನು ತನ್ನ ಬಳಿಯ ಅಕ್ಷರಸ್ಥ ದಂಡಿತನನ್ನು ಕುರಿತು:—“ಬಾಬೂಜೀ, ಕಹೋನಾ! ಇಸೀ ಸಮುಂದ್ರುಮೇ ಡುಬಾಯೆಂಗೇ ಕ್ಯಾ ಹಮ ಸಬ್‌ಕೋ?”

“ಬಚ್ಚಾ, ನಹೀ ನಹಿ” ಎಂದು ಒಬ್ಬ ನಿಗರಗಟ್ಟನು ಪೋಲೀಸನು ತನ್ನ ಕಡೆಗೆ ಬೆನ್ನು ಮಾಡಿದ್ದನ್ನು ಕಂಡು ತಟ್ಟನೆ ಹೇಳಿದನು. “ಏ ಬಾತ ಝೂಟ ಹೈ! ಕರಿನೀರಿನಿಂದ ಓಡಿಬಂದ ಒಬ್ಬಾನೊಬ್ಬ ನಿಪುಣ ಬಹಾದ್ದೂರನನ್ನು ನಾನು ಸ್ವತಃ ಜೇಲಿನಲ್ಲಿ ಕಂಡಿರುತ್ತೇನೆ. ಆ ದ್ವೀಪಕ್ಕೆ ಅಂಡಮಾನವೆನ್ನುತ್ತಾರೆ. ಅದರಲ್ಲಿ ನಮ್ಮೆಲ್ಲರನ್ನು ಒಯ್ದು ಬಿಡುತ್ತಾರೆ.” ಹೀಗೆಂದು ಆ ಅಕ್ಷರಸ್ಥನು ಅಂದನು.

“ಆಂ! ಕ್ಯಾ ಬೋಲೆ?” ಆ ತರುಣನಿಗೆ ಹೊಸ ಜೀವ ಬಂದಂತಾಗಿ ನುಡಿದನು. “ಕರಿನೀರಿನಿಂದ ಕೆಲಕೆಲವರು ಓಡಿ ಕೂಡ ಬರುವರೆ? ಬಾಬೂಜೀ, ತುಮ ಕಹೋ ತೋ ಹಮ ಸಚ ಮಾನೇಂಗೇ ಇಸ ಬಾತಕೊ!”

“ಹತ್ತಿಪ್ಪತ್ತು ಸಾವಿರಗಳಲ್ಲಿ ಒಬ್ಬಾನೊಬ್ಬನೆ! ಅಂಥ ಓರ್ವ ನರಾಧಮ ದಂಡಿತನು ಕರಿನೀರ ಮೇಲಿಂದ ಓಡಿ ಬಂದದ್ದನ್ನು ನಾನು ಕೂಡ ನೋಡಿದ್ದೇನೆ” ಈ ವಾಕ್ಯವನ್ನು ಆ ಬಾಬೂಜಿಯು (ಸಾಕ್ಷರ ಬಂದಿ ಜನರಿಗೂ ಕಾರಕೂನ ಅಥವಾ ಅದಕ್ಕೂ ದೊಡ್ಡ ಯೋಗ್ಯತೆಯ ಜನರಿಗೂ ಬಂದಿವಾನರು ‘ಬಾಬೂಜಿ’ ಎಂದು ಸಂಬೋಧಿಸುತ್ತಾರೆ) ಶಕ್ಯವಾದಷ್ಟು ಸಾವಧಾನದಿಂದ ಆಡಿದನೋ ಇಲ್ಲವೋ, ಇಷ್ಟರಲ್ಲಿ ಹಿಂದಿರುಗಿ ನಿಂತುಕೊಂಡು ಅವರ ಮೇಲೆ ಲಕ್ಷ್ಯವಿಟ್ಟಿದ್ದ ಆ ಪೋಲೀಸ ಕಾವಲುಗಾರನು ಒಮ್ಮೆಲೆ

ಮುಂದಾಗಿ ಆ ಬಾಬೂಜಿಯುನ್ನು ಹಿಡಿದನು! ಯಾಕಂದರೆ ಕಾವಲುಗಾರರ ಕೈಗೆ ಸಿಗದಂತೆ ಶಿಸ್ತುಭಂಗವನ್ನು ಹೇಗೆ ಮಾಡಬೇಕೆಂಬ ಕಸಬು-ಬಂಧನದ ಪ್ರಸಂಗವು ಇಡೀ ಜನುಮದಲ್ಲಿ ಮೊದಲನೇ ಸಾರೆಯೇ ಬಂದಿದ್ದ ಮತ್ತು ಸರಳವೂ ಸತ್ಯವೂ ಆದದ್ದನ್ನು ಗಟ್ಟಿಗಟ್ಟಿಯಾಗಿ ಮಾತನಾಡುವ ಸಭ್ಯ ಜಗತ್ತಿನೊಳಗಿನ ರೂಢಿ ತಪ್ಪಿ ಬಂದಿಗೃಹದೊಳಗವಶ್ಯವಾದ ಧೂರ್ತಶನವು-ಇನ್ನೂ ಚೆನ್ನಾಗಿ ರೂಢವಾಗದ ಆ 'ಬಾಬೂಜಿ'ಯು ಆ ಶಬ್ದಗಳು ಆತನ ಇಚ್ಛೆ ಇರವಿದ್ದರೂ ಗಟ್ಟಿಯಾಗಿ ಉಚ್ಚಾರಿಸಲ್ಪಟ್ಟಿದ್ದವು.

ಕಾವಲುಗಾರನು ಜಪ್ಪಿಸಿ ಹಿಡಿದಿದ್ದ ಬಾಬೂಜಿಯುನ್ನು ಎಬ್ಬಿಸಿ ನಿಲ್ಲಿಸಿದನು; ಮತ್ತು ತಮ್ಮ ಜಮಾದಾರನ ಬಳಿಗೆ ಎಳೆದೊಯ್ದು ಹೇಳಿದನು: "ಸುಮ್ಮನಿರೆಂದು ಆಗಾಗ್ಗೆ ಹೇಳಿದರೂ ಈತನು ಒಂದೇಸವನೆ ಗೊಂದಲವೆಬ್ಬಿಸುವನು; ಇಷ್ಟೇ ಅಲ್ಲದೆ, ನಾವೆಲ್ಲರೂ ಕರಿನೀರ ಜೇಲನ್ನೊಡೆದು ಓಡಿ ಹೋಗೋಣವೆಂದು ಬೇರೆ ಬಂದಿಗಳನ್ನು ಚಿತಾಯಿಸುತ್ತಿರುವನು."

ಜಮಾದಾರನು ಸಿಟ್ಟುಬೆಂಕಿಯಾಗಿ "ಏನು? ಕರಿನೀರಮೇಲಿಂದ ಓಡಿ ಬರುವ ಕಟ್ಟೇ? ಈ ಕಳ್ಳನ ಹೆಸರೇನು?" ಎಂದು ಗಟ್ಟಿಯಾಗಿ ಕೇಳಿದನು.

ಕಾವಲುಗಾರನು ಆ ಬಾಬೂಜಿಯು ಎದೆಯು ಮೇಲಿನ ಬಿಲ್ಲೆ ನೋಡಿ ಜಮಾದಾರನನ್ನು ಕುರಿತು: "ಕಂಟಕ!"

ಜಮಾದಾರನು ಆತನ ಹೆಸರನ್ನು ಆತನ ಬಂದಿಕ್ರಮಾಂಕದೊಡನೆ ತನ್ನ ಜೇಬಿನೊಳಗಿನ ಟಿಪ್ಪಣಿ ವಹಿಯಲ್ಲಿ ಬರೆಕೊಂಡು, ಬೆದರಿಸುವ ದನಿಯಿಂದ: "ಕಂಟಕಾ, ನಿನ್ನ ಈ ಅಪರಾಧವನ್ನು ನಾನು ಮೇಲೆ ತಿಳಿಸಿದರೆ, ನಿನಗೆ ಗಲ್ಲೇ ಆದೀತು! ಕರಿನೀರಿನಿಂದ ಓಡಿ ಬರುವಾಗ ಓಡಿ ಬರುವವನನ್ನು ಗುಂಡು ಹಾಕಿ ಕೊಲ್ಲುತ್ತಾರೆ! ಸಿಕ್ಕನೆಂದರೆ ಗಲ್ಲಿಗೇರಿಸುತ್ತಾರೆಂಬದು ನಿನಗೆ ಗೊತ್ತಿದೆಯೆ? ಕರಿನೀರಲ್ಲಿ ಈ ಅಪರಾಧವನ್ನು ಎಲ್ಲಕ್ಕೂ ಭಯಂಕರವೆಂದು ಗಣಿಸುತ್ತಾರೆ!"

"ಆದರೆ ಜಮಾದಾರರೇ, ನಾನು ಕರಿನೀರಮೇಲಿಂದ ಓಡಿ ಬರುವ ಬಗ್ಗೆ ಒಂದಕ್ಕರದಿಂದಲೂ ಯಾರನ್ನೂ ಚಿತಾಯಿಸಿರುವುದಿಲ್ಲ! ನನ—"

"ಚೂಪ! ಬದ್‌ಮಾಷ, ನೀನು ಹಾಗೆಯೇ ಚಿತಾಯಿಸಿದೆ." ಎಂದು ಕಾವಲುಗಾರನು ಗದ್ದರಿಸಿದನು.

"ನನ್ನ ಬಳಿಯು ಆ ಬಂದಿಗಳನ್ನು ಕೇಳಿದರೆ ನಾನನ್ನುವದು ನಿಜವೇ-ಸುಳ್ಳೋ ತಿಳಿದೀತು"

ಜಮಾದಾರನು ಆ ಹುಡುಗನನ್ನೂ ಆ ನಿಗರಗಟ್ಟಿ ಬಂದಿಯುನ್ನೂ

ಎಬ್ಬಿಸಿ ಕೇಳಿದನು:—"ಏನಿರೋ, ಈ ಕಂಟಕನು ನಿಮಗೆ ಏನೇನು ಹೇಳಿ ಕೊಡುತ್ತಿದ್ದನು?"

ಆ ಹುಡುಗನು ಸುಮ್ಮನೆ ನಡುಗುತ್ತ ನಿಂತುಕೊಂಡನು; ಆದರೆ ಕಂಟಕನ ಮೇಲಿನ ಆರೋಪದ ಬಗ್ಗೆ ಪೋಲೀಸನೊಡನೆ ನಡೆದಿದ್ದ ಆ ಎಲ್ಲ ಸಂಗತಿಯನ್ನು ಪ್ರಥಮದಿಂದಲೂ ಕೇಳಿಕೊಂಡಿದ್ದ ಒಬ್ಬ ನಿಗರಗಟ್ಟೆ ಬಂದಿಯು ಒಮ್ಮೆಲೆ:—"ಜಮಾದಾರಜಿ, ಈ ಬಾಬುವು ಕರಿನೀರ ಮೇಲಿಂದ ಹೇಗೆ ಓಡಿ ಬರಬೇಕೆಂಬದು ತನಗೆ ಗೊತ್ತಿದೆಯೆಂದು ನನಗೆ ಹೇಳಿದನಲ್ಲದೆ, ಹಾಗೆ ಓಡಿ ಬಂದಿರುವವನೊಬ್ಬನು ಈತನ ಮುಂದಾಳಾಗಿರುವನಂತೆ. ನಾವು ಈತನ ಕಟ್ಟಿನಲ್ಲಿ ಕೂಡಿಕೊಂಡರೆ ಹಾಗು ಗುಟ್ಟುಬೇತುಗಳನ್ನು ಒಡೆಯುವ ದಿಲ್ಲೆಂದು ಆಣೆ ಮಾಡಿದರೆ, ಒಂದು ವರ್ಷದೊಳಗಾಗಿ ಎಲ್ಲ ಸೆರೆಮನೆಗಳ ನ್ನೊಡೆದು ಕರಿನೀರೊಳಗಿಂದ ಜಾರಿ ಮನೆ ಸೇರಿಸುತ್ತೇನೆಂದನು. ಅಂಥ ಭಯಂಕರ ಕಟ್ಟಿನಲ್ಲಿ ಬರಲಾರೆನೆಂದೂ ಆಣೆ ಮಾಡಲಾರೆನೆಂದೂ ನಾನಿವನಿಗೆ ಹೇಳಿಬಿಟ್ಟದ್ದೇನೆ."

ಆ ನಿಗರಗಟ್ಟೆ ದಂಡಿತನ ಆ ಸಾಕ್ಷಿಯನ್ನು ಕೇಳುತ್ತಿರುವಾಗ ಕಂಟಕನು ದಿಙ್ಮೂಢನೂ ಆಶ್ಚರ್ಯಚಕಿತನೂ ಆಗಿ ನಿಂತುಬಿಟ್ಟನು! ಹಾಗುಕೊನೆಗೆ ಒಮ್ಮೆಲೆ:—"ಎಲಾ; ಎಂಥ ಅಪವಾದವಿದು? ಇಷ್ಟು ನೀಚ ಮನುಷ್ಯ ನಿರುತ್ತಾನಲ್ಲವೆ?! ಈತನು ಹೇಳಿದ್ದರಲ್ಲಿ ಒಂದಕ್ಕರ ಕೂಡ ನಿಜವಿಲ್ಲ. ಜಮಾದಾರರೇ. ಬೇಕಾದರೆ ನಾನು ದೇವರ ಆಣೆಮಾಡಿ ಹೇಳುತ್ತೇನೆ! ನಾನು...."

ಜಮಾದಾರನು ತನ್ನ ದಂಡುಕದಿಂದ ಕಂಟಕನ ತೊಡೆಯ ಮೇಲೊಮ್ಮೆ ಚೆನ್ನಾಗಿ ಹೊಡೆದು:—"ಚೂಪ!" ಎಂದು ಗರ್ಜಿಸಿದನು. ತೀರಿತು. ಆ ಎಲ್ಲ ಆರೋಪ-ಸಾಕ್ಷಿ-ಪುರಾವೆಗಳ ಸಮಾರೋಪವು ಆ ದಂಡುಕದ ಅದೊಂದು ಪೆಟ್ಟಿನಿಂದ ಮುಗಿಯಿತು!"

ಇಷ್ಟರಲ್ಲಿ ಘಣ ಘಣ, ಘಣ ಘಣ ಎಂದು ಏತರದೋ ಗಂಟೆ ಬಡೆ ಯಿತು. ಈ ಮೂವರನ್ನೂ ವಿಂಗಡಿಸಿ, ಬೇರೆ ಬೇರೆ ಸಾಲಿನಲ್ಲಿ ಕೂಡ್ರಿಸೆಂದು ಕಾವಲುಗಾರ ಪೋಲೀಸನಿಗೆ ಹೇಳಿ, ಜಮಾದಾರನು ಗಂಟೆ ಬಾರಿಸುತ್ತಿದ್ದ ಕಡೆಗೆ ಧಾವಿಸುತ್ತಲೇ ಹೋದನು. ಆ ಚಲಾನವನ್ನು ಉಗೆಹಡಗದ ಮೇಲೆ ಏರಿಸುವವರೆಗಿನ ಜವಾಬದಾರಿಯು ಆ ಜಮಾದಾರನ ಮೇಲಿತ್ತಾದ್ದರಿಂದ, ಮತ್ತು ಆ ಗಂಟೆಯು ಆ ಉಗೆಹಡಗು ಬರುವ ಸೂಚನೆಗಾಗಿಯೇ ಬಡಿಯ ಹತ್ತಿದ್ದರಿಂದ, ಕಂಟಕನ ಆ ಪ್ರಕರಣವು ಜಮಾದಾರನಿಗೆ ಅಲ್ಲಿಯೇ ಮರೆತು ಹೋಯಿತು. ಈ ಚಲಾನವನ್ನೊಮ್ಮೆ ಉಗಿಹಡಗದ ಮೇಲೇರಿಸಿಬಿಟ್ಟರೆ,

ಆತನ ಕರ್ತವ್ಯವು ಪೂರೈಸುತ್ತಿತ್ತು. ಆ ಮೇಲೆ ಅವರು ಅತ್ತ ಓಡಿಹೋಗಲಿ, ಅಥವಾ ಏನನ್ನೇ ಮಾಡಲಿ? ಅವಕ್ಕೆ ಸಂಬಂಧಿಸಿದ ಆ ತೊಡಕಿನ ಸಂಗತಿ ಯನ್ನು ಆ ಜಮಾದಾರನು ಮೇಲೆ ತಿಳಿಸಿ, ಅದರ ಸವ್ಯಾಪಸವ್ಯಗಳನ್ನೇತಕ್ಕೆ ಮಾಡುವನು?

ಜಮಾದಾರನು ಹೊರಟು ಹೋದನು. ಆ ಪ್ರಕರಣವು ನೊಂದಿತು; ಆದರೆ ಆತನು ತೊಡೆಯ ಮೇಲೆ ಹೊಡೆವಿದ್ದ ಆ ದಂಡುಕದ ಪೆಟ್ಟು ಮರೆಯು ವುದು ಮಾತ್ರ ಪಾಪ ಆ ಬಡ ಕಂಟಕನಿಗೆ ಶಕ್ಯವಾದೀತೆ? ಆತನ ತೊಡೆಯಲ್ಲುಂ ಟಾದ ನೋವಿನಿಂದ ನೆರಳುತ್ತ ಕೂಡ್ರಿಸಿದಲ್ಲಿಯೇ ಸುಮ್ಮನೆ ಕುಳಿತಿದ್ದನು. ಆ ಅನ್ಯಾಯದಿಂದಲೂ ಅವಮಾನದಿಂದಲೂ, ವಿಶೇಷವಾಗಿ ಅದನ್ನು ಪ್ರತೀ ಕಾರ ಮಾಡುವ ಸಂಪೂರ್ಣ ಅಕ್ಷಮತೆಯಿಂದಲೂ ಕಂಟಕನಿಗೆ ಜೀವಿಸಿರುವದು ಕೂಡ ನಾಚಿಕೆಯೆನಿಸಹತ್ತಿತು. ಕರಿನೀರ ಮೇಲೆ ಜೀವಿಸಿರಲಿಕ್ಕೆ ಎಷ್ಟು ನಿರ್ಲಜ್ಜತನವು ಬೇಕೋ, ಅಷ್ಟು ಆ ಸದ್ಗುಣದಲ್ಲಿ ಆತನಿನ್ನೂ ಪ್ರವೀಣನಾ ಗಿರಲಿಲ್ಲ.

ಆದರೆ ಕಾರಾಗೃಹಗಳ ಹಾಗು ಕರಿನೀರು ಇವುಗಳ ಜೀವನವೇ ಯಾರ ಅಸ್ತಿತ್ವದ ಮೇಲೆ ನೆಲೆ ನಿಂತಿರುವವೋ ಅಂಥ ನಿಗರಗಟ್ಟಿರೊಳಗಿನ ಆ ಸಾಕ್ಷಿ ಹೇಳಿದ ದಂಡಿತನು ಕುಳಿತಲ್ಲಿಂದಲೇ ಕಂಟಕನ ಕಡೆಗೆ ನೋಡುತ್ತ ನಗುತ್ತಿ ದ್ದನು! ಮತ್ತು ತನ್ನದೊಂದು ಪರಾಕ್ರಮವೆಂದು ನನ್ನ ಬಳಿಯ ಜನರಿಗೆ ಕಂಟಕನ ಮೇಲೆ ಹೊರಿಸಿದ ಅಪವಾದದ ಸಂಗತಿಯನ್ನು ಉಪ್ಪು-ಕಾರ ಹಚ್ಚಿ ಹೇಳುತ್ತಿದ್ದನು: "ಭಯ್ಯಾ! ನನ್ನ ಜೀವಕ್ಕೆ ಬಂದಿತ್ತು; ಆದರೆ ಚಿಮ್ಮಿ ಒಗೆ ದನು, ಆ ಹೇಡಿ ಬಾಬುವಿನ ಮೈಮೇಲೆ! ಆದರಿಂದ ಆ ಕಂಟಕನ ತೊಡೆಯ ಮೇಲೊಂದು ಚಿರಗುಟ್ಟುವ ಪೆಟ್ಟು ಹಾಕಿಸಿಬಿಟ್ಟೆನು!"

ಕಂಟಕನ ತೊಡೆಯಲ್ಲಿ ಹೆಚ್ಚಾಗಿ ನೋಯುತ್ತಿದ್ದದರಿಂದ, ಅವನಿಂದ ಒಂದೇಸವನೆ ತುದಿಗುಂಡಿಯಿಂದ ಕೂಡ್ರಲಿಕ್ಕಾಗಲೊಲ್ಲದು; ಆದರೆ ಕಾವಲು ಗಾರ ಶಿಪಾಯಿಯಂತೂ "ಹಾ ತುದಿಗುಂಡಿಯಿಂದ ಚನ್ನಾಗಿ ಕೂಡ್ರು" ಎಂದು ಒದರುತ್ತಿದ್ದನು. ಕಂಟಕನ ಮೇಲೆ ಶಿಸ್ತುಭಂಗದ ಬೇರೆ ಅನ್ಯಾಯ-ಪ್ರಸಂಗ ಉಂಟಾಗತಕ್ಕದ್ದೇ ಇತ್ತು.

ಆದರೆ ಇಷ್ಟರಲ್ಲಿ ಎಲ್ಲ ಕಡೆಯ ಸಂಗಿನಿ ಧಾರಿಗಳಾದ ಕಾವಲುಗಾರರು "ಉಠ್ಯೊ! ಮಹಾರಾಜಾ ಆಯಾ!" ಎಂದು ಗದ್ದರಿಸಿದರು.

ಕಂಟಕನು ಚಮಕಿತನಾಗಿ ಎದ್ದು ನಿಂತು, ಜಿಜ್ಞಾಸೆಯಿಂದ 'ಇತ್ತ ಆದಾವ ದೊಡ್ಡ ಮಹಾರಾಜರು ಬರುತ್ತಿರುವರೆಂಬವನ್ನು ನೋಡಹತ್ತಿದನು.

ಅನುಭವಿಕರಾದ ನಿಗರಗಟ್ಟ ದಂಡಿತರೆಲ್ಲರೂ ಎದ್ದು ನಿಂತು ಸಮುದ್ರದ ಕಡೆಗೆ ಬೊಟ್ಟು ತೋರಿಸುತ್ತ:--“ಅದು ನೋಡಿರಿ, ಬಂದಿತು ಮಹಾರಾಜಾ” ಎಂಬು ಗುಣಗುಟ್ಟಹತ್ತಿದರು.

ಕಂಟಕನು ಅತ್ತ ಹೊರಳಿ ನೋಡಲು, ಒಂದು ಬಹು ದೊಡ್ಡ ಉಗಿ ಹಡಗವು ‘ಭೊಂSS’ ಎಂದು ಕೂಗಿಕೊಳ್ಳುತ್ತ, ಆ ಪ್ರಚಂಡವಾದ ತೆರೆಗಳ ಗುಂಪಿನೊಳಗಿಂದ ದಾರಿ ಮಾಡಿಕೊಳ್ಳುತ್ತ ಬಂದರದ ಕಡೆಗೆ ಮಂದ ಮಂದ ವಾಗಿ ಬರುತ್ತಿತ್ತು. ಅದರ ದರ್ಶನೀಯ ಭಾಗದಲ್ಲಿ ‘ಮಹಾರಾಜಾ’ ಎಂಬ ದೊಡ್ಡ ಹೆಸರು ಕಾಣಿಸುತ್ತಿತ್ತು.

“ಮಹಾರಾಜಾ ಆಯಿತು!” ಅಂದರೆ ಆ ಜಲಯಾನವು ಬಂದಿತು! ಇನ್ನು ಇದು ನನ್ನನ್ನು ಆ ಕರಿನೀರಿಗೆ ಒಯ್ಯುವುದೆ? ಎಂದು ಆ ಜಲಯಾನವನ್ನು ಕಂಡ ಕೂಡಲೆ ಕಂಟಕನಿಗೆ ನಡುಗು ಹುಟ್ಟದಿರಲಿಲ್ಲ.

ಆ ಮಹಾರಾಜಾ ಉಗಿಹಡಗವು ಇದುವರೆಗೆ ಸಹಸ್ರಾವಧಿ ವಿಹಿತಾ ವಿಹಿತ ಸ್ತ್ರೀ-ಪುರುಷ ಅಪರಾಧಿಗಳನ್ನು ಈ ಬಂದರದಿಂದ ಆ ಕರಿನೀರಿಗೆ ಹೊತ್ತೊಯ್ದು ಬಿಟ್ಟದ್ದೀತು; ಆದರೆ ಅವರುಗಳಲ್ಲಿಯು ಸಾವಿರಕ್ಕೆ ಒಬ್ಬ ನನ್ನಾದರೂ ಈ ಬಂದರಕ್ಕೆ ಮರಳಿ ತಂದು ಬಿಟ್ಟಿರಲಿಲ್ಲ ಯಾವನೊಬ್ಬನು ಕರಿನೀರಿನ ಬಂದಿಯೆಂದು ಆ ಹಡಗವನ್ನೇರಿದನೋ-ಕರಿನೀರಿಗೆ ಒಯ್ಯಲ್ಪ ಟ್ಟನೋ ಆತನು ಅತ್ತೇ ಹೋದನು! ಆತನು ಈ ಲೋಕಕ್ಕೆ ಸತ್ತನು; ಈ ಈ ಲೋಕವೂ ಆತನಿಗೆ ಸತ್ತಿತು! ಸುಡುಗಾಡಿಗೆ ತಕ್ಕೊಂಡು ನಡೆದಿರುವ ಹೆಣಕ್ಕೆ ಏನಾದರೂ ಅನಿಸುವದು ಶಕ್ಯವಿದ್ದರೆ ಅದಕ್ಕೆ ಏನೆನಿಸುವದೋ, ಕರಿ ನೀರಿಗೊಯ್ಯುವ ಸಲುವಾಗಿ ದಂಡಿತರನ್ನು ಯಾವಾಗ ಆ ಮಹಾರಾಜಾ ಹಡಗದ ಮೇಲೆ ಏರಿಸುವರೋ ಆಗ ಅವರಿಗೂ ಹಾಗೆಯೇ ಅನಿಸುವದು! ಅಥವಾ ಆ ಹೆಣಕ್ಕೆ ಏನೂ ಅನಿಸದಿರುವ ಮನುಷ್ಯತ್ವವು ಯಾರಲ್ಲಿ ಇನ್ನೂ ಉಳಿದಿರುವದೋ, ಅವರಿಗಂತೂ ಹಾಗೆಯೇ ಅನಿಸುತ್ತದೇನಂದರೆ, ‘ಮಹಾ ರಾಜಾ’ ಎಂಬದು ಹಡಗವಾಗಿರದೆ, ಅದೊಂದು ಗೋರಿಯು! ಅದರಲ್ಲಿ ಯಾರನ್ನು ಹುಗಿಯುವರೋ, ಆತನು ಅದರೊಳಗಿಂದ ಮತ್ತೆ ಹೇಗಾದರೂ ಹೊರಬಿದ್ದರೆ, ಆ ಕರಿನೀರ ಸಮುದ್ರಾಚೆಗಿನ ಯಮನಗರಿಯಲ್ಲೇ ಹೊರಬೀಳ ತಕ್ಕವನು! ಈ ಲೋಕದಲ್ಲಲ್ಲ! ಕಂಟಕನಿಗೆ ಇವೆಲ್ಲ ತಿಳಿಯುತ್ತಿತ್ತು. ಅಂತೆ ಯೇ ಮಹಾರಾಜಾವನ್ನು ನೋಡಿದೊಡನೆಯೇ ಆತನ ಹರಣವು ಹಾರಿತು! ಈ ಸಮುದ್ರಕ್ಕೆ ಕರಿನೀರೆಂದೇಕೆ ಅನ್ನುತ್ತಿರಬಹುದು? ಎಂದು ಆತನು ಇದು ವರೆಗೂ ತನ್ನ ಮನಸ್ಸಿನಲ್ಲಿಯೇ ಯೋಚಿಸುತ್ತಿದ್ದನು. ಹಾಗೆ ನೋಡಿದರೆ

ಸಮುದ್ರದಾಟುವದೆಂಬರೆ, ಹಿಂದುಗಳ ಮಟ್ಟಿಗಾದರೆ ಜಾತಿ-ಕುಲ-ಗೋತ್ರ-ಧರ್ಮ ಭ್ರಷ್ಟವಾಗುವಂತೆಯೂ, ಹೀಗಾಗಿ ಅದೊಂದು ಬಗೆಯ ಮೃತ್ಯು ಸಂಭವಿಸಿದಂತೆಯೂ ಎಂದು ಸಿಂಧುಬಂದಿಯ ರೂಢಿಯು ಹಿಂದೂ ಸಮಾಜದಲ್ಲಿ ಯಾವಾಗಿನಿಂದ ರೂಢವಾಯಿತೋ ಆವಾಗಿನಿಂದ ಸಮುದ್ರದ ನೀರೆಲ್ಲ 'ಕರಿನೀರೇ!' ಅನಿಸಹತ್ತಿತು. ಕಾಲನ-ಯಮನ-ಸಮುದ್ರವೆಂದು ತೋರಹತ್ತಿತು! ಆದರೆ ಅದರಲ್ಲಿಯೂ ಅಂಡಮಾನ ದ್ವೀಪಕ್ಕೆ ಜೀವಾವಧಿ ಶಿಕ್ಷೆ ಭೋಗಿಸಲಿಕ್ಕೆ ಹೋಗುವವರಿಗೆ ಕರಿನೀರಿಗೆ ಹೋಗುವವರೆಂಬ ವಿಶೇಷ ಭಯಂಕರ ಹೆಸರು ಏಕೆ ಪ್ರಾಪ್ತವಾಯಿತು? ಕಂಟಕನು ಆ ಸಮುದ್ರದ ನೀರಿನ ಕಡೆಗೆ ಕುಳಿತಲ್ಲಿಂದಲೇ ನೋಡುತ್ತಿದ್ದನು; ಆದರೆ ಆ ಮಹಾರಾಜಾ ಹಡಗವನ್ನು ನೋಡುತ್ತಲೆ ಹಾಗು ಇನ್ನು ಇದು ತನ್ನನ್ನು ಈ ನನ್ನ ಮಾತೃಭೂಮಿಯಿಂದ, ಆಪ್ತೇಷ್ಟರೊಳಗಿಂದ, ಜಾತಿ-ಗೋತ್ರ ಸಮೂಹದ ಲೋಕದೊಳಗಿಂದಲೇ ಅಲ್ಲ, ಆದರೆ ಜೀವನದೊಳಗಿಂದಲೇ ಎತ್ತೊಯ್ಯು ಅತ್ಯಂತ ದುರ್ದೆಶೆಯು ಯಾವುದೊಂದು ಮೃತಖಂಡದಲ್ಲಿ ಖಂಡಿತವಾಗಿಯೂ ಹುಗಿಯುವುದು ಪ್ರತ್ಯಕ್ಷ ಪ್ರಮಾಣವಾಗಲು, ಆತನ ಹೃದಯದಲ್ಲಿ ಯಾವ ಭೀತಿಯು ಉಂಟಾಯಿತೋ, ಆ ಕೂಡಲೆ ಆತನಿಗೆ ಆ ಇಡೀ ಸಮುದ್ರವು ಕಪ್ಪೇ ಕಪ್ಪಾಗಿ ತೋರತೊಡಗಿತು! ಅದಕ್ಕೆ ಕರಿನೀರೆಂದು ಏಕೆ ಅನ್ನುವರೆಂಬದೂ ತಿಳಿಯಿತು! ಇಷ್ಟೇ ಅಲ್ಲ, ಅದಕ್ಕೆ 'ಕರಿನೀರೆ'ನ್ನದೆ ಬೇರೆ ಯಥಾರ್ಥ ಹೆಸರನ್ನು ಅದಕ್ಕಿಟ್ಟಿದ್ದರೆ, ಅದು 'ವದತೋ ವ್ಯಾಘಾತ'ವು ಹೇಗಾಗುತ್ತಿತ್ತೆಂಬದು ಅವನಿಗೆ ಮನಗಂಡಿತು.

ವಾಚಕರೇ, ಈ ಕಂಟಕನೆಂದರೇ ನಿಮ್ಮ ಗುರುತಿನ ಕಿಶನನು; ಇವನಿಗೂ ಮಾಲತಿಗೂ ಜೀವಾವಧಿ ಕರಿನೀರಿನ ಶಿಕ್ಷೆಯಾದ ಮೇಲೆ ಅವರಿಬ್ಬರಲ್ಲಿ ಯಾವ ವಿಚ್ಛೇದವಾಯಿತೋ, ಅದು ಆಗಿಯೇ ಹೋಯಿತು! ಆಕೆಯನ್ನು ಯಾವ ಜೇಲಿಗೆ ಕಳಿಸಿದರೆಂಬದು ಪ್ರಯತ್ನಪೂರ್ವಕವಾಗಿ ಶೋಧಿಸಿದರೂ ಆತನಿಗೆ ಪತ್ತೆಯಾಗಲಿಲ್ಲ. ಆತನನ್ನು ಬೇರೆ ಬೇರೆ ಕಾರಾಗೃಹಗಳಲ್ಲಿ ಬಂಧಿಸುತ್ತ ಬಂಧಿಸುತ್ತ, ಪ್ರತಿ ನಾಲ್ಕೈದು ತಿಂಗಳಿಗೆ ಹೀಗೆ ಒಟ್ಟು ಮಾಡಿದ ದಂಡಿತರನ್ನು ಕರಿನೀರಿಗೆ ಕಳಿಸುವ ಪದ್ಧತಿಯ ಮೇರಿಗೆ ಈ ಸಾರೆಯ ಗುಂಪಿನಲ್ಲಿ ಆತನನ್ನು ಕಲಕತ್ತೆಯ ಬಂದರಕ್ಕೆ ತಂದಿದ್ದರು; ಆಗಿನ ಆ ಜೀವದ ಮೇಲಿನ ಸಂಕಟದಲ್ಲಿಯೂ ಒಂದು ಸ್ನಿಗ್ಧ ಭೀಷಣ ಜಿಜ್ಞಾಸೆಯು ಆತನಿಗೆ ಸೊಗಸಾಗಗೊಡಲೊಲ್ಲದು. ಮಾಲತಿಯನ್ನು ಇದೇ ಚಲಾನದೊಡನೆ ಜೀವಾವಧಿ ಕರಿನೀರಿಗೆ ಕಳಿಸಲಿಕ್ಕೆ ತರುವರೋ ಏನೋ ಎಂಬ ಚಿಂತೆಯು ಆತನನ್ನು ಬಲ

ವಾಗಿ ಆವರಿಸಿತ್ತು. ಅವಳನ್ನು ಅಂಥ ದುರ್ದೆಶೆಯಲ್ಲಿ ನೋಡುವದು-ನೂಕುವದು ಎಷ್ಟು ಅಸಹ್ಯವು? ಎಷ್ಟು ಕಟುತರವು? ಆದರೆ ಆ ನೆವದಿಂದಲಾದರೂ ಆಕೆಯನ್ನು ಕಾಣುವದೂ, ಸಂಕಟವನ್ನನುಭೋಗಿಸುವದೇ ಆದರೆ, ಒಟ್ಟಾಗಿದ್ದು ಭೋಗಿಸುವಾಗ ಅದನ್ನು ಹಂಚಿಕೊಂಡು ಭೋಗಿಸುವದೂ ಇದ್ದದರಲ್ಲಿಯೇ ಸವಿ! ಎಂದು ಅಂದುಕೊಂಡು, ಆತನು ಸುಮ್ಮನೆ ಎಷ್ಟೋ ಶೋಧಿಸಿದನು; ಆದರೆ ಬಂದಿ ಸ್ತ್ರೀಯರಾರೂ ಅಂದಿನ ಆ ಚಲಾನದೊಡನೆ ಕಳಿಸತಕ್ಕವರಿರಲಿಲ್ಲ; ಮತ್ತು ಇದ್ದರೂ ಕೂಡ ಅವರನ್ನು ಗಂಡಸರ ಚಲಾನದ ಕಣ್ಣಿಗೆ ಕೂಡ ಕಾಣಿಸದ ಹಾಗೆ ಶಕ್ಯವಾದಷ್ಟು ಬಂದೋಬಸ್ತಿನಲ್ಲಿ ಕಳಿಸುದ ಸ್ವತಂತ್ರ ವ್ಯವಸ್ಥೆಯು ಮಾಡಲ್ಪಟ್ಟಿರುತ್ತದೆ; ಮತ್ತು ಅದೇ ಯೋಗ್ಯವು. ಇಂಥ ಉಚ್ಛೃಂಖಲ ಕಲಿಪುರುಷರ ಹಾಗು ಕ್ರೂರ ಪಶುಗಳ ಹಿಂಡಿನಲ್ಲಿ ಆ ಕ್ರೂರ ಹಾಗು ದಂಡಿತರಾದ ಸ್ತ್ರೀಯರ ವಿಡಂಬನೆಯು ನೋಡನೋಡುವಷ್ಟರಲ್ಲಿ ಎಂದಿಗಾದರೂ ಆಗದಿದ್ದೀತೇ?

ಮಾಲತಿಯು ಆ ಚಲಾನದಲ್ಲಿರದ್ದನ್ನು ಕಂಡು ಕಿಶನನಿಗೆ ಒಂದು ರೀತಿಯಿಂದ ವಿಹಿತವೆನಿಸಿದರೂ ಹೇಗೆ ಅಸಮಾಧಾನವಾಯಿತೋ, ಆಕೆಯನ್ನು ಸುಮ್ಮನೆ ನೋಡುವ ಸಂಧಿಯು ಕೂಡ ದೊರೆಯುವುದಿಲ್ಲೆಂದು ಆತನ ಜೀವಕ್ಕೆ ಹೇಗೆ ಹುರು ಹುರು ಹತ್ತಿತೋ; ಅದಕ್ಕೆ ತೀರ ವಿಪರೀತವಾಗಿ ಮತ್ತೊಂದು ವ್ಯಕ್ತಿಯು ಆ ಚಲಾನದಲ್ಲಿ ಕಾಣಿಸದ್ದರಿಂದ ಆತನ ಜೀವದ ಮೇಲಿನದೊಂದು ಸಂಕಟವು ಪರಿಹರಿಸಿದಂತೆ ಆತನಿಗೆ ಹಾಯ್ ಎನಿಸಿತು. ಆ ವ್ಯಕ್ತಿಯೆಂದರೆ, ಆ ರಫೀಉದ್ದೀನ ಅಹಮ್ಮದನು! ಆತನಿಗಾದರೂ ಕಿಶನನಿಗೆ ಶಿಕ್ಷೆಯಾಗುವ ಮೊದಲು ಜೀವಾವಧಿ ಕರಿನೀರಿನ ಶಿಕ್ಷೆಯೇ ಆಗಿತ್ತು. ಆದರಿಂದ ಆತನಾದರೂ ಈ ಚಲಾನದೊಳಗೆ ತನ್ನ ಸಂಗಡಿಗನಾಗಿ ಬರುವನೇನು? ತಾನು ತನ್ನ ಕಿಶನ ಎಂಬ ಹೆಸರು ಬದಲಿಸಿ, ಕಂಟಕ ಎಂದಿಟ್ಟುಕೊಂಡಿದ್ದರೂ ರೂಪವು ಮೊದಲಿನದೇ! ಆತನು ನನ್ನನ್ನು ಗುರ್ತಿಸಿದರೆ? ಆ ಕ್ರೂರ ಸರಾಧಮನು ತನ್ನ ಸೇಡು ಹಾಯಿಸಿಕೊಳ್ಳುವುದಕ್ಕೆಂದು ಮತ್ತೆ ಬೇಕಾದ ಅತ್ಯಾಚಾರ ಮಾಡದಿರನು. ತನ್ನಿಂದಲೂ ಪ್ರತ್ಯಾಘಾತ ಮಾಡದೆ ಇರಲಿಕ್ಕಾಗಲಿಕ್ಕಿಲ್ಲ. ಈ ಮೊದಲೇ ಉಂಟಾಗಿದ್ದ ಒಂದು ಭಯಂಕರ ಸಂಕಟದಲ್ಲಿ ಬೇರೆ ಭಯಂಕರ ಯಾತನೆಗಳ ಉರ್ಲ ಬೀಳುವದು! ಇನ್ನು ಏನು ಆಗತಕ್ಕದ್ದಿದೆಯೋ ಆಗಲಿ! ಕೇಡು ಏನು ಆಗಬೇಕಾಗಿದ್ದಿತೋ ಅದಾಗಿ ಹೋಗಿದೆ. ಜೀವಾವಧಿ ಕರಿನೀರೇನು? ಸಾವೇನು? ಉದ್ದಿನಲ್ಲಿ ಕರಿದು-ಬಿಳಿದು ಭೇದವನ್ನೇನು ಮಾಡುವುದು? ಎಂಬ ವಿಚಾರದಿಂದ ಕಿಶನನು ಆ ಆಪತ್ತಿಗೆ ಎದುರಾಗುವದಕ್ಕೆ

ಮನಸ್ಸಿನಲ್ಲಿ ತತ್ಪರನಾಗುತ್ತಿರುವಾಗಲೇ ಆ ಆಪತ್ತಿಯು ನಿವಾರಣವಾದರೆ ವಿಹಿತವೆಂದು ಆತನಿಗೆ ಅನಿಸುತ್ತಿತ್ತು! ಅದರಿಂದಲೇ ಆ ಚಲಾನದಲ್ಲಿ ಆ ರಫೀ ಉದ್ದೀನನೂ ಆತನ ಸಂಗಡಿಗರಲ್ಲಿಯ ಯಾರೊಬ್ಬರೂ ಕಾಣದಿರುವುದನ್ನು ಕಂಡು, ಆ ಹೊಸ ಸಂಕಟವಾದರೂ ನಿವಾರಣವಾಯಿತೆಂದು ಅನಿಸಿ ಅವನಿಗೆ ಸಮಾಧಾನವಾಗಿತ್ತು. ಗಲ್ಲಿಗೇರಿಸುವಾಗಲೂ ಕಣ್ಣು ಕಟ್ಟಿ ಏರಿಸಿದರೆ, ಇದ್ದದ್ದರಲ್ಲಿ ತುಸ ಸಮಾಧಾನವಾಗುವಂತೆಯೇ ಕಂಟಕನ ಆಗಿನ ಸಮಾಧಾನವಾಗಿದ್ದಿತು!

ಆ ಚಲಾನದವರೆಲ್ಲ ಖಣ್ಣ ಖಣ್ಣ, ಖಳ್ಳ ಖಳ್ಳ ಎಂದು ತಮ್ಮ ಬೇಡಿಗಳ ಧ್ವನಿಗೆಯ್ಯುತ್ತ ಪ್ರತಿಯೊಬ್ಬರೂ ತಮ್ಮ ಬಗಲಲ್ಲಿ ಹಾಸಿಗೆ, ಕೈಯಲ್ಲಿ ಥಾಲೀ ಪಾಟು ಹಿಡಿದು ನಾಲ್ಕು ನಾಲ್ಕರ ಸಾಲಿನಂತೆ ಆ ಮಹಾರಾಜಾ ಉಗಿಹಡಗದ ಕಿರಿದಾದ ನಿಚ್ಚಣಿಕೆಗಳನ್ನು ಕುಗ್ಗುತ್ತ ಮುಗ್ಗುತ್ತ ಜೋಲೀಹೊಡೆಯುತ್ತ ಹೇಗಾದರೊಮ್ಮೆ ಏರಿದರು. ಆ 'ಮಹಾರಾಜಾ' ಹಡಗವು ಕೇವಲ ಕರಿನೀರಿನ ಶಿಕ್ಷೆಯಾದವರನ್ನೇ ಕರೆ-ಕಳಿಸುವದಕ್ಕೆಂದು ಕಾದಿಡಲ್ಪಟ್ಟಿತ್ತು. ಅದು ಕಳೆದ ೩೦-೪೦ ವರ್ಷಗಳಲ್ಲಿ ಇಂಥ ನೂರಾರು ಚಲಾನಗಳನ್ನು ಕರಿನೀರಿಗೊಯ್ದು ಬಿಡುತ್ತಿತ್ತು. ಅದರ ಮೇಲೆ ಕಾಲಿಟ್ಟ ಕೂಡಲೆ ತೆರೆಗಳ ಅಲೆದಾಟದ ರೂಢಿ ಯಿರದ ಹಾಗು ಹೃದಯದೊಳಗಿನ ಉದಾಸ ನಿರಾಶೆಯ ಚಲನವಲನಗಳಿಂದ ಮೊದಲೇ ಗಾಬರಿಗೊಂಡಿದ್ದ ಕಿಶನನಿಗೆ ಬವಳಿ ಬಂದಂತಾಯಿತು! ಈ ಉಗೆ ಹಡಗು ಜೀವಾವಧಿ ಕರಿನೀರಿಗೊಯ್ಯದೆ, ಮೃತ್ಯುನಗರಿಗೇ ನನ್ನನ್ನೊಯ್ಯು ತ್ತಿರುವುದೆಂದು ಆತನಿಗನಿಸಿಬಿಟ್ಟಿತು. ಒಂದು ಕಂಬಕ್ಕೆ ಆವಿತು ನಿಂತು ಕೊಂಡು, ಆತನು ತನಗುಂಟಾಗಿದ್ದ ಬವಳಿಯನ್ನು ಸಾವರಿಸಿಕೊಳ್ಳುತ್ತಿದ್ದನು. ಅಷ್ಟರಲ್ಲಿ ಶಿಪಾಯಿಯು "ಆಗೆ ಬಢೋ" ಎಂದು ತನ್ನ ದಂಡುಕದಿಂದ ಚುಚ್ಚಿ ದನು. ಆ ಕೂಡಲೆ ಆತನು ತನ್ನ ಸಾಲಿನಲ್ಲಿ ಸರಿಯಾಗಿ ನಿಂತು, ಎಲ್ಲ ಬಂದಿ ಗಳೊಡನೆ ಆ ನಾವಿನೊಳಗಿಳಿದು, ತೀರ ಕೆಳಗಿನ-ನೀರಿನೊಳಗೆ ಮುಳುಗಿದ್ದ-ಭಾಗಕ್ಕೆ ತಲುಪಿದನು; ಅಲ್ಲಿ ನೋಡುತ್ತಾನೆ, ಕಬ್ಬಿಣದ ಸಲಾಕಿಗಳಿಂದ ನಿರ್ಮಿಸಿದ್ದ ಒಂದು ಪಂಜರಕ್ಕೆ ಪಂಜರವೇ ಎದುರಿಗಿದೆ! ಆ ಜಲಯಾನದಲ್ಲಿ ಕರಿನೀರಿನ ಬಂದಿಗಳಿಗಾಗಿಯೇ ಮಾಡಲ್ಪಟ್ಟ ವಿಶಿಷ್ಟ ಅನುಕೂಲತೆಯದು! ಆ ಪಂಜರವೆಂಬವೇ ಆ ಸನ್ಮಾನನೀಯ ಅಂಡಮಾನದ ದಾರಿಕಾರರ ಕಾದಿಟ್ಟ ಕೋಣೆ Reserved cabin!

ಐವತ್ತು ಜನರು ಮಲಗಬಹುದಾಗಿದ್ದಂಥ ಆ ಪಂಜರದಲ್ಲಿ ನೂರು ನೂರಿಪ್ಪತ್ತೈದು ದಂಡಿತರನ್ನು ಲಗುಬಗೆಯಿಂದ ಸೇರಿಸಿದ್ದಾಯಿತು. ಯಾವನಿಗೆ ಎಲ್ಲಿ ಸ್ಥಳ ದೊರೆಯಿತೋ ಅಲ್ಲಿ ಅವನು ತನ್ನ ಹಾಸಿಗೆ ಚೆಲ್ಲಿ ಕೊಟ್ಟನು. ಕೆಲ

ವರು ಪಂಜಾಬೀ ಬ್ರಾಹ್ಮಣರು, ಕೆಲವರು ಬಂಗಾಲೀ ಹೊಲೆಯರು, ಕೆಲವರು ಬಲೂಚೀ ಮುಸಲ್ಮಾನರು, ಕೆಲವರು ಮದ್ರಾಸದ ಅಯ್ಯರರು, ಕೆಲವರು ಬಿಲ್ಲರು, ಕೆಲವರು ಮೀನುಗಾರರು, ಕೆಲವರು ವರಾಡದವರು, ಕೆಲವರು ಕಾರಕೂನರು, ಕೆಲವರು ಭಿಕ್ಷುಕರು, ಕೆಲವರು ಶೆಟ್ಟರು, ಕೆಲವರು ಜಮೀನದಾರರು, ಕೆಲವರು ಗಾಳಚೆಲ್ಲುವವರು, ಕೆಲವರು ಚಿಕ್ಕವರು, ಕೆಲವರು ದೊಡ್ಡವರು, ಕೆಲವರು ನಿರೋಗಿಗಳು, ಕೆಲವರು ಕ್ಷಯರೋಗದವರು, ಕೆಲವರು ಜ್ವರಪೀಡಿತರು, ಕೆಲವರು ಅತಿಸಾರವಾದವರು, ಕೆಲವರು ಆಮಾಂಶವಾದವರು ಹೀಗೆ ಎಲ್ಲರನ್ನೂ ದೂಡಿ ನುಗ್ಗಿಸಿ, ಅಲ್ಲಿ ಸಮತ್ವದಿಂದ ಒತ್ತಟ್ಟಿಗೆ ಹೊಗಿಸಲ್ಪಟ್ಟಿದ್ದರು. ಆಪತ್ತಿಯಲ್ಲೀ ಏಕಾಗಲೊಲ್ಲದು; ಆದರೆ ಸಮಾನತೆಯು ಚನ್ನಾಗಿಡಲ್ಪಟ್ಟಿತ್ತು. ಅದಕ್ಕಿಂತ ವರ್ಗಭೇದ, ಧರ್ಮಬೇದ, ಜಾತಿಭೇದ, ಸ್ಥಿತಿಭೇದ ಇವುಗಳನ್ನೆಲ್ಲ ಹೆಚ್ಚು ನಿಗರಗಟ್ಟಿವಾಗಿ ಲೆಕ್ಕಿಸದಿರಲಿಕ್ಕೆ ರಶಿಯದೊಳಗಿನ ಬೋಲ್ಶೆವ್ಹಿಕರಿಗೂ ಎದೆಯಾಗಲಿಕ್ಕಿಲ್ಲ.

ಆ ದಟ್ಟಣೆಯಲ್ಲಿ ಕಿಶನನೂ ತನ್ನ ಹಾಸಿಗೆಯನ್ನು ಹೇಗಾದರೊಮ್ಮೆ ಇಟ್ಟು ಗಕ್ಕನೆ ಕುಳಿತನು. ಆತನಿಗೆ ಮೊದಲಿನಿಂದಲೂ ಓಕರಿಕೆ ಬರುತ್ತಿತ್ತು. ಅದರಲ್ಲಿ ನಾವಿನೊಳಗಿಂದ ಹಡಗಿಗೆ ಬರುವಾಗ ಹಲವು ಜನ ಬಂದಿಗಳಿಗೆ ಹೇಗೆ ಆಗಾಗ್ಗೆ ಓಕರಿಕೆಗಳು ಬರುತ್ತಿದ್ದವೋ ಅದರಂತೆಯೇ ಇವನಿಗೂ ಬರುತ್ತಿದ್ದವು. ಅಲ್ಲಿ ಕಾರಿಕೊಳ್ಳುವ ಸ್ವತಂತ್ರ ವ್ಯವಸ್ಥೆಯೆಲ್ಲಿರಬೇಕು? ಯಾವನು ಎಲ್ಲಿ ಕುಳಿತನೋ ಅಲ್ಲಿಯೇ ಅವನು ಕಾರಿಕೊಳ್ಳತೊಡಗಿದನು ಅದರಲ್ಲಿಯೂ ನಿರ್ಲಜ್ಜ ದಂಡಿತರಲ್ಲಿ ಯಾವನು ಹೆಚ್ಚು ಆತತಾಯಿಯೋ ಅವನಿಗೇ ಹೆಚ್ಚು ಅನುಕೂಲವು. ಬಲಪೂರ್ವಕವಾಗಿ ಧಕ್ಕೆ ಕೊಟ್ಟು, ದೂಡಿ ಅವರು ಶಕ್ಯವಾದಷ್ಟು ಹೆಚ್ಚು ಕಾಲು ಚಾಚುತ್ತಿದ್ದರು. ಶಿಪಾಯರು ಬೈದರೆ ಇಲ್ಲವೆ ದಂಡುಕದಿಂದ ಹೊಡೆದರೆ ಅವರಿಗೆ ಆ ಬಗ್ಗೆ ನಾಚಿಕೆಯೇ ಅನಿಸುತ್ತಿರಲಿಲ್ಲ ರೂಡಿಯ ಮೂಲಕ ಅವರಲ್ಲಿಯ ಭೀತಿಯೂ ಕಡಿಮೆಯಾಗಿತ್ತು; ಆದರೆ ಯಾರಿಗೆ ಆ ಭೀತಿಯಿದ್ದಿತೋ ಹಾಗು ಎರಡನೆಯವರ ಗೋಣು ಮುರಿಯುವ ಬಗ್ಗೆ ಅಲ್ಪವಾದರೂ ನಾಚಿಕೆಯೆನಿಸುತ್ತಿದ್ದಿತೋ ಅಂಥ ಹೇಡಿ ಇಲ್ಲವೆ ಮನುಷ್ಯತ್ವವನ್ನು ತೀರ ಬಿಸಟಿ ಬಾರದಿರುವವರಿಗೇ ಆ ದುರ್ದೆಸೆ, ಆ ಪೋಲೀಸರ ಹಾಗು ನೀಚ ದಂಡಿತರ ಬೈಗಳು, ಹೊಲಸು ಇವುಗಳೆಲ್ಲ ಹೆಚ್ಚು ಪೀಡಿಸುವವು; ವಿಶೇಷ ತೊಂದರೆ ಕೊಡುವವು. ಕಿಶನನಿಗೂ ಆತನ ಪಕ್ಕದಲ್ಲಿದ್ದೊಬ್ಬ ಉಗ್ರದಂಡಿತನು ಒಂದೇಸವನೆ ದೂಡುತ್ತ ತಿವಿಯುತ್ತಿದ್ದನು. ಕಿಶನನಿಗೆ ಅಲ್ಲಿಯೇ ಕಾರಿಕೆಯಾಯಿತು. ಅದರ ಹನಿಗಳು ತನ್ನ ಹಾಸಿಗೆಯ ಮೇಲೆ ಸಿಡಿದವೆಂದು ಆತನು

 

ಅಭಿನ್ನವಾಗಿ ಬೈಯುತ್ತಿದ್ದನು; ಮತ್ತು ಕಿಶನನ ಎರಡನೇ ಬದಿಗಿದ್ದ ಒಬ್ಬ ದಮ್ಮಿನವನು ಒಂದೇಸವನೆ ಕೆಮ್ಮುತ್ತಿದ್ದನು; ಕಫವನ್ನು ಉಗುಳುತ್ತಿದ್ದನು. ಅಶಕ್ತತೆಯಿಂದಲೂ ದಟ್ಟಣೆಯಲ್ಲಿ ಬೇರೆ ಉಪಾಯಗಾಣದ್ದರಿಂದಲೂ ಆತನ ಉಗುಳು ಕಿಶನನ ಹಾಸಿಗೆಯ ಮೇಲೂ ಕಾಲಮೇಲೂ ಬೀಳುತ್ತಿತ್ತು. ಮೈಯನ್ನು ಹೆಚ್ಚಾಗಿ ಬಿಗಿಹಿಡಿದು, ಮೊಣಕಾಲುಗಳನ್ನು ಹೊಟ್ಟೆಯೊಳಗೆ ಸೇರಿಸಿಕೊಂಡು, ತನ್ನ ಹಾಸಿಗೆಯನ್ನು ಮೊಳಉದ್ದ ಸ್ಥಳದಲ್ಲಿಯೇ ಹರವಿ, ಉಳಿದುದನ್ನು ಹಾಗೆಯೇ ಸುರಳಿ ಸುತ್ತಿಟ್ಟು ಕಿಶನನು ಅದರ ಮೇಲೆಯೇ ಅತು ಬಿದ್ದಿದ್ದನು ಆ ದೊಡ್ಡ ಹಡಗವು ಬಂದರದಿಂದ ಹೊರಡುವ ಕರ್ಕಶ ಕೂಗು ಬಿಟ್ಟು ಬಿಟ್ಟು ಆಗಹೊಡಗಿತು. ಕಡೆಗೊಮ್ಮೆ ಭೊಂ ಭೊಂsss ಎಂದು ಗಟ್ಟಿಯಾಗಿ ಒದರಲಾರಂಭಿಸಿತು.

ಆ ಬಹು ದೊಡ್ಡ ಹಡಗದ ಘರ್ಘರ ಶಬ್ದವು ಪ್ರತ್ಯಕ್ಷ ಮೃತ್ಯುವಿನ ಘರ್ಘರದಂತೆ ಕಿಶನನನಿಗೆ ಒಂದೇಸವನೆ ತೋಂದರೆ ಕೊಡಹತ್ತಿತು. ಬಂಬಿನ ಆ ಭೊಂ-ಭೊಂsss ಧ್ವನಿಯು ಯಮನ ಯಾವುದೊಂದು ಅಚ್ಚ ಕರೀ ಬಣ್ಣದ ರಕ್ತಪಿಪಾಸು ಪ್ರಚಂಡ ನಾಯಿಯ ಭೋಂಕಾರದ ಹಾಗ ಭೀಷಣವಾಗ ತೋರಿತು. ಹೊಟ್ಟೆಯಲ್ಲಿ ಒಂದೇಸವನೆ ಓಕರಿಕೆಯ ವೇಗಗಳು, ಹೃದಯಲ್ಲಿ ಭೀಕರವಾದ ಕಲ್ಲೋಲವು, ಮಸ್ತಕದಲ್ಲಿ ಎಡಬಿಡದೆ ಬವಳಿಯು ಮತ್ತು 'ನಾನು ಜೀವಾವಧಿ ಕರಿನೀರಿಗೆ ನಡೆದವನು-ಬದುಕಿ ಉಳಿಯುವುದಾದರೆ ಇಂಥ ಹೊಲಸು-ಹೇಸಿಕೆಯ ಸ್ಥಿತಿಯಲ್ಲಿ, ಬೈಗಳು-ಶಾಪಳಿಕೆಗಳಲ್ಲಿ, ಒದೆ-ಗುದಿಕೆಗಳ ಅಸಹ್ಯ ದುರ್ದೆಸೆಯಲ್ಲಿ ಸತ್ತಂತೇ ಬದುಕಿರಬೇಕು; ಹಾಗು ಆ ದುರ್ದಶೆಯು ಎಂದಿಗಾದರೂ ಮುಗಿದೀತೆಂಬ ಲೇಶಮಾತ್ರ ಆಶೆಯೂ ಇಲ್ಲ' ಎಂಬ ಮನಸ್ಸಿನ ಅರಿವಿನಲ್ಲಿ ಕಿಶನನು ಗುಂಗಾಗಿ ಹಾಸಿಗೆಯ ಮೇಲೆ ಹಾಗೆಯೇ ಬಿದ್ದುಕೊಂಡನು; ಅಷ್ಟರಲ್ಲಿ ಆತನ ಆ ಅಸ್ತವ್ಯಸ್ತ ವಿಚಾರಗಳಲ್ಲಿಯೇ ಒಂದು ವಿಚಾರವು ಯಾರಾದರೂ ಒಮ್ಮೆಲೆ ಕೂಗಿ ಎಬ್ಬಿಸುವಂತೆ ಕೂಗುತ್ತಲೆ ಬಂದಿತು.

"ಏಕೆ? ಈ ದುರ್ದೆಸೆಗೆ ಅಂತವೇಕಿರಬಾರದು? ಜೀವಾವಧಿ ಕರಿನೀರು! ತಾನಾಗಿ ಬಿಡುಗಡೆಯಾಗದಿದ್ದರೂ ಬಿಡುಗಡೆ ಮಾಡಿಕೊಳ್ಳಲಿಕ್ಕೇ ಬರಲಿಕ್ಕಿಲ್ಲವೆಂಬದು ಹೇಗೆ? ಆ ರಫೀ ಉದ್ದೀನನು ಕರಿನೀರಿನಿಂದಲೇ ಓಡಿಬರಲಿಲ್ಲವೇನು? ನನಗೂ ಹಾಗೆ ಬರಲಿಕ್ಕಾಗದೆಂಬದು ಹೇಗೆ?"

ಆ ಗುಂಗಿನೊಳಗಿನ ಅಸ್ತವ್ಯಸ್ತವಾದ, ಆದರೆ ಆ ಬಲಿಷ್ಠವಾದ ವಿಚಾರದೊಡನೆ ಆತನ ಸಾಯಹತ್ತಿದ್ದ ಆಶೆಯು ಒಮ್ಮೆಲೆ ತಡವರಿಸಿ ಎದ್ದು ಕುಳಿ

ತಿತು. ಮರಣಾಸನ್ನ ಮಾನವನು ಆಕಸ್ಮಿಕವಾಗಿ ಪ್ರಬಲತೆಯಿಂದ ಕೈ-ಕಾಲು ಕೊಡವುವಂತೆ, ಆತನ ಆ ಆಶೆಯು ಸಹಜವಾಗಿಯೇ ಉಬ್ಬುಬ್ಬಿ ಪ್ರಬಲ ವಾಯಿತು! ಆತನು ತರ್ಕಶಾಸ್ತ್ರವನ್ನೋದಿದ್ದನು; ಮತ್ತು ಕುತರ್ಕವೆಂಬು ದಾದರೂ ಒಂದು ತರ್ಕವೇ ಇದೆ! ಶಕ್ಯಾಶಕ್ಯತೆ, ಸಾಧ್ಯ-ಸಾಧನ ಇವುಗಳ ಏನೊಂದೂ ಅಡ್ಡಿಯು ಆಶೆಯ ಮತ್ತು ಮಾತವ ವಿಕಾರಗಳಿಗೆ ಆತಂಕವ ನ್ನುಂಟು ಮಾಡುತ್ತಿರುವದಿಲ್ಲ. ಮುಳುಗುವಾಗ ಯಾವವನು ಕಡ್ಡಿಯ ಆಧಾರ ಹೊಂದುವನೋ, ಅದನ್ನು ಹೇಗೆ ಪಡೆಯದಿರುವದಿಲ್ಲವೆಂಬೇ ಪಡೆದಿರುವನೋ ಅದರಂತೆಯೇ ಆತನ ಆ ಕರಿನೀರಿನ ವಿಶಾಲವಾದ ಸಮುದ್ರದಲ್ಲಿ ಮುಳುಗು ತ್ತಿದ್ದ ಆಶೆಯು ಆ ವಿಚಾರಗಳಿಗೆ ಒಮ್ಮೆಲೆ ಅವಚಿಕೊಂಡಿತು; ಹಾಗು ಆತನ ಆ ಬೇಭಾನ ಗುಂಗಿನೊಳಗಿನ ಎಲ್ಲ ಭಾನವು ಒಟ್ಟುಗೂಡಿ ಒಂದೇ ವಾಕ್ಯವನ್ನು- 'ಕರಿನೀರಿನಿಂದ ಓಡುವದು! ಕರಿನೀರಿನಿಂದ ಓಡುವುದು' ಎಂದು ಉದ್ಘೋ ಷಿಸಹತ್ತಿತು.

ಖಳ್ಳsss ಖಳ್ಳsss ಎಂದು ಸಪ್ಪಳ ಮಾಡುತ್ತ ಉಗಿಹಡಗದ ಚಕ್ರ ಗಳೂ ರೆಕ್ಕೆಯಂತ್ರಗಳೂ ಸಮುದ್ರದ ಹೊಟ್ಟೆಯಲ್ಲಿ ಚಲಿಸಹತ್ತಿದವು. 'ಬಿಟ್ಟಿತು. ಹೊರಟಿತು; ಈ ಹಡಗವು ಕರಿನೀರಿನ ಕಡೆಗೆ ನಡೆಯಿತು!' ಎಂಬು ಪೋಲೀಸರು, ಬಂದಿಜನರು, ನಾವಾಡಿಗರು, ಅಧಿಕಾರಿಗಳು, ಸೇವಕರು, ಕಪ್ತಾನನು ಇವರೆಲ್ಲರ ಮುಖದಿಂದ ಅದೊಂದೇ ಶಬ್ದವು ಧ್ವನಿಗೊಡಹತ್ತಿತು.

ಇಷ್ಟರಲ್ಲಿ ಖಾಡ್ ಖಾಡ್ ಎಂದು ಬೂಟುಗಳನ್ನು ಬಡಿಯುತ್ತ ಇಬ್ಬರು ಬಿಳೀ ಸಾರ್ಜಂಟರು ಕಾಲು ಬೇಡಿ, ಕೈ ಬೇಡಿಗಳನ್ನು ಹಾಕಿದಂತಹ ಒಬ್ಬ ಬಂದಿಯನ್ನು ಸಕ್ತ ಪಹರೆಯಲ್ಲಿ ಕೆಳಗೆ ಇಳಿಸುತ್ತ ಆ ಪಂಜರದ ಬಾಗಿ ಲಿಗೆ ತಂದರು. ಕೂಡಲೆ ಪಂಜರದ ದ್ವಾರವು ಧಡಲ್ಲೆಂದು ತೆರೆಯಿತು; ಮತ್ತು ಆ ಪಂಜರದಲ್ಲಿ ಆ ವಿಶಿಷ್ಟ ಬಂದೋಬಸ್ತಿನಲ್ಲಿ ತಂದಿದ್ದ ಒಬ್ಬ ನಿಗಂಗಟ್ಟೆ ದಂಡಿತನೊಡನೆ ಆ ಸಾರ್ಜಂಟರು ಒಳಹೊಕ್ಕರು.

ಆ ಖಡಖಡ ಸಪ್ಪಳವನ್ನು ಕೇಳಿ ಚಮಕಿತನಾದ ಕಿಶನನು ಬಿದ್ದ ಕೊಂಡಲ್ಲಿಂದಲೇ ಸಾರ್ಜಂಟರು ಅದಾವ ದಂಡಿತ ಬಂದಿಯನ್ನು ತರುತ್ತಿರುವ ರೆಂದು ನೋಡಹತ್ತಿದನು.

"ಅವನೇ ಇವನು! ಅವನೇ ಅಲ್ಲವೆ! ಇವನಂತೂ........? ಎಲಾ, ಇವ ನಂತೂ ರಫೀಉದ್ದೀನ ಅಹಮ್ಮದನೇ." ಕಿಶನನಿಗೆ ನಾಲ್ಕೇ ಮೊಳ ದೂರ ದಲ್ಲಿ ರಫೀಉದ್ದೀನನು ಸೆಟೆದು ನಿಂತುಕೊಂಡಿದ್ದನು!

ಕಿಶನನು ತನ್ನ ಮುಷ್ಟಿಯನ್ನು ತಿರುಪುತ್ತ, ತಟ್ಟನೆ ಅರ್ಧಮರ್ಧವಾಗಿ

ಎದ್ದು ನಿಂತು ಸಿಟ್ಟಿನಿಂದಲೂ ಆಶ್ಚರ್ಯ-ವಿಸ್ಮಯಗಳಿಂದಲೂ ತನ್ನ ತುಟಿಯೊಳಗೇ 'ರಫೀಉದ್ದೀನ! ಅದೇ ಆ ರಫೀ ಉದ್ದೀನ ಆಹನ್ಮ್ರದನು!!' ಎಂದುಕೊಂಡ ಕೂಡಲೆ ಆತನ ವಿಷಯದ ಪೂರ್ವವೈರವು ಕಿಶನನ ಹೃದಯದಲ್ಲಿ ಒಮ್ಮೆಲೆ ಜಾಗ್ರತವಾಯಿತು. ಆತನಿಗೆ ಸ್ಥಳ-ಕಾಲ-ಪರಿಸ್ಥಿತಿಗಳ ವಿಸ್ಮರಣವಾಯಿತು ರಫೀ ಉದ್ದೀನನು ಹುಲಿಯಂತೆ ತನ್ನ ಮೇಲೆ ಹಾರುವನೆಂಬ ಊರ್ಮಿಯು ಕಿಶನನ ರಕ್ತದಲ್ಲುದ್ಭವಿಸಲು, ಆತನು ಹಾರಿದೊಡನೆಯೇ ತದ್ವಿರುದ್ಧವಾಗಿ ಆತನ ಮೇಲೆ ಹಾರುವದಕ್ಕೆಂದು ಕಿಶನನು ಹೊಂಚು ಹಾಕಿಕೊಂಡು ತನ್ನ ಹಾಸಿಗೆಯ ಮರೆಗೆ ಕುಳಿತುಕೊಂಡನು!!

---

೧೦ನೇ ಪ್ರಕರಣ.

ರಫೀಉದ್ದೀನನ ದೃಷ್ಟಿಯು ಕಿಶನನ ದೃಷ್ಟಿಗೆ ಕೂಡುತ್ತಲೇ ಈತನು ಈಗಲೆ ತನ್ನ ಮೇಲೆ ಆಕ್ರಮಣ ಮಾಡುವನೆಂದೆನಿಸಿ, ಕಿಶನನ ಮುಷ್ಟಿಗಳು ಹೊಡೆದಾಟದ ಆವೇಶದಿಂದ ಒಮ್ಮೆಲೆ ಹುರಿಗಟ್ಟಿದವು! ಅದೊಂದೇ ಕ್ಷಣದಲ್ಲಿ ರಫೀ ಉದ್ದೀನನು ತನ್ನನ್ನು ನೋಡಿದಂತೆ ಬೇರೆ ಬಂದಿ ಜನರ ಕಡೆಗೂ ನೋಡುತ್ತಿದ್ದಾನೆ. ಆತನು ಯಾವ ಬಗೆಯಿಂದಲೂ ಚಲವಿಚಲಿತನಾಗಿರಪೆ, ಆತನ ಸಂಪೂರ್ಣ ಲಕ್ಷ್ಯವು ತನ್ನ ಹಾಸಿಗೆಯನ್ನು ಶಕ್ಯವಾದಷ್ಟು ವಿಸ್ತಾರವಾಗಿ ಎಲ್ಲಿ ಹಾಸಬಹುದೆಂಬ ವಿವಂಚನೆಯಲ್ಲಿ ತೊಡಗಿರುವುದೆಂದು ಕಿಶನನಿಗೆ ಕಾಣಿಸಿತು. ಆ ಅವಕಾಶದಲ್ಲಿ ಕಿಶನನಿಗೆ ತುಸ ವಿಚಾರ ಮಾಡಲಿಕ್ಕೂ ಸಮಯ ದೊರೆಯಿತು. ಈತನು ತನ್ನನ್ನು ಚೆನ್ನಾಗಿ ಗುರ್ತಿಸಿರದಿದ್ದರೆ, ತಾನಾದರೂ ತನ್ನ ಗುರುತನ್ನು ಈತನಿಗೆ ಬೇಕಂತ ಮಾಡಿ ಕೊಡಬಾರದು. ತಾನು ಕಂಟಕ ಎಂಬ ಹೆಸರಿನ ಬೇರೆ ಯಾವನೊಬ್ಬ ದಂಡಿತನಿರುವೆನೆಂದೇ ಈತನಿಗೆ ಶಕ್ಯವಾದಷ್ಟು ತಿಳಿಯಗೊಡಬೇಕು. ಈತನೊಡನೆ ಗುರ್ತು ಆಗದಂತೆ ತಪ್ಪಿಸಿಕೊಳ್ಳಬೇಕು. ಹೀಗೆ ಆ ಅವಕಾಶದಲ್ಲಿ ಕಿಶನನು ನಿಶ್ಚಯಿಸಿಕೊಂಡು, ಮತ್ತೆ ತನ್ನ ಹಾಸಿಗೆಯ ಸುರಳಿಯ ಮೇಲೆ ತಲೆ ಊರಿದನು; ಹಾಗು ಕಣ್ಣುಮುಚ್ಚಿಕೊಂಡರೂ ಚಿವುಗಣ್ಣಿನಿಂದ ರಫೀಉದ್ದೀನನ ಚಲನವಲನದ ಕಡೆಗೆ ಏಕೋಪ್ರಕಾರವಾಗಿ ದೃಷ್ಟಿಯಿರಿಸಿದನು.

ರಫೀ ಉದ್ದೀನನು ತನ್ನ ಹಾಸಿಗೆಯನ್ನು ಆ ಪಂಜರದೊಳಗಿನ ಒಂದು ಮೂಲೆಯಲ್ಲಿಟ್ಟನು. ಆದರಿಂದ ಸಲಾಕೆಯ ಹೊರಮಗ್ಗಲು ಪಹರೆ ಮಾಡುತ್ತಿದ್ದ ಶಿಪಾಯರೊಡನೆ ಸಹಜವಾಗಿ ಮಾತಾಡ ದೊರೆಯುವಂತಿತ್ತು. ಆ ಬಿಳೀ ಸೋಲ್ಜರರು ಆತನನ್ನು ಅಷ್ಟು ಬಂದೋಬಸ್ತಿನಲ್ಲಿ ಆ ಪಂಜರದೊಳಗೆ

ಸೇರಿಸಿ, ಬಾಗಿಲವನ್ನಿಕ್ಕಿಕೊಂಡು ಹೊರಟು ಹೋದದ್ದನ್ನು ಕಾಣುತ್ತಲೆ, ಆ ಎಲ್ಲ ಬಂದಿ ಜನರಲ್ಲಿ ಆತನ ವರ್ಚಸ್ಸು ಹೆಚ್ಚಿತು. ದಂಡಿತರಲ್ಲಿಯ ಯಾರನ್ನು ಅಧಿಕಾರಿಗಳು ಹೀಗೆ ಅತ್ಯಂತ ಭಯಂಕರ ದಂಡಿತನೆಂದು ತಿಳಿದು, ಅವನಿಗೆ ಭಾರವಾದ ಬೇಡಿಗಳನ್ನು ತೊಡೆಸುವರೋ, ಅಂಥವನನ್ನು ದಂಡಿತರು ಅತ್ಯಂತ ತಿರಸ್ಕಾರಾರ್ಹ ಪಾಪಿಪ್ರಾಣಿಯೆಂದು ತಿಳಿಯದೆ, ಯಾವನಾದರೊಬ್ಬ ಅತ್ಯಂತ ಕರ್ತೃತ್ವವಂತ ಸಾಹಸೀ ಮನುಷ್ಯನೆಂದು ತಿಳಿಯಹತ್ತುತ್ತಾರೆ! ಆತನ ಪ್ರಸ್ಥವು ಆ ಅಪರಾಧಿಗಳಲ್ಲಿ ಬೆಳೆಯುತ್ತದೆ; ಮತ್ತು ಭಯಭೀತ ಆದರದಿಂದ ಅವರು ಆತನ ಆಜ್ಞೆಯಲ್ಲಿ ತಾವಾಗಿಯೇ ವರ್ತಿಸಹತ್ತುತ್ತಾರೆ! ದಂಡಿತರ ಆ ಪದ್ಧತಿಯ ಮೂಲಕವೇ ಅಂಥ ಆ ದಟ್ಟಣೆಯಲ್ಲೂ ರಫೀ ಉದ್ದೀನನಿಗೆ ಆ ಪಂಜರವೊಳಗಿನ ದಂಡಿತರು ಯಾವ ಅಡ್ಡಿಯನ್ನೂ ಮಾಡದೆ, ತಾವೇ ಪರಸ್ಪರು ಅಡಚಣಿಮಾಡಿಕೊಂಡು ಅವನಿಗೆ ತುಸ ವಿಸ್ತಾರವಾದ ಸ್ಥಳ ಮಾಡಿಕೊಟ್ಟರು. ಈತನು ಯಾರು? ಎಂಬ ಜಿಜ್ಞಾಸೆಯು ಪ್ರತಿಯೊಬ್ಬನಲ್ಲುಂಟಾಗಿರಲು, ಈತನು ಈ ಮೊದಲು ಕರಿನೀರಿಗೆ ಕಳಿಸಲ್ಪಟ್ಟವನು, ಅಲ್ಲಿಂದ ಓಡಿ ಬಂದಿದ್ದ ಒಬ್ಬ ದೊಡ್ಡ ನಾಮಾಂಕಿತ ಬಂದಿಯಿರುವನು, ಎಂಬ ಮಾಹಿತಿಯು ಮಾತುಮಾತಾಡುತ್ತಿರುವಾಗಲೆ ಅದನ್ನು ತಿಳಿದಿದ್ದ ಒಬ್ಬಿಬ್ಬರು ಅದು ಗೊತ್ತಿರದ ಬೇರೆ ಎಲ್ಲ ದಂಡಿತರಿಗೆ ತಿಳಿಸಿದರು. ಪ್ರತಿಯೊಬ್ಬರೂ ತನ್ನ ಕಡೆಗೆ ಭಯಯುಕ್ತ ಆದರದಿಂದ ನೋಡುತ್ತಿರುವರೆಂಬದನ್ನು ರಫೀ ಉದ್ದೀನನು ಚೆನ್ನಾಗಿ ಅರಿತಿದ್ದನು; ಮತ್ತು ಆ ದಂಡಿತರ ಯಾವನೊಬ್ಬ ಸಮ್ರಾಟ್‌ನಂತೆ ಕೆಮ್ಮುತ್ತ, ಖೀಕರಿಸುತ್ತ ಪೋಲೀಸರ ಕಣ್ಣು ತಪ್ಪಿಸಿ ಎಷ್ಟು ಮಾತಾಡುವದು ಶಕ್ಯವೋ ಅಷ್ಟು ಮಾತಾಡುತ್ತಿದ್ದನು. ಆತನ ಸಮ್ರಾಟ್‌ತನದ ವಿಶಿಷ್ಟವಾದ ಚಿಹ್ನಗಳೆಂದರೆ, ಆತನ ಕಾಲೊಳಗಿನ ಎಲ್ಲಕ್ಕೂ ಭಾರವಾದ ಬೇಡಿಗಳು! ಅವನು ಅವುಗಳನ್ನು ಆಗಾಗ್ಗೆ ಖಳಖಳ ಸಪ್ಪಳಗೆಯ್ಯುತ್ತ ಮೆರೆಯುತ್ತಿದ್ದನು!

ಆಗ ಕಿರ್ರ್ರ ಎಂದು ಕತ್ತಲೆಯು ಗವಿದಿತ್ತು. ಆ ಹಡಗವು ಕಲ್ಕತ್ತೆಯ ಬಂದರದಿಂದ ಹೊರಟು ಕರಿನೀರಿನ ಸಮುದ್ರದ ದಾರಿಯು ಹಿಡಿದು ಒಳ್ಳೇ ವೇಗದಿಂದ ಸಾಗಿತ್ತು. ಕಲಕತ್ತೆಯಿಂದ ಅಂಡಮಾನಿಗೆ ಹೋಗಲಿಕ್ಕೆ ೪-೫ ದಿನಗಳು ಬೇಕು. ಆ ಅವಧಿಯಲ್ಲಿ ಬಂದಿಗಳಿಗೆ ಅವಲಕ್ಕಿ-ಹುರಕಡ್ಲಿ ಇವುಗಳೇ ಆಹಾರವೆಂದು ದೊರೆಯುತ್ತವೆ. ಯಾಕಂದರೆ, ಆ ದಂಡಿತರಲ್ಲಿಯ ಬಹುಜನರು ಗಾಬರಿಗೊಂಡವರು, ಸಮುದ್ರ ಪ್ರವಾಸದ ಸರತಿಯು ಇಡೀ ಜನ್ಮದಲ್ಲಿ ಅದೇ ಮೊದಲನೆಯದಾಗಿತ್ತಾದ್ದರಿಂದ ಒಂದೇಸವನೆ ಕಾರಿಕೊಳ್ಳುವವರು, ತಿಂಬುಂಬುವ ಇಚ್ಛೆಯೇ ಇಲ್ಲದವರು ಆಗಿದ್ದರು; ಮತ್ತು ಬೇರೆ ಕಾರಣವೆಂದರೆ,

ಇಂಥ ನೂರು ನೂರು ಜನರ ಊಟ-ಪಾಟಗಳ ವ್ಯವಸ್ಥೆಯನ್ನೂ ಖರ್ಚನ್ನೂ ಮಾಡುವದು ಅಧಿಕಾರಿಗಳಿಗಾದರೂ ಅಷ್ಟೊಂದು ಆವಶ್ಯಕವಾಗಿರಲಿಲ್ಲ. ಆದ್ದರಿಂದ ಆ ಎಲ್ಲ ದಂಡಿತರಿಗೆ ಕಡ್ಲಿ-ಮಂಡಕ್ಕಿ-ಅವಲಕ್ಕಿಗಳನ್ನೇ ಸಾಯಂ ಕಾಲದಲ್ಲಿ ಪಂಜರದ ಬಾಗಿಲವನ್ನಿಕ್ಕುವಾಗ ಏನು ಹಂಚಿ ಕೊಟ್ಟಿದ್ದರೊ, ಕಾರಿ ಕೊಳ್ಳುತ್ತಿದ್ದ ಬಹುತರರು ಅವನ್ನು ಹಾಗೆಯೇ ಇಟ್ಟಿದ್ದರು; ಆದರೆ ರಫೀಉದ್ದೀ ನನಿಗೆ ಆ ಕರಿನೀರಿನ ಸಮುದ್ರವೆಂದರೆ, ಅವನೊಂದು ಹಳೇ ಮಿತ್ರನೇ ಆಗಿ ದ್ದನು! ರಫೀ ಉದ್ದೀನನು ಗಾಬರಿಗೊಂಡಿದ್ದಿಲ್ಲ; ಕಾರಿಕೊಳ್ಳುತ್ತಲೂ ಇರ ಲಿಲ್ಲ. ತದ್ವಿರುದ್ಧವಾಗಿ ಆತನಿಗೊಳ್ಳೇ ಹಸಿವಿಯಾಗಿತ್ತು. ಆತನ ವರ್ಚಸ್ಸು ಇನ್ನುಳಿದ ಆ ಸಾದಾ ದಂಡಿತರ ಮೇಲೆ ಮೊದಲೇ ಬಿದ್ದಿತು. ಅವರುಗಳ ಸಮ್ರಾಟನೇ ಆತನಾಗಿದ್ದನು. ಅದರಿಂದ ರಾಜನು ನಿಷ್ಪಾಪ ಭಾವನೆಯಿಂದ ಕರವನ್ನು ಎತ್ತುವಂತೆ, ಆತನು ತನ್ನ ಎಡಬಲಗಳ ದಂಡಿತರುಗಳಿಂದ ಅವ ರವರ ಖಾದ್ಯಗಳನ್ನು ಸಹಜವಾಗಿ ಪಡಕೊಂಡನು. ಒಬ್ಬಿಬ್ಬರು ತುಸ ತಕರಾರು ಮಾಡುತ್ತಲೆ, ಬೇರೆ ಯಾವುದೋ ನೆವದಿಂದ ಜಗಳವೆಬ್ಬಿಸಿ, ಬೈದು, ಅಂದು ಅವರನ್ನು ಬೆದರಿಸುವನು; ಹಾಗು ಅವರ ಖಾದ್ಯಗಳನ್ನು ಎತ್ತಿ ಹಾಕು ವನು. ಆ ಕಡ್ಲಿ-ಮಂಡಕ್ಕಿಗಳ ಹಾಗು ಅವಲಕ್ಕಿಯ ಗುಡ್ಡೆಗಳನ್ನೆಲ್ಲ ನುಂಗಿ ನೀರು ಹಿಡಿದ ನಂತರ, ರಫೀ ಉದ್ದಿನನು ಆ ಪಂಜರದ ಸಲಾಕಿಯ ಬಳಿಯಲ್ಲಿ ಯಾರದೋ ದಾರಿ ಕಾಯುತ್ತ ನಿಂತುಕೊಂಡನು. ಕೆಲ ಹೊತ್ತು ಅಲ್ಲಿಯೇ ಕುಳಿತನು. ಯಾವನೊಬ್ಬ ಬಂದಿಯು ಆತನನ್ನು ಹೀಗೇಕೆ ಮಾಡುತ್ತೀ ಎಂದು ಕೇಳಲು, 'ತುಸ ತಡೆ; ಹಿಂದಿನಿಂದ ಹೇಳುವೆನು' ಎನ್ನುವನು.

ಅಷ್ಟರಲ್ಲಿ ಆತನಿಗೆ ಆವಶ್ಯಕವಾದ ಸಂಧಿಯು ದೊರಕಿತು. ರಾತ್ರಿಯ ಒಂಬತ್ತು ಗಂಟೆಯಾಗುತ್ತಲೆ ಪಂಜರದ ಪಹರೆಯುವರು ಬದಲಾದರು. ಆ ಚಲಾನವನ್ನು ಕರಿನೀರಿಗೆ ಕರೆದೊಯ್ಯುವದಕ್ಕೆಂದು ಕರಿನೀರ ಕಡೆಯ ಕೆಲ ಪೋಲೀಸರು ಕಲಕತ್ತೆಯವರೆಗೆ ಬಂದಿರುತ್ತಾರೆ. ಅವರುಗಳಲ್ಲಿಯ ಇಬ್ಬರು ಈ ಎರಡನೇ ಸರತಿಯ ಪಹರೆಗೆ ಬಂದರು. ಆ ಕರಿನೀರ ಕಡೆಯ ಪೋಲೀ ಸರು ರಫೀಉದ್ದೀನನಿಗೆ ಚೆನ್ನಾಗಿ ಗುರ್ತಿನವರಿದ್ದರು. ಆತನು ಅವರ ಪಹ ರೆಯ ದಾರಿಯನ್ನೇ ನಿರೀಕ್ಷಿಸುತ್ತಿದ್ದನು. ಅವರು ಬಂದ ಕೂಡಲೆ ಸಲಾಕಿ ಗಳೊಳಗಿನ ಕಿಂಡಿಯಿಂದ ತನ್ನ ಕೈಯನ್ನು ತುಸ ಹೊರಗೆ ಚಾಚಿ, ರಫೀಉದ್ದೀ ನನು ಆ ಪಹರೆಯವನಿಗೆ ಗುರ್ತಿನ ಹಸ್ತಾಂದೋಲನ ಮಾಡಿದನು; ಆದರೆ ಆ ಪಹರೆಯುವನ ಕೈಯಲ್ಲಿ ಏನೋ ಹೊನ್ನು ಅನ್ನಿರಿ;-ಕಲ್ಲುಸಕ್ಕರೆ ಅನ್ನಿರಿ; ಅಂದರೆ ಚಿನ್ನದ ನಾಣ್ಯವೆನ್ನಿರಿ-ಬೆಳ್ಳಿಯ ನಾಣ್ಯವೆನ್ನಿರಿ ಬಿದ್ದಿತು. ಪಹರೆ

ಯುವನು ತಟ್ಟನೆ ಎರಡನೇ ಬದಿಯ ತುದಿಯುವರೆಗೆ ಪಹರೆ ಮಾಡುತ್ತ ನಡೆದನು; ಮತ್ತೆ ತುಸ ಶಾಂತವಾಗುತ್ತಲೆ ರಫೀಉದ್ದೀನನಿದ್ದ ಪಂಜರದ ಮೂಲೆಯಲ್ಲಿ ಚುಟ್ಟದ ಕಟ್ಟು-ಕಡ್ಡಿಯ ಪೊಟ್ಟಣಗಳು ಸಲಾಕಿಯ ಸಂದಿನೊಳಗಿಂದ ಪಟ್ಟನೆ ಬಿದ್ದವು. ಆ ಪಂಜರದ ಸಂಸ್ಥಾನದಲ್ಲಿ ರಫೀಉದ್ದೀನನ ವ್ಯವಸ್ಥೆಯು ಸರ್ವಾಧಿಕಾರಿಯಂತೆ ಚೆನ್ನಾಗಿ ಬೆಳಗಿತು. ಆ ಸರ್ವಾಧಿಕಾರದ ಉಪಯೋಗವನ್ನು ಆತನು ಕೆಲ ಕೆಲ ಪ್ರಕರಣಗಳಲ್ಲಿ ಒಳಿತಾಗಿಯೇ ಮಾಡತೊಡಗಿದನು.

ಪೆಂಢಾರಿಗಳ ಮುಖಂಡರು ಮುಂದೆ ಹೇಗೆ ಸಂಸ್ಥಾನಿಕರಾದರೋ, ಅಂತೆಯೇ ಧೈರ್ಯಸ್ಥ ದರವಡೆಗಾರರು ಯಾವಾಗ ರಾಜ್ಯಗಳನ್ನು ಸ್ಥಾಪಿಸಿ ರಾಜರಾಗುವರೋ ಆಗ ಅವರು ರಾಜರಂತೆಯೇ ವರ್ತಿಸಹತ್ತುತ್ತಾರೆ. ಅವರ ಸ್ವಂತದ ಅನ್ಯಾಯವನ್ನಷ್ಟು ಬಿಟ್ಟರೆ, ಮಿಕ್ಕವರ ನ್ಯಾಯಾನ್ಯಾಯಗಳ ನಿರ್ಣಯವನ್ನು ಅವರು ಚೆನ್ನಾಗಿ ಮಾಡುತ್ತಾರೆ. ಅವರ ಸುಲಿಗೆಯನ್ನಷ್ಟು ಬಿಟ್ಟರೆ, ಅವರು ಬೇರೆಯವರನ್ನು ತಮ್ಮ ತಮ್ಮೊಳಗೆ ಸುಲಿಯಗೊಡುವುದಿಲ್ಲ. ಅವರು ಕೊಡಬೇಕೆಂದಿದ್ದ ಪೀಡೆಯನ್ನುಳಿದರೆ, ಬೇರೆ ಪ್ರಕರಣಗಳಲ್ಲಿ ಇತರರೊಳಗಿನ ಉಪದ್ರವವನ್ನು ಕಡಿಮೆ ಮಾಡುವ ಸಲುವಾಗಿ ದಯಾಲುತ್ವದ ಉದಾರತೆಯನ್ನು ತೋರಿಸುವರು!

ರಫೀಉದ್ದೀನನೊಬ್ಬ ಕ್ರೂರ ಮನುಷ್ಯನಿದ್ದನು. ಆತನ ಕ್ರೂರತೆಯು ಜಾಗ್ರತವಾಗುವಷ್ಟು ಆತನ ಮನಸ್ಸಿನ ಇಚ್ಛೆಗಳನ್ನು ಅದಾರೂ ಮುರಿಯುವುದಿಲ್ಲವೋ ಅದುವರೆಗೆ ಆತನು ಕೇವಲ ಮನುಷ್ಯನಂತೆಯೇ ಆಚರಿಸುತ್ತಿದ್ದನು. ಆತನು ಕರಿನೀರಿಗಾಗಿ ಅಂಜಿದ್ದವರಿಗೆ ಎಷ್ಟೋ ಧೈರ್ಯಹೇಳುವನು. "ಘಬರಾವ ಮತ್! ಹತ್ತು ಸಾವಿರ ಜನರು ಅಲ್ಲಿ ೨೫-೩೦ ವರ್ಷ ಜೀವದಿಂದಿರುತ್ತಾರೆ. ಎಷ್ಟೋ ಮಂದಿ ಹೆಂಗಸರು ಹುಡುಗರ ಪಸಾರವನ್ನು ಹರಡಿ, ಸಾಂಸಾರಿಕರಾಗುತ್ತಾರೆ. ಅಲ್ಲಿ ಹೊಲಗಳಿವೆ, ದನ-ಕರುಗಳವೆ, ಮನೆ-ಮಠಗಳೆಲ್ಲವೂ ಇವೆ! ಎಲ! ನಾನೂ ನಿನ್ನಂತೆಯೇ ಮೊದಲು ಅಂಜಿದ್ದೆನು; ಆದರೆ ಅಲ್ಲಿಗೆ ಹೋದ ಮೇಲೆ ಸುಮಾರು ಸಾವಿರ ರೂಪಾಯಿ ಸಂಪಾದಿಸಿದ್ದೆನು. ಘಬರಾವ ಮತ್! ಫಿರ್ಮೇ ಘಬರಾವ ಮತ್!" ಎಂದು ಹೇಳುವನು. ಎಷ್ಟೋ ಜನರಿಗೆ ಜುಲಾಬು-ವಾಂತಿಗಳಿಂದ ಬಹಳೇ ತೊಂದರೆಯಾಗಲು, ಆತನು ಶಿಪಾಯಿಗಳೊಡನೆ ಬಹಳ ಕಾದಿ, ಡಾಕ್ಟರರೊಡನೆ ವಾದಿಸಾಡಿ ಬಂದಿ ಜನರೊಡನೆ ಹೇಗೆ ನಡಕೊಳ್ಳಬೇಕೆಂಬುದನ್ನು ಅವರಿಗೆ ತಿಳಿ ಹೇಳಿ, ಆ ನಿಯಮಗಳನ್ನೇಕೆ ಉಲ್ಲಂಘಿಸುತ್ತೀರೆಂದು ಬೆದರಿಸಿ, ಕಪ್ತಾನ ಸಾಹೇಬರಿಗೆ ಹೇಳುತ್ತೇನೆಂದು ಗದ್ದರಿಸುವನು; ಹಾಗು ತನ್ನ ನೆರಹೊರೆಯ ಬಂದಿ ಜನರಿಗೆ ಯೋಗ್ಯ ಔಷ

ಷೋಪಚಾರ ದೊರಕುವ ವ್ಯವಸ್ಥೆ ಮಾಡುತ್ತಿದ್ದನು. ತಮ್ಮ ಪಾಲಿನ ಕಡ್ಡಿ-ಮುಂಡಕ್ಕಿಗಳನ್ನು ಯಾರು ಆತನಿಗೆ ಅರ್ಪಿಸುತ್ತಿದ್ದರೋ ಅವರು ಬೇಡಬೇಡವೆಂದರೂ ಅವರಿಗೆ ಸೇದಲಿಕ್ಕೆ ಕೊರೆಚುಟ್ಟಗಳನ್ನು ಕೊಡುತ್ತಿದ್ದನು. ಆತನು ಒಳ್ಳೊಳ್ಳೇ ಪದಗಳನ್ನೂ ಭಜನವನ್ನೂ ಅನ್ನಲು, ನೆರೆಹೊರೆಯ ಬಂದಿಗಳು ತಮ್ಮ ಆ ಹೈರಾಣಾವಸ್ಥೆಯಲ್ಲೂ ಕೆಲಕಾಲ ಮೋದಗೊಳ್ಳುತ್ತಿದ್ದರು. ಆ ಪ್ರತಿಯೊಬ್ಬ ಜೀವಾವಧಿ ದಂಡಿತನಿಗೆ ಮೇಲೆ-ಕೆಳಗೆ, ಹಿಂದೆ-ಮುಂದೆ ಪಿಶಾಚಿಯಂತೆ 'ಕರಿನೀರೆಂದರೆ ಹೇಗಿದ್ದೀತು? ಅಲ್ಲಿ ಯಾವ ಯಾವ ಯಾತನೆಗಳನ್ನನುಭವಿಸಬೇಕಾಗಿದ್ದೀತು? ಅಲ್ಲಿಂದ ಪಾರಾಗುವದೇ ಶಕ್ಯವಾಗಿದ್ದರೆ, ಹೇಗೆ ಪಾರಾಗಬಂದೀತು?' ಎಂಬ ಪ್ರಶ್ನೆಯು ಆ ದುರ್ಧರ ಪ್ರಸಂಗದಲ್ಲಿ ದೂತ್ತೆಂದು ಬಂದು ನಿಲ್ಲುತ್ತಿತ್ತು. ಪ್ರತಿಯೊಬ್ಬ ಮನುಷ್ಯನಿಗೆ 'ಯಮಲೋಕವು ಹೇಗಿದ್ದೀತು?' ಎಂಬ ಪ್ರಶ್ನೆಯ ಅಸಹ್ಯ ಜಿಜ್ಞಾಸೆಯು ಹೇಗೋ, ಅದರಂತೆಯೇ 'ಮಹಾರಾಜಾ' ಹಡಗದ ಮೇಲಿನ ಜೀವಾವಧಿ ಶಿಕ್ಷೆಯಾದವನಿಗೆ 'ಕರಿನೀರು ಹೇಗಿದ್ದೀತು?' ಎಂಬ ಪ್ರಶ್ನೆಯ ಹುಚ್ಚೇ ಹಿಡಿದಿರುತ್ತದೆ! ಯಾವನಿಗೆ ಯಾರು ಭೆಟ್ಟಿಯಾಗುವರೋ, ಅವರಿಗೆ ಅದನ್ನೇ ಕೇಳಬೇಕೆಂದೆನಿಸುತ್ತದೆ. ಇಂಥ ಮನಸ್ಥಿತಿಯಲ್ಲಿ ಕರಿನೀರನ್ನು ಪ್ರತ್ಯಕ್ಷ ಅನುಭೋಗಿಸಿ ಬಂದಿದ್ದ ರಫೀ ಉದ್ದೀನನೆಂದರೆ, ಯಮಪುರಿಯ ಭೂಗೋಲ ಬರೆಯುವ ಮೂರ್ತಿಮಂತ ಗರುಡಪುರಾಣವೇ ಎಂದು ಅವರಿಗನಿಸಿತು! ಕಿಶನನ ಮನಸ್ಸಿನಲ್ಲಾದರೂ ಆತನಿಂದ ಆ ಸಂಗತಿ ತಿಳಿಯುವ ಹಾಗು ವಿಶೇಷವಾಗಿ ಆತನು ಕರಿನೀರಿನಿಂದ ಹೇಗೆ ಓಡಿ ಬಂದನೆಂಬ ರೋಮಹರ್ಷಣ ಕಥೆ ಕೇಳುವ ಇಚ್ಛೆಯುಂಟಾಗುತ್ತಿತ್ತು; ಆದರೆ ತನ್ನ ಗುರ್ತು ಹತ್ತೀತೆಂಬ ಅಂಜಿಕೆಯಿಂದ 'ಬಿಕ್ಕೆ ಬೇಡ, ನಾಯಿ ಹಿಡಿ' ಎಂಬ ಧೋರಣವನ್ನನುಸರಿಸಿ, ಆತನು ಮೊದಲಿನ ಒಂದೆರಡು ದಿನಗಳಲ್ಲಿ ರಫೀ ಉದ್ದೀನನ ಕಡೆಗೆ ಚನ್ನಾಗಿ ನೋಡುವ ಪ್ರಸಂಗಗಳನ್ನು ಕೂಡ ದಾಟಿಸಿದನು.

ಆದರೆ ರಫೀಉದ್ದೀನನು ಸುಮ್ಮನೆ ಕೂಡ್ರುವವನೋ? ಆತನ ಮೊದಲನೇ ಕಾರ್ಯಕ್ರಮವೆಂದರೆ, ಆತನಿಗೆ ಕಂಡಂಥ ವಿಶಿಷ್ಟ ಬಂದಿ ಜನಗಳ ಖಟ್ಲೆಯ ಹಾಗು ಚಾರಿತ್ರ್ಯದ ಮಾಹಿತಿ ಕೇಳಿಕೊಳ್ಳುವದಿತ್ತು. ಜೀವಾವಧಿಯ ಮೇಲೆ ಹೋಗುವ ಪ್ರತಿಯೊಬ್ಬ ದಂಡಿತನ ಕಥೆಯೆಂದರೆ, ಒಂದೊಂದು ಅದ್ಭುತ ಭಯಾನಕ ಕಾದಂಬರಿಯೇ ಆಗಿರುತ್ತಿತ್ತು! ಅಸಾಧಾರಣ ದೌಷ್ಟ್ಯ, ಸೌಷ್ಟ್ಯ, ವಿಕ್ಷಿಪ್ತ, ಸಂಕಟ, ಬಿಡುಗಡೆ, ರಕ್ತಪಾತ, ಕೊಲೆ, ಪೀಡೆ, ಸೇಡು, ಸುಖ-ದುಃಖ, ದುರ್ದೆಸೆ ಇವುಗಳ ಕೋಲಾಹಲವೇ! ಆ ಪಂಜರವೆಂ

ದರೆ, ಲೋಕದೊಳಗಿನ ಯಾವ ಗ್ರಂಥಾಲಯದಲ್ಲೂ ಸಿಗದಿರುವ ಭಾವನೆಯನ್ನು ಹೊರಹುಮ್ಮಿಸುವ ಕಾದಂಬರಿಗಳದೊಂದು ಪೆಟ್ಟಿಗೆಯಾಗಿತ್ತು! ಅಲ್ಲಲ್ಲ, ಖಲನಾಯಕರ ಜೀವಂತ ಪ್ರಾಣಿಸಂಗ್ರಹವೇ ಅದಾಗಿತ್ತು! ಉಗೆಹಡಗದೊಳಗಿನ ಮೊದಲನೇ ತರಗತಿಯ ಪ್ರಯಾಣಿಕರು ತಮ್ಮ ಕ್ಯಾಬಿನ್ನದಲ್ಲಿ ಬಿದ್ದುಕೊಂಡು ಯಾವುದೊಂದು ರೋಮಹರ್ಷಣ ಕಾದಂಬರಿಯ ಪಾನುಗಳನ್ನು ತಿರುವುತ್ತ ಗುಂಗಿನಲ್ಲಿ ಬಿದ್ದುಕೊಳ್ಳುವಂತೆ, ರಫೀಉದ್ದೀನನು ಆ ಹಡಗದೊಳಗಿನ ತೀರ ಕೊನೆಯ ತರಗತಿಯಲ್ಲಿದ್ದ ಆ ಕಬ್ಬಿಣ ಗಜಗಳ ಪಂಜರದಲ್ಲಿಯ ಪ್ರತಿಯೊಬ್ಬ ದಂಡಿತನ ರೋಮಹರ್ಷಣ ಚರಿತ್ರಗಳನ್ನು ಕೇಳಿಕೊಳ್ಳುವುದರಲ್ಲಿ ದಂಗಾಗಿ ಹೋಗಿದ್ದನು. ಕಿಶನನು ಸುಮ್ಮನೆ ಸಮುದ್ರಹತ್ತಿ ಹೈರಾಣಾಗಿ ತನ್ನ ಹಾಸಿಗೆಗೆ ಆತುಕೊಂಡುಬಿದ್ದಿದ್ದರೂ ರಫೀಉದ್ದೀನನ ಲಕ್ಷ್ಯವು ಆತನ ಕಡೆಗೂ ಒಂದೆರಡು ಸಾರೆ ಹೋಗದಿರಲಿಲ್ಲ. ತನ್ನ ಖಟ್ಲೆಯೊಳಗಿನ ಆ 'ಉಲ್ಲೂ ಕಿಶನ'ನಂತೆ ಈತನ ಮುಖಮುದ್ರೆಯಿರುವುದೆಂಬ ಆಶ್ಚರ್ಯವು ಆ ರಫೀಉದ್ದೀನನಿಗೆ ಒಂದೆರಡು ಸಾರೆ ಅನಿಸಿತು; ಆದರೆ ಮೊದಲಿನಂತಹ ಒಬ್ಬ ಮೂರ್ಖ ಉಲ್ಲೂ ಮನುಷ್ಯನು ಒಮ್ಮೆ ಆ ಭಯಂಕರ ಖಟ್ಲೆಯೊಳಗಿಂದ ನಿರ್ದೋಷಿಯೆಂದು ಬಿಡುಗಡೆಹೊಂದಿದ ಬಳಿಕ, ಮತ್ತೆ ಅಂಥ ಗೊಂದಲವೆಲ್ಲೆಂದಾದರೂ ಬಿದ್ದಾನೆಂಬ ಕಲ್ಪನೆ ಕೂಡ ಆತನಿಗೆ ಅಸಂಭಾವ್ಯವೆನಿಸಿದ್ದರಿಂದ, ರಫೀಉದ್ದೀನನ ಮನಸ್ಸಿನೊಳಗೆ ಆ ವಿಚಾರವು ಬಂದು ಹೋದರೂ ಅದು ಅಲ್ಲಿ ಸ್ಥಾಯಿಕವಾಗಿ ನಿಲ್ಲಲೇ ಇಲ್ಲ; ಆದರೂ ಅಲ್ಲಿಯ ಇತರರ ಚರಿತ್ರಗಳನ್ನು ಕೇಳು-ಕೇಳುತ್ತಿರುವಾಗ ಈತನ ಸಂಗತಿಯಾದರೂ ಏನಿದೆಯೆಂಬದನ್ನು ತಿಳಿಯುವ ಕುತೂಹಲದಿಂದ ಆತನು ಕಿಶನನ ಎಡಬಲದ ಜನರನ್ನು ಕೊನೆಗೆ ಕೇಳಿದನೇನೆಂದರೆ, "ಈ ಪ್ರಾಣಿಯಾರಪ್ಪಾ? ಅಲ್ಲಾಡದಿರುವ, ನಗದಿರುವ, ಮಾತಾಡದಿರುವ, ನಡೆಯದಿರುವಂತಹ ಈತನು ತೀರ ಹಳ್ಳಿಗನಾಗಿ ತೋರುತ್ತಿರುವನಲ್ಲವೆ? ಈತನಾರೋ ಜೇಬು ಕತ್ತರಿಸುವ ತೀರ ಸಾಮಾನ್ಯ ಕಳ್ಳನಾಗಿರಬೇಕು."

ಆ ಪ್ರಶ್ನೆಗೆ "ಛೇ! ಛೇ! ಈತನು ನಮ್ಮ ಚಲಾನದಲ್ಲಿ ಹತ್ತೆಂಟು ದಿನಗಳಿಂದಲೂ ಇರುತ್ತಿರುವನು. ಈತ 'ಬಾಬು' ಇರುವನು! ಈತನಿಗೆ ಉತ್ತಮ ಇಂಗ್ಲಿಷ, ಸಂಸ್ಕೃತ ಹಾಗು ಇನ್ನೂ ಕೆಲ ಭಾಷೆಗಳು ಅವಗತವಾಗಿವೆ. ಶಿಕ್ಷೆಯಾದ ಮೇಲೆ ಜೇಲಿನಲ್ಲಿ ಈತನಿಗೆ ಓದು-ಬರೆಯುವ ಕೆಲಸವನ್ನೇ ಕೊಟ್ಟಿದ್ದರು; ಒಳ್ಳೇ ಮನುಷ್ಯರಿರುತ್ತಾರರೀ ಈ ಬಾಬುಗಳು." ಎಂದು ಒಬ್ಬಿಬ್ಬರು ಹೇಳಿದರು.

ರಫೀ ಉದ್ದೀನನ ಉತ್ಸುಕತೆಯು ಹೆಚ್ಚಿತು. "ಇವರ ಹೆಸರೇನು?"

"ಕಂಟಕ ಬಾಬು ಎಂದು ಇವರನ್ನು ಸಾಹೇಬ ಜನರು ಕರೆಯುವರು"

"ಇವರ ಅಪರಾಧವೇನು?"

"ಕೊಲೆ"

ಈ ಸಂಗತಿಯನ್ನು ೨-೩ ಸಾರೆ ಕೇಳಿದ ಬಳಿಕ ರಫೀ ಉದ್ದೀನನಿಗೆ ಏನು ಬೇಕಾಗಿದ್ದಿತೋ ಅದೇ ದೊರೆತು ಆನಂದವಾಯಿತು. ಕಂಟಕ ಬಾಬುವನ್ನು ಸಾಹೇಬ ಜನರು ಕೂಡ ಮನ್ನಿಸುತ್ತಿದ್ದು, ಜೇಲಿನೊಳಗೆ ಆತನಿಗೆ ಬಂದಿಲೇಖಕನ ಕೆಲಸವು ಮೊದಲಿಗೇ ದೊರೆತಿದೆ; ಹಾಗು ಇವನಿಗೆ ಕೇವಲ ಕೊಲೆಗಾಗಿಯೇ ಈ ಶಿಕ್ಷೆಯಾಗಿದೆ, ಎಂಬದನ್ನು ಕೇಳುತ್ತಲೆ, ಕರಿನೀರ ಪ್ರದೇಶದ ನಿಯಮಗಳನ್ನು ಚೆನ್ನಾಗಿ ಅರಿತಿದ್ದ ಆ ರಫೀ ಉದ್ದೀನನಿಗೆ ತಟ್ಟನೆ ಹೊಳೆಯಿತೇನಂದರೆ, ಈ ಜೀವಾವಧಿ ದಂಡಿತ ಕಂಟಕನು ಕರಿನೀರಿಗೆ ತಲುಪುತ್ತಲೆ ಈತನಿಗೆ 'ಬಾಬು'ವಿನ ಮಹತ್ವದ ಕೆಲಸ ದೊರೆಯುವದು. ಮನುಷ್ಯ ಹತ್ಯೆಯ ಅಪರಾಧವು ತಾತ್ಕಾಲಿಕ ಆವೇಶದಲ್ಲಾಗುವದು. ಅದು ಅಲ್ಲಿ ಸೌಮ್ಯ ಅಪರಾಧವೆಂದು ಅನಿಸುವದು (ರಫೀ ಉದ್ದೀನನಂತಹ ಕಠಿಣಹೃದಯದ ನಿಗರಗಟ್ಟ ನೃಶಂಸ ಪಾಪಿಗಳೇ ಆ ಕರಿನೀರಲ್ಲಿ ಎಲ್ಲೆಲ್ಲೂ ಹಬ್ಬಿರುವಾಗ, ಆ ಯಮಪುರಿಯಲ್ಲಿ) ತೀರ ನ್ಯಾಯದ್ದೇ ಆಗಿತ್ತು. ಆದರಿಂದ ಅತ್ತ ಹೋದ ದಂಡಿತರಲ್ಲಿ ಯಾವನು ಇಂಥ ತಾತ್ಕಾಲಿಕ ಆವೇಶದಲ್ಲಿ ಘಟಿಸಿದ ಹತ್ಯೆಯಂಥ ಅಪರಾಧದ ಬಂದಿಯಿರುವನೋ, ಅವನು ಸುಧಾರಣೀಯ ಬಂದಿಗಳ ವರ್ಗದಲ್ಲಿ ಸಮಾವೇಶಗೊಳಿಸಲ್ಪಡುತ್ತಾನೆ; ಮತ್ತು ಆತನನ್ನು ಬಹು ಸೌಮ್ಯವಾಗಿ-ಕರಿನೀರಲ್ಲಿಯ ಕ್ರೌರ್ಯದೊಳಗಿನ ಸೌಮ್ಯತನದಿಂದ-ನಡೆಸಿಕೊಳ್ಳುತ್ತಾರೆ. ಆದರಲ್ಲಿಯೂ ಇಂಥ ಸುಧಾರಣೀಯ ವರ್ಗದೊಳಗಿನ ಬಂದಿಜನರಲ್ಲಿ ಯಾರಾದರೂ ಓದು-ಬರೆಯುವವರಿದ್ದರೆ, ಅವರಿಗೆ ಕರಿನೀರಲ್ಲಿ ಬಂದಿಜನರೊಳಗಿನ ಲೇಖಕರ ಕೆಲಸ ಸಿಗುತ್ತದೆ. ಆತನ ಕೈಯಲ್ಲಿ ಸಾಹೇಬರ ಸಾನ್ನಿಧ್ಯದ ಕೀಲಿಕೈ ದೊರೆತದ್ದರಿಂದ, ಬೇರೆ ನಿಗರಗಟ್ಟ ದರವಡೆಖೋರರೇ ಮೊದಲಾದ ಬಂದಿಜನರ ಭವಿತವ್ಯಗಳ ಹಲವು ಸೂತ್ರಗಳು ಆ ಲೇಖಕ ಬಂದಿವಾನನ ಪ್ರತಿವೃತ್ತಾಂತದ ಮೇಲಿಂದ ಚಲಿಸಲಾಗುತ್ತವೆ. ಯಾವನೊಬ್ಬನಿಗೆ ವಾರ್ಡರ ಮಾಡುವದು, ವಾರ್ಡರರಿಗೆ ಲಾಭದ ಅನುಕೂಲತೆಯ ಕೆಲಸ ಹಂಚಿಕೊಡುವದು, ಜೇಲಿನ ಬಾಗಿಲ ಬಳಿಗೆ ಬರ-ಹೋಗುವವರ ಲೆಕ್ಕ ವಿಡುವದು, ಶಿಪಾಯರ ಹಾಜರಿಯಿಡುವದು, ದೊಡ್ಡ ದೊಡ್ಡ ಕಾರಖಾನೆಗಳ ಆಯ-ವ್ಯಯಗಳನ್ನಿಡುವದು ಮುಂತಾದ ಕೆಲಸಗಳು ಈ ಲೇಖಕ ಬಂದಿಗಳ

ಕೈಯಲ್ಲೇ ಕ್ರಮಕ್ರಮವಾಗಿ ಕೊಡಲಾಗುತ್ತವೆ. ಆದರಿಂದ ನಿಗರಗಟ್ಟಿ ಬಂದಿಗಳು-ವಾರ್ಡರರು ಮೊದಲಾದವರ ಮೇಲಷ್ಟೇ ಅಲ್ಲ, ಸ್ವತಂತ್ರರಾದ ಶಿಪಾಯಿ-ಕೆಲಸಗಾರರ ಮೇಲೂ ಈ ಬಂದಿಲೇಖಕರ ವರ್ಚಸ್ಸು ಹೆಚ್ಚಾಗಿ ಬಿದ್ದಿರುತ್ತದೆ. ಅವರ ಎಲ್ಲ ಲಂಚ-ರುಸುವತ್ತಿನ ತತ್ತಿ-ಮರಿಗಳನ್ನು ಬೈಲಿ ಗೆಳೆಯುವದೂ ಇಲ್ಲವೆ ಉಬ್ಬಿಗೆ ಹಾಕುವದೂ ಇವು ಬಹುಮಟ್ಟಿಗೆ ಈ ಬಂದಿ ಲೇಖಕರ ಕೈಯಲ್ಲೇ ಇರುತ್ತವೆ. ಈ ಬಂದಿಲೇಖಕರಿಗೇ ಜೀವಾವಧಿ ಕರಿ ನೀರಿನ ದಂಡಿತರ-ಭಾಷೆಯಲ್ಲಿ 'ಬಾಬು' ಎಂದೆನ್ನುವರು.

ರಫೀ ಉದ್ದೀನನಿಗೆ ಕರಿನೀರಿನಿಂದ ಓಡಿ ಹೋದ ಘೋರ ಅಪರಾಧ ಕ್ಕಾಗಿ ಮರಳಿ ಕರಿನೀರಿನ ಶಿಕ್ಷೆಯೇ ಆಗಿ ಅತ್ತ ನಡೆದದ್ದರಿಂದ, ಅಲ್ಲಿ ಮೊದ ಮೊದಲಂತೂ ಕಠೋರ ಸ್ಥಿತಿಯಲ್ಲಿ ದುಡಿಯಬೇಕಾಗುವದೆಂಬದನ್ನು ಆತನು ಅರಿತಿದ್ದನು. ಅಂಥ ಪ್ರಸಂಗದಲ್ಲಿ ತನ್ನ ಚಲಾನದೊಳಗಿನ ಒಬ್ಬನು ಅಂಥ ಬಾಬುವಾಗತಕ್ಕವನಿದ್ದರೆ, ಆತನ ಗುರ್ತು ಪರಿಚಯವನ್ನು ಚನ್ನಾಗಿ ಮಾಡಿ ಕೊಳ್ಳುವದು ತನಗೆ ವಿಶೇಷ ಉಪಯುಕ್ತವಾದೀತೆಂಬದು ಆತನಿಗೆ ಆಗಲೆ ಗೊತ್ತಾಯಿತಾದ್ದರಿಂದ, ಆ ಕಂಟಕ ಬಾಬುವನ್ನು ಪ್ರಸನ್ನೀಕರಿಸಿಕೊಳ್ಳುವ ಸಲುವಾಗಿ ಆತನಲ್ಲಿ ಬಹು ಲಾಲಸೆಯುಂಟಾಯಿತು. ಕೂಡಲೆ ಆತನು ಕಂಟಕ ಬಾಬುವಿನೆಡೆಗೆ ಹೋಗಿ ಆತನ ಪರಿಚಯ ಮಾಡಿಕೊಂಡನು. ಆತನ ಹೆಸರು ಕಂಟಕ, ಅಪರಾಧವು ಸಾದಾ ಹತ್ಯೆ; ಆದರಿಂದ ಆತನ ಮುದ್ರೆಯು ಕಿಶನನ ಮುಖಮುದ್ರೆಯಂತೆಯೇ ಇದೆಯೆಂದು ಆತನಿಗೆ ಅನಿಸುತ್ತಿದ್ದರೂ, ಬೇರೆ ಸಂ ಗತಿಗಳೆಲ್ಲವೂ ತೀರ ಭಿನ್ನವಾದದ್ದರಿಂದ, ರಫೀ ಉದ್ದೀನನು ಹೆಚ್ಚು ನಿಸ್ಸಂದೇಹ ದಿಂದ ಕಂಕಟ ಬಾಬುವಿನೊಡನೆ ವರ್ತಿಸತೊಡಗಿದ್ದನು. ಕಂಟಕನಿಗೆ ಬೇ-ಕಾದ ಸಹಾಯ ಮಾಡಿ ರಮಿಸತೊಡಗಿದನು. ತನ್ನ ಗುರ್ತಿನ ಮತ್ತು ಋಣಾನುಬಂಧದ ಶಿಪಾಯಿಗಳ ಪಹರೆ ಬರಲು, ರಫೀ ಉದ್ದೀನನು ಕೊನೆಯ ಎರಡು ರಾತ್ರಿಗಳಲ್ಲಿ ಕಂಟಕನ ಹತ್ತರವೇ ಹೋಗಿ ಕುಳಿತು, ಆತನೊಡನೆ ಸಾಕಷ್ಟು ಹರಟಿ ಹೊಡೆದನು. ಕಂಟಕನಿಗಾದರೂ ಆತನಿಂದ ಹೆಚ್ಚು ಮಾ-ಹಿತಿ ದೊರಕಿಸಿಕೊಳ್ಳಬೇಕಾಗಿತ್ತು; ಅಲ್ಲಲ್ಲ, ಆತನೊಡನೆ ಸಂಧಾನ ಕಟ್ಟಲು ಸಾಧಿಸಿದರೆ, ಕರಿನೀರಿನಿಂದ ಓಡಿ ಬರುವ ಯಾವುದೊಂದು ಮಾರ್ಗವು ತನಗೂ ದೊರೆಯಲಿಕ್ಕಿಲ್ಲವೆಂದು ಹೇಗೆ ಹೇಳಬೇಕು? ಎಂಬ ನಿಕಟ ಧೈರ್ಯದ ಆಶೆ ಯು ಕಂಟಕನನ್ನು ಆವರಿಸಿತು! ಗಾರುಡಿಗನು ನಾಗರ ಹಾವಿನೊಡನೆ ಹೇಗೋ, ಹಾಗೆ ಕಂಟಕನು ರಫೀ ಉದ್ದೀನನೊಡನೆ ಆತನ ವಿಷಾರಿ ದಂಷ್ಟ್ರ ಅಳವಿನ ಹೊರಗೇ ಶಕ್ಯವಾದಷ್ಟು ನಿಂತುಕೊಂಡು, ಆಡಲಿಕ್ಕೆ ಶಕ್ಯವಾದಷ್ಟು ಆಟವನ್ನು

ಆಡ ಹತ್ತಿದನು. ಆತನ ಬಗ್ಗೆ ತನಗೆ ಏನೂ ಮಾಹಿತಿ ಇಲ್ಲೆಂಬದನ್ನು ರಫೀ ಉದ್ದೀನನ ಮನಸ್ಸಿನ ಮೇಲೆ ಪೂರ್ಣ ಬಿಂಬಿಸಲಿಕ್ಕೆಂದು ಒಂದು ದಿನ ರಫೀ ಉದ್ದೀನನು ತನ್ನ ಬಳಿಗೆ ಹರಟೆ ಹೊಡೆಯಲಿಕ್ಕೆ ಬಂದಾಗ ಕಂಟಕನು: "ಆದರೆ ಮಿಯ್ಯಾ, ನಿಮ್ಮಂತಹ ಧೈರ್ಯಸ್ಥ ಚತುರ ಪುರುಷನು ಕರಿನೀರಿನಿಂದ ಓಡಿಬರುವ ದುಷ್ಕರವಾದಂಥ ಮೋಸದ ಸಾಹಸದಲ್ಲಿ ಅಲ್ಲಿ ಯಶ ದೊರಕಿಸುತ್ತಾನೆ; ಮತ್ತು ಇಲ್ಲಿ ಸ್ವದೇಶಕ್ಕೆ ಸುಖರೂಪವಾಗಿ ತಲುಪಿದ ಬಳಿಕ ಹಿಂದೀ ಪೋಲೀಸರ ಜಾಲದಲ್ಲಿ ಮತ್ತೆ ಬಲಿಬೀಳದಂತಹ ಯಾವ ತೀರ ಸಹಜವಾದ ಚಾತುರ್ಯವನ್ನು ಮಾಡಲಿಕ್ಕೆ ಆತನು ತಪ್ಪಿ, ಅವರ ಜಾಲದಲ್ಲಿ ಇಷ್ಟು ದೃಢತರವಾಗಿ ಮತ್ತೆ ಮೋಸ ಹೋಗುತ್ತಾನೆ. ಇದು ಆದದ್ದಾದರೂ ಹೇಗೆ? ಕಳವು, ದರವಡೆ ಮುಂತಾದ ದುಷ್ಕೃತ್ಯಗಳ ಸಲುವಾಗಿ ಒಮ್ಮೆ ಭಯಂಕರ ಪೆಟ್ಟು ತಿಂದಿರಲಿಕ್ಕೆ, ನೀವು ಹಿಂದುಸ್ತಾನಕ್ಕೆ ಓಡಿಬಂದ ಮೇಲೆ ಮತ್ತೆ ಆ ಸಂಕಟಮಯ ಉಪದ್ವ್ಯಾಪಗಳಲ್ಲಿ ಬೀಳದಿದ್ದರೆ ವಿಹಿತ ವಾಗುತ್ತಿದ್ದಿಲ್ಲವೆ? ಕರಿನೀರಿನಿಂದ ಓಡಿ ಬರುವಾಗ ನಿಮಗೆ ಯಾವ ಜೀವದ ಮೇಲಿನ ಸಂಕಟಗಳನ್ನನುಭವಿಸಬೇಕಾಯಿತೋ ಅವೆಲ್ಲ ಈ ತಪ್ಪಿನ ಮೂಲಕ ಸಂಪೂರ್ಣ ನಿಷ್ಫಲವಾದದ್ದಲ್ಲದೆ, ಮತ್ತೆ ಅದೇ ದುರ್ದೆಸೆಯನ್ನೇ ಭೋಗಿಸ ಹೋಗಬೇಕಾದ ಬಗ್ಗೆ ನನಗೆ ಹೆಚ್ಚಾಗಿ ಕೆಡಕೆನಿಸುತ್ತದೆ; ಅಂತೆಯೇ ನನ್ನಿಂದ ಇದನ್ನು ಕೇಳದಿರಲಾಗಲಿಲ್ಲ!"

"ಕಂಟಕಬಾಬೂ, ವೈ ಕ್ಯಾ ಕಹೂ! ವೈನೆ ಸಚ ಮೂಚ ಬಡೆ ಪ್ರಾಮಾಣಿಕ ಪಣಸೆ ಆಪನಾ ಜೀವನ ಚಲಾನೇಕಾ ನಿಶ್ಚಯ ಕಿಯಾ ಥಾ! ಕರಿನೀರಿನಿಂದ ಹಿಂದುಸ್ತಾನಕ್ಕೆ ಓಡಿ ಬರುತ್ತಲೆ ನಾನು ಫಕೀರನೇ ಆದೆನು! ಹಿಂದೂ ಸಾಧುಗಳಲ್ಲಿಯೂ ನನ್ನ ಭಕ್ತಿಯಿದ್ದುದರಿಂದ, ನಾನು ಯೋಗಾಭ್ಯಾಸಕ್ಕೆ ಪ್ರಾರಂಭಿಸಿದೆನು ಕಂಟಕಬಾಬೂ, ಇಲ್ಲಿದ್ದ ನೀವೆಲ್ಲರೂ ನಿಜವೆಂದು ತಿಳಿಯಿರಿ-ತಿಳಿಯದಿರಿ; ಆದರೆ ನಾನು ದೇವರ ಆಣೆ ಮಾಡಿ ಹೇಳುವುದೇನಂದರೆ, ಮೊದಲು ನಾನು ಕಳವು, ದರವಡೆ, ಕೊಲೆ, ಉಪದ್ರವಾದಿಗಳನ್ನೇನು ಮಾಡಿದೇನೋ ಮಾಡಿದೆ; ಆದರೆ ಕರಿನೀರಿನಿಂದ ಬಂದ ಮೇಲೆ ನಾನು ಯಾತರದಾದರೂ ಲೋಭ ಧರಿಸಿದ್ದರೆ, ಅದು ಕೇವಲ ಭಕ್ತಿಯ ಬಗ್ಗೆ! ಯೋಗದ ಬಗ್ಗೆಯೂ ಅದು ಇತ್ತು! ಭೋಗವು ನನಗೆ ರುಚಿಸದಂತಾಯಿತು; ಮತ್ತು ನಿಜವಾಗಿ ಹೇಳಬೇಕೆಂದರೆ, ನನಗೆ ಪ್ರಸ್ತುತದಲ್ಲಿ ಪ್ರಾಪ್ತವಾದ ಸಂಕಟವು ನನ್ನ ಯಾವ ಹೊಸ ದುಷ್ಕೃತ್ಯಗಳದಾಗಿರದೆ, ಧರ್ಮದಿಂದಲೂ ನ್ಯಾಯದಿಂದಲೂ ವರ್ತಿಸುವ ಬಗ್ಗೆ ನಿಶ್ಚಯ ಮಾಡಿದ ನಂತರ ಯಾವ

ಒಂದು ಸತ್ಕೃತ್ಯವನ್ನು ಮಾಡಿಸಿಕೊಳ್ಳಬೇಕೆಂದು ದೇವರ ಮನಸ್ಸಿಗೆ ಬಂದಿತೋ ಅದೇ ಆ ಸತ್ಕೃತ್ಯದ ಮೂಲಕವೇ!'' ಎಂದಂದು ರಫೀಉದ್ದೀನನು ಗಂಭೀರ ಯೋಚನೆಯಲ್ಲಿ ನಿಮಗ್ನನಾದವನಂತೆ ಸುಮ್ಮನೆ ಕುಳಿತನು.

ಅದನ್ನು ಕೇಳಿದ ಹಲವು ಜನ ದಂಡಿತರ ಬಾಯಿಂದ ಒಮ್ಮೆಲೆ ಪ್ರಶ್ನೆ ಹೊರಬಿದ್ದಿತೇನಂದರೆ, ``ಹೇಗೋ? ಬೋಲೋನಾ ಮಿಯ್ಯಾಜಿ, ಕಹೋ ಕ್ಯಾ ಬಾತ ಹುಈ? ಅದಾವ ಸತ್ಕೃತ್ಯವು?''

ತನ್ನ ಪೂರ್ಣ ವೃತ್ತನನ್ನರಿತಿದ್ದ ಯಾವ ಬಂದಿಯೂ ಇಲ್ಲೆಂದು ನಿಶ್ಚಿಂತನಾಗಿದ್ದ ರಫೀಉದ್ದೀನನು ಯಾವನೊಬ್ಬ ಧರ್ಮವೀರನ ಆವೇಶದಿಂದ 'ಕ್ಯಾ ಕಹೂ ಬಾಬುಜಿ? ಅಚ್ಛಾ, ಆಪನೆ ಗವಾಲಿಯಾರಕಾ ನಗರ ದೇಖಾ ಹೈ?' ಎಂದು ಕೇಳಿದನು

``ಇಲ್ಲ'' ಎಂದು ಕಂಟಕನು ಹೇಳಿದನು. ಅದರಿಂದ ಗ್ವಾಲ್ಹೇರದ ಬಗ್ಗೆ ಬಾಯಿಗೆ ಬಂದಂತೆ ಬೇಕಾದ್ದನ್ನು ಹೇಳಲಿಕ್ಕೆ ಅಡ್ಡಿಯಿಲ್ಲೆಂದು ನಿರ್ಧರಿಸಿ, ರಫೀಉದ್ದೀನನು ಹೇಳಹತ್ತಿದನು: ``ಗ್ವಾಲ್ಹೇರದೊಳಗಿನ ಒಬ್ಬ ದೊಡ್ಡ ಸರದಾರನಿಗೆ ಒಬ್ಬ ಅತ್ಯಂತ ಚಲುವೆಯಾದ ಮಗಳಿದ್ದಳು. ಅವಳ ಹೆಸರು ಮಾಲತಿ ಅವಳು ಎಷ್ಟು ಕೆಂಪಾಗಿದ್ದಳೋ, ಸೌಂದರ್ಯಶಾಲನಿಯಾಗಿದ್ದಳೋ ಅಷ್ಟೇ ದೇವರಲ್ಲಿ ವಿಶ್ವಾಸವುಳ್ಳವಳಿದ್ದಳು ನಾನು ಯೋಗದ ಅಭ್ಯಾಸವನ್ನು ಹಿಂದೂ ಸಾಧುವಿನ ಬಳಿಯಲ್ಲಿ ಮಾಡುತ್ತಿರುವಾಗ ಭಗವೀ ಕಫನಿಯನ್ನು ಧರಿಸಿಕೊಂಡು ಗುಡಿಯಲ್ಲಿ ಕುಳಿತಿರುತ್ತಿದ್ದೆನು ಅದೇ ಗುಡಿಗೆ ಅವಳು ಪೂಜೆಗೆಂದು ಬರುತ್ತಿದ್ದಳು ನನ್ನನ್ನು ನೋಡ ನೋಡುತ್ತಲೆ ಅವಳು ನನ ಸಾಧುತ್ವಕ್ಕನ್ನಿರಿ ಇಲ್ಲವೆ ರೂಪಕ್ಕನ್ನಿರಿ ಒಳ್ಳೇ ಭಕ್ತಿಯುಂತಳಾದಳು. ಅವಳು ಪೂಜೆಗಾಗಿ ತಂದಿದ್ದ ಹೂಗಳನ್ನು ನನಗೇ ಏರಿಸಬೇಕು; ನೈವೇದ್ಯವನ್ನು ನನಗೇ ತೋರಿಸಬೇಕು ನನ್ನ ಭಜನಕ್ಕೆಂದು ರಾತ್ರಿಯಾಗುವವರೆಗೂ ಕೂಡ್ರಬೇಕು. ಹೀಗೆ ಒಂದು ದಿನ ಕುಳಿತಿರಲು, ಹೆಚ್ಚಾಗಿ ರಾತ್ರಿಯಾಯಿತು. ಕಡೆಗೆ ``ಮನೆಗೆ ಹೋಗಲಿಕ್ಕೆ ಭೀತಿಯಾಗುತ್ತಿದೆ. ತಾವು ನಮ್ಮ ಮನೆಯುವರೆಗೆ ಬಂದು ನನ್ನನ್ನು ಮನೆಗೆ ತಲುಪಿಸಿರಿ.'' ಎಂದು ದುಂಬಾಲಬಿದ್ದು ಹೇಳಿದಳು. ನನ್ನ ಗುರುಗಳನ್ನು ಕೇಳಿ, ನಿಸ್ಸಂಕೋಚತನದಿಂದ ನಾನು ಅವಳನ್ನು ಕಳಿಸ ಹೋದೆನು. ಗುಡಿಯು ಊರಿಂದ ದೂರದಲ್ಲಿತ್ತು. ನಡುವೆ ಒಂದು ಮಾವಿನ ತೋಪು. ನಿರ್ಜನ ಪ್ರದೇಶ. ಅಲ್ಲಿಗೆ ಹೋಗುತ್ತಲೆ ಒಮ್ಮೆಲೆ ಗಾಬರಿಗೊಂಡವಳಂತಾಗಿ ಮಾಲತಿಯು ನನ್ನನ್ನು ತಬ್ಬಿಕೊಂಡಳು. ನನಗಂತೂ ಸ್ತ್ರೀಸ್ಪರ್ಶವು ವರ್ಜ್ಯವಾಗಿತ್ತು! ಆದರೆ ಮಾಡಲೇನು? ಅವಳು ಒಮ್ಮೆಲೆ ಕೊರಳಿಗೇ ಅಂಟಿ

ಕೊಂಡಿದ್ದಳು! ಆಗ ಅವಳು ಗದಗದನೆ ನಡುಗುತ್ತ "ಒಬ್ಬ ಮನುಷ್ಯನು ನನ್ನಲ್ಲಿ ಪಾಪದೃಷ್ಟಿಯನ್ನಿಟ್ಟು ಎಷ್ಟೋ ದಿನಗಳಿಂದ ಕಾಡುತ್ತಿದ್ದಾನೆ. ನಾನು ನಿಮ್ಮನ್ನು ದೇವರೆಂದು ತಿಳಿದು ಭಜಿಸುತ್ತಿರುತ್ತೇನೆ; ನಿಮ್ಮ ಬಳಿಗೆ ಬರ-ಹೋಗುತ್ತೇನೆ ಇದು ಆತನಿಗೆ ಅಸಹ್ಯವಾಗಿ, ನಿನ್ನೆಯ ದಿನ ಆತನು ಇಲ್ಲಿಯೇ ನನ್ನನ್ನು ಅಡ್ಡಗಟ್ಟಿದ್ದನು; ಮತ್ತು ಕೊಲೆಗೆಯ್ಯುವ ಧಮಕಿ ಕೊಟ್ಟಿದ್ದನು. ಅದಕ್ಕಾಗಿಯೇ ನಾನಿಂದು ನಿಮ್ಮನ್ನು ಜೊತೆಗೆ ಕರೆತಂದಿರುತ್ತೇನೆ! ಈಗ ಇಲ್ಲಿ ನನಗೆ ಆತನ ಸದ್ದು ಕೇಳಿಸಿದಂತಾಯಿತು." ಎಂದಳು.

ಅದಕ್ಕೆ ನಾನು "ಆತನಾರು? ಆತನ ಹೆಸರೇನು?" ಎಂದು ಕೇಳಲಾಗಿ "ಕಿಶನ! ಆ ಪರಮ ನೀಚನ ಹೆಸರು ಕಿಶನ!!" ಎಂದು ಅವಳು ಹೇಳಿದಳು.

"ಆ ಹೆಸರು ಕೇಳಿದೊಡನೆಯೆ ನನ್ನ ಮೈಮೇಲೂ ರೋಮಾಂಚಗಳೆದ್ದವು; ಯಾಕಂದರೆ, ಆ ವ್ಯಕ್ತಿಯು ನನ್ನ ಪರಿಚಯದ್ದಿತ್ತು! ನಾನು ಕರಿನೀರಿಗೆ ಮುಂಚೆ ಹೋಗುವ ಪೂರ್ವದಲ್ಲಿ ನಾವು ಯಾವ ದರವಡೆ ಹಾಕುತ್ತಿದ್ದೆವೋ, ಆ ತಂಡದಲ್ಲಿಯೇ ಆ ಕಿಶನನೆಂಬ ಪರಮ ನೀಚ ದರವಡೆಗಾರನೂ ಸಮಾವೇಶವಾಗಿದ್ದನು. ಕರಿನೀರಿನಿಂದ ಓಡಿ ಬಂದ ಬಳಿಕ ಆತನು ನನಗೆ ಗ್ವಾಲ್ಹೇರದಲ್ಲಿ ಗುಪ್ತವಾಗಿ ಭೆಟ್ಟಿಯಾದನು; ಮತ್ತು ಆತನ ಆ ಪಾಪೀ ದುಷ್ಕೃತ್ಯದಲ್ಲಿ ನಾನೂ ಭಾಗಿದಾರನಾಗಬೇಕೆಂದು ಅವನು ಹೇಳಿದನು; ಆದರೆ ನಾನು ಆತನಿಗೆ "ನಾನು ನನ್ನ ಕೈಗಳನ್ನಷ್ಟೇ ಅಲ್ಲ, ಮನಸ್ಸನ್ನೂ ಕೂಡ ಸರ್ವ ಪಾಪಗಳಿಂದ ತೊರೆದು ದೇವರ ಸೇವೆಗೆ ಅರ್ಪಿಸಿರುತ್ತೇನೆ. ಇನ್ನು ನೀನಾದರೂ ಹಾಗೆಯೇ ಮಾಡು!" ಎಂದು ಉಪದೇಶಿಸಲು, ಆತನು ಶಾಂತನಾಗದೆ, ಸಿಟ್ಟಿಗೆದ್ದು ನನ್ನನ್ನು ಮನಸೋಕ್ತವಾಗಿ ಹಳಿದು, ನನ್ನ ಸೇಡು ತೀರಿಸಿಕೊಳ್ಳುವ ಧಮಕಿ ಕೊಟ್ಟನು. ಅದೆಲ್ಲ ಸಂಗತಿಯ ಮೂಲಕ ನಾನು ಕಿಶನನ್ನು ಚನ್ನಾಗಿಯೇ ಅರಿತಿದ್ದೆನು. ಕಿಶನನೊಬ್ಬ ಅಧಮನಿದ್ದನು; ಕಿಶನನೊಬ್ಬ ನಿರ್ದಯನಾದ ಮೋಸಗಾರನಿದ್ದನು; ಕಿಶನನು ಭಯಂಕರ ದುರಾಚಾರಿಯಾಗಿದ್ದನು ಕೃತಿಯಿಂದ ಆತನು ದುಷ್ಟನಾಗಿದ್ದರೂ, ಬುದ್ಧಿಯಿಂದ ಕೇವಲ ಕತ್ತೆಯಾಗಿದ್ದನು! ಕಂಟಕ ಬಾಬುಜೀ, ಆಪ ಜೋ ಕ್ಯಾಮಾ ಕರೋಗೇ ತೋ ಕೇವಲ ಹಸೋಕೀ ಏಕ ಬಾತ ಬತಲಾವೂಂಗಾ! ಹೇಳಲೋ? ಆ ಬಗ್ಗೆ ಈಗ ನನಗೆ ನಗೆ ಬರುತ್ತಿದೆ! ಆದರೆ ನಾನು ಈ ಪಂಜರದಲ್ಲಿ ಸಿಕ್ಕು ಬಿದ್ದ ನಂತರ ಮೊದಮೊದಲು ಯಾವಾಗ ನಿಮ್ಮನ್ನು ನೋಡುತ್ತಿದ್ದೆನೋ, ಆಗಾಗ ಆ ಕಿಶನನ ಮುಖಮುದ್ರೆಯಂತೆಯೇ ನನಗೆ ನಿಮ್ಮ ಮುಖವು ತೋರಹತ್ತಿತ್ತು!"

ರಫೀ ಉದ್ದೀನನು ನಗಹತ್ತಿದನು; ಬಂದೀ ಜನರೂ ನಕ್ಕರು. ಅದೇ ಕಾಲಕ್ಕೆ ಕಂಟಕನ ಎದೆ ಧಸ್ಸೆನ್ನದಿರಲಿಲ್ಲ! ಈ ಕಪಟಿಯು ಹೀಗೆ ಮರೆಯಲ್ಲಿ ನಿಂತು ಹಳಿಯುವದರಲ್ಲಿ ನಾನೇ ಕಿಶನನಹುದೋ ಅಲ್ಲವೊ ಎಂಬುದನ್ನು ತಿಳಕೊಳ್ಳುವ ಹೇತು ಬೇರೆ ಇರಲಿಕ್ಕಿಲ್ಲವೆ? ಎಂದು ಕಂಟಕನಿಗೆ ಸಂದೇಹವುಂಟಾಯಿತು; ಮತ್ತು ಆತನ ಉದ್ದೇಶವು ಅದೇ ಆಗಿದ್ದರೆ ಅದು ನಿಷ್ಫಲವಾಗಬೇಕೆಂದು ರಫೀಉದ್ದೀನನು ಕಿಶನನಿಗೆ ಬೈದ ಬೈಗಳುಗಳ ಗುಪ್ತ ತಿರಸ್ಕಾರವನ್ನೂ ಆತನ ಬಾಯಲ್ಲಿ ನಡೆದಿದ್ದ ಮಾಲತಿಯ ಹೆಸರಿನ ಉದ್ಗಾರವನ್ನೂ ಕೇಳುತ್ತಲೆ ಅನಿವಾರ ಕೋಪಹಾಸ ತಿರಸ್ಕಾರವೂ ಆ ಶಂಕೆಯೂ ಇವೆಲ್ಲ ವಿಚಾರಗಳ ಕಲಕಲವನ್ನು ಒಳಗಿಂದೊಳಗೇ ಒತ್ತಿಕೊಂಡು, ಕಂಟಕನು ರಫೀ ಉದ್ದೀನನ ಹಾಗು ಆ ಮಿಕ್ಕ ಬಂದಿಗಳ ನಗೆಯಲ್ಲಿ ತನ್ನ ನಗೆಯನ್ನು ಬೆರೆಸುತ್ತ:-"ಠೀಕ ಮಿಯ್ಯಾಜೀ, ಠೀಕ! ಆ ಕಿಶನನೊಬ್ಬ ಕೇವಲ ಕತ್ತೆಯಿದ್ದಾನೆನ್ನುವಿರಿ; ಮತ್ತು ನನ್ನ ಮುಖಚರ್ಯೆಯೂ ಆತನಂತೆಯೇ ನಿಮಗೆ ಕಂಡಿತೆನ್ನುವಿರಿ; ಅಂದರೆ ನನ್ನ ಮುಸುಡೆಯು ಕತ್ತೆಯ ಮೋರೆಯಂತಿರುವದೆಂದು ನಿಮ್ಮ ಅಂಬೋಣವಷ್ಟೆ?"

ನಗುತ್ತ, ಆದರೆ ಕೈ ಜೋಡಿಸಿ ಕ್ಷಮೆಯಾಚಿಸುತ್ತ ರಫೀ ಉದ್ದೀನನು: "ಇದೇನು ಬಾಬೂಜೀ? ಕಿಶನನ ಬುದ್ಧಿ ಕತ್ತೆಯಂತಿತ್ತು; ಆದರೆ ಮುಖಚರ್ಯೆಯು ವಿಹಿತವಾಗಿದ್ದಿತೆಂಬದನ್ನು ನಿಮ್ಮ ಮುಖಚರ್ಯೆಯೊಡನೆ ಹೋಲಿಸಿ ಹೇಳತಕ್ಕವನಿದ್ದೆನು! ಸದಾಚಾರಿಗಳಾದ ಈ ಕಂಟಕ ಬಾಬುಗಳೆತ್ತ; ಮತ್ತು ಆ ಮೋಸಗಾರ ನೀಚ ದುರಾಚಾರ ರತ ಕಿಶನನೆತ್ತ?"

"ಅಚ್ಛಾ! ಆಗೆ ಕ್ಯಾ ಹುವಾ?" ಕಥೆ ಕೇಳುವಲ್ಲಿ ದಂಗಾಗಿ ಹೋಗಿದ್ದ ಬಂದಿಗಳಲ್ಲೊಬ್ಬನು ಅವಸರಪಡಿಸಹತ್ತಿದನು.

"ಆಗೇ ಕ್ಯಾ ಕಹೂ ಭಾಈ! ನಾನು ಮಾಲತಿಗೆ ಹೇಳ-ಹೇಳುತ್ತಿರುವಷ್ಟರಲ್ಲಿ ಮಾವಿನ ತೋಪಿನೊಳಗಿಂದ ಕಲ್ಲ ಮೇಲೆ ಕಲ್ಲುಗಳು 'ಭೊಂ-ಭೊಂ' ಎಂದು ಬರಹತ್ತಿದವು. ಆ ಅಬಲೆಯ ರಕ್ಷಣವೇ ಧರ್ಮವೆಂದು ತಿಳಿದು ಒಂದು ಕೈಯಿಂದ ಅವಳನ್ನು ಬಿಗಿಯಾಗಿ ಅಪ್ಪಿಕೊಂಡು ಹಿಡಿದು, ಇನ್ನೊಂದು ಕೈಯಿಂದ ಕಲ್ಲು ಬರುತ್ತಿರುವ ಕಡೆಗೆ ನಾನೂ ಕಲ್ಲು ಬೀಸುತ್ತ, ಶಕ್ಯವಾದಷ್ಟು ತ್ವರೆಯಿಂದ ಊರಿಗೆ ತಲುಪಿದೆನು. ಅವಳ ಮನೆ ಬರುತ್ತಲೆ ಅವಳು ಕಳವಳದಿಂದ:--'ನನ್ನ ಮೇಲುಪ್ಪರಿಗೆಯ ಕೋಣೆಯ ಕೀಲಿಕೈ ನನ್ನ ಹತ್ತರವೇ ಇದೆ. ನನ್ನ ಮೇಲುಪ್ಪರಿಗೆಯು ಸ್ವತಂತ್ರವಾಗಿದೆ. ನೀವು ಮೇಲೆ ಬಂದು ನನ್ನ ಹೃದಯದೊಳಗಿನ ಭೀತಿಯ ಧಡಧಡವು ಕಟ್ಟಾಗುವ ವರೆಗಾದರೂ ನನ್ನೊಡನೆ ಇರ್ರಿ.' ಎನ್ನಲು, ಆಗ ನಾನು ಆಕೆಯ ಅಂಬೋಣವನ್ನು ಇನ್

ಕಾರಿಸುವದೆಂದರೆ, ಅಬಲೆಯೊಡನೆ ಕಠೋರತನದಿಂದ ವರ್ತಿಸುವ ಸಾಹಸ ಗೈಯುವದೇ ಆಗಿತ್ತು. ನಾನು ಆಕೆಯ ಉಪ್ಪರಿಗೆಯನ್ನೇರಿದೆನು. ಒಳಗೆ ಕಾಲಿಟ್ಟಕೂಡಲೆ ಅವಳು ಒಳಗಿನಿಂದ ಚಿಲಕ ಹಾಕಿ ಕೀಲಿ ಕೂಡ ಹಾಕಿ ಬಿಟ್ಟಳು! ಅಲ್ಲಿ ನೋಡುತ್ತೇನೆ, ಸುತ್ತಲೂ ಶೃಂಗಾರಮಯ! ಸುಗಂಧವೇ ಸುಗಂಧ! ಸರದಾರೀ ಸೌಂದರ್ಯದ ಠೀವು! ನಿಲವುಗನ್ನಡಿ, ಚಿತ್ರ, ಪಲ್ಲಂಗ, ಪುಷ್ಪಪಾತ್ರಗಳು! ಅದು ಇಂಧ್ರಭುವನವಾಗಿತ್ತು! ಮತ್ತು ಅವುಗಳ ಮಧ್ಯ ದಲ್ಲಿ ಆ ಗೌರವರ್ಣದ ಮಾಲತಿಯು. ಅವಳು ಕೇವಲ ಅಪ್ಸರೆಯಂತಿದ್ದಳು! ಆಕೆಯು ಮತ್ತೆ ನನ್ನನ್ನು ಬಿಗಿಯಾಗಿ ಅಪ್ಪಿಕೊಂಡಳು! ಕಾಮೋನ್ಮತ್ತ ಪುರು ಷರು ಸ್ತ್ರೀಯರ ಮೇಲೆ ಮಾಡಿದ ಬಲ್ಕಾರಗಳ ಸಂಗತಿಯನ್ನು ನೀವು ಹೆಚ್ಚಾಗಿ ಕೇಳಿಕೊಂಡಿರಬಹುದು; ಆದರೆ ಕಾಮಲಂಪಟ ಸ್ತ್ರೀಯಳು-ಮಾಲತಿಯು- ನನ್ನಂತಹನೊಬ್ಬ ಸಾಧುಪುರುಷನ ಮೇಲೆ ಬಲಾತ್ಕಾರ ಮಾಡಿದ ಇಂತಹ ಅಭಿಯವನ್ನೆಂದಾದರೂ ಕೇಳಿರುವಿರಾ?"

"ವೋ ಸಬ್ ಜಾನಾ ದೇವ! ಪರಂತು...." ಒಬ್ಬ ಬೆರ್ಕಿ ಬಂದಿಯು ಛದ್ಮತನದಿಂದ ಅಂದು, ನಕ್ಕು:"—ಸಚ ಬೋಲೋ ಮಿಯ್ಯಾಜಿ; ಅದು ಬಲಾತ್ಕಾರವೇ ಏಕಾಗಲೊಲ್ಲದು; ಆದರೆ ನಿಮಗದು ಬೇಕೇ ಎನಿಸಲಿಲ್ಲವೆ? ಅವಳ ಆ ಗೌರವರ್ಣದ ಕೋಮಲ ದೇಹದ ಆ ಬಿಗಿತದ ಅಪ್ಪಿಕೊಳ್ಳುವಿಕೆ ಯು ಘಟಿಸಿದೊಡನೆಯೇ, ನೀವು ಆ ಮಾಲತಿಯ ಮೇಲೆ ಕೋಪಿಸಿಕೊಂಡಿ ರೇನು? ದೇವರ ಆಣೆ ಮಾಡಿ ಸತ್ಯ ನುಡಿಯಿರಿ!"

ಗಟ್ಟಿಗಟ್ಟಿಯಾಗಿ ನಗುತ್ತ, ತನಗೆ ಬೇಕಾಗಿದ್ದ ಪ್ರಶ್ನೆಯೇ ಬಂದಿತೆಂದು ತಿಳಿದು ರಫೀಉದ್ದೀನನು ಬಹು ಸಂತಸದಿಂದ "ಗೆಳೆಯಾ, ದೇವರ ಆಣೆ ಮಾಡಿ ಹೇಳುತ್ತೇನೆ; ಆ ಸ್ಥಿತಿಯಲ್ಲಿ ಪ್ರತ್ಯಕ್ಷ ಶುಕದೇವನಿದ್ದರೂ ಆತನಿಗೆ ಮಾಲತಿಯ ಸಿಟ್ಟು ಬರುತ್ತಿರಲಿಲ್ಲ. ಮಾಲತೀ! ಹಾಯ್! ನನ್ನ ಗೌರವರ್ಣದ ಮೃದುಮೃದು ಮಾಲತಿ! ಆಕೆಯ ಬಗ್ಗೆ ಸಿಟ್ಟೇ? ಎಲಾ ಗೆಳೆಯಾ! ಅವಳು ನನ್ನ ಜಾನಳಿರುತ್ತಾಳೆ ಜಾನ!"

ಅದನ್ನು ಕೇಳಿ ಎಲ್ಲ ಬಂದಿಗಳೂ ಗಟ್ಟಿಯಾಗಿ ನಕ್ಕರು.

ರಂಗಭೂಮಿಯ ಮೇಲೆ ತೀರ ಕಪ್ಪು ಬಣ್ಣದ ನಟನ ಮೋರೆಗೆ ಬಳಿದಿದ್ದ ಬಣ್ಣದ ಪುಡಿಯು ನಾಟಕದ ಒಳ್ಳೇ ಭರದಲ್ಲಿ ಒರಸಿ ಹೋಗಲಾಗಿ, ಆತನ ಕರೀ ಬಣ್ಣವು ಅಷ್ಟೇ ಸ್ಥಳದಲ್ಲಿ ಡಾಂಬರದ ಕಲೆಯಂತೆ ಹೇಗೆ ಕಾಣಹತ್ತು ವದೋ, ಹಾಗೆ ಆ ಢೋಂಗೀ ಮನುಷ್ಯನ ಮನಸ್ಸಿನ ಹುಟ್ಟು ಕಪ್ಪು ಆ ಸಾಧು ತ್ವದ ಬಿಳೀ ಪುಡಿಯು ಒಮ್ಮೆಲೆ ಅಳಿಸಿ ಹೋಗಲು ಬೈಲಿಗೆ ಬಿತ್ತು! ಆದರೆ

ಜನರು ನಗಹತ್ತುತ್ತಲೆ, ನಟನು ಸಾವರಿಸಿಕೊಂಡು ಆ ಕರೀಕಲೆಯನ್ನು ತನ್ನ ಕರವಸ್ತ್ರದಿಂದ ಮುಚ್ಚಿಕೊಂಡು ಮೊದಲಿನ ಅಭಿನಯವನ್ನು ಹೇಗಾದರೂ ಹೇಗೆ ಮುಂದರಿಸಿ ಮುಗಿಸಿ ಬಿಡುವನೋ ಹಾಗೆಯೇ ಆ ರಫೀ ಉದ್ದೀನ ನಾದರೂ ಆ ಗೊಂದಲದಲ್ಲಿ ತನ್ನ ಮನಸ್ಸನ್ನು ಸಾವರಿಸಿಕೊಂಡನು.

“ಆದರೆ ಹೂ-ಅಲ್ಲವೆನ್ನಲಿಕ್ಕೆ ಅವಳು ನನಗೆ ಸಮಯವನ್ನೇ ಕೊಡ ಲಿಲ್ಲ! ಎಲ್ಲಿಯದೋ ಎಂಥ ಮೋಹನದ್ರವ್ಯ ಆದ ಒಂದು ಕರವಸ್ತ್ರವನ್ನು ಅವಳು ತನ್ನ ಮೂಗಿಗೆ ಗಟ್ಟಿಯಾಗಿ ಹಿಡಿದಳು. ಅದರ ಶ್ವಸನದಿಂದ ನಾನು ಗುಂಗಾಗಿ ಹೋಗಿ ಪಲ್ಲಂಗದ ಮೇಲೆ ಬಿದ್ದುಕೊಂಡೆನು. ಮೈ ಮೇಲೆ ಪೂರಾ ಎಚ್ಚರಿಲ್ಲ; ಪ್ರತೀಕಾರಕ್ಕೆ ಸಂಪೂರ್ಣ ಅಸಮರ್ಥನಾದವ ಫೇರ ಕ್ಯಾ ಪೂಛತೇ ಯಾರ? ತೀರಿತು; ಮೋಹನಾಸ್ತ್ರದಿಂದ ಚಲನವಲನವನ್ನು ಕಟ್ಟು ಮಾಡಿದ, ದೇಹಭಾನವಿಲ್ಲದ ನನ್ನೊಡನೆ ಆ ಪ್ರಿಯ ಮಾಲತಿಯು ಮನಸೋಕ್ತವಾಗಿ ಆನಂದ ಪಡಹತ್ತಿದಳು. ಬೆಳಗಿನ ಝಾವದಲ್ಲಿ ಆಕೆಯು ನನಗೆ ಮೂಸಿ ನೋಡಲಿಕ್ಕೆ ಹಿಡಿದಿದ್ದ ಆ ಮೂರ್ಛಾಚೂರ್ಣದಿಂದ ನನ್ನ ಗುಂಗು ಸಂಪೂರ್ಣ ವಾಗಿ ಹೋಗಿ ನಾನು ಪೂರಾ ಎಚ್ಚತ್ತೆನು. ಬಳಿಕ ಆಕೆಯನ್ನು ಕುರಿತು “ಐ ಜಾದುಗಾರೀಣ! ಅಬತೋ ಮುಝೆ ಛೋಡದೇ | ಬೆಳಗ್ಗೆ ನಿನ್ನ ಮನೆಯು ವರು ನನ್ನನ್ನು ಹಿಡಿದಾರು; ನಿನ್ನನ್ನೂ ಹಿಡಿದಾರು” ಎಂದುದಕ್ಕೆ, ಅವಳು ‘ಛೇ! ಪ್ರಿಯಕರಾ, ಇದೇನು ಹೇಳುತ್ತೀ? ಕಾಮರೂಪ ದೇಶದೊಳಗಿನ ಒಬ್ಬ ಮಾಂತ್ರಿಕನು ನನಗೊಂದು ವಿದ್ಯೆ ಕಲಿಸಿರುತ್ತಾನೆ. ನಾನು ನಿನ್ನನ್ನೊಂದು ಗಿಳಿ ಮಾಡಿ ಈ ಚಿನ್ನದ ಪಂಜರದಲ್ಲಿ ಹಗಲೆಲ್ಲ ಇರಿಸಹತ್ತುವೆನು; ಹಾಗು ರಾತ್ರಿಯಲ್ಲಿ ನಿನಗೆ ನಿನ್ನ ರೂಪ ಕೊಡುವೆನು ನೀನು ದಿನಾಲು ಹೀಗೆಯೇ ನನ್ನೊಡನೆ ರಮಿಸುತ್ತಿರು’ ಎಂಬ ಆಕೆಯ ನುಡಿ ಕೇಳಲು, ನಾನು ಭೀತಿಯಿಂದ ಗದಗುಟ್ಟಿ ನಡುಗಹತ್ತಿದೆನು! ಹಳೇ ಕಥೆಗಳಲ್ಲಿ ಇಂಥ ಕಾಮರೂಪದೇಶದ ಮಾಂತ್ರಿಕರ ವಿದ್ಯೆಗಲಿತು, ಮನುಷ್ಯರನ್ನು ಪಕ್ಷಿಗಳನ್ನಾಗಿ ಮಾಡಿ ಇಟ್ಟು ಕೊಂಡಂಥ ಜಾದುಗಾರ ರಾಜಕುಮಾರಿಯ ಯಾವ ವಿಲಕ್ಷಣ ಕಥೆಗಳನ್ನು ನಾನು ಓದಿದ್ದೆನೋ ಅವುಗಳೆಲ್ಲ ನನಗೆ ಅಂದು ನೆನಪಿಗೆ ಬಂದವು!”

ಒಬ್ಬ ಛದ್ಮಿಯಾದ ಬಂದಿಯು ನಡುವೇ ನಕ್ಕು “ಮಿಯ್ಯಾಜಿ, ಆ ಕಥೆಗಳೊಳಗಿನದೇ ಇದೊಂದು ಕಥೆಯನ್ನು ಹೆಸರು ಬದಲಿಸಿ ನೀವು ಹೇಳ್ತ ತ್ತಿರುವದಿಲ್ಲವಷ್ಟೇ?”

“ದೇವರಾಣೆ! ನನ್ನ ರೂಪಕ್ಕೆ ಮರುಳಾಗಿ, ಮಾಲತಿಯು ಸಚಮುಚ ಐಸೀಹೀ ಬೋಲೀ ಥೀ ಭಾಈ! ಔರ ಕ್ಯಾ ಕಹೂ! ನಿನ್ನನ್ನು ಗಿಳಿ ಮಾಡು

ತ್ತೇನೆಂದು ಆಕೆಯನ್ನು ತ್ತಿರುವಷ್ಟರಲ್ಲೇ ನನ್ನ ಮೋರೆಯು ಚುಂಚು, ಕೈಗಳು ಪಕ್ಕಗಳು ಮತ್ತು ದೇಹವು ಆಕುಂಚನ ಹೀಗೆ ಆಗಿ ನಾನು ಗಿಳಿಯೇ ಆಗಹತ್ತಿರುವೆನೆಂಬದು ನನಗೆ ಕಣ್ಣಾರೆ ಕಾಣಹತ್ತಿತು! 'ಬೇಡ-ಬೇಡ, ನಿನ್ನ ಕಾಲಿಗೆ ಎರಗುವೆನು. ಪ್ಯಾರೀ, ಮಾಲತೀ, ನನ್ನನ್ನು ಬಿಟ್ಟುಬಿಡು!' ಹೀಗೆ ನಾನು ಅಂಗಲಾಚಿ ಬೇಡಿಕೊಳ್ಳಹತ್ತುವಷ್ಟರಲ್ಲಿ, ನನ್ನ ಪೂರ್ವದ ನುಡಿಗಳು ಆ ನನ್ನ ಹೊಸ ಬಾಯೊಳಗಿಂದ-ಆ ಗಿಳಿಯ ಚುಂಚುವಿನೊಳಗಿಂದ-ಹೊರಡದಂತಾಗಿ, ನಾನು ಸುಮ್ಮನೆ ಗಿಳಿಯಂತೆ ಚಕ್ ಚಕ್ ಎಂದೆನ್ನಹತ್ತಿದೆನು." ಆ ನೆನಪಿನಿಂದ ಮೈಮೇಲೆ ಮುಳ್ಳೆದ್ದಂತೆ ಮೈನಡುಗಿಸಿ ರಫೀಉದ್ದೀನನು ಸುಮ್ಮನಾದನು!

ಅಲೌಕಿಕ ಇಲ್ಲವೆ ವಿಲಕ್ಷಣ ಕಥೆ ಹೇಳುವವನು ಭೋಳೆತನದಿಂದ ಕೇಳುವವರಿಗೆ ಆಗಿನಮಟ್ಟಿಗಾದರೂ ಒಬ್ಬ ವಿಲಕ್ಷಣ ಮನುಷ್ಯನೆಂದೇ ತೋರುತ್ತಾನೆ! ಆ ಬಂದಿಗಳಲ್ಲಿಯ ಬಹುತರ ಜನರು ಅಶಿಕ್ಷಿತರು, ಆಶ್ಚರ್ಯಪ್ರಿಯರು ಮತ್ತು ಅಪಕ್ವಬುದ್ಧಿಯುವರಾದ ಭೋಳೇ ಜನರೇ ಇದ್ದುದರಿಂದ, ಅವರು ಆ ಕಥೆಯಲ್ಲಿ ಸಂಪೂರ್ಣ ಗುಂಗಾಗಿ, ರಫೀಉದ್ದೀನನ ಮೋರೆಯ ಕಡೆಗೆ ಟಕನುಕವೆಂದು ನೋಡಹತ್ತಿದರು. ಆ ಜಾದುಗಾರ ರಾಜಕುಮಾರಿಯು ಆತನನ್ನು ಗಿಳಿಯನ್ನಾಗ ಮಾಡಿದಳೆಂಬ ಕಲ್ಪನೆಯೊಡನೆ ರಫೀ ಉದ್ದೀನನ ಮೈನಡುಗುತ್ತಲೆ ಅವರುಗಳ ಮೈಮೇಲೂ ಮುಳ್ಳುಗಳೆದ್ದವು! ಬೇರೊಬ್ಬನು ಆಕಳಿಸಿದೊಡನೆ ತಮಗೂ ಒಮ್ಮೊಮ್ಮೆ ಹೀಗೆಯೇ ಆಕಳಿಕೆ ಬರಹತ್ತುತ್ತದೆ. ದಾರಿ ನಡೆಯುತ್ತಿರುವಾಗ ಒಬ್ಬನು ಮೂತ್ರಕ್ಕೆ ಕುಳಿತರೆ, ಇನ್ನೊಬ್ಬನಿಗೂ ಕೂಡ್ರಬೇಕೆಂದೆನಿಸುತ್ತದೆ. ಇದರಂತೆ ಆ ಕಥೆ ಕೇಳುವದರಲ್ಲಿ ತನ್ಮಯರಾದ ಆ ದಂಡಿತರು ಒತ್ತಾಯದಿಂದ "ಅಚ್ಛಾ! ಆಗೆ ಕ್ಯಾ ಹುವಾ? ಬೋಲೋನಾ, ಫೇರ ಕ್ಯಾ ಹುವಾ?"

'ಫೇರ ಹುವಾ-ಜನ್ಮತೇಪ ಕಾಲಾಪಾನಿ! ಔರ ಕ್ಯಾ?'ಎಂದು ಕಂಟಕನು ತುಸ ರೇಗಿನಿಂದಲೇ ನುಡಿದನು. ಆಗಿನಿಂದಾದ ಮಾಲತಿಯ ವಿಡಂಬನೆಯಿಂದ ಅವನ ಮನಸ್ಸಿನಲ್ಲಿ ಹತ್ತೊತ್ತಿಕ್ಕಿದ್ದ ಕ್ರೋಧವು ಸ್ವಲ್ಪಾದರೂ ತಲೆಯೆತ್ತಿತು; ಆದರೆ ಅಷ್ಟು ಅವಸರದಲ್ಲಿ ಯಾವ ಒಂದು ಪುಸ್ತಕದೊಳಗಿನ ದಂತಕಥೆಯನ್ನನುಸರಿಸಿ ರಫೀ ಉದ್ದೀನನು ಸ್ವಂತದ ಆ ಕಥೆಯನ್ನು ಸಿದ್ಧಪಡಿಸಿ ಹೇಳುತ್ತಿದ್ದನೋ, ರಫೀ ಉದ್ದೀನನಿಗೆ ಅದರೊಳಗಿನ ನೆನಪಾಗದಿದ್ದ ಕೊನೆಯ ಭಾಗವೂ ನೆನಪಾಗಲು, ಆತನು ಮುಂದೆ ಹೇಳಹತ್ತಿದನು:—"ಫೇರ ಕ್ಯಾ ಪೂಛತೇ ಹೈ ಭಾಈ! ಅವಳು ನನ್ನನ್ನು ಗಿಳಿಯನ್ನಾಗ ಮಾಡಿ ಪಂಜರದಲ್ಲಿ ಹಾಕ ಹತ್ತಿದಳು! ಆದರೆ ನನ್ನ ಸುದೈವದಿಂದ ನನಗೆ ನನ್ನೊಬ್ಬ ಐಂದ್ರ

ಜಾಲದ ಗುರುವಿನ ನೆನಪು ಅಕಸ್ಮಾತ್ತಾಗಿ ಆಯಿತು. ಇದೇ ಗುರುವೇ ನನಗೆ ಸಮುದ್ರದ ಮೇಲೆ ನಡೆಯುವ ವಿದ್ಯೆಯನ್ನು ಕಲಿಸಿದ್ದನು; ಮತ್ತು ಅದರಿಂದಲೇ ನಾನು ಕರಿನೀರಿನಲ್ಲಿ ಅದೃಶನಾಗಿ ಸ್ವದೇಶಕ್ಕೆ ಮರಳಿ ಬಂದಿದ್ದೆನು! ಆ ಗುರುವು ನನಗೆ ಹೇಳಿದ್ದನೇನಂದರೆ, ಯಾರಾದರೂ ನಿನಗೆ ಮಾಟ ಮಾಡಿದರೆ, ನೀನು ಮೂರು ಬಾರಿ ನನ್ನ ಹೆಸರು ಜಪಿಸು. ಆಯಿತು. ನಾನು ಗುರುವಿನ ಹೆಸರನ್ನು ಮೂರು ಸಾರೆ ಅಂದ ಕೂಡಲೆ ಗಿಳಿಯಾಗಿದ್ದವನು ತಟ್ಟನೆ ಮನುಷ್ಯನಾದೆನು! ಆ ಜಾದುಗಾರ ಸುಂದರಿಯು ಆಶ್ಚರಿಗೊಂಡು ನೋಡುವಷ್ಟರಲ್ಲಿ ನಾನು ಬಾಗಿಲ ಬಳಿಗೆ ಓಡಿಹೋಗಿದ್ದೆನು! ಆದರೇನು? ಬಾಗಿಲು ಮುಚ್ಚಿ ಕೀಲಿ ಹಾಕಲ್ಪಟ್ಟಿತ್ತು!! ನಾನು ಲಗುಬಗೆಯಿಂದ ಕಿಟಕಿಗೆ ಬಂದೆನು; ಹಾಗು ಜೀವಸಹಿತವಾಗಿ ಕಿಟಕಿಯೊಳಗಿಂದ ಕೆಳಗೆ ಹಾರಿಕೊಂಡದ್ದೊಂದೇ ತಡ, ನೆಟ್ಟಗೆ ಕೆಳಗಿನ ರಾಜಮಾರ್ಗಕ್ಕೇ ಬಂದು ತಲುಪಿದೆನು!

"ಆದರೇನು? ಉರಿಯೊಳಗಿಂದ ಹೊರಟು ಕೆಂಡದೊಳಗೇ ಹಾರಿಕೊಂಡಂತಾಯಿತು; ಯಾಕಂದರೆ ರಾಜಮಾರ್ಗದಲ್ಲಿ ಹಾರಿಕೊಂಡ ನಾನು ಎದ್ದು ನಿಂತು ಸಾವರಿಸಿಕೊಂಡು ಓಡಹತ್ತುವಷ್ಟರೊಳಗೆ ನನ್ನ ಟೊಂಕವನ್ನು ಬಿಗಿಯಾಗಿ ಹಿಡಿದುಕೊಂಡು ಯಾರೋ ಗಟ್ಟಿಗಟ್ಟಿಯಾಗಿ ಒದರಹತ್ತಿದರು ಆತನು ಬೇರೆ ಯಾರೂ ಆಗಿರದೆ, ಕಿಶನನೇ ಆಗಿದ್ದನು! ಆ ನೀಚ ಕಿಶನನು, ಆ ಕಪಟ ಕಿಶನನು ನನ್ನ ಪಾಳತಿಯ ಮೇಲಿದ್ದು, ನನ್ನನ್ನು ಗುಪ್ತವಾಗಿ ಅನುಸರಿಸುತ್ತ ಆ ಮಾವಿನ ತೋಪಿನೊಳಗಿಂದ ಬಂದು ಇಲ್ಲಿ ಅವಿತುಕೊಂಡು ಕುಳಿತಿದ್ದನು. ನಾನು ಸಿಟ್ಟಿನಿಂದ ದೇಹಭಾನವಿಲ್ಲದವನಾಗಿ, ಕೈಯೊಳಗಿನ ಹರಿತಾದ ಚಿಮುಟಗೆಯಿಂದ ಆತನನ್ನು ಇರಿದೆನು. ಅದು ಆತನ ಹೊಟ್ಟೆಯಲ್ಲಿ ಸೇರಲು, ಆ ಪಾಪಿಯು ಅಲ್ಲಿಂದಲ್ಲೇ ಗತಾಸುವಾದನು; ಆದರೆ ಅಷ್ಟರಲ್ಲಿ ಆ ಕೂಗಾಟ-ಚೀರಾಟಗಳಿಂದ ಜನಸಂದಣಿಯಾಗಲು, ಅವರು ನನ್ನನ್ನು ಪೋಲೀಸರ ಸ್ವಾಧೀನ ಪಡಿಸಿದರು; ಮತ್ತು ಕಡೆಗೆ ಮಾಲತಿಯ ಹೆಸರಿಗೆ ಕಲಂಕ ಹಚ್ಚಬಾರದೆಂದು ನಾನೇ ನನ್ನ ಮೇಲೆ ಆ ಕೊಲೆಯ ದಾಯಿತ್ವವನ್ನು ಸ್ವೀಕರಿಸಿದ್ದರಿಂದಲೇ ನನಗೆ ಮತ್ತೆ ಈ ಜೀವಾವಧಿ ಕರಿನೀರಾಯಿತು! ಒಬ್ಬ ಅಬಲೆಯ ರಕ್ಷಣಕ್ಕಾಗಿ ನಾನು ಈ ಜಂಜಾಟದಲ್ಲಿ ಬೀಳಬೇಕಾಯಿತು! ಧರಮಕೇ ಲಿಯೇ ಮೈನೇ ಯಹ ಬಲಿದಾನ ಕಿಯಾ!!"

"ಮತ್ತು ಆ ರಾಜಕುಮಾರ? ಅಲ್ಲಲ್ಲ, ಆ ಮಾಲತಿಯ ಗತಿಯೇನಾಯಿತು?" ಎಂದು ಒಬ್ಬ ದಂಡಿತನು ದುಃಖದ ಆವೇಗದಿಂದ ಕೇಳಿದನು.

"ಕ್ಯಾ ಪೂಛತೇ ಹೋ ಭಾಈ! ವಹ ಪ್ಯಾರಿ ಮಾಲತೀ! ಆಕೆ ನನ್ನ ವಿರಹದಿಂದ ಹುಚ್ಚಳಾದಳು! ಕೈಯಲ್ಲೊಂದು ಮಾಲೆ ಹಿಡಿದು 'ಹಾಯ ರಫೀಉದ್ದೀನ, ಹಾಯ ರಫೀ ಉದ್ದೀನ' ಎಂದು ಜಪಗೆಯ್ಯುತ್ತ ಮಥುರೆಯ ಓಣಿ-ಓಣಿಗಳಲ್ಲಿ ಅಡ್ಡಾಡುತ್ತ, ದಾರಿಯಲ್ಲಿ ಭೆಟ್ಟಿಯಾದವರೆದುರಿಗೆ ಕರ್ಣ ಮಧುರವಾಗಿ ಹಾಡುತ್ತ 'ಬತಾ ದೇ ಸಖೀ ಕೋನ ಗಲೀ ಗಯೋ ಶಾಮ?' ತಿರುಗುತ್ತಿದ್ದಳು."

ರಫೀ ಉದ್ದೀನನು ಆ ಪದವನ್ನು ಹಾಡಿ ತೋರಿಸುವ ಭರಕ್ಕೇ ಬಂದಿದ್ದನು; ಆದರೆ ಸ್ವಂತದ ಅವಮಾನಕರ ವಿಷಯದ ಆ ಕಥೆಯ ಚರ್ವಿತ-ಚರ್ವಣಕ್ಕೆ ತೀರ ಅಸಹ್ಯಗೊಂಡಿದ್ದ ಕಂಟಕನು ಆ ವಿಷಯವನ್ನೊಮ್ಮೆ ಹೇಗಾದರೂ ಬದಲಿಸಿ ಬಿಡಬೇಕೆಂದು ಸಂಧಿ ಸಾಧಿಸಿ "ಆದರೆ ಮಿಯ್ಯಾಜ, ಮಂತ್ರ ವಿದ್ಯೆಯಿಂದ ಸಮುದ್ರದ ಮೇಲೆ ಕಾಲಿನಿಂದ ನಡೆದು ಬರುವ ಅಲೌಕಿಕ ಶಕ್ತಿಯು ನಿಮ್ಮಲ್ಲಿರಲು, ನೀವು ಈಗ ಸಮುದ್ರಕ್ಕೆ ಹಾರಿ ಸ್ವದೇಶಕ್ಕೆ ತಿರುಗಿ ಹೋಗುವುದಿಲ್ಲವೇಕೆ?"

"ಕಿತನೇ ಭೋಲೆ ಹೋ ಕಂಟಕ ಬಾಬುಜಿ ಆಪ! ಪೋಲೀಸರ ಸಮಕ್ಷ ಹಾರಿಕೊಂಡರೆ, ಭೂಮಿಯ ಮೇಲೆ ಕಾಲಿಟ್ಟ ಕೂಡಲೆ ಅವರು ನನ್ನನ್ನು ಪ್ರತಿಬಂಧಿಸುವರು! ಔರ ದುಸರೀ ಬಾತ ಐಸೀ ಹೈ ಕೀ, ಆ ವಿದ್ಯೆಯು ಸ್ತ್ರೀಸ್ಪರ್ಶವಾದೊಡನೆಯೇ ಶಕ್ತಿಹೀನವಾಗಿದೆ! ಮಾಲತಿಯನ್ನುಳಿದು ನನಗೆ ಸ್ತ್ರೀಸ್ಪರ್ಶವೆಂಬುದೆಂಥದೋ ಗೊತ್ತೇ ಇರಲಿಲ್ಲ! ಇನ್ನು ಮೂರು ವರ್ಷವಾದರೂ ನಾನು ಅಖಂಡ ಬ್ರಹ್ಮಚರ್ಯ ಪಾಲಿಸದ ಹೊರತು ನನ್ನ ದೇಹವು ನೀರಿನ ಮೇಲೆ ಸಹಜವಾಗಿ ನಡೆದು ಹೋಗುವಷ್ಟು ಹಗುರಾಗಲಾರದು. ವೀರ್ಯ ಸಂಚಯವಾದೊಡನೆಯೇ ಅದರ ತೇಜೋಮಯ ಓಜಸ್ಸು ತಲೆಯೊಳಗಿಂದ ಎತ್ತರ ಹೋಗಬೇಕೆನ್ನಹತ್ತುತ್ತದೆ. ಆದರಿಂದ ದೇಹವು ತನ್ನಷ್ಟಕ್ಕೆ ತಾನೇ ಮೇಲೆತ್ತಲ್ಪಡುತ್ತದೆ. ಯೋಗ ವಿದ್ಯೆಯಲ್ಲಿ ಇದಕ್ಕೇ 'ಲಘಿಮಾ' ಸಿದ್ಧಿ ಎಂದೆನ್ನುತ್ತಾರೆ. ಅದು ಸಾಧಿಸಿತೆಂದರೆ, ಜಲಸ್ತಂಭನ ಮಂತ್ರವು ಸಫಲವಾಗುತ್ತದೆ! ಆ ಮೇಲೆ ಕರಿನೀರ ಸಮುದ್ರವೆಂದರೆ, ಮನೆಯಲ್ಲಿ ಹಾಸಿದ ಗುಡಾರ! ಮನಸ್ಸು ಬಂದ ಕೂಡಲೆ ಅದರ ಮೇಲೆ ಬೇಕಾದಾಗ ನಡೆಯಬಹುದು!!"

"ಆದರೆ ಮಿಯ್ಯಾಜಿ, ಆ ಜೀವಾವಧಿ ಶಿಕ್ಷೆಯ ಸ್ಥಳಕ್ಕೆ ಕರಿನೀರೆಂತನ್ನುತ್ತಾರೆ?" ಎಂದು ಒಬ್ಬ ಬಂದಿಯು ಪ್ರಶ್ನೆ ಮಾಡಿದನು.

"ಹಳ್ಳಿಗಾಡಿನ ಜನರು ಹಾಗನ್ನುತ್ತಾರಷ್ಟೇ! ಆದರೆ ಅದರ ನಿಜವಾದ ಹೆಸರು ಕರಿನೀರಾಗಿರದೆ, ಅಂಡೇಮಾನ ಹೈ ಅಂಡೇಮಾನ!"

“ಆದರೆ ಅದಕ್ಕೆ ಅಂಡೇಮಾನ ಎಂದಾದರೂ ಏಕೆ ಹೆಸರು ಬಿದ್ದಿದೆ? ಅಲ್ಲಿ ಕೋಳಿಯ ತತ್ತಿಗಳು ವಿಪುಲವಾಗಿ ಬೆಳೆಯುವವೇನು?”

ಆತನ ಅಜ್ಞಾನದ ಬಗ್ಗೆ ಕಳವಳವುಂಟಾದಂತೆ ನಟಿಸಿ, ನಗನಗುತ್ತ ಯಾವನೊಬ್ಬ ಇತಿಹಾಸ ಸಂಶೋಧಕನ ಆವಿರ್ಭಾವದಲ್ಲಿ ರಫೀಉದ್ದೀನನು “ಅಂಡೇಮಾನ ಎಂಬ ಹೆಸರು ಏಕೆ ಪ್ರಾಪ್ತವಾಯಿತೆಂಬ ಬಗ್ಗೆ ದೊಡ್ಡ ದೊಡ್ಡ ಇಂಗ್ಲಿಷರಿಗೂ ಕೂಡ ತಿಳಿಯುವದಿಲ್ಲ! ಹಿಂದುಗಳೊಳಗಿನ ಕೆಲ ಗವಾರ ಜನರು ಹನುಮಂತನು ಲಂಕೆಯಿಂದ ಹಿಂದಿರುಗುವಾಗ ತನ್ನ ಹೆಸರಿನ ಸ್ಮಾರಕ ವುಳಿಯಬೇಕೆಂದು ಆ ದ್ವೀಪಕ್ಕೆ ‘ಹನುಮಾನ’ ಎಂದೆನ್ನಬೇಕೆಂದು ಸೀತಾ ದೇವಿಗೆ ಬಿನ್ನಯಿಸಿಕೊಂಡನೆಂದು ಅನ್ನುತ್ತಾರೆ! ಆದರೆ ಅದು ತೀರ ಸುಳ್ಳು! ಸಚ ಬಾತ ತೋ ಮೇರೆ ಗುರೂನೇ ಕಹೀ ವೋಹೀ ಹೈ! ಸುನೋ! ಸೃಷ್ಟಿ ನಿರ್ಮಾಣವಾಗುವ ಮೊದಲು ಯಾವಾಗ ಎಲ್ಲೆಲ್ಲಿಯೂ ನೀರಿಗೆ ನೀರೇ ಇದ್ದಿತೋ, ಆಗ ಮಕ್ಕಾ ಶರೀಫಮೇ ಏಕ ಈಶ್ವರಕಾ ಪ್ಯಾರಾ ಅವಲಿಯಾ ರಹ ತಾ ಥಾ! ಈಶ್ವರನು ಆತನನ್ನು ಕುರಿತು:-“ಒಂದು ಡೋಣಿ ತಕ್ಕೊಂಡು ಪೂರ್ವ ದಿಕ್ಕಿನ ಕಡೆಗೆ ತೆರಳು! ತೀರ ಸೂರ್ಯನುದಯಿಸುತ್ತಾನಲ್ಲ, ಅಲ್ಲಿಯ ವರೆಗೂ ಹೋಗು. ನಿನಗೆ ಬೇಕಾದಲ್ಲಿ, ನಿನಗೆ ಆವಶ್ಯಕವಾದ ಆಕಾರದ ಭೂಮಿ ಇತ್ಯಾದಿಗಳು ಆಯಾ ಆಕಾರದ ಪದಾರ್ಥವನ್ನು ನೀನು ಸಮುದ್ರದಲ್ಲಿ ಚೆಲ್ಲಿ ಕೊಟ್ಟ ಕೂಡಲೆ ನಿರ್ಮಾಣವಾಗುವವು. ಮಾನವರ ಸಲುವಾಗಿ ಇನ್ನೂ ಹೆಚ್ಚು ಸ್ಥಳವನ್ನು ನಾನು ಸಮುದ್ರದಲ್ಲಿ ನಿರ್ಮಿಸ ಬಯಸುತ್ತೇನೆ.” ಈಶ್ವರನ ಆಜ್ಞೆ ಯಾದೊಡನೆಯೇ ಆ ಅವಲಿಯಾನು ಕೂಡಲೆ ನೌಕೆಯಲ್ಲಿ ಕುಳಿತು ಸಮುದ್ರ ದಲ್ಲಿ ನಡೆದನು. ಮಕ್ಕೆಯನ್ನು ಬಿಟ್ಟು ಎಷ್ಟೋ ತಿಂಗಳುಗಳು ಸಂದಿದರೂ ಸಮುದ್ರದಲ್ಲಿ ತನ್ನ ಮನಸಿನಂತೆ ಸ್ಥಳವನ್ನೆಲ್ಲಿ ನಿರ್ಮಿಸಬೇಕೆಂಬದು ಆತನಿಗೆ ತಿಳಿಯಲೊಲ್ಲದು. ಇಷ್ಟರಲ್ಲಿ ಆಕಾಶವಾಣಿಯಾಯಿತು. ‘ನೀನು ನಿನ್ನ ನೌಕೆ ಯನ್ನು ನಡೆಯಿಸಿರುವಲ್ಲೇ ಸ್ಥಳ ನಿರ್ಮಿಸು.’ ಆ ಕೂಡಲೆ ಅವಲಿಯಾನು ತನ್ನ ಗಿಡ-ಬಳ್ಳಿಗಳ ಚಿತ್ರಗಳಿಂದ ಕೂಡಿದ ಜಮುಖಾನೆಯನ್ನು ಸಮುದ್ರದಲ್ಲಿ ಹಾಸಿದನು! ಕೂಡಲೆ ಆಶ್ಚರ್ಯವಾಯಿತೇನಂದರೆ, ಆ ಜಮುಖಾನದಂತೆಯೇ ಗಿಡ ಬಳ್ಳಿ-ಹೂಗಳಿಂದ ಸಮೃದ್ಧವಾದ ಒಂದು ವಿಸ್ತೀರ್ಣವಾದ ಬೆಳೆಯುಳ್ಳ ಸಮಭೂಮಿಯು ಸಿದ್ಧವಾಯಿತು! ಅದೇ ಈ ಹಿಂದ!-ಹಿಂದುಸ್ತಾನವು! ಆ ಭೂಮಿಯ ಮೇಲೆ ಈಶ್ವರನಿಗೆ ಒಂದು ಕುರಿಯನ್ನು ಬಲಿಗೊಟ್ಟು, ಆ ಅವಲಿಯಾನು ತನ್ನ ನೌಕೆಯನ್ನು ಸಾಗಿಸುತ್ತ ಲಂಕೆಯನ್ನು ಸುತ್ತಿಕೊಂಡು ಮುಂದೆ ನಡೆದನು. ಆಗ ಸಮುದ್ರದಲ್ಲಿ ಬಿರುಗಾಳಿ ಎದ್ದಿತು ಆದರಿಂದ

ಆತನ ಡೋಣಿಯು ಬೊಕ್ಕುಬೊರ್ಲಾಯಿತು. ಅದರೊಳಗಿನ ಎಲ್ಲ ಸಾಮಾನು ಗಳು ಮುಳುಗಿಹೋದವು. ಆ ಅವಲಿಯಾನೂ ಗುಟುಕು ನೀರು ಕುಡಿಯ ಹತ್ತಿದನು. ಆತನು ಆಗ ಮುಳುಗತಕ್ಕವನೇ; ಆದರೆ ಕುರಾಣ ಶರೀಫ ಉಸಕೇ ಹಾತಮೇ ಥಾ, ಉಸಕೋ ಬಾದಲಕಾ ಬಾಪ ಭೀ ನ ಡುಬಾ ಸಕೇಗಾ! ಆ ಕುರಾಣ ಶರೀಪನನ್ನು ಮೇಲಕ್ಕೆತ್ತಿ ಹಿಡಿಯಲು ಆತನು ತೇಲಹತ್ತಿದನು. ಬಳಿಕ ಅವನು ತನ್ನ ಡೋಣಿಯನ್ನು ನೆಟ್ಟಗೆ ಮಾಡಿದನು. ಅಷ್ಟರಲ್ಲಿ ಮತ್ತೆ ಆಕಾಶವಾಣಿಯಾಯಿತು. 'ಈ ಸಮುದ್ರದಲ್ಲಿ ಇಂಥ ಬಿರುಗಾಳಿಯು ಯಾವಾ ಗಲೂ ಬಿಡುವದು; ಆದುದರಿಂದ ಇಲ್ಲಿಯು ಈ ಸಮುದ್ರದೊಳಗಿನ ಜಲಪ್ರವಾ ಸಕ್ಕೆ ಸುರಕ್ಷಿತತೆಯುಂಟಾಗುವುದಕ್ಕೆಂದು ಇಲ್ಲಿ ಒಂದು ಸ್ಥಳವನ್ನು ನಿರ್ಮಿಸು.' ಈ ಆಕಾಶವಾಣಿಯನ್ನು ಕೇಳಿದ ಕೂಡಲೆ ಅಲ್ಲಿ ಯಾವುದೊಂದು ವಸ್ತು ಚಲ್ಲಬೇಕೆಂದು ಅವಲಿಯಾನು ನೋಡತೊಡಗಿದನು. ಆಗ ಆತನ ಬಳಿಯಲ್ಲಿ ಯಾವ ಪದಾರ್ಥವೂ ಇರಲಿಲ್ಲ. ಒಂದು ಕೈಯಲ್ಲಿ ಕುರಾಣ ಶರೀಫವೂ ಇನ್ನೊಂದು ಕೈಯಲ್ಲಿ ತಿನ್ನಲಿಕ್ಕೆಂದು ಬಹು ಜಾಗ್ರತೆಯಿಂದ ಹಿಡಿದಿದ್ದ ಒಂದು ಕೋಳಿಯ ತತ್ತಿಯೂ ಇಷ್ಟೇ ಇದ್ದವು! ಆಗ ಅವಲಿಯಾನು ಆ ತತ್ತಿಯನ್ನೇ ಆ ಸಮುದ್ರದಲ್ಲಿ ಚಲ್ಲಿಕೊಟ್ಟು 'ಹೋ ಜಾವ ಭೂಮಿ! ಬಸ್ಸ, ತುರತ ಹೀ ಅಂಡೇ ಸೇ ಬೇಟ ಬನಾ! ಇಸಲಿಯೇ ಉಸಕಾ ನಾಮ ಪಡಾ ಅಂಡೇಮಾನ! ಅಂ ಡೇಕಾ ಬೇಟ!"

"ಯಾ ಖುದಾ! ಕ್ಯಾ ತೇರೀ ಕರಾಮತ!" ದಂಡಿತರೊಳಗಿನ ಒಬ್ಬ ಮುಸಲ್ಮಾನ ಫಕೀರನು ಧರ್ಮಾಭಿಮಾನದಿಂದ ಉಬ್ಬುತ್ತ, ತನ್ನ ಪಕ್ಕ ದಲ್ಲಿಯ ಎಲ್ಲ ಹಿಂದೂ ಬಂದಿಗಳನ್ನುದ್ದೇಶಿಸಿ:-"ದೇಖೋ, ಹಮಾರೆ ಇಸ್ಲಾನು ಧರಮಕೀ ಬಡೇಜಾವೀ! ಕೈಸೆ ಕೈಸೆ ಅವಲಿಯಾ! ಕುರಾಣ ಶರೀಫಮೇ ಇಮಾನ ರಖನೇಮೇ ಆದಮಿ ಕೈಸೇ ಕರಾಮತೀ ಬನತೇ ಹೈ! ಕ್ಯೊಂ ಕಂಟಕ ಬಾಬೂ, ಆಪ ಇಸ ಕಿಸ್ಸೇಂಕೋ ಸಚ ಮಾನತೇ ಹೈ ಯಾ ನಹೀ?"

ಎಲ್ಲ ಹಿಂದು ದಂಡಿತರು ಕಂಟಕ ಬಾಬೂನ ಮೋರೆಯ ಕಡೆಗೆ ನೋಡಿ, ಈ ಫಕೀರನು ನಮ್ಮ ಹಿಂದೂ ಧರ್ಮದ ಬಗ್ಗೆ ತೆಗೆದ ಕುಂದನ್ನು ವಾತ ಸಹಿತ ವಾಗಿ ಮುಟ್ಟಿಸಿಯೇ ಬಿಡಿರೆಂಬ ಆವೇಶಕ ಲಾಲಸೆಯಿಂದ ನೋಡಹತ್ತಿದರು. ಕಂಟಕಬಾಬುವು ನಕ್ಕು "ಈ ಮಿಯ್ಯಾಜಿಯು ಹೇಳಿದ್ದ ಆ ಅವಲಿಯಾನ ವಿಚಿತ್ರ ಕಥೆಯು ಒಂದುವೇಳೆ ನಿಜವಿದ್ದರೆ, ನಮ್ಮ ಪುರಾಣದೊಳಗಿನ ಅಗಸ್ತ್ಯ ಋಷಿಯ ಕಥೆಯೂ ನಿಜವಿರಲಿಕ್ಕೆಬೇಕು! ಮತ್ತು ಆ ಅವಲಿಯಾನ ಮಟ್ಟಿಗೇ ನೋಡುವದಾದರೆ, ಹಿಂದೂ ಅವಲಿಯಾ ಅಗಸ್ತಿಯೇ ಆ ಮುಸಲ್ಮಾನ ಅವಲಿ

ಯಾನಗಿಂತಲೂ ಹೆಚ್ಚು ಕರಾಮತಿಯುವನಿದ್ದನೆಂಬದು ಸ್ಪಷ್ಟವಿದೆಯೋ ಇಲ್ಲವೋ ಎಂಬದನ್ನು ನೀವೇ ಹೇಳಿರಿ; ಯಾಕಂದರೆ, ಯಾವ ಸಮುದ್ರದ ನೀರು ಮೂಗು-ಬಾಯಿಗಳಲ್ಲಿ ತುಂಬಲು ಆ ಮುಸ್ಲೀಮ ಅವಲಿಯಾನು ಗುಟುಕು ನೀರು ಕುಡಿಯುಹತ್ತಿದ್ದನೋ. ಆ ಸಮುದ್ರವೆಲ್ಲ ಆ ಅಗಸ್ತಿಋಷಿಯ ಮೂತ್ರವೇ ಆಗಿತ್ತು!”

ಎಲ್ಲ ಹಿಂದು ದಂಡಿತರು ವಿಜಯಾನಂದದಿಂದ ಗಟ್ಟಿಗಟ್ಟಿಯಾಗಿ ನಕ್ಕರು! ಪ್ರತಿಯೊಬ್ಬರೂ “ಚೆನ್ನಾಗಿ ಹೇಳಿದಿರಿ” ಎಂದೆನ್ನಹತ್ತಿದರು; ಆದರೆ ಹಾಗೆ ಒಮ್ಮೆಲೆ ಆದ ಗದ್ದಲದಿಂದ ಸಿಟ್ಟಿಗೆದ್ದ ಪಂಜರದ ಪೊಲೀಸ ಪಹರೆಯುವರು “ಏ ಬದಮಾಷ ಲೋಗ! ನಿಮಗೆ ಮೆಲ್ಲನೆ ಮಾತಾಡುವ ರಿಯಾಯತಿ ತೋರಿಸಿದ ಬಗ್ಗೆ ಈ ಪರಿಣಾಮವನ್ನುಂಟು ಮಾಡುತ್ತೀರೇನು? ಕರಿನೀರಿನ ಪಂಜರದಲ್ಲಿರುತ್ತೀರೋ ನಿಮ್ಮಪ್ಪನ ಬಂಗ್ಲೆಯಲ್ಲಿರುವಿರೊ? ಎದ್ದೇಳಿರಿ; ನಿಮ್ಮ ನಿಮ್ಮ ಹಾಸಿಗೆಗೆ ಹೋಗಿ ಮಲಗಿರಿ. ಜಾವ! ಜಾವ!”

ಈ ಕಟ್ಟಪ್ಪಣೆಯಾದೊಡನೆಯೆ ಎಲ್ಲ ದಂಡಿತರು ತಮ್ಮ ತಮ್ಮ ಹಾಸಿಗೆಗಳ ಮೇಲೆ ಹೋಗಿ ಬಿದ್ದುಕೊಂಡರು. ಆದರೂ ಕೂಡ ಪಹರೆಯುವನು ರಫೀ ಉದ್ದಿನನ ಅರ್ಧ ಹೊನ್ನಿಗೆ ಬಲಿಬಿದ್ದ ಮೂಲಕ, ರಫೀ ಉದ್ದೀನನ ಕಡೆಗೇನೂ ಆ ಆಜ್ಞೆಯ ಗುರಿಯನ್ನು ಇಡಲಿಲ್ಲ. ಅದರಿಂದ ರಫೀ ಉದ್ದೀನನು ಮಾತ್ರ ಒಬ್ಬನೇ ಕಂಟಕ ಬಾಬುವಿನ ಹಾಸಿಗೆಯ ಬಳಿಯಲ್ಲಿ ಸ್ಥಳ ಹಿಡಿದು, ಆದರೆ ಕೆಲಹೊತ್ತು ಸುಮ್ಮನೆ ಕುಳಿತುಕೊಂಡನು. ನಂತರ ಅಲ್ಲಿ ಎಲ್ಲ ಕಡೆಗೂ ಶಾಂತತೆ ನೆಲೆಗೊಂಡದ್ದನ್ನು ಕಂಡು, ಏಕಾಂತ ಸಾಧಿಸಿ, ಕಂಟಕ ಬಾಬುವಿನ ಕಿವಿಗೆ ಹೊಂದಿ ಮಾತನಾಡಹತ್ತಿದನು:

“ಕಂಟಕಬಾಬೂ, ಇಂದು ಈ ಪಂಜರದಲ್ಲಿ ಇಷ್ಟು ಆತಂಕರಹಿತವಾಗಿ ಮಾತಾಡುವದಿದೇ ಕೊನೆಯ ರಾತ್ರಿಯು! ನಾಳೆಯ ದಿನ ಈ ಹಡಗವು ಕರಿನೀರಿಗೆ ತಲುಪುವದು. ನಾವೆಲ್ಲರೂ ಆ ಭಯಂಕರ ಜೇಲಿನೊಳಗಿನ ಒಬ್ಬೊಂಟಿಗರ ಕೋಣೆಯಲ್ಲಿ ಕೀಲಿಗಳಿಂದ ಬಂಧಿಸಲ್ಪಡತಕ್ಕವರು! ನನಗೆ ಮೊದಲು ಬಹು ಕಠಿಣ ಪಹರೆಯಲ್ಲಿಡಲಾದೀತು; ಆದರೆ ನೀವು ಬೇಗನೆ ‘ಬಾಬೂ’ ಆದೀರಿ. ನಿಮ್ಮ ಸಂಬಂಧವು ಆಫೀಸಿನೊಳಗಿನ ಕಾರಕೂನಾದಿಕರ ಸಂಗಡ ಆಗಿ, ನಮ್ಮ ಕಠಿಣ ಪಹರೆಯೊಳಗಿನ ಬಂದಿ ಜನರ ಮೇಲೆ ಉಪಕಾರ ಮಾಡುವ ಸಾವಿರಾರು ಸಂಧಿಗಳು ನಿಮಗೆ ದೊರೆತಾವು! ಈ ಮೊದಲನೇ ವರ್ಷದಲ್ಲಿ ಆಗಾಗ್ಗೆ ನಿಮಗೆ ಸಂಧಿ ದೊರೆತಾಗ ನೀವು ನನಗೆ ರಿಯಾಯತಿ ತೋರಿದರೆ, ಬಾಬೂಜಿ, ನಾನು ನಿಮಗೆ ನಿಮ್ಮ ಕಲ್ಪನೆ ಮೀರಿ ಸಹಾಯ

ಮಾಡೇನು! ಮೊದಲನೇ ವರ್ಷವಷ್ಟೇ ನನಗೆ ಕಠಿಣವೆಂದು ತಿಳಿಯಿರಿ. ಅದು ದಾಟಿತೆಂದರೆ, ಅಲ್ಲಿಯ ರೀತಿಯಂತೆ ಹಾಗು ನನ್ನ ಗುರ್ತು ಪರಿಚಯ-ಹೊನ್ನು-ಭಿಡೆ-ಮುರವತ್ತುಗಳಿಂದ ನನ್ನನ್ನು ಜೇಲಿನೊಳಗಿಂದ ಬೇಗನೆ ಹೊರಗೆ ಬಿಟ್ಟಾರು. ನಾನು ಬಂದಿಗಳ ಜವಾದಾರನಾಗುವೆನೆಂಬದನ್ನು ಬರೆದಿಡಿರಿ; ಮತ್ತು ಆ ಮೇಲೆ ನಿಮ್ಮ ಮೊದಲಿನ ಉಪಕಾರಗಳ ಪ್ರತ್ಯುಪಕಾರಕ್ಕಾಗಿ ನಾನು ನಿಮಗೆ ಎಷ್ಟೋ ಪಟ್ಟು ಹೆಚ್ಚು ಉಪಯುಕ್ತನಾದೇನು! ಮತ್ತು-ಮತ್ತು ಹೇಳಲೋ? ನೀವು ನನ್ನ ಮಾತಿನಲ್ಲಿ ನಂಬಿಕೆಯಿಡುತ್ತಿದ್ದರೆ ಹಾಗು ನನ್ನೊಡನೆ ಭ್ರಾತೃಭಾವದಿಂದ ಮನಃಪೂರ್ವಕವಾಗಿ ನಡೆಯಲಿಚ್ಛಿಸುತ್ತಿದ್ದರೆ-ಯಾವಾಗ ನಾನು ಮತ್ತೆ ಕರಿನೀರ ಮೇಲಿನ ಅಧಿಕಾರಿಗಳ ಕೈಗೆ ಚಪ್ಪಾಳೆ ಕೊಟ್ಟು ಆ ಪಂಜರವೊಳಗಿಂದ ಒಂದು ಹಕ್ಕಿಯು ಜಾರಿತೋ, ಬೇಡಿ ಕಳಚಿ ಹೊ[illegible]ೇಕೆಂದು ನಿಮ್ಮ ಮನಸ್ಸಿದ್ದರೆ ಮಾತ್ರ ಬಾಬೂಜೀ, ಆಗ ನಿಮಗೂ ನಿಮ್ಮ ಈ ಜೀವಾವಧಿಯ ಅಸಹ್ಯ ಬೇಡಿಯು ನಿಮ್ಮ ಕಾಲೊಳಗಿಂದ ಅಕಸ್ಮಾತ್ತಾಗಿ ಕಳಚಿತೆಂದು ಕಂಡುಬಂದೀತು."

"ಮನಸ್ಸೇ? ಮಿಯ್ಯಾಜೀ, ಅದು ನನ್ನ ನಿರ್ಧಾರವೇ ಆಗಿದೆ. ಬರಿಯ ಇಚ್ಛೆಯಾಗಿಲ್ಲ! ಆದರೆ ಅದಕ್ಕೆ ದಾರಿಯಾವುದು? ಸಾಧನವೇನು? ನಿಮ್ಮ ಈ ನುಡಿಗಳು ಪ್ರಾಮಾಣಿಕತನದವೆಂದು ನಾನು ಹೇಗೆ ತಿಳಿಯಬೇಕು? ನೀವು ಮೊದಲು ಕರಿನೀರಿನಿಂದ ಹೇಗೆ ಓಡಿ ಬಂದಿರಿ? ಆ ನಿಜವಾದ ಮಾಹಿತಿಯನ್ನು ನನಗೆ ಸಟಿಯೆನಿಸುವಂತೆ ಹೇಳಿದರೆ ಮಾತ್ರ, ನಾನು ನಿಮ್ಮಲ್ಲಿ ನಂಬಿಗೆಯನ್ನಿಟ್ಟೇನು!"

"ಅಚ್ಛಾ! ಕಂಟಕಬಾಬೂ, ತುಮಕೋ ವಹ ಸಬ ಬಾತ, ಮೈ ಸಂಧಿ ಮಿಲತೇಹಿ ಸಚಸಚ ಕಹೂಂಗಾ. ದೇಖೊ ಭಾಈ, ಭಾಈಕಾ ನಾತಾ ಜಿತನಾ ಆಪಸೇ ಘರಮೇ ಪ್ಯಾರಾ ಲಗತಾ ಹೈ, ಉತನಾಹೀ ಜೋ ನಾತಾ ತೋ ಕಾಲಾ ಪಾನೀಮೇ ಪ್ಯಾರಾ ಸಮಜಾ ಜಾತಾ ಹೈ. ವಹ 'ಚಲಾನೀ'ಯಹ ಹೈ. ಒಂದೇ ಚಲಾನದಲ್ಲಿ ಯಾರು ಬರುವರೋ, ಆ ಎಲ್ಲ ದಂಡಿತರು ಒಬ್ಬರಿಗೊಬ್ಬರ 'ಚಲಾನೀ' ಈ ಸಂಬಂಧದ ಸಹೋದರರಾಗುತ್ತಾರೆ. ಇದೊಂದು ಹೊಸ ಗೋತ್ರವೇ ಅಲ್ಲಿ ಆಗಿ ಹೋಗುತ್ತದೆ. ನಮ್ಮದಾದರೂ ಅದೇ ಸಂಬಂಧ ವುಂಟಾಗಿರುತ್ತದೆ. ನೀವು ನನ್ನ ಚಲಾನೀ ಆಗಿದ್ದೀರಿ. ನನ್ನ ಭಾಈ ಆಗಿರುತ್ತೀರಿ! ಕಂಟಕಬಾಬೂ, ನೀವು ನನ್ನಲ್ಲಿ ನಂಬಿಗೆಯಿಡಿರಿ; ಇಡದಿರ್ರಿ; ಆದರೆ ನಾನು ಮಾತ್ರ ನಿಮಗೆ ನನ್ನ ವಚನಕೊಟ್ಟಿರುತ್ತೇನೆ. ನೀವು ನನ್ನ ಬಂಧುಗಳು. ನನ್ನ ಚಲಾನೀ. ನಾನು ನಿಮ್ಮ ಜೀವಕ್ಕೆ ಜೀವ ಕೊಟ್ಟೇನು! ಮಾಡಿದರೆ

ನಿಮ್ಮ ಹಿತವನ್ನೇ ಮಾಡೇನು. ವಿಶ್ವಾಸಘಾತವನ್ನಂತೂ ಎಂದಿಗೂ ಮಾಡ ಲಿಕ್ಕಿಲ್ಲ! ನಾವು ದರವಡೆಗಾರರಂತೂ ನಿಜವೇ; ಆದರೆ ನಮ್ಮಲ್ಲೊಂದು ವಿಶೇಷ ಗ ಣವಿರುತ್ತದೇನಂದರೆ, ನಾವು ಎಷ್ಟು ದುಸ್ತರರಾಗಲು ಶಕ್ಯವೋ, ಅಷ್ಟೇ ಮನಸ್ಸಿಗೆ ಬಂದರೆ ಸುಸ್ವರೂ ಆಗಬಲ್ಲೆವು. ನೀವು ನನ್ನ ಮೇಲೆ ಬಂಧು ಭಾವದ ನಿಷ್ಕಪಟವನ್ನಿಟ್ಟು ನೋಡಿರಿ! ಉಪಕಾರ ಮಾಡಿದರೆ ನಮ್ಮಂತಹ ಹಿಂಸ್ರಪಶುಗಳು ಕೂಡ ಎಂದಿಗೂ ಉಪಕಾರಕರ್ತನನ್ನು ಮರೆಯುವದಿಲ್ಲ; ಉಪದ್ರವ ಕೊಡುವದಿಲ್ಲ; ಪ್ರತ್ಯುಪಕಾರ ಮಾಡದಹೊರತು ಬಿಡುವದಿಲ್ಲ! ಪ್ರಾಥಮಿಕ ಪಠ್ಯಪುಸ್ತಕದೊಳಗಿನ ಕಥೆಯಲ್ಲಿ ಸಿಂಹವು ಇಲಿಗೆ ಪ್ರತ್ಯುಪಕಾರ ಮಾಡಿದಂತೆಯೇ!''

''ರಫೀ ಉದ್ದೀನ!'' ಪಹರೆಯವನು ಅವಸರವಸರದಿಂದ ಒದರಿದನು. ''ಎದ್ದೇಳು, ಪಹರೆ ಒದಲಿಸಲಿಕ್ಕೆಂದು ಜಮಾದಾರನು ಬರುತ್ತಿರುವನು, ಹೋಗು, ನಿನ್ನ ಸ್ಥಳಕ್ಕೆ! ನಮ್ಮ ಪಹರೆಯ ಅವಧಿ ಮುಗಿಯಿತು.''

ಕೂಡಲೆ ರಫೀ ಉದ್ದೀನನೆದ್ದನು. "ಬಂದಿಗಳು ತಮ್ಮ ತಮ್ಮೊಳಗೆ ಮಾತಾಡುವದು ನಿಷೇಧವು. ಗುರ್ಖಿನ ಪಹರೆಯವನೆಂದೇ ಸಾಧಿಸಿತು. ಇನ್ನು ನಾಳೆ ಬೆಳಗ್ಗೆ ಈ ಹಡಗವು ಕರಿನೀರಿಗೆ ಹೋಗುವದು. ಇನ್ನು ಇದೇ ಕಡೆಯ ಸಲಾಮು! ಭೂಲನಾ ನಹೀ, ಜೋ ಕುಛ ಬಾತ ಅಭೀ ಹುಈ ಉಸಕೋ! ಆಜಸೇ ಕಂಟಕ, ತುಮ ಮೇರೆ ಭಾಈ ಹೋ! ಆಪ ಚಾಹೆ ಮುಝೆ ಕುಛಭೀ ಸಮಜೋ!"

ಇಷ್ಟು ಕಂಟಕನಿಗೆ ಲಗುಬಗನೆ ಹೇಳಿ, ರಫೀ ಉದ್ದೀನನು ತನ್ನ ಸ್ಥಳಕ್ಕೆ ಹೊರಟು ಹೋದನು.

"ಆಯಾ! ಕಾಲಾ ಪಾನೀ ಆಯಾ!" ಈ ಗಡಿಬಿಡಿಯು ಬೆಳಗಾಗುತ್ತಲೆ ಹಡಗದಲ್ಲೆಲ್ಲ ಉಂಟಾಯಿತು. ಆ ಕೂಡಲೆ ಕಠೋರ, ಕ್ರೂರ, ನೃಶಂಸ ರಾದ ಜೀವಾವಧಿ ಶಿಕ್ಷೆಯ ದಂಡಿತರ ಹೃದಯಗಳು ಕೂಡ ಧಸ್ಸೆಂದು ನಡುಗಹತ್ತಿದವು! ''ಆಯಾ! ಕಾಲಾ ಪಾನೀ ಆಯಾ!!''

ಆ ದಂಡಿತರ ಹೃದಯದಂತೆಯೇ ಆ ಉಗೆಹಡಗದ ಹೃದಯಕ್ಕೂ ಧಕ್ಕೆ ಹತ್ತಿದಂತಾಗಿ, ಆ ಪ್ರಚಂಡ ಹಡಗವು ಧಕ್ಕೆ ಹೊಡೆಯುತ್ತ, ಧಡಧಡ ಸುತ್ತ ಬಂದರದಲ್ಲಿ ಹೊಕ್ಕಿತು; ಆ ಕೂಡಲೆ ಅದರ ಬಂಬು "ಭೊಂSS- ಭೊಂSS" ಎಂದು ಒಂದೇಸವನೆ ಭೋಂಕರಿಸಹತ್ತಿತು.

"—ಆಯಾ! ಕಾಲಾ ಪಾನೀ ಆಯಾ!!"

———

೧೧ನೇ ಪ್ರಕರಣ.

ಜಗತ್ತಿನೊಳಗಿನ ಎಷ್ಟೋ ಭೂಭಾಗಗಳಿಗೆ ಭೂಗೋಲವಿದೆ; ಆದರೆ ಇಂದಿಗೂ ಇತಿಹಾಸ ಇರುವದೇ ಇಲ್ಲ. ಕರಿನೀರೆಂದು ಇಂದು ಯಾವುದಕ್ಕೆ ಅನ್ನುವರೋ, ಆ ಅಂಡಮಾನದ ದ್ವೀಪ ಪುಂಜವಾದರೂ ಇತಿಹಾಸವಿಲ್ಲದ ಭೂಭಾಗವೇ ಆಗಿದೆ.

ಯಾವ ಕಾಲಕ್ಕೆ ಹಿಂದು ರಾಷ್ಟ್ರವು ತನ್ನ ಸ್ವಂತದ ಕಾಲಲ್ಲಿ ಸಿಂಧು ಬಂದಿಯ ಬೇಡಿಯನ್ನು ಸ್ವತಃ ಹಾಕಿಕೊಂಡಿರಲಿಲ್ಲವೋ, ವಿಧರ್ಮೀಯರಿಗೇ ಅಲ್ಲ, ಸ್ವಧರ್ಮೀಯ ಹಿಂದು-ಹಿಂದುಗಳಲ್ಲಿ ಕೂಡ ವಿಜಾತೀಯರೊಡನೆ ತಿಂಬುಂಬುವದರಿಂದ ಅಥವಾ ಕುಡಿಯುವದರಿಂವ ಜಾತಿಯೇ ಲೋಪವಾಗುತ್ತದೆ, ಧರ್ಮವೇ ಲೋಪವಾಗುತ್ತದೆ ಇಂಥ ಬಾಷ್ಕಲ ಧರ್ಮಭೋಳೇತನಕ್ಕಾಗಿ ಹಿಂದುಸ್ತಾನದ ಹೊರಗೆ ಹೋಗುವದರಿಂದ ವಿಧರ್ಮಿ, ವಿದೇಶಿ, ವಿಜಾತೀಯರೊಡನೆ ಅನ್ನೋದಕ ವ್ಯವಹಾರವುಂಟಾಗಿ ಎಲ್ಲಿ ತಮ್ಮ ಜಾತಿಯು ನಷ್ಟವಾಗುವದೋ ಎಂಬ ಭೀತಿಯು ಹಿಂದು ರಾಷ್ಟ್ರದ ಹೊಟ್ಟೆಯಲ್ಲಿ ಉಂಟಾಗಿರಲಿಲ್ಲವೋ, ಮತ್ತು ಆ ಯೋಗದಿಂದ ಮೂರು ಕಡೆಯ ಸಮುದ್ರದ ಮೇಲಷ್ಟೇ ಅಲ್ಲ, ನಾಲ್ಕನೇ ಕಡೆಯ ಭೌಮಿಕ ಸೀಮೆಯ ಮೇಲೂ 'ಅಟಕ'ದ ಧಾರ್ಮಿಕ ಚೌಕಿಯುಂಟಾಗಿ, ಯಾವ ಹಿಂದುವೂ ದೇಶದ ಹೊರಗೆ ಆ ಯಾವ ಕಾಲದಿಂದ ಹೋಗದಂತಾದನೋ, ಸಾಧಾರಣವಾಗಿ ಆ ಇ. ಸ. ೯-೧೦ನೇ ಶತಮಾನಗಳ ಮುಂಚೆ ಹಿಂದು ರಾಷ್ಟ್ರದ ತ್ರಿವಿಕ್ರಮಶೀಲವಾದ ಚರಣವು ಈ ಸಿಂಧುಬಂದಿಯ ಬೇಡಿಯಿಂದ ಬಿಗಿಯಲ್ಪಡದ್ದರಿಂದ ಪೂರ್ವ, ಪಶ್ಚಿಮ, ದಕ್ಷಿಣ ಸಮುದ್ರಗಳನ್ನೂ ಮಹಾಸಾಗರಗಳನ್ನೂ ದಾಟಿ ರಾಜಕೀಯ, ಸಾಮಾಜಿಕ, ಧಾರ್ಮಿಕ ದಿಗ್ವಿಜಯಗಳನ್ನು ಮಾಡುತ್ತ ಆ ಕಾಲದ ಜ್ಞಾತ ಜಗತ್ತಿನಲ್ಲಿ ನಮ್ಮ ಹಿಂದುಗಳ ಮಹಾಸಾಮ್ರಾಜ್ಯವು ಹಬ್ಬುತ್ತ ಹುಲುಬುತ್ತ ನಡೆದಿತ್ತು. ಆ ಕಾಲದಲ್ಲಿ ಪರದೇಶ ಗಮನವು ನಿಷಿದ್ಧವೇ ಇರದ್ದರಿಂದ, ಪರದೇಶಗಮನ ನಿಷೇಧದ ಇದಿಯು ಆ ಕಾಲಕ್ಕೆ ಬಡಕೊಳ್ಳದ್ದರಿಂದ, ಹಿಂದೂ ರಣತರಿಗಳು, (War-ships) ಪ್ರಚಂಡ ನೌಕಾ ಸಾಧನಗಳು (ಯುದ್ಧದ ಹಡಗುಗಳು) ದಿಕ್‌ದಿಗಂತಗಳಲ್ಲಿ ಅಪ್ರತಿಹತವಾಗಿ ಸಂಚರಿಸುತ್ತಿದ್ದವು. ಯಾವುದಕ್ಕೆ ಪರಕೀಯರು ಬರೆದ ಮತ್ತು ಪಾಠ ಮಾಡಿಸಿದ ಇಂದಿನ ನಮ್ಮ ಹಿಂದುಸ್ತಾನದ ಕುಲಗೇಡಿ ಭೂಗೋಲದಲ್ಲಿ 'ಅರಬೀ ಸಮುದ್ರ' ಈ ಮಾನಹಾನಿಕಾರಕ ಹೆಸರಿನಿಂದ ಸಂಬೋಧಿಸಲಾಗುವದೋ, ಆ ನಮ್ಮ ಪುರಾತನ 'ಪಶ್ಚಿಮ' ಸಮುದ್ರದೊಳಗಿಂದ ಒಂದು ಕಡೆಗೆ, ಮತ್ತು ಯಾವುದಕ್ಕೆ ನಮ್ಮ

ಕೂಪಮಂಡೂಕರಿಂದ 'ಕರಿ ನೀರು' ಎಂದು ಸಮುದ್ರಗಮನ ಭೀರುವಾದ ಹೆಸರು ಕೊಡಲಾಗಿದೆಯೋ ಆ ಅಂಡಮಾನ ದ್ವೀಪಗಳಿರುವ ಪೂರ್ವ ಸಮುದ್ರ ದೊಳಗಿಂದ ಸಾಧಾರಣವಾಗಿ ಚಂದ್ರಗುಪ್ತ, ಮೌರ್ಯರ ಅಂದರೇನೇ ಕ್ರಿ. ಶಕಕ್ಕೆ ೩ ೪ ನೂರು ವರ್ಷಗಳ ಮೊದಲಿನ ತೀರ ಐತಿಹಾಸಿಕ ಕಾಲದಿಂದ ಹಿಂದುರಾಷ್ಟ್ರದ ಶತಾವಧಿ ವಣಿಗ್ನೌಕೆಗಳು ದೂರ ದೂರದ ವಿದೇಶಗಳಿಗೆ ಅವ್ಯಾಹತವಾಗಿ ಹೋಗಿ ಬರುತ್ತಿದ್ದವು! ಹಿಂದು ರಾಷ್ಟ್ರಕ್ಕೆ ಆ ಸಾಗರವೆಂದರೆ, ಒಂದು ಲೈನದಾರಿಯಂತಾಗಿತ್ತು!

ಈ ಪೂರ್ವಸಮುದ್ರದೊಳಗಿಂದ ಮಗಧ, ಆಂಧ್ರ ಪಾಂಡ್ಯ, ಚೇರ, ಚೋಳ ಪ್ರಭೃತಿ-ಹಿಂದುರಾಜ್ಯಗಳು ದೊಡ್ಡ ದೊಡ್ಡ ನೌಸಾಧನಗಳನ್ನು ಕಳಿಸಿ, ಸಯಾಮ, ಜಾವಾ, ಬೋರ್ನಿಯೋದಿಂದ ಫಿಲಿಪೈನದ ವರೆಗೆ ಹಿಂದೀ ವಸಾಹತುಗಳನ್ನು, ರಾಜ್ಯಗಳನ್ನು, ಧರ್ಮವನ್ನು ಹಾಗು ಸಂಸ್ಕೃತಿಯನ್ನು ಸ್ಥಾಪಿಸಿದರು. ಹಿಂದುಚೀನ (ಇಂಡೋಚಾಯಿನಾ) ಮತ್ತು ಫಿಲಿಪಾಯಿನ್ಸ ದಲ್ಲಿ ಹಿಂದೂ ರಾಜ್ಯಗಳನ್ನು ಸ್ಥಾಪಿಸಲ್ಪಟ್ಟಿದ್ದ ಬಗ್ಗೆ ತಾಮ್ರಪಟ-ಶಿಲಾಲೇಖ ಮೊದಲಾದ ನಿರ್ವಿವಾದಗಳಾದ ಪುರಾವೆಗಳು ಪರಕೀಯ ಸಂಶೋಧಕರಿಂ-ದಲೇ ಇಂದು ಪ್ರಕಾಶಕ್ಕೆ ತರಲ್ಪಟ್ಟಿವೆ. ಬೌದ್ಧರಾಜ್ಯಗಳು ಹಿಂದ ಗಳವಷ್ಟೇ ಅಲ್ಲ, ಆದರೆ ವೈದಿಕ-ಹಿಂದುಗಳ ಈ ಕ್ಷತ್ರಿಯ ವಂಶಜರ ರಾಜ್ಯಗಳು, ಭಾರ ತೀಯ ಪ್ರಾಂತ ನಗರಗಳು ಅತ್ತ ಸ್ಥಾಪಿಸಲ್ಪಟ್ಟ ವಸಾಹತುಗಳಿಗೂ ಪಟ್ಟಣ ಗಳಿಗೂ ಇಟ್ಟ ಹೆಸರುಗಳ, ಶಿವ, ವಿಷ್ಣು, ಬುದ್ಧ ಪ್ರಭೃತಿ-ದೇವತೆಗಳ ಗುಡಿ ಗಳ, ವೇದ, ಮನುಸ್ಮೃತಿ ಪ್ರಭೃತಿ-ಗ್ರಂಥಗಳು ಸಯಾಮ, ಜಾವಾ, ಬ್ರಹ್ಮ ದೇಶ, ಹಿಂದುಚೀನ, ಬಾಲಿಯಿಂದ ಫಿಲಿಪಾಇನ್ನದ ವರೆಗೆ ನೂರುಗಟ್ಲೆ ವರ್ಷ ಭರಭರಾಟಿಗೆ ಬಂದಿದ್ದವು ಇದು ಶುದ್ಧವಾದ ಇತಿಹಾಸವಿವೆ!

ಆದರೆ ಆ ಇತಿಹಾಸದಲ್ಲಿ ಅಂಡಮಾನ ದ್ವೀಪಪುಂಜಗಳಂಥ ಸಣ್ಣ ಪುಟ್ಟ ದ್ವೀಪಗಳ ಹೆಸರು ಕೂಡ ಈಗಲೂ ದೊರೆಯದಿರುವದು ಆ ಕಾಲದ ಪ್ರಾಚೀನತ್ವದ ಮೂಲಕವೂ, ಇತಿಹಾಸ ವಿರಲತೆಯ ಮೂಲಕವೂ ವಿಶೇಷ ಸೋಜಿಗವೆನಿಸಲಿಕ್ಕೆ ಕಾರಣವಿಲ್ಲ. ಆದರೂ ಕೂಡ ಅಂಡಮಾನದೊಡನೆ ನಮ್ಮ ಭಾರತೀಯರ ಸಂಬಂಧವಿದ್ದ ಬಗ್ಗೆ ಇಂದು ದೊರೆಯುವ ಮೊದಲನೇ ಗುರ್ತೆಂದರೆ, ಅದರ ಹೆಸರು. ಜಾವಾ ಎಂಬ ಹೆಸರು ಹೇಗೆ ಆ ದೇಶದ ಆಕಾ ರದ ಮೇಲಿಂದ ಯವ ದ್ವೀಪವೆಂದಿಡಲಾಯಿತೋ. ಹಾಗೆಯೇ ಅಂಡಮಾನ ಎಂಬ ಹೆಸರಾದರೂ ಭಾರತೀಯರಿಂದಲೇ ಅದರ ಆಕೃತಿಯ ಮೇಲಿಂದ ಇಡ-ಲ್ಪಟ್ಟಿರಬೇಕು, ಎಂಬದನ್ನು ಮುಂದೆ ದೊರೆಯುವ ಯಾವುದೊಂದು ತದಿ

ರುದ್ಧ ಪುರಾವೆ ಬರುವವರೆಗಂತೂ ತಿಳಿಯಲಿಕ್ಕೆ ಅಡ್ಡಿಯಿಲ್ಲ. ಅದರ ಮುಂದೆ ಆ ದ್ವೀಪದ ಮೇಲೆ ಭಾರತೀಯರು ಪ್ರತ್ಯಕ್ಷ ರೀತಿಯಿಂದ ಹೋದ ಹಾಗು ಆ ದ್ವೀಪಗಳನ್ನು ಗೆದ್ದುಕೊಂಡ ನಿರ್ವಿವಾದವುಳ್ಳ ಐತಿಹಾಸಿಕ ಪುರಾವೆಯೆಂದರೆ, ಪಾಂಡ್ಯರಾಜನ ಶಿಲಾಲೇಖದ ಪ್ರಶಸ್ತಿಪತ್ರವು! ಅದೊಂದೇ ಪ್ರಶಸ್ತಿಪತ್ರದಿಂದ ಸಿದ್ಧವಾಗುವುದೇನಂದರೆ, ಪಾಂಡ್ಯರ ಒಬ್ಬ ಸೇನಾಪತಿಯು ಕ್ರಿ. ಶ. ದ ೧೦ನೇ ಶತಕದ ಸುಮಾರಿಗೆ ಈ 'ಸಮುದ್ರದ ಮೇಲೆ ದಿಗ್ವಿಜಯಕ್ಕೆಂದು ದೊಡ್ಡ ದೊಡ್ಡ ರಣತರಿಗಳದೊಂದು ಪ್ರಬಲವಾದ ನೌಸಾಧನ ತಕ್ಕೊಂಡು ಹೊರಟಿದ್ದನು. ಪರತೀರದ ಮೇಲಿನ ಇಂದಿನ ಪೇಗೂದೇಶದ ಮೇಲೆ ಆತನ ಜಲಸೈನ್ಯವು ಸಾಗಿ ಹೋಗಿ, ಆ ದೇಶವನ್ನು ಆತನು ಗೆದ್ದುಕೊಂಡನು. ಹಿಂದಿರುಗಿ ಬರುವಾಗ ಆ ಭಾರತೀಯ ಹಿಂದು ಸೈನ್ಯವು ಅಂಡಮಾನಾದಿಕ ದ್ವೀಪಗಳ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸಿ, ಅದನ್ನು ಪಾಂಡ್ಯ ಸಾಮ್ರಾಜ್ಯಕ್ಕೆ ಕೂಡಿಸಿತು. ಈ ಸ್ಪಷ್ಟನಾದ ಉಲ್ಲೇಖದ ಮೇಲಿಂದ ಈ ದ್ವೀಪಪುಂಜಗಳ ಇತಿಹಾಸದ ಯಾವ ಒಂದು ಮೊದಲನೇ ಸಾಲನ್ನು ಬರೆಯ ಬರುವದೋ? ಅದನ್ನಷ್ಟೇ ಬರೆಯಬಹುದು.

ಆದರೆ ಆ ಸಾಲಾದರೂ ಬರೆ-ಬರೆಯುತ್ತಲೆ ಅಪೂರ್ಣವಾಗುತ್ತದೆ; ಯಾಕಂದರೆ ಭಾರತೀಯ ಸೈನ್ಯವು ಅಲ್ಲಿಗೆ ಹೋಗಿತ್ತೆಂಬುದು ನಿಶ್ಚಿತವಾಗಿದ್ದರೂ ಆ ಹಿಂದೂ ಸೈನ್ಯವಾಗಲಿ, ಆ ಹಿಂದೂ ರಾಜ್ಯದ ಕೆಲ ಅಧಿಕಾರಿಗಳು ಅಥವಾ ನಾಗರಿಕರಾಗಲಿ ಅಲ್ಲಿ ವಾಸಿಸಿದರೋ ಇಲ್ಲವೋ ಎಂಬದರ ಪತ್ತೆಯು ಇದುವರೆಗೂ ಹತ್ತಿರುವುದಿಲ್ಲ. ನಾವು ಅಂಡಮಾನದೊಳಗಿರುವಾಗ ಒಮ್ಮೆ ಒಬ್ಬ ವಿಶ್ವಸನೀಯ ಇಂಗ್ಲಿಷ ಅಧಿಕಾರಿಯು ನಮಗೆ ಹೇಳಿದ್ದನೇನಂದರೆ, ಅಂಡಮಾನದಲ್ಲಿ ಭೂಮಿಯನ್ನಗಿಯುವಾಗ ಎಲ್ಲಿಯೋ ಒಂದು ಅರಮನೆಯ ಅವಶೇಷಗಳು ಕಾಣಹತ್ತಿವೆ; ಆದರೆ ಆ ಬಗ್ಗೆ ಮುಂದೇನಾಯಿತೆಂಬದು ನಮಗೆ ಇದು ವರೆಗೆ ಏನೊಂದೂ ತಿಳಿದಿರುವದಿಲ್ಲ. ಅಂಥ ಯಾವುದೊಂದು ಉತ್ಖನನೀಯ ಶೋಧ ಹತ್ತಿದ್ದರೆ ಅಥವಾ ಹತ್ತದಿದ್ದರೂ ಕೂಡ ಅಂಡಮಾನದಲ್ಲಿ ಹೊರಗಿನ ಯಾವ ಜನರ ವಸಾಹತೂ ಕಳೆದ ಮೂರುಸಾವಿರ ವರ್ಷಗಳ ಐತಿಹಾಸಿಕ ಕಾಲದಲ್ಲಿ ಇರಲಿಲ್ಲವೆಂಬ ಮಾತು ಖಂಡಿತವು.

ಮೇಲೆ ವಿವರಿಸಿದ ಪಾಂಡ್ಯರಾಜನ ಪ್ರಾಚೀನ ಪ್ರಶಸ್ತಿಯನ್ನು ಬಿಟ್ಟರೆ, ಅಂಡಮಾನದ ಅಸ್ಪಷ್ಟ ಅಂಧುಕ ಉಲ್ಲೇಖವು ಅರ್ವಾಚೀನ ಕಾಲದ ಮಾರ್ಕೋಪೋಲೋ, ನಿಕೋಲೋ, ಯುರೋಪಿಯನ್ ಹಾಗು ಕೆಲ ಅರಬೀ ಪ್ರವಾಸಿಗಳು ಇವರ ಪ್ರವಾಸವೃತ್ತಗಳಲ್ಲಿ ಬಂದಿರುತ್ತದೆ; ಆದರೆ ಅದು ಆ

ದ್ವೀಪದ ಮೇಲೆ ವಸತಿ ಮಾಡಿದ್ದಿರಬೆ, ಆದನ್ನು ಕೇಳಿದ, ಅದರ ಅಸ್ತಿತ್ವದ ಕೇವಲ ಭೌಗೋಲಿಕವು!

ಹೊರಗಿನ ಜನರ ಸಂಬಂಧದ ಯಾವ ಹೊರಗಿನ ಜನರ ಇತಿಹಾಸದಲ್ಲೂ ಅಂಡಮಾನದ ಇತಿಹಾಸವೆಂಬುದೇನೂ ಹೇಗೆ ದೊರೆಯುದಿರುವದೋ, ಹಾಗೆಯೇ ಅದರ ಸ್ವಂತದ ಜನರಲ್ಲೂ ಇತಿಹಾಸವೆಂಬುದು ಒಂದಕ್ಷರದಿಂದಾದರೂ ದೊರೆಯುವದಿಲ್ಲವೆಂಬದನ್ನು ಹೇಳುವದೇ ಅನವಶ್ಯಕವು! ಯಾಕಂದರೆ ಅಂಡಮಾನದಲ್ಲಿ ಅವರ ಸ್ವಂತದ ಜನರಿದ್ದರೂ ಅವರಿಗೆ ಅಕ್ಷರವೆಂದಂದರೇನೆಂಬದು ಇದುವರೆಗೂ ಗೊತ್ತಿರುವದಿಲ್ಲ!

ಇನ್ನು ಪರಂಪರೆಯ ದಂತಕಥಾತ್ಮಕ ಇತಿಹಾಸವೆಂದರೆ, ಆ ಅಂಡಮಾನದೊಳಗಿನ ಮೂಲನಿವಾಸಿಗಳ ದಂಶಗಳು ಬಹು ಗಟ್ಟಿಮುಟ್ಟಾಗಿದ್ದರೂ, ಅವರಿಗೆ ಕಥೆಯೆಂಬುದು ಇಲ್ಲವೇ ಇಲ್ಲ ಅವರಿಗೆ ಕಥೆಯ ಕಲ್ಪನೆಯೇ ಇನ್ನೂ ಬಂದಿರುವದಿಲ್ಲ! ಯಾಕಂದರೆ ಸ್ಮೃತಿ ಇದ್ದಲ್ಲಿಯೇ ಕಥೆಯು ಸಂಭವಿಸುತ್ತದೆ; ಆದರೆ ಅಂಡಮಾನದಲ್ಲಿ ಯಾವ ಮೂಲ ನಿವಾಸಿಗಳು ಇರುವರೋ, ಅವರ ಸ್ಮೃತಿಶಕ್ತಿಯು ಇನ್ನೂ ತೀರ ಅಪಕ್ವಸ್ಥಿತಿಯಲ್ಲಿರುವದರಿಂದ, ಅವರಿಗೆ ನಾಲ್ಕಾರು ವರ್ಷಗಳ ಸಂಗತಿಗಳು ಕೂಡ ತಿಳಿವಾಗಿ ನೆನಪಾಗುವದಿಲ್ಲ ನೆನಪು ಎಂದು ನಾವು ಏಕಕ್ಕೆ ಅನ್ನುವೆವೋ, ಅಂಥ ನೆನಪು ಅವರಿಗೆ ಉಳಿಯುವುದೇ ಇಲ್ಲ! ಗುರ್ತು-ಪರಿಚಯಗಳನ್ನು ಕೂಡ ಅವರು ಬಹು ಬೇಗನೆ ಮರೆಯುತ್ತಾರೆ ಅಂದಬಳಿಕ ಜಾತೀಯ ಸುಸಂಗತ, ಸಾಂಘಿಕ ಸ್ಮೃತಿ ಮತ್ತು ಪರಂಪರೆಯ ಪ್ರಾಚೀನ ಕಥೆಗಳೆಲ್ಲ ಅವರಲ್ಲೆಲ್ಲಿರಬೇಕು? ಪ್ರಾಣಿಗಳ ಹಿಂಡಿಗೆ, ಕೋತಿಗಳ ಗುಂಪಿಗೆ ಎಷ್ಟು ಪರಂಪರೆಯೂ ಸಾಮಾಜಿಕ ಸ್ಮೃತಿಯೂ ಇರುವದೋ, ಅದಕ್ಕಿಂತ ಕೊಂಚ ಹೆಚ್ಚಾಗಿ ಅವರ ಸಾಮಾಜಿಕ ಸ್ಮೃತಿಶಕ್ತಿಯು ವಿಕಾಸಹೊಂದಿರುತ್ತದಷ್ಟೇ ಅದರಿಂದ ದಂತಕಥಾತ್ಮಕವಾದ ಯಾವ ಅಲಿಖಿತ ಸ್ವಂತದ ಇತಿಹಾಸವೂ ಅಂಡಮಾನದ ಜನರಲ್ಲಿರುವದಿಲ್ಲ.

ಒಟ್ಟಿನಲ್ಲೇನು? ಜಗತ್ತಿನೊಳಗಿನ ಬೇರೆ ರಾಷ್ಟ್ರಗಳ ವಾಙ್ಮಯಗಳಲ್ಲಿ ಮೇಲೆ ವಿವರಿಸಿರುವ ಒಬ್ಬ ಪಾಂಡ್ಯರಾಜನ ಪ್ರಶಸ್ತಿಯ ಹೊರತು ಅಂಡಮಾನ ವಿಷಯದ ಐತಿಹಾಸಿಕ ಉಲ್ಲೇಖವಿರುವದಿಲ್ಲ. ಯುರೋಪಿಯನ್, ಅರಬೀ ಪ್ರವಾಸಿಗರ ಮಧ್ಯಕಾಲದ ಉಲ್ಲೇಖಗಳು ಕೇವಲ ಭೌಗೋಲ ವಿಷಯಕಗಳಾಗಿವೆ; ಅವು ಅಂಡಮಾನದ ಇತಿಹಾಸ ತಿಳಿಸತಕ್ಕವಲ್ಲ; ಮತ್ತು ಅಂಡಮಾನೀ ಜಾತಿಗಳೆಲ್ಲ ತೀರ ಕಾಡು, ಆದಿಮ, ಅವಿಕಸಿತ ಮಾನವರು. ಅವರುಗಳು ಸ್ವಂತ ಬರೆದ ಕಥೆಗಳಂತೂ ಇಲ್ಲಿ; ಆದರೆ ಜಾತೀಯ ಪೂರ್ವ

ವೃತ್ತಾಂತದ ದಂತಕಥೆಗಳು ಕೂಡ ಇರುವದಿಲ್ಲ! ಯಾವುದಕ್ಕೆ ಭೂಗೋಲ ಮಾತ್ರವೇ ಇದೆ ಇತಿಹಾಸವೆಂಬುದು ಇಲ್ಲವೇ ಇಲ್ಲ; ಅಂಥ ಅಂಡಮಾನ ವೆಂಬುದೊಂದು ಅಜಸ್ರ ಭೂಭಾಗವಿದೆ! ಅದರ ಇತಿಹಾಸವೆಂದರೆ, ಒಂದೇ ಒಂದು ಸಾಲು! ಅದು ಪಾಂಡ್ಯರಾಜನ ಪ್ರಶಸ್ತಿಯೊಳಗಿನದು!

ಅಂಡಮಾನಕ್ಕೆ ಇತಿಹಾಸವಿರದಿದ್ದರೂ ಮನುಷ್ಯ ಸಮಾಜಮಾತ್ರ ಇದೆ! ಇಷ್ಟೇ ಅಲ್ಲ, ಯಾವುದರ ಮೂಲ ಮನುಷ್ಯ ಸಮಾಜವು ಇಂದು ಅಂಡ ಮಾನದಲ್ಲಿದೆಯೋ, ಅದು ಐತಿಹಾಸಿಕ ಗಣನೆಯ ಭಾಷೆಯುಲ್ಲಂತೂ ತೀರ ಅನಾದಿಯಾಗಿದೆ! ಯಾಕಂದರೆ, ಅಲ್ಲಿ ಇಂದಿಗೆ ಯಾವ ಮೂಲ ಕಾಡು ಆದಿ ಮನುಷ್ಯರ ಜಾತಿಗಳು ನಿವಾಸಿಸಿರುವವೋ, ಅವರ ಅಸ್ತಿತ್ವದ ಪ್ರಾರಂಭವೇ ಸಿಗುವದಿಲ್ಲ. ತೀರ ಪ್ರಾಚೀನತೆಯ ಕಾಲದಿಂದಲೂ-ಕ್ವಚಿತ್ ಮರ್ಕಟನು ಮನುಷ್ಯನು ಆಗಹತ್ತಿದಾಗಿನಿಂದಲೂ-ಅವು ಇದ್ದಂತೆಯೇ ಇಂದಿಗೂ ಇದ್ದು, ಆಗ ಹೇಗೆ ವಾಸಿಸುತ್ತಿದ್ದವೋ ಈಗಲೂ ಹಾಗೆಯೇ ವಾಸಿಸುತ್ತವೆ.

ಮಂಗಗಳು ಮನುಷ್ಯರಾಗ ಹತ್ತಿದಾಗ ಮೊದಲು ಬಾಲವು ಉದುರಿ ಬಿದ್ದು ಮಂಗನೆಲುಬಷ್ಟೇ ಉಳಿಯಹತ್ತಿತು ಮಂಗನೆಲುವು ಎಂಬ ಹೆಸರನ್ನು ನಾವು ನಮ್ಮ ಆ ಸ್ಥಳದ ಮೂಳೆಯ ಒಂದು ಎಲುವಿಗೆ ಈಗಲೂ ಇಲ್ಲಿ ಅನ್ನುತ್ತಿ ದ್ದರೂ, ಆ ಎಲುವು ಈಗ ಮೊದಲಿಗಿಂತಲೂ ತೀರ ಸಪಾಟಾಗಿಬಿಟ್ಟಿದೆ; ಆದರೆ ಅಲ್ಲಿ ತೀರ ಅಂಡಮಾನದಲ್ಲಲ್ಲದಿದ್ದರೂ ಆ ದ್ವೀಪಪುಂಜಗಳ ಎಡಬಲಗಳ ಭೂ ಭಾಗದಲ್ಲಿ ಇಂದಿಗೂ ಅಂಥ ಮನುಷ್ಯರು ಒಮ್ಮೊಮ್ಮೆ ಕಾಣಿಸುತ್ತಿದ್ದು, ಅವರ ಮಂಗನೆಲುವು ಸಾಧಾರಣವಾಗಿ ಒಂದೂವರೆ-ಎರಡು ಇಂಚು ಎತ್ತರವಾಗಿರು ತ್ತದೆ. ನಾವು ಅಂಡಮಾನದಲ್ಲಿರುವಾಗ ಅಂಥ ಒಬ್ಬ ಮನುಷ್ಯನು ಅಲ್ಲಿಯ ಔಷಧಾಲಯಕ್ಕೆ ಬಂದಾಗ, ಅಲ್ಲಿಯ ಡಾಕ್ಟರನು ನಮಗೆ ತೋರಿಸಿದ್ದನು. ಆತನ ಮಂಗನೆಲುವು, ಬಾಲದ ಎಲುಬು ಹಾಗೆಯೇ ಮೇಲಕ್ಕೆದ್ದಿತ್ತಾದ್ದರಿಂದ, ಅವನಿಗೆ ಖುರ್ಚಿಯ ಮೇಲೆ ಆತು ಕೂಡ್ರಲಿಕ್ಕೆ ಬಾರದಂತಿದ್ದಿತು; ಅದಕ್ಕೆ ಹೊಂದಿ ಬಾಲದ ಕೂದಲುಗಳ ಸ್ನಾಯುವು ಮಾತ್ರ ಇಳಿಬಿದ್ದಿರಲಿಲ್ಲ. ಅದಷ್ಟು ಲೋಪವಾಗಿದ್ದಿತು. ಆತನ ಗದ್ದ-ಗಲ್ಲಗಳಾದರೂ ಮಂಗನ ಆ ಅವಯವ ಗಳಿಗೆ ಬಹುಮಟ್ಟಿಗೆ ಹೋಲುತ್ತಿದ್ದವು. ಆತನ ನಾಲ್ವತ್ತು-ಐವತ್ತು ಶಬ್ದ ಗಳದೇ ಏಕಾಗಲೊಲ್ಲದು, ಒಂದು ಭಾಷೆಯು ಇದ್ದು, ಅದು ಜಾತಿವಂತ ಮರ್ಕಟ ಮನುಷ್ಯರಿಗೆ 'ಓರಾಂಗಓಟಾಂಗ,' 'ಗೋರಿಲ್ಲಾ' ಗಳಿಗಿರುವಂತೆ ಇದ್ದಿತು. ಆ ಓರಾಂಗಓಟಾಂಗ ಇಲ್ಲವೆ ಗೋರಿಲ್ಲಾ ಮರ್ಕಟಮನುಷ್ಯರಪೂ ಒಂದು ಭಾಷೆಯಿಂದೆ ಅವುಗಳ ಹಲವು ಶಬ್ದಗಳನ್ನು ಕೆಲ ಪ್ರವಾಸಿಗರಾದ

ಪ್ರಾಣಿಶಾಸ್ತ್ರಜ್ಞರು ಎಣಿಸುವ ಪ್ರಯತ್ನ ಮಾಡಿರುತ್ತಾರೆ ಆದರೂ ಕೂಡ ನಾವು ನೋಡಿದ ಬಾಲದ ಅವಶೇಷವುಳ್ಳ ಮನುಷ್ಯನಿಗೆ ಯಾವುದಾದರೊಂದು ಮಾನವೀ ಭಾಷೆಯಲ್ಲಿ ಸೇರ್ಪಡೆಯಾಗಬಹುದಾದಂತಹ ಭಾಷೆ ಬರುತ್ತಿತ್ತು; ಆತನು ಮನುಷ್ಯಪ್ರಾಣಿಯಾಗಿದ್ದನು, ಎಂಬುದೇ ಮುಖ್ಯ ಭೇದವು ಕಂಡುಬಂದಿತು.

ಆತನು ಅಪವಾದಾತ್ಮಕ ಪ್ರಾಣಿಯೆಂದು ಹೇಳಿದೆ; ಆದರೆ ಅಂಡಮಾನದೊಳಗಿನ ತೀರ ತಜ್ಜನ್ಯವಾದಂಥ ಅನಾದಿಕಾಲದಿಂದಲೂ ವಾಸಿಸುತ್ತಿರುವ ಜಾತಿಯಾದ 'ಜಾವರಾ' ಇದೇನೂ, ಮಂಗನೆಲುವುಳ್ಳದಲ್ಲ. ಅದರೊಳಗಿನ ಜನರು ಸಾಧಾರಣವಾಗಿ ನಾಲ್ಕು-ನಾಲ್ಕೂವರೆ ಫೂಟು ಎತ್ತರದವರಿರುತ್ತಾರೆ ಅವರ ಬಣ್ಣವು ತೀರ ಕಪ್ಪು; ಕೂದಲು ಒರಟು, ಲಂಡ ಹಾಗು ಹುರಿಗಟ್ಟಿದಂತಿರುತ್ತವೆ ಗಡ್ಡ-ಮೀಸೆಗಳು ಗಂಡಸರಿಗೂ ಕೂಡ ಹುಟ್ಟುವುದೇ ಇಲ್ಲ. ಅವರೆಲ್ಲರೂ ತೀರ ಉಲ್ಲಿಂಗ-ನಗ್ನರು! ಮನುಷ್ಯಪ್ರಾಣಿಯು 'ತಿದ್ದುಪಡೆ ಆಗುತ್ತ ಆಗುತ್ತ' ನಮ್ಮ ಕಡೆಗೆ ಇಂದಿನ ಯಾಂತ್ರಿಕ ಯುಗದಲ್ಲಿ ಯಾವ ಅವಸ್ಥೆಗೆ ತಲುಪಿರುವನೋ, ಈ ನಮ್ಮ ಸುಧಾರಣೆಯೂ, ಈ ನಮ್ಮ ಯಂತ್ರಯುಗವೂ ಇವೇ ನಮ್ಮಗಳೊಳಗಿನ ಯಾವ ಒಂದು ಸಂಪ್ರದಾಯಿಗಳಿಗ ಮನುಷ್ಯ ಜಾತಿಗೆ ಆದ ಒಂದು ದುರ್ಧರವಾದ ಶಾಪವೆನಿಸುವದೋ, ಆ ಸಾದಾ ಇರವಿನ ಯಂತ್ರ ಯುಗದ್ವೇಷೀ ಪಂಥದವರ ಬಾಯಿಗೆ ತೀರ ನೀರೊಡೆಯುವ, ಇಷ್ಟು ಸಾದಾ ಇರವು ಆ 'ಜಾವರಾ' ಜಾತಿಯಲ್ಲಿ ಅನಾದಿಕಾಲದಿಂದ ಇಂದಿನವರೆಗೂ ನಡೆದು ಬಂದಿರುತ್ತದೆ ಬಟ್ಟೆ ಧರಿಸಬೇಕೆಂಬ ಮೋಹವೇ ಅವರಿಗುಂಟಾಗುವದಿಲ್ಲ. ಬರೀ ಬತ್ತಲೆಯಿಂದಿರುವುದೇ ಸಾಧುಲಕ್ಷಣವಾಗಿದ್ದರೆ, ಜಾವರಾ ಜನರು ನಮ್ಮ ಕಡೆಯ ಸಾಧುಗಳಿಗಿಂತ ಶ್ರೇಷ್ಠ ವರ್ಗದ ಸಾಧುಗಳಾಗಿರುತ್ತಾರೆ! ನಮ್ಮ ಕಡೆಯ ಸಾಧುಗಳಿಗೆ ಟೊಂಕಕ್ಕೊಂದು ಪಂಜೆ ಸುತ್ತುವ ಅಥವಾ ಲಂಗುಟವನ್ನಾದರೂ ಧರಿಸುವ ಮೋಹವು ಉಂಟಾಗದಿರುವದಿಲ್ಲ; ಆದರೆ ಆ ಜಾವರಾ ಜಾತಿಯೊಳಗಿನ ಪುರುಷರಷ್ಟೇ ಅಲ್ಲ, ಸ್ತ್ರೀಯರೂ ಸಹ ಟೊಂಕಕ್ಕೆ ಗೇಣುದ್ದ ಚಿಂದಿಯನ್ನು ಕೂಡ ಕಟ್ಟುವುದಿಲ್ಲ; ಮತ್ತು ತಾವು ಉಲ್ಲಿಂಗವಿದ್ದು, ಯಾವುದೊಂದು ಶತಕೃತ್ಯ ಮಾಡುತ್ತಿರುವೆವೆಂಬ ಭಾವನೆಯೂ ಅವರಲ್ಲಿರುವುದಿಲ್ಲ; ಯಾಕಂದರೆ ವಸ್ತ್ರಪ್ರಾವರಣದ ಕಲ್ಪನೆಯೇ ಅವರಿಗೆ ಸೋಂಕಿರುವುದಿಲ್ಲ. ಅವರ ಸಾದಾ ಇರವು ತೀರ ಸಾದಾ ಇರುವುದರಿಂದ, ಅವರಿಗೆ ಗಿರಣಿಗಳ ಶಾಪವೇ ಏಕೆ, ಚರಖದ ಅಥವಾ ಕದರಿನ ಶಾಪ ಕೂಡ ಎಂದೂ ಉಂಟಾಗಿಲ್ಲ. ಡೌಲು-ದಂಭದ ವ್ಯಸನಕ್ಕಾಗಿ ಸುಧಾರಿಸಿದ ಮನುಷ್ಯನು ತೀರ

ಅಧೋಗತಿಗೆ ನಡೆದಿರುತ್ತಾನೆಂದು ಯಾರಿಗೆ ಅನ್ನವು ರುಚಿಸುವದಿಲ್ಲವೋ, ಆ ನಮ್ಮಕಡೆಯ 'ಸಾದಾ ಇರವಿನ' ಅಭಿಮಾನಿಗಳಿಗೆ ಈ ಜಾವರಾ ಜನರು ಡೌಲು-ದಂಭಗಳಿಂದ ನಿರ್ಲಿಪ್ತರಾಗಿರುತ್ತಾರೆಂಬದನ್ನು ಕೇಳಿ ಆನಂದವಾದೀತು. ಆವರ ಹೆಂಗಸರಲ್ಲಿ ಒಬ್ಬಾನೊಬ್ಬ ತರುಣಿಯು ವಿಲಾಸಲೋಲುಪತೆಯುವಳಾದರೆ ಅವಳು ಯಾವುದೊಂದು ಗಿಡದ ಎಲೆಯನ್ನಷ್ಟು ತನ್ನ ಟೊಂಕದ ಮುಂಭಾಗಕ್ಕೆ ಸುತ್ತಿಕೊಳ್ಳುವಳು; ಮತ್ತು ಯಾವನೊಬ್ಬ ಗಂಡಸು ಬಹಳೇ ಡೌಲಿನವನಾದರೆ, ಕೆಂಪು ಬಣ್ಣದ ಮಣ್ಣಿನ ಪಟ್ಟೆಗಳನ್ನು ಮೈತುಂಬ ಬಳಕೊಳ್ಳುವುದರಲ್ಲಿಯೇ ಆತನ ಆ ಡೌಲು-ದಂಭಗಳೆಲ್ಲ ಕೂಡಿದಂಥವೂ ಸಂತುಷ್ಟಗೊಂಡಂಥವೂ ಆಗಿ ತೋರುವವು. ಯಂತ್ರಯುಗಕ್ಕೆ ಅಧೋಗತಿಎನ್ನುತ್ತಿರುವವರ ಭಾಷೆಯಲ್ಲಿ ಹೇಳುವುದಾದರೆ, ಆ ಜಾವರಾ ಜನರ ಪ್ರಗತಿಯು ವಿಶೇಷವಾಗಿರುತ್ತದೆ ಯಂತ್ರಯುಗದ ಪ್ರಲೋಭನದಿಂದ ಅವರು ತೀರ ಅಲಿಪ್ತರಿರುತ್ತಾರೆ ಅವರಿಗೆ ಮೋಟರು, ರೈಲು, ವಿಮಾನಗಳಂತೂ ಇರಲಿ; ಆದರೆ ಚಕ್ಕಡಿ, ಬಂಡಿಗಳು ಕೂಡ ಗೊತ್ತಿರುವದಿಲ್ಲ. ಅವರಿಗೆ ಖುರ್ಚಿ ಗೊತ್ತಿಲ್ಲ, ಕಡ್ಡಿಪೆಟ್ಟಿಗೆ ಗೊತ್ತಿಲ್ಲ, ಜೋಡು ಗೊತ್ತಿಲ್ಲ, ಬಂಗಲೆ ಗೊತ್ತಿಲ್ಲ, ಹೊಲ ಗೊತ್ತಿಲ್ಲ, ಜಿಲೇಬಿ ಗೊತ್ತಿಲ್ಲ, ದ್ರಾಕ್ಷಿ ಗೊತ್ತಿಲ್ಲ, ಬೆಣ್ಣೆ ಗೊತ್ತಿಲ್ಲ; ಸಜ್ಜೆ ಜೋಳ ಗೊತ್ತಿಲ್ಲ; ಅಂದಬಳಿಕ 'ಮಿಶಿವಾಟರ'-'ಗಾಯುವಾಟರ' ಗಳ ಸುದ್ದಿಯೇ ಬೇಡ! ಮನುಷ್ಯಜಾತಿಯೊಳಗಿನ ಮನುಷ್ಯರ ಅಸಮಾಧಾನದ, ಕಲಹದ, ಕೃತ್ರಿಮ ಜೀವನದ ಸಂಕಟವು ಯಾವ ಒಂದೇ ಕಾರಣದಿಂದುಂಟಾಗಿರುವದೋ, ಅಂಥ 'ಸಾದಾ ಇರವಿನ' ಇತ್ತಕಡೆಯ ಅಧ್ವರ್ಯುಗಳು ತಿಳಿಯುತ್ತಿರುವಂತಹ ಆ 'ಸುಧಾರಣೆ'ಯ ಹೆಸರಿನಿಂದಲೇ ಅಲ್ಲ, ಇಚ್ಛೆಯಿಂದಲೂ ಕೂಡ ಆ ಜಾವರಾ ಜನರು ಅಲಿಪ್ತರೂ ಅಕಲಂಕಿತರೂ ಆಗಿರುವರು!

ಆದರೆ ಸಾದಾ ಇರವಿನಿಂದ, ಯಂತ್ರಯುಗದ ಶಾಪದಿಂದ ವಿಮುಕ್ತರಾಗುವದರಿಂದ, ನಿಸರ್ಗದ ಕಡೆಗೆ ಹಿಂದಿರುಗಿದ್ದರಿಂದ ಮನುಷ್ಯರಲ್ಲಿ ನಿರಪವಾದ ಸಮಾಧಾನ ನೆಲಸೀತೆಂದು ಯಾವ 'Back to Nature'ವಾದೀ ಜನರು ಅನ್ನುವರೋ, ಅದರಂತೆ ಆ ಜಾವರಾರೊಳಗೆ ಆ ಸಮಾಧಾನವು ನೆಲೆಸಿರುವದೇನು? ಕೊಂಚವೂ ಇಲ್ಲ! ಹೊಲವಿಲ್ಲ, ರಂಟೆಯಿಲ್ಲ, ಬ್ಯಾಂಕಿನಲ್ಲಿ ನೋಟ-ಹಣವಿಲ್ಲ, ಬಂಗಲೆಯಿಲ್ಲ; ಆದರೆ ದಟ್ಟ ಅರಣ್ಯದಲ್ಲಿಯ ಯಾವ ಕೊನ್ನಾರದೊಳಗಿನ ಸ್ಥಳ ಇಲ್ಲವೆ ಮಾಂಸದ ತುಂಡು ತಾತ್ಪೂರ್ತಿಕ ಅಗ್ರಾಧಿಕಾರದಿಂದ ಒಬ್ಬ ಜಾವರನದಿದ್ದಿತೋ, ಅದರ ಮೇಲೆ ಇನ್ನೊಬ್ಬನ ದೃಷ್ಟಿ ಬೀಳುತ್ತಲೆ ಅಥವಾ ಬೀಳಬಾರದೆಂದು ಆತನು ವಹಿಸಬೇಕಾದ ಚಿಂತೆ, ಪಡಬೇಕಾದ

ದಕ್ಷತೆ ಮತ್ತು ಪ್ರಸಂಗದಲ್ಲಿ ಕಾದಲಿಕ್ಕೆ ಬೇಕಾದ ದ್ವೇಷ ಇವೆಲ್ಲ ಯಾವನೊಬ್ಬ ಕೇಸರ, ಝೂರ, ಲೇನಿನರಷ್ಟೇ ಅವರಲ್ಲಿರುವವು. ನಮ್ಮನಿಮ್ಮಗಳಿಗೆ ಹೊಟ್ಟೆಪಾಡಿನ ಗಳದು ಎಷ್ಟು ಕಷ್ಟ ಅಥವಾ ಚಿಂತೆಯಿರುವದೋ, ಅದಕ್ಕಿಂತಲೂ ಹೆಚ್ಚಿನ ಚಿಂತೆಯು ಅಡವಿಯ ಆ ಕಂದ-ಮೂಲ ಇಲ್ಲವೆ ಬೇಟೆ ಸಂಪಾದನೆಯಲ್ಲೂ, ಅದು ಸಿಕ್ಕೀತೋ ಇಲ್ಲವೋ ಎಂಬ ವಿವಂಚನೆಯಲ್ಲೂ ಜಾವರಾನು ಪ್ರತಿದಿನ ಬೆಳಿಗ್ಗೆ ಪೇಚಾಡಬೇಕಾಗುತ್ತದೆ, ಹಂದಿಯು ಬೆನ್ನ ಹಿಂದೆ ಬಾಣ ಹಿಡಿದು ಓಡುವಾಗ ಇಲ್ಲವೆ ಮೀನ ಹಿಡಿಯುತ್ತಿರುವಾಗ ಕಷ್ಟವಹಿಸಬೇಕಾಗುತ್ತದೆ, ಭಯದಿಂದ ಜೀವಕ್ಕಾಗಿ ಓಡಬೇಕಾಗುತ್ತದೆ, ಬೇನೆಯಲ್ಲಿ ನರಳಬೇಕಾಗುತ್ತದೆ, ಕಾಡಿನ ವಿಷಾರಿ ನೊಣ-ಜಂತುಗಳು ಕಚ್ಚಿದಾಗ ಕಳವಳಪಡಬೇಕಾಗುತ್ತದೆ, ಮತ್ಸರದಿಂದ ಕುದಿಯುದೇಕಾಗುತ್ತದೆ, ತಮ್ಮ ತಮ್ಮೊಳಗೆ ಬೈಯುವದು-ಅನ್ನುವದು, ಹೊಡೆಯುವದು-ಬಡೆಯುವದು, ಸಣ್ಣ-ಪುಟ್ಟ ಕದನ ಕಾದುವುದು, ಈಗ ಹೊಡೆದ ಮೀನವು ನನ್ನದೋ-ನಿನ್ನದೋ ಈ ಬಂಡವಲುಶಾಹಿಯ ಪ್ರಶ್ನೆಯು ಮೇಲೆ, ನಾವುಗಳು ಈ ಬಂಗಾರದ ಖಣಿಯಂ ನನ್ನದೋ-ನಿನ್ನದೋ, ಈ ರಾಜ್ಯವು ನನ್ನದೋ-ನಿನ್ನದೋ ಇದಕ್ಕಾಗಿ ಹೇಗೆ ಬಡೆದಾಡುವೆವೋ-ಕಾದುವೆವೋ ಹಾಗೆಯೇ ಆ ಜಾವರಾಗಳು ತಮ್ಮ ತಮ್ಮೊಳಗೆ ಬಡೆದಾಡಿ-ಕಡೆದಾಡಿ, ಸಾಯುವವರೆಗೂ ಕಾದಬೇಕಾಗುತ್ತದೆ! ಬರಿಯ ಸಾದಾ ಇರವಿನಿಂದ 'ಯಂತ್ರಯುಗದ ಶಾಪ'ವು ತೊಲಗಿ, ಶಾಂತತೆ-ಸಮಾಧಾನಗಳು ನೆಲಿಸುತ್ತಿದ್ದರೆ, ಆ ಜಾವರಾ ಜನರು ಜೀವನ್ಮುಕ್ತರೇ ಎಂದು ತಿಳಿಯಬೇಕಾದೀತು! ಯಾಕಂದರೆ, ಅವರು ಬಹುಮಟ್ಟಿಗೆ ಕೋತಿಗಳಷ್ಟೇ ಸಾದಾ ಇರವಿನ ಉಪಾಸಕರಿಸುತ್ತಾರೆ; ನಿಸರ್ಗಕ್ಕೆ ಅನುಸರಿಸಿ ಇರುತ್ತಾರೆ; ಆದರೆ ಅಸಂತೋಷ, ಅಸಮಾಧಾನ, ಜೀವನಕಲಹ ಇವುಗಳ ಪಾತಳಿಯೂ ಪ್ರಕಾರವೂ ಭಿನ್ನಭಿನ್ನವಿದ್ದರೂ ಕೂಡ, ಅವುಗಳ ತೀವ್ರತೆಯೂ ಅಪರಿಹಾರ್ಯವೂ ಆಯಾ ಜಾವರಾಗಳ 'ನೈಸರ್ಗಿಕ' ಯುಗದಲ್ಲಿಯೂ ನಮ್ಮ ಯಂತ್ರಯುಗಕ್ಕಿಂತಲೂ ವಿಶೇಷ ಕಡಿಮೆಯಿದ್ದದ್ದು ಕಂಡುಬರುವದಿಲ್ಲ. ತದ್ವಿರುದ್ಧವಾಗಿ ಅವರ ಜೀವನದ ವಿಕಾಸವು ಮಂಗನ ಜೀವನವಿಕಾಸಕ್ಕಿಂತ ವಿಶೇಷವಾಗಿರದ್ದಕ್ಕೆ ಅವರ ಮಂಗನ ಆ ಸಾದಾ ಇರವೇ ಕಾರಣವೆಂಬದು ಸ್ಪಷ್ಟವಿದೆ.

ಅಂಡಮಾನದೊಳಗಿನ ಮೇಲೆ ವಿವರಿಸಿದ ಜಾವರಾ ಜಾತಿಯು ಇದ್ದದ್ದರಲ್ಲೂ ತೀರ ಆದಿಮ, ಕಾಡು. ಸುಧಾರಿಸಿದ ಈಗಿನ ನಮ್ಮ ಪದ್ಧತಿಯ ಪರಕೀಯ ಜನರ ಭಿಡೆ-ಮುರವತ್ತಿಲ್ಲದೆ ಭಯದಿಂದಲೂ ದ್ವೇಷದಿಂದಲೂ ಅದು ದೂರವಾಸಿಸುವ ಇಚ್ಛೆಯುಳ್ಳದ್ದಾಗಿದ್ದರೂ, ಅಂಡಮಾನದೊಳಗಿನ ಮೂಲ

ನಿವಾಸಿಗಳ ಬೇರೆ ಹಲವು ಜಾತಿಗಳು ಆ ಜಾವರಾರಿಗಿಂತ ನಡೆ-ನುಡಿ, ಇರವು, ಘಟನೆ ಪ್ರಭೃತಿ ಪ್ರಕರಣಗಳಲ್ಲಿ ಭಿನ್ನಪ್ರಕಾರದವಾಗಿರುತ್ತವೆ. ಆಯಾ ಮಾನದಿಂದ ಮುಂದುವರಿಸಿದಂಥವೂ ಇವೆ. ಅವರುಗಳ ಪೃಥಕ್‌ತನ ಹಾಗು ಸಾಮಾನ್ಯತೆಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ ಇಂಗ್ಲಿಷ ಸಮಾಜ ಜ್ಞರು ಅವರ ಬಗ್ಗೆ ಯಾವ ಮಾಹಿತಿ ಹೇಳಿರುವರೋ, ಅದರಲ್ಲಿಯು ಸರ್ವ ಸಾಧಾರಣ ಸಂಗತಿಯುನ್ನು ಈ ಕಥಾನಕಕ್ಕೆ ಸಂಬಂಧಿಸಿದಮಟ್ಟಿಗೆ ಈ ಕೆಳಗೆ ಕೊಡೋಣ.

ಅಂಡಮಾನದಲ್ಲಿ ಯಾವ ಹತ್ತು-ಹನ್ನೆರಡು ತತ್ರಸ್ಥ ಮೂಲ ನಿವಾಸಿಗಳ ಜಾತಿಗಳಿರುವವೋ ಅವುಗಳಲ್ಲಿ ಕಾರಿ, ಕೋರಾ, ಟಬೋ, ಬೋ, ಬಲವಾ, ಜಾವರಾ, ಜುಬಈ, ಕೋಲ ಮುಂತಾದ ಹೆಸರಿನ ಜಾತಿಗಳಿವೆ. ಕೊನೆಯು 'ಕೋಲ' ಎಂಬ ಹೆಸರು ಲಕ್ಷ್ಯದಲ್ಲಿಡತಕ್ಕದ್ದಾಗಿದೆ; ಯಾಕಂದರೆ, ನಮ್ಮ ಕಡೆಯು ಗುಡ್ಡ-ಬೆಟ್ಟ-ಅಡವಿಗಳಲ್ಲಿರುವ ಕೊಳೀ ಜನರವೂ ಆ ಜನರವೂ ಹೆಸರು-ಚಾರಿತ್ರ್ಯಗಳು ತುಲನಾರ್ಹವಾಗಿವ. ಆ ಜಾತಿಯು ಕೆಲವು ಸಂಘ ಗಳು ಯಾವುದೊಂದು ಘನದಟ್ಟ ಅಡವಿಯುಲ್ಲಿದ್ದರೆ, ಬೇರೆ ಸಂಘಗಳು ಎತ್ತ ರವಾದ ಪರ್ವತಗಳಲ್ಲಿರುವರು; ಕೆಲವರು ಸಮುದ್ರದ ಬಳಿಯ ಬೈಲು ಪ್ರದೇಶದಲ್ಲಿ ವಾಸಿಸುವರು. ಅವರ ನಡೆ-ನುಡಿ, ಭಾವ-ಭಾವನೆಗಳು, ರಂಗ-ರೂಪಗಳು ಮೇಲಿನ ಪರಿಸ್ಥಿತಿಯ ಭೇದದಿಂದ ಹಾಗು ಕ್ವಚಿತ್ತಾಗಿ ವಂಶ ಭೇದದಿಂದ ಭಿನ್ನ ಭಿನ್ನವಾಗಿದೆ. ಆದರಿಂದ ಅವರ ಸರ್ವಸಾಧಾರಣ ವರ್ಣನೆ ಯುಲ್ಲಿ ಯಾವ ಪ್ರಬೇಧತೋರುವದೋ, ಅದರ ನಿರ್ಣಯವನ್ನು ವಾಚಕರೇ ಮಾಡಿಕೊಳ್ಳಬಹುದಾಗಿದೆ.

ಜಾವರಾ ಪ್ರಭೃತಿ ಜಾತಿಗಳು ಅತ್ಯಂತ ಕ್ರೂರವಾಗಿವೆ. ಮುಂಚೆ ಬಿರುಗಾಳಿಯಿಂದ ಎಷ್ಟೋ ಹಡಗಗಳು ಈ ದ್ವಿಪಕ್ಕೆ ಬಡೆದು ಒಡೆಯುತ್ತಿದ್ದವು; ಅಥವಾ ದಾರಿ ತಪ್ಪುತ್ತಿದ್ದವು ಆಗ ಅವುಗಳ ಮೇಲಿನ ನಿಸ್ಸಹಾಯ ಜನರ ಮೇಲೆ ಏರಿ ಹೋಗಿ, ಅವರನ್ನು ಈ ಜಾವರಾ ಪ್ರಭೃತಿ ಅಂಡಮಾನೀ ಯರು ಕ್ರೂರತನದಿಂದ ಕೊಲೆಗೆಯ್ಯುತ್ತಿದ್ದರು; ಇಂದಿಗೂ ಅವರ ಗುರ್ತಿನ ತತ್ರಸ್ಥ ಜಾತಿಯ ಹೊರಗಿನ ಯಾವ ಪರಕೀಯನನ್ನು ಅಥವಾ ಅಂಡ ಮಾನದಬೇರೆ ಜಾತಿಗಳ ಮನುಷ್ಯರನ್ನು ಕಂಡೊಡನೆಯೇ ಈ ಕಾಡು ಜನರು ನಿಬಿಡವಾದ ಗಿಡಗಳೊಳಗಿಂದ ಅವರ ಮೇಲೆ ತೀಕ್ಷ್ಣ ಬಾಣಗಳನ್ನು ಸುರಿಸಿ ಇಲ್ಲವೆ ಒಬ್ಬಿಬ್ಬ ಮನುಷ್ಯರನ್ನು ಹಿಡಿದು ಕೊಲೆಗೆಯ್ಯುತ್ತಾರೆ. ಎಂದಾದ ರೊಮ್ಮೆ ಯಾರಿಗಾದರೂ ಇವರಿಂದ ಜೀವದಾನ ದೊರೆತರೆ ಅವರ ಭಾಗ್ಯವು

ಅದ್ಭುತವೆಂದೇ ತಿಳಿಯಬೇಕು! ಜಾವರಾ ಜನರು ಕೊಲೆಗೆಯ್ದ ಜನರ ಹೆಣದ ಮೇಲೆ ಕಲ್ಲಿನ ರಾಶಿಯು ಒಟ್ಟಲ್ಪಟ್ಟಿರುತ್ತದೆ. ತಾವು ಅಡವಿಯಲ್ಲಿ ಕೊಲೆಗೆಯ್ದ ಅಂಥ ಪರಕೀಯ ಮನುಷ್ಯನ ಸಂಗತಿಯನ್ನು ಆ ಪರಕೀಯ ಶತ್ರುಗಳಿಗೆ ಅಲ್ಲಿಯ ಪಕ್ಷಿಗಳು ಹೋಗಿ ತಿಳಿಸುತ್ತವೆ, ಎಂಬದೊಂದು ತಿಳುವಳಿಕೆ ಅವರಲ್ಲಿಯ ಕೆಲ ಜಾತಿಗಳಲ್ಲಿ ಕಂಡುಬರುತ್ತದೆ; ಯಾಕಂದರೆ, ಅವರು ಪಶು-ಪಕ್ಷಿಗಳನ್ನು ಮನುಷ್ಯರಿಗಿಂತ ವಿಶೇಷ ಭಿನ್ನವಾಗಿ ಎಣಿಸುವದಿಲ್ಲ.

ಇವರಲ್ಲಿ ಸ್ತ್ರೀ-ಪುರುಷ ಸಂಬಂಧದ ರೀತಿ-ರಿವಾಜುಗಳು ಬೇರೆ ಬೇರೆಯಾಗಿರುತ್ತವೆ. ಸ್ತ್ರೀ-ಪುರುಷರ ಕೆಲಸಗಳು ಬಹುಮಟ್ಟಿಗೆ ಹಂಚಲ್ಪಟ್ಟಿರುತ್ತವೆ ಸ್ತ್ರೀಯ ಸ್ಥಾನವು ಗಂಡಸರಿಗಿಂತಲೂ ಕಡಿಮೆ ತರಗತಿಯದೆಂದು ತಿಳಿಯುತ್ತಾರೆ. ವೃದ್ಧ ಸ್ತ್ರೀಯರನ್ನು ಸನ್ಮಾನಪೂರ್ವಕವಾಗಿ ಕಾಣುತ್ತಾರೆ. ಲಗ್ನಕ್ಕೆ ಮುಂಚೆ ಸ್ತ್ರೀಯರು ಪುರುಷರೊಡನೆ ಹೆಚ್ಚು ಸಲಿಗೆಯಿಂದಿರುತ್ತಾರೆ. ಅವಿವಾಹಿತ ಸ್ತ್ರೀಯರಿಗೆ ಲೈಂಗಿಕ ನಿರ್ಬಂಧವು ಹೆಚ್ಚಾಗಿರುವದಿಲ್ಲ. ಕೆಲ ಜಾತಿಗಳಲ್ಲಿ ಅವರು ತಮ್ಮ ಗಂಡಸನ್ನು ತಾವೇ ಆರಿಸಿಕೊಳ್ಳುತ್ತಾರೆ. ಕೆಲವು ಜಾತಿಗಳಲ್ಲಿ ತಂದೆ-ತಾಯಿಗಳು ಲಗ್ನ ನಿಶ್ಚಯಿಸಿದರೆಂದರೆ, ಮನ್ನಿಸುತ್ತಾರೆ. ಅಲ್ಲಿ ಬಹು ಪತ್ನೀತ್ವವೂ ಹೆಚ್ಚಾಗಿಲ್ಲ; ಮತ್ತು ಬಹು ಪತೀತ್ವವೂ ಇಲ್ಲ. ಕೆಲಜಾತಿಗಳಲ್ಲಿ ಪುರುಷನು ತನಗಿಂತ ತರುಣಳಾದಂಥ ಬೇರೆ ವಿವಾಹಿತ ಸ್ತ್ರೀಯಳೊಡನೆ ಹೆಚ್ಚಾಗಿ ಮಾತನಾಡುವದಿಲ್ಲ ಅವರಂತೆಯೇ ತನ್ನ ಹೆಂಡತಿಯ ಭಗಿನಿಯನ್ನು ಅವರು ಸ್ಪರ್ಶಿಸುವದಿಲ್ಲ. ಹುಡುಗರ ಹೆಸರು ಬೇರೆ, ಹುಡುಗೆಯರ ಹೆಸರು ಬೇರೆ ಹೀಗೆ ಅಲ್ಲಿಯ ಪ್ರಭೇದವು ಯಾವ ಜಾತಿಯಲ್ಲೂ ಬಹುತರವಾಗಿ ಇಲ್ಲ ತಾಯಿಯೇ ಕೂಸಿಗೆ ಹೆಸರಿಡುವಳು ಬಸುರಿನ ಲಕ್ಷಣಗಳು ತೋರಹತ್ತುತ್ತಲೆ ಗರ್ಭದ ನಾಮಕರಣ ಮಾಡಲಾಗುತ್ತದೆ; ಆದರೆ ಕೆಲ ಜಾತಿಗಳಲ್ಲ ಹುಡುಗಿಯು ಹರೆಯಕ್ಕೆ ಬಂದಳೆಂದರೆ, ವಿಶಿಷ್ಟಪ್ರಕಾರದ ಹದಿನಾರು ಹೂಗಳಲ್ಲಿ ಆಕೆಯು ಪ್ರೌಢಳಾಗುವಾಗ ಯಾವ ಹೂಗಳು ಅರಳುವವೋ, ಅವುಗಳಲ್ಲಿಯ ಒಂದು ಹೂವಿನ ಹೆಸರು ಅವಳಿಗೆ ಇಡುತ್ತಾರೆ ಆ ಕಾಡು ಜನರ ಆ ಲಲಿತ ಪ್ರವೃತ್ತಿಯು ನಮ್ಮ ನಾಗರಿಕ ಜನರೊಳಗಿನ ಹುಡುಗೆಯರಿಗೆ ಗುಂಡವ್ವ, ಕಲ್ಲವ್ವ, ಒಡಕವ್ವ, ತಿಪ್ಪವ್ವ ಮುಂತಾದ ನಾಮಗಳಿಡುವ ಅರಸಿಕ ಪ್ರವೃತ್ತಿಗಿಂತಲೂ ಹೆಚ್ಚು ಸುಸಂಗತವಾಗಿಲ್ಲವೇನು? ಗಂಡಸರ ಲಗ್ನಗಳು ಇಪ್ಪತ್ತೈದು ವರ್ಷಗಳ ನಂತರ, ಹೆಂಗಸರ ಲಗ್ನಗಳು ಹದಿನೆಂಟರ ನಂತರ ಬಹುಶಃ ಆಗುತ್ತವೆ

ಅವರಿಗೆ ಮಕ್ಕಳು ವಿಶೇಷವಾಗಿ ಸೇರುತ್ತವೆ; ಆದರೆ ಕೆಲ ಜಾತಿಗಳಲ್ಲಿ

ಹುಡುಗರು ಏಳೆಂಟು ವರ್ಷದವರಾಗುತ್ತಲೆ ಅವು ತಂದೆ-ತಾಯಿಗಳೊಡನೆ ಕೂಡಿ ಇರುವದಿಲ್ಲ. ಬೇರೆಯಾಗಿದ್ದು ಆಯುಃಕ್ರಮಣ ಮಾಡಹತ್ತುತ್ತವೆ. ಅವರೆಲ್ಲರ ಆಯುಃಕ್ರಮಣವೂ ಒಂದೇ ಪದ್ಧತಿಯದು! ಭಕ್ಷ್ಯಕ್ಕಾಗಿ ಹಗಲೆಲ್ಲ ಬೇಟೆಯಾಡುವದು; ಮತ್ತು ರಾತ್ರಿಯಲ್ಲಿ ನಿದ್ದೆ ಬರುವವರೆಗೂ ಒಂದೇಸವನೆ ಕುಣಿಯುವದು! ನೃತ್ಯಸವ ಆರಂಭದಲ್ಲಿ ಸ್ತ್ರೀ-ಪುರುಷರೆಲ್ಲರೂ ಉಲ್ಲಿಂಗರೂ ಏಕತ್ರರೂ ಆಗಿರುತ್ತಾರೆ!

ಈ ಜನರೊಳಗಿನ ಗಂಡಸರು ಇದ್ದದ್ದರಲ್ಲಿಯೇ ಚೆನ್ನಾಗಿ ತೋರುತ್ತಾರೆ; ಆದರೆ ಹೆಂಗಸರುಮಾತ್ರ ತೀರ ಕಾಡು. ಸ್ತ್ರೀಯರ ತಿಗಗಳು ಅಸಡ್ಡಾಳಾಗಿದ್ದು, ಶರೀರದ ಮಾನದಿಂದ ಅತಿ ಸ್ಥೂಲಗಳಾಗಿರುತ್ತವೆ. ಅವರ ಸೌಂದರ್ಯವನ್ನು ಹೆಚ್ಚಿಸಬೇಕೆಂದೋ ಏನೋ ಆ ಸ್ತ್ರೀಯರ ತಲೆ ಕೂದಲುಗಳನ್ನೆಲ್ಲ ಹೊಂದು ಹಿಡಿದು ಬೋಳಿಸಿ, ತಲೆಯನ್ನು ತೀರ ನುಣುಪಾಗಿ ಮಾಡಿರುತ್ತಾರೆ! ಆ ಅಂಡಮಾನೀಯ ಸೌಂದರ್ಯದೃಷ್ಟಿಗೆ ತರುಣ ಸ್ತ್ರೀಯರು ಹಾಗೆ ಕೂದಲು ಬೋಳಿಸಿ ನುಣುಪು ತಲೆ ಮಾಡಿಕೊಂಡಿದ್ದರಿಂದಲೇ ಹೆಚ್ಚು ಸುಂದರರಾಗಿ ತೋರುತ್ತಿರಬಹುದಾಗಿ ಕಾಣುತ್ತದೆ! ನಮ್ಮಗಳ ಕವಿಗಳಿಗೆ ಸುಂದರಿಯರ ತುಟಿಗಳು ತೊಂಡೇಹಣ್ಣಿನಂತಿರುವ ಉಪಮೆಯು ಹೇಗೆ ರುಚಿಸುತ್ತದೋ, ಹಾಗೆ ಅವರಲ್ಲಾದರೂ ಕವಿಗಳಿದ್ದರೆ ಅವರಿಗೆ ತಮ್ಮಲ್ಲಿಯ ಸುಂದರಿಯರ ತಲೆಗಳು ಸುಲಿದು ಕೆತ್ತಿದ ಟೆಂಗಿನ ಕಾಯಿಗಳಂತಿದ್ದರೇ ಶೋಭನೀಯವಾಗುವವೆಂಬ ಉಪಮೆಯು ಸಹಜವಾಗಿಯೇ ಸೂಚಿಸುತ್ತಿರಬೇಕು; ಹಾಗು ಅದು ರುಚಿಸುತ್ತಲೂ ಇರಬಹುದು; ಯಾಕಂದರೆ, ಸುಲಿದ ಟೆಂಗಿನಕಾಯಿಯು ಅಡವಿಯೊಳಗಿನ ನೈಸರ್ಗಿಕ ಟೆಂಗಿನ ಮರಗಳು ಹೆಚ್ಚಾಗಿರುವ ಆ ಅಂಡಮಾನೀಯ ನಾಗರೀಕರದೊಂದು ಒಳ್ಳೇ ಪ್ರೀತಿಯ ಪದಾರ್ಥವಾಗಿದೆ.

ಆ ಜನರ ಬುದ್ಧಿಯು ಬಾಲ್ಯವಯಸ್ಸಿನಲ್ಲಿ ಚಾಣಾಕ್ಷವಿರುತ್ತದೆ; ಆದರೆ ಆದರ ಬೆಳವಣಿಗೆಯು ತಟ್ಟನೆ ಕುಂದುತ್ತದೆ. ನೆನಪಿನ ಶಕ್ತಿಯು ತೀರ ಕಡಿಮೆ; ಅರ್ಥಾತ್ ಬೌದ್ಧಿಕ ದೂರ ದೃಷ್ಟಿಯು ಅವರಲಿಲ್ಲವೆಂದರೂ ಸಲ್ಲುವದು. ಮುಂದಿನ ಧೊರಣ ನೋಡಿ ನಡೆಯುವ ಪ್ರಾಣಿಯೇ ಮನುಷ್ಯನು, ಎಂಬದೊಂದು ಮನುಷ್ಯತ್ವದ ವ್ಯಾಖ್ಯೆಯಿರುತ್ತದೆ. ಅದಕ್ಕೆ ಈ ಅಂಡಮಾನೀ ಜನರು ತೀರ ಅಪವಾದರು. ಅವರಿಗೆ ಸಧ್ಯಃಕಾಲಕ್ಕೆ ಕಾಮ, ಕ್ರೋಧ, ಲೋಭ ಪ್ರಭೃತಿವಿಕಾರಗಳ ಯಾವ ಊರ್ಮಿಯುಂಟಾಗುವವೋ, ಆದರಂತೆಯೇ ಅವರು ನಡೆಯುತ್ತಾರೆ. ಹಿಂದಿನ ಹತ್ತುವರ್ಷಗಳ ಬಾಕಿ ಇಲ್ಲವೆ ಮುಂದಿನ ಹತ್ತುವರ್ಷಗಳ ಯೋಜನೆ ಅಥವಾ ಪೂರ್ವೈಕೆ ಎಂಬುದು ಅವರಲ್ಲಿಲ್ಲವೇ ಇಲ್ಲ.

ಕ್ಷುಧೆ. ತೃಷೆ, ಸಿಟ್ಟು, ದ್ವೇಷ ಇವುಗಳ ತಾತ್ಕಾಲ ತೃಪ್ತಿಯುಂಟಾಯಿತೆಂದರೆ, ಆ ಪ್ರಶ್ನೆಯು ಅಲ್ಲಿಗೇ ಕೊನೆಗಾಣುವದು! ಹಗೆಯು ಇಲ್ಲವೆ ಅಪರಾಧಿಗಳ ಸೇಡನ್ನು ಕೂಡ ಆ ಊರ್ಮಿಯಲ್ಲೇ ಅವರು ಏನು ಹಾಯಿಸಿಕೊಳ್ಳುವರೋ ಅದೇ ಅಷ್ಟು. ಕೆಲ ಕಾಲ ಇಲ್ಲದಂತಾಗಿ ಆ ವಿಪಕ್ಷೀಯ ಮನುಷ್ಯನು ಮತ್ತೆ ಅವರೊಳಗೆ ಬಂದರೆ ಆತನ ವಿಷಯದ ಸಿಟ್ಟು, ಆತನ ಅಪರಾಧ ಹಾಗು ಸೇಡಿನ ನಿಶ್ಚಯ ಇವುಗಳನ್ನೆಲ್ಲ ಆ ಜನರು ಬಹುಶಃ ಮರೆತೇ ಬಿಡುತ್ತಾರೆ; ಆದರಿಂದ ಆ ಮನುಷ್ಯನು ಅವರಲ್ಲಿ ಪುನಃ ಕೂಡುತ್ತಾನೆ. ಅರ್ಥಾತ್ ಅವರಿಗೆ ಸ್ಮರಣಶಕ್ತಿ ಯೆಂಬುದು ಅತ್ಯಲ್ಪವಾಗಿದೆ. ಇತ್ಯಾದಿ ಅವರ ಬಗ್ಗೆ ಏನೆನ್ನಬೇಕಾಗುವದೋ ಅದನ್ನು. ನಮ್ಮಗಳಲ್ಲಿಯ ನೆನಪಿನ ಶಕ್ತಿ ಮತ್ತು ಬೌದ್ಧಿಕ ದೂರದೃಷ್ಟಿಗಳ ಪ್ರದೀರ್ಘಕಾಲೀನ ವಾಸ್ತವ್ಯಕ್ಕೆ ತುಲನೆ ಮಾಡಿಯೇ ಅನ್ನಬೇಕಾಗುವದು. ಯಾಕಂದರೆ ಆ ಜಾತಿಗಳಿಗೂ ಕೆಲ ಸ್ಮೃತಿ, ಕೆಲ ದೂರ ದೃಷ್ಟಿ ಇರಲೇಬೇಕು ಜಾತೀಯ ಹುಟ್ಟು ಗುಣವೂ, ವ್ಯಕ್ತಿಶಃ ಸಂಪಾದಿಸಿದ ಸ್ಮೃತಿ ಮತ್ತು ದೂರ ದೃಷ್ಟಿ ಇವುಗಳೂ ಮಂಗಗಳ ಹಿಂಡುಗಳಲ್ಲೂ ಇರುತ್ತವೆ ಇವರಂತೂ ಆದಿಮ ರಾದರೂ ಮನುಷ್ಯರೇ ಇರುವರು.

ಅವರ ಭಾಷೆಯು ತೀರ ಸ್ವಲ್ಪ ಶಬ್ದಗಳಿಂದ ಕೂಡಿದ್ದಾಗಿದ್ದು. ಅದು ದಿನಾಲು ಶಾರೀರಿಕ ಹಾಗು ಪ್ರಾಥಮಿಕ-ಭಾವನೆಗಳ ಅವಶ್ಯಕತೆಗಳನ್ನು ತಿಳಿಸುವ ಮಟ್ಟಿಗೇ ಆಗಿದೆ. ಅದರಲ್ಲಿಯೂ ತುಸ ಅಪೂರ್ಣವಾಗಿಯೇ ಒಂದು ಮುಖ್ಯ ಶಬ್ದವನ್ನುಚ್ಚರಿಸಿ ಬಿಟ್ಟರೆ, ಅದರ ವಾಕ್ಯಮಾಡುವ ಕೆಲಸವನ್ನು ಅವರ ಹಾವ-ಭಾವಗಳೇ ಮಾಡುತ್ತವೆ! ಕೈಸನ್ನೆ, ಕಣ್ಣು, ಕುತ್ತಿಗೆ ಇವು ಗಳ ಅಭಿನಯಗಳಿಂದಲೇ ಅವರು ಶಬ್ದಗಳಿಗಿಂತಲೂ ಪರಸ್ಪರರೊಡನೆ ಹೆಚ್ಚು ಮಾತಾಡುತ್ತಾರೆ. ಯಾವನೊಬ್ಬ ಅತಿಥಿಯು ಯಾರೊಬ್ಬರಿಗೆ ಭೆಟ್ಟಿಯಾದರೆ ಅವರು ಮೊಟ್ಟಮೊದಲು ಒಬ್ಬರೊಬ್ಬರ ಕಡೆಗೆ ಕೇವಲ ದಿಟ್ಟಿಸಿ ನೋಡುತ್ತ ನಿಲ್ಲುವದೇ ಪ್ರಥಮದ ಶಿಷ್ಟಾಚಾರವೆಂದು ತಿಳಿಯುತ್ತಾರೆ. ಅರ್ಥಾತ್ ಒಬ್ಬ ರೊಬ್ಬರನ್ನು ಗುರ್ತಿಸುವಾಗ ಯಾವ ಎಚ್ಚರಿಕೆಯನ್ನು ಅವರ ಹೀನ ಸ್ಮೃತಿಯ ಮೂಲಕ ಮತ್ತು ಪರಕೀಯರ ಕಪಟದ ಮೂಲಕ ಅವರು ಸಹಿಸಬೇಕಾಗು ವದೋ, ಆ ಜಾತೀಯ ಅನುಭವದ ಮೂಲಕವೇ ಚೆನ್ನಾಗಿ ಪರೀಕ್ಷಿಸಿಕೊಳ್ಳುವ ಮೊದಲು ಯಾರೊಡನೆಯೂ ಮಾತಾಡದಿರುವ ಆ ರೂಢಿ ಅಲ್ಲಿ ಬಿದ್ದಿರ ಬೇಕು. ಬಳಿಕ ಕೆಮ್ಮಿ-ಖೇಕರಿಸಿ ಆಗತರೊಡನೆ ಮಾತಾಡಲಿಕ್ಕೆ ಪ್ರಾರಂಭಿಸು ವದು ಅವರ ಎರಡನೇ ಶಿಷ್ಟಾಚಾರವು! ಪ್ರತಿಯೊಂದು ಜಾತಿಯ ಒಂದು ಭಿನ್ನ ಒಳಭಾಷೆಯು ಇರುತ್ತದೆ. ಸಾಧಾರಣವಾಗಿ ಇಪ್ಪತ್ತುಮೈಲಿಗೊಂದ

ರಂತೆ ಅಲ್ಲಿ ಒಳಭಾಷೆಗಳಿರುತ್ತವೆ.

ಯಾರಾದರೂ ಸತ್ತರೆ ಅವರ ಆಪ್ತಜನರು ಗಟ್ಟಿಗಟ್ಟಿಯಾಗಿ ಅಳುತ್ತಾರೆ. ಚಿಕ್ಕ ಮಗು ತೀರಿಕೊಂಡರೆ ಅದನ್ನು ತಂದೆ-ತಾಯಿಗಳು ವಾಸಿಸುತ್ತಿರುವ ಹೊದರಿನಲ್ಲಿಯೇ ಹುಗಿಯುತ್ತಾರೆ. ಬೇರೆ ಯಾರಾದರೂ-ವಿಶೇಷವಾಗಿ-ದೊಡ್ಡವರು ತೀರಿಕೊಂಡರೆ, ಅವರ ಹೆಣದ ಮೊಟ್ಟೆ ಕಟ್ಟಿ, ಅದನ್ನು ಮೊದಲು ಗಿಡದ ಮೇಲಿನ ಡೋಲಿಯಲ್ಲಿ ವ್ಯವಸ್ಥಿತವಾಗಿ ಇಡುತ್ತಾರೆ ಆ ಸ್ಥಳದ ಸುತ್ತಲೂ ಬಿದಿರಿನ ಎಲೆಯ ಮಾಲೆಗಳನ್ನು ಕಟ್ಟುತ್ತಾರೆ. ಆ ಸ್ಥಳದ ಕಡೆಗೆ ಸುಮಾರು ಮೂರು ತಿಂಗಳವರೆಗೆ ಯಾರೂ ಸುಳಿಯುವದಿಲ್ಲ. ಆ ಸ್ಮಶಾನದ ಸ್ಥಳವನ್ನು ವಿಂಗಡಿಸಿಯೇ ಇಟ್ಟಿರುತ್ತಾರೆ. ಆ ಸೂತಕವಿರಲು, ಅವರು ಕ್ಯಾವಿಯಂಥ ಮಣ್ಣನ್ನು ತಲೆಗೆ ಹಚ್ಚಿಕೊಳ್ಳುತ್ತಾರೆ. ಆ ಸೂತಕದ ಅವಧಿಯಲ್ಲಿ ಅವರು ನಿತ್ಯದ ನೃತ್ಯವನ್ನು ಆಡುವದಿಲ್ಲ; ನಿಲ್ಲಿಸುತ್ತಾರೆ. ಕೆಲವು ತಿಂಗಳುಗಳ ಮೇಲೆ ಸತ್ತವರ ಎಲುವುಗಳನ್ನು ತೊಳೆದು, ಅವುಗಳ ತುಂಡುಮಾಡುತ್ತಾರೆ. ಆ ಮೇಲೆ ಅವುಗಳಿಂದ ಬೇರೆ ಬೇರೆ ಆಭರಣಗಳನ್ನು ಮಾಡಿ, ಅವುಗಳನ್ನು ಆ ಸತ್ತವರ ನೆನಪೆಂದು ಧರಿಸಿಕೊಳ್ಳುತ್ತಾರೆ. ರೋಗವಾದರೆ, ಆ ಎಲುಬಿನ ಆಭರಣಗಳ ಸ್ಪರ್ಶಮಾಡುತ್ತಲೆ ರೋಗ ನಿವಾರಣವಾಗುವವೆಂಬ ತಿಳುವಳಿಕೆಯು ಅಲ್ಲಿ ರೂಢವಾಗಿದೆ; ಆದರೆ ಆ ಎಲ್ಲ ಎಲುವುಗಳಲ್ಲಿ ಸತ್ತವನ ತಲೆಬುರುಡೆಯ ಮಾನವು ಹೆಚ್ಚಿನದು. ಆ ತಲೆಬುರುಡೆಯೊಡನೆ ಬೇರೆ ಎಲುವುಗಳಿಂದ ಪೋಣಿಸಿದ ಮಾಲೆಯನ್ನು ಅವರು ಬೆನ್ನ ಮೇಲೆ ಚೆಲ್ಲಿಕೊಳ್ಳುತ್ತಾರೆ; ಮತ್ತು ಆ ತಲೆಬುರುಡೆಯನ್ನು ಹಾಗೆ ಉಪಯೋಗಿಸುವ ಅಧಿಕಾರವು ವಿಧುರ, ವಿಧವೆ ಹಾಗು ಅತ್ಯಂತ ನಿಕಟದ ಆಪ್ತೇಷ್ಟರಿಗಷ್ಟೇ ಇರುತ್ತದೆ!

ಸತ್ತಮೇಲೆ ಭೂತವಾಗುತ್ತಾರೆಂದು ಕೆಲ ಜಾತಿಗಳ ನಂಬಿಗೆಯಿದೆ! ಕೆಲವರು ಅಂಡಮಾನದಲ್ಲಿ ಅವರಿಗೆ ಗೊತ್ತಿದ್ದ ಯಾವ ಯಾವ ಪ್ರಾಣಿಗಳು ಅಡ್ಡಾಡುವವೋ, ಅವುಗಳೆಲ್ಲ ತಮ್ಮ ಪೂರ್ವಜರು ಧರಿಸಿದ ಛಾಯಾ ರೂಪಗಳೆಂದು ತಿಳಿಯುವರು. ಸ್ವಂತದ ಭೂತದ ಕಲ್ಪನೆಯು ಅವರಿಗೆ ಅವರ ನೆಳಲಿಗಿಂತಲೂ ಸಮುದ್ರದ ನೀರಿನಲ್ಲಿ ಕಾಣುವ ಅವರ ಪ್ರತಿಬಿಂಬದಿಂದಲೇ ಮೊದಲು ಉಂಟಾಗಿರಬೇಕು; ಯಾಕಂದರೆ, ಪ್ರತಿಬಿಂಬಕ್ಕೆ ಅವರು ಭೂತವೆಂದು ತಿಳಿಯುತ್ತಾರೆ; ಹಾಗು ಸತ್ತಬಳಿಕ ಅದು ಬೇರೆ ಕಡೆಗೆ ವಾಸಕ್ಕಾಗಿ ಹೋಗುತ್ತದೆಂದು ಅವರು ತಿಳಕೊಳ್ಳುತ್ತಾರೆ.

ಅವರಲ್ಲಿ ಧಾರ್ಮಿಕ ದೃಷ್ಟಿಯ ಕರ್ಮಕಾಂಡವೆಂಬುದು ಇಲ್ಲವೆಂದು ಹೇಳಿದರೂ ಸಲ್ಲುವುದು. ಲಗ್ನ, ಮೃತ್ಯು ಇತ್ಯಾದಿ ಪ್ರಸಂಗಗಳಲ್ಲಿ ನಿಶ್ಚಿತ ರೀತಿ,

ಹಾಗು ವ್ಯಾವಹಾರಿಕ ರೂಢಿಗಳಿರುತ್ತವೆ; ಆದರೆ ಧಾರ್ಮಿಕ ಸ್ವರೂಪದಲ್ಲಿ ಯಾವ ದೇವ-ದೇವತೆಯ ಪ್ರಾರ್ಥನೆ ಅಥವಾ ಪೂಜೆಗಳು ಇಲ್ಲವೆ ಮಂತ್ರ-ತಂತ್ರಗಳು ಇಷ್ಟೇ ಅಲ್ಲ, ಧಾರ್ಮಿಕನಾದ ಯಾವ ಪುರೋಹಿತನೂ ಕೂಡ ಅವರಲ್ಲಿರುವುದಿಲ್ಲ; ಆದರೆ ಅವರಲ್ಲಿಯ ಹಲವರಲ್ಲಿ ಬ್ರಹ್ಮಜ್ಞಾನವೆಂಬುದು ತೀರ ಇಲ್ಲವೆಂದು ಅವರನ್ನಾರೂ ಹಳಿಯ ಕೂಡದು. ಯಾಕಂದರೆ, ನಮ್ಮಗಳ ಕೇವಲ ಈಶ್ವರದತ್ತ ಪುಸ್ತಕದೊಳಗೆ ಹೇಳಿದಂತಹ ಕೆಲ ಧಾರ್ಮಿಕ ತಿಳುವಳಿಕೆಗಳಿಗೂ ಬ್ರಹ್ಮಜ್ಞಾನದ ಸಂಗತಿಗಳಿಗೂ ಮಣಿಯದಂತಹ ಅಲ್ಪ ಬ್ರಹ್ಮಜ್ಞಾನವೂ ಕುರಾಣ-ಪುರಾಣಗಳೂ ಅವರಲ್ಲೂ ಇವೆ. ಉದಾಹರಣಾರ್ಥವಾಗಿ ಪುಲಗಾ ಎಂಬ ದೇವತೆಯು ಈ ಜಗತ್ತನ್ನು ನಿರ್ಮಿಸಿವೆ. ಸತ್ತ ಬಳಿಕ ಯಾವ ಲೋಕದಲ್ಲಿ ವಾಸಿಸಲಿಕ್ಕೆ ಭೂತಗಳು ಹೋಗುವವೋ, ಆ ಅದ್ಭುತ ಜಗತ್ತನ್ನು ಒಂದು ಬಹು ದೊಡ್ಡ ಟೆಂಗಿನ ಮರವು ಶೇಷನು ಪೃಥ್ವಿಯನ್ನು ತನ್ನ ಫಣೆಯ ಮೇಲೆ ಎತ್ತಿ ಹಿಡಿದಿರುವಂತೆ ಎತ್ತಿ ಹಿಡಿದಿರುತ್ತದೆ. ಪುಲಗಾ ದೇವತೆಯು ಅದೇ ಆ ಎತ್ತರವಾದ ಅದ್ಭುತ ಜಗತ್ತಿನಲ್ಲಿ ಇತ್ತೀಚಿಗೆ ಇರಹತ್ತಿದೆ; ಆದರೆ ಮೊದಲು ಅದು ಅಂಡಮಾನದೊಳಗಿನ ಎಲ್ಲಕ್ಕೂ ಎತ್ತರ ಪರ್ವತವಾದ 'ಸೆಂಡಲ ಪೀಕ'ದ ಶಿಖರದಲ್ಲಿರುತ್ತಿತ್ತು! ಕೈಲಾಸದಲ್ಲಿ ನಮ್ಮ ಮಹಾದೇವನು ಇರುತ್ತಿರಲು, ಮೂಸಾ ಪೈಗಂಬರನ ಮಹಾದೇವನಾದ ಅಲ್ಲಾಹನು ಸೋನಾಯ ಪರ್ವತದ ಮೇಲೆ ಬರುತ್ತಿರಲು, ಆಯ್. ಸಿ. ಎಸ್. ನವರ ಮಹಾದೇವನಾದ ಗವರ್ನರ ಜನರಲ್ಲನು ಸಿಮ್ಲಾಕ್ಕೆ ಹೋಗುತ್ತಿರಲು, ಅಂಡಮಾನದ ಮಹಾದೇವನಾದ ಪುಲಗಾದೇವತೆಯಾದರೂ 'ಸೆಂಡಲ ಪೀಕ'ದ ಮೇಲೇಕಿರಬಾರದು? ಸತ್ತನಂತರ ಅಂಡಮಾನೀಯ ಜೀವವು ಒಂದು ವಾಯುರೂಪ ಪೂಲಿನ ಮೇಲಿಂದ ಪಾತಾಳಕ್ಕೆ ಖ್ರಿಶ್ಚನ್-ಮುಸ್ಲೀಮ ಜೀವಗಳು ಗೋರಿಗಳಲ್ಲಿ ಜಗತ್ತಿನ ಕೊನೆಯ ನ್ಯಾಯ ನಿರ್ಣಯ ದಿನದ ವರೆಗೆ ದಾರಿ ನೋಡುತ್ತ ಹೇಗೆ ವಾಸಿಸುವವೋ ಹಾಗೆ ಹೋಗುತ್ತದೆ. ಆ ಅಂಡಮಾನೀ ಮಹಾದೇವನಾದ ಪುಲಗಾದೇವತೆಯು ಮುಸಲ್ಮಾನೀ ಮಹಾದೇವರಂತೆ ಕೇವಲ ಒಬ್ಬೊಂಟಿಗನಾಗಿಲ್ಲ; ಅದಕ್ಕೆ ನಮ್ಮ ಹಿಂದೂ ಮಹಾದೇವರಂತೆ ಒಬ್ಬ ಹೆಂಡತಿಯಿರುತ್ತಾಳೆ; ಹಾಗು ಖ್ರಿಶ್ಚನ್ ಮಹಾದೇವರಿಗೆ ಜೀಜಸನೆಂಬ ಮಗನು ಹೇಗಿರುವನೋ, ಹಾಗೆ ಒಬ್ಬ ಮಗನೂ ಇರುತ್ತಾನೆ ಇಷ್ಟೇ ಅಲ್ಲದೆ, ಇತ್ತ ಕಡೆಯ ಯಾವ ಮಹಾದೇವರ ಭಾಗ್ಯದಲ್ಲಿಯೂ ಯಾವ ಸುಖವಿಲ್ಲವೋ ಅದು, ಅಂದರೆ ಸ್ವಂತದ ಹಲವು ಕನ್ಯಾರತ್ನಗಳು ಸ್ವಂತದ ಕುಟುಂಬದಲ್ಲಿರುವ ಭಾಗ್ಯವೂ ಆ ದೇವತೆಗೆ ಪ್ರಾಪ್ತವಾಗಿವೆ.

ಆ ಪುಲಗಾ ದೇವತೆಯ ಹೊರತು ಅದೃಶ್ಯ ಶಕ್ತಿಯಲ್ಲಿ ಸಮುದ್ರದ ಭೂತವಾದ 'ಜುರುವೀನ' ಮತ್ತು ಅರಣ್ಯದ ಭೂತವಾದ 'ಏರವು ಚೌಗ' ಇವು ಬಹು ಖೋಡಿಗಳಾಗಿವೆ. ಅವು ಪುಲಗಾದೇವತೆಯನ್ನು ಕೂಡ ಸೈತಾನನು ಅಲ್ಲಾನನ್ನು ಹೇಗೆ ಮನ್ನಿಸುವದಿಲ್ಲವೋ ಹಾಗೆ ಮನ್ನಿಸುವದಿಲ್ಲ; ಆದರೆ ಇದ್ದದ್ದರಲ್ಲಿಯೇ ತುಸ ಸಮಾಧಾನವೆಂದರೆ, ಆ ಅಡವಿಯ ಖೋಡಿ ದೆವ್ವವಾದ 'ಏರವು ಚೌಗ' ಇದು ಬೆಂಕಿಗೆ ಅಂಜುತ್ತದೆ! ಈ ತಿಳುವಳಿಕೆಯ ಮೂಲಕ ಆ ಅಂಡಮಾನೀ ಕಾಡು ಜನರು ಬೆಂಕಿಯನ್ನು ಯಾವಾಗಲೂ ತಮ್ಮ ಬಳಿಯಲ್ಲಿರಿಸುತ್ತಾರೆ. ಆ ಬೆಂಕಿಯನ್ನು ಅವರು-ನಮ್ಮ ಪಾರಶೀ ಹಾಗು ಹಿಂದುಗಳ ಅಖಂಡ ಅಗ್ನಿಹೋತ್ರಿಗಳು ರಕ್ಷಿಸುವಂತೆ-ಆರಗೊಡುವದಿಲ್ಲ!!

ಉತ್ತರ ಧ್ರುವದಂತಹ ಕೇವಲ ಹಿಮಮಯ ಹಾಗು ಮೈನಡುಗಿಸಿ ಬಿಡುವ ಶೀತಪ್ರದೇಶದಲ್ಲಿ ಮನುಷ್ಯನು ವಾಸಿಸುವಾಗ, ಅವನಿಗೆ ಉಷ್ಣತೆಗಾಗಿ ಬೆಂಕಿಯ ಅಖಂಡ ಸಾನ್ನಿಧ್ಯವು ಅತ್ಯಂತ ಆವಶ್ಯಕವೂ ಅಂತೇ ಪ್ರೀತಿಯದೂ ಆಗಿರಬೇಕು; ಆದರೆ ಆ ಕಾಲಕ್ಕೆ ಬೆಂಕೀಕಡ್ಡಿಯಂತಹ ಬೆಂಕಿ ಹೊತ್ತಿಸುವ ತೀವ್ರತರ ಸಾಧನವು ಮನುಷ್ಯನಿಗೆ ದೊರೆಯದ್ದರಿಂದ ಹಾಗು ಕಟ್ಟಿಗೆಯ ಮೇಲೆ ಕಟ್ಟಿಗೆ ತಿಕ್ಕಿ ಇಲ್ಲವೆ ಬೆಣಚುಗಲ್ಲ ಮೇಲೆ ಬೆಣಚುಗಲ್ಲು ಕುಕ್ಕಿ ಬೆಂಕಿಯ ಕಿಡಿಯುದುರಿಸಿ, ಪ್ರಯಾಸದಿಂದ ಬೆಂಕಿಹೊತ್ತಿಸಬೇಕಾಗುತ್ತಿದ್ದ ಮೂಲಕ, ಅದನ್ನು ಒಮ್ಮೆ ಹೊತ್ತಿಸಿದ ಮೇಲೆ ಮತ್ತೆ ಸಹಸಾ ನಂದಗೊಡದಂತೆ ಒಂದೇಸವನೆ ಉರಿಸುತ್ತಿರುವುದು ಅಪರಿಹಾರ್ಯವಾಗಿದ್ದಿತು. ಅದಕ್ಕಾಗಿಯೇ ಉತ್ತರಧ್ರುವದ ಕಡೆಯ ಆರ್ಯರಲ್ಲಿ ಬೆಂಕಿಯ ಪ್ರಸ್ಥವು ಹೆಚ್ಚಿರಬೇಕು. ಅದಕ್ಕೆ ಮೊದಲು ಸದಾಚಾರದ, ಆ ಮೇಲೆ ಧರ್ಮಕರ್ತವ್ಯದ ರೂಪವುಂಟಾಗಿ, ನಮ್ಮಗಳ ಅಗ್ನಿಹೋತ್ರ ಸಂಸ್ಥೆಯು ಜನಿಸಿರಬೇಕು. ನಾವು ಮಾಡಿರುವ ಈ ನಮ್ಮ ಅಗ್ನಿಹೋತ್ರಗಳ ಉಪಪತ್ತಿಗೆ ಅಂಡಮಾನದೊಳಗಿನ ಆ ಕಾಡು ಅನಾರ್ಯ ಜಾತೀಯರ ಮೇಲೆ ವಿವರಿಸಿದ ಅಗ್ನಿಪ್ರಸ್ಥವು ಹೆಚ್ಚಾಗಿ ಪುಷ್ಟಿದಾಯಕವಾಗಿರುತ್ತದೆ; ಯಾಕಂದರೆ ಆ ಘನದಟ್ಟ ಕಾಡಿನಲ್ಲಿ ದೊಡ್ಡ ದೊಡ್ಡ ವಿಷಾರಿ ಸೊಳ್ಳೆಗಳ ಹಾಗು ನೊಣಗಳ ಹಿಂಡಿಗೆ ಹಿಂಡುಗಳ, ಹಾವು ಜಿಗಳಿ-ಸುರಳಿ ಇವುಗಳ ದಟ್ಟ ಸುಳಿದಾಟ. ಎಲ್ಲೆಲ್ಲಿಯೂ ಜವುಳು ಮತ್ತು ಅಂಧಃಕಾರ! ಅಂಥ ಆ ಕಾಡಿನ ದೆವ್ವವು ಅಂಜುವದಾದರೆ ಬೆಂಕಿಗೇ ಅಂಜಬೇಕು! ಬೆಂಕಿಯು ಅಲ್ಲಿ ಅತ್ಯುಪಯುಕ್ತವು; ಆದರೆ ಆ ಕಾಡು ಮನುಷ್ಯರಲ್ಲಿ ಕಡ್ಡಿಯ ಪೊಟ್ಟಣಗಳಿರದ್ದರಿಂದ ಬೆಂಕಿ ಹೊತ್ತಿಸುವದು ಪ್ರಯಾಸದ್ದೇ ಆಗಿದೆ! ಬೆಣಚು ಗಲ್ಲುಗಳನ್ನು ಕುಕ್ಕಿ, ಕಿಡಿ ಕೆಡವಿ, ಒಮ್ಮೆ ಹೊತ್ತಿಸಿದ ಅಗ್ನಿಯನ್ನು

ಬೆಂಕಿ ಹಚ್ಚುವ ಸಲುವಾಗಿ ಶಕ್ಯವಾದಷ್ಟು ದಿನಗಳ ವರೆಗೂ ಉರಿಸುತ್ತಲಿರುವುದೇ ಆವಶ್ಯಕವು. ಕಾಡಿನ ಭೂತವಾದ 'ಏರಮು ಚೌಗ'ವನ್ನು ಯಾವಾಗಲೂ ಬೆದರಿಸಿ, ದೂರಿರಿಸಲಿಕ್ಕೆ ಸಂತತವಾದ ಪ್ರದೀಪ್ತ ಅಗ್ನಿಹೋತ್ರವೇ ಆವಶ್ಯಕವಾಗಿದೆ.

ಆದರೂ ಕೂಡ ಅವರ ದೈವೀಕರಣದ ಕಲ್ಪನಾಶಕ್ತಿಯು ಆ ಬೆಂಕಿಯಷ್ಟು ಪ್ರಖರವಿರದ್ದರಿಂದ, ಅವರ ಬೆಂಕಿಯು ಅಗ್ನಿದೇವನಾಗಿರುವದಿಲ್ಲ! ಅಗ್ನಿಷ್ಟಿಗೆಯು ಅಗ್ನಿಹೋತ್ರವಾಗಿರುವದಿಲ್ಲ! ನಮ್ಮಾಗಳ ಬೆಂಕಿಹೊತ್ತಿಸುವ ಕಟ್ಟಿಗೆಯು ಕೂಡ ಹೇಗೆ ಅರುಣದೇವತೆಯಾಗಿ, ಅದು ಸಮಂತ್ರಕ ಆಹ್ವಾನಿಸಲ್ಪಡುವುದೋ, ಅವರಂತೆ ಅವರ ಬೆಣಚುಗಲ್ಲುಗಳಿಗೆ 'ಕಿಡಿಕೆಡವು, ಪ್ರಸನ್ನನಾಗು' ಎಂದು ಪ್ರಾರ್ಥಿಸಬೇಕಾಗುವದಿಲ್ಲ. ಅವರ ಅಗ್ನಿಯು ಪ್ರಸನ್ನವಾಗುವದಿಲ್ಲ; ಬರಿಯ ಹೊತ್ತುತ್ತದೆ. ಸಿಟ್ಟಾಗುವುದಿಲ್ಲ. ಸುಮ್ಮನೆ ನಂದುತ್ತದೆ. ಆ ಬೆಂಕಿಯು 'ಕಾಡಿನ ಭೂತವನ್ನೋಡಿಸತಕ್ಕದ್ದಾ'ಗಿದ್ದರೂ ಅದೊಂದು ಪದಾರ್ಥವು; ಅದೊಂದು ಕೇವಲ ವಸ್ತುವಾಗಿದೆ; ಅದು ದೇವತೆಯಲ್ಲ!

ಮತ್ತು ಒಟ್ಟಿನಲ್ಲಿ ಅವರಲ್ಲಿ ಬಹುತರ ಜಾತಿಗಳಲ್ಲಿ ಯಾವ ದೇವರ ಪ್ರಾರ್ಥನೆಯಾಗಲಿ, ಮಂತ್ರ-ತಂತ್ರಗಳಾಗಲಿ, ಪರಲೋಕದಲ್ಲುಪಯುಕ್ತವಾಗಬೇಕೆಂದು ಪೂಜೆ ಎಂಬುದಾಗಲಿ ಇಲ್ಲವೇ ಇಲ್ಲ. ಸ್ವರ್ಗ-ನರಕಗಳ ಕಲ್ಪನೆಯು ಕುರಾಣ-ಪುರಾಣ-ಬಾಯಿಬಲ್ಲುಗಳಲ್ಲಿ ವಿವರಿಸಿದಂತೆ ಅವರಲ್ಲೇನೂ ಇಲ್ಲ. ಪುಲಗಾದೇವತೆಗೆ ಕೂಡ ಸಂಕಟನಿವಾರಕ ಪ್ರಾರ್ಥನೆಯಿರುವುದಿಲ್ಲ.

ಇಂಥ ಆ ಅಂಡಮಾನೀಯ ಕಾಡು ನಾಗರಿಕರು ಇತ್ತ ಕಡೆಯ ಒಂದೆರಡು ಜಿಲ್ಲೆಗಳಷ್ಟು ಸ್ಥಳದಲ್ಲಿ ಮೂರು-ನಾಲ್ಕು ಸಾವಿರಕ್ಕಿಂತ ಹೆಚ್ಚಿರಲಿಕ್ಕಿಲ್ಲ. ಅವರಾದರೂ ಒತ್ತಟ್ಟಿಗಿಲ್ಲ; ಅಲ್ಲಲ್ಲಿ ಹಂಚಿ ಹರಡಿದ ಹಾಗಿರುತ್ತಾರೆ. ಮಿಕ್ಕ ಕಡೆಗೆಲ್ಲ ಘನದಟ್ಟವಾದ ಕಾಡೇ ಕಾಡು! ಅದು ಅತ್ಯಂತ ಘನದಟ್ಟ ಹಾಗು ವಸಾಹತೀ ಮನುಷ್ಯನ ಕಾಲು ಒಳಸೇರಲು ದುರ್ಗಮವಿದ್ದಿತಾದ್ದರಿಂದ, ಕಳೆದ ಮೂವ್ವತ್ತು ವರ್ಷಗಳವರೆಗೆ ಅದರ ಸ್ಪಷ್ಟ (ಪಹಾಣೀ) ಅವಲೋಕನವೂ ಆಗಿರಲಿಲ್ಲ! ದೊಡ್ಡ ದೊಡ್ಡ ಮರಗಳು; ಅವುಗಳ ಮೇಲೂ ಅವುಗಳ ಒಳಗೂ ನೂರಾರು ಬಗೆಯ ಮುಳ್ಳಿನ ಹಾಗು ಮುಳ್ಳಿಲ್ಲದ ಬಳ್ಳಿ-ಹುಲ್ಲುಗಳ ತೊಡಕಿನ ದಟ್ಟಣೆ; ಮೇಲಿನಿಂದ ಹನ್ನೆರಡೂ ತಿಂಗಳು, ಕಿಮಾನಪಕ್ಷ ಒಂಬತ್ತು ತಿಂಗಳಾದರೂ ಸಂತತವಾಗಿ ಸುರಿಯುತ್ತಿರುವ ಮಳೆ; ಆಗಾಗ್ಗೆ ಮುಸುಲ ಧಾರೆಯಾಗಿಯೂ, ಅದಿಲ್ಲದಾಗ ಝಿಮ ಝಿಮ ಎಂದು ತುಂತುರಹನಿಗಳು. ಅದರಿಂದ ನೆಲದ ಮೇಲೆ ಯಾವಾಗಲೂ ನೀರೇ ನೀರು; ಅದರಲ್ಲಿ ಗಿಡ-ಬಳ್ಳಿಗಳ ಆ

ದಟ್ಟ, ಅಡವಿಯ ಎಲೆಗಳು ವರ್ಷಗಟ್ಲೆ ಒಂದೇಸವನೇ ಥರದ ಮೇಲೆ ಥರ ವಾಗಿ ಬಿದ್ದು, ವರ್ಷಗಟ್ಲೆ ಹಾಗೆಯೇ ಕೊಳೆಯುತ್ತಿರುವುವು. ಎಲ್ಲ ಕಡೆಯು ಯಲ್ಲೂ ಆ ಜವುಳಿನಲ್ಲಿ ಸಂಚರಿಸುವ ಲಕ್ಷಗಟ್ಲೆ ನೊಣಗಳು, ದೊಡ್ಡ ದೊಡ್ಡ ಸೊಳ್ಳೆಗಳು, ಜಿಗಳಿಗಳು, ಭಯಂಕರವಾದ ಹಾವು ಸುರಳಿಗಳು, ವಿಷಾರಿ ಜೀವಜಂತುಗಳು ಇವುಗಳ ಸುಳಿದಾಟವೇ ಸುಳಿದಾಟ! ಮರದಲ್ಲಿ ಮರ, ಬಳ್ಳಿ ಯಲ್ಲಿ ಬಳ್ಳಿ, ಮುಳ್ಳಿನಲ್ಲಿ ಮುಳ್ಳು, ಕಂಟಿಯಲ್ಲಿ ಕಂಟಿ ಹೊಕ್ಕು, ಸಿಕ್ಕು, ಕಾಡಿನ ಮೈಲುಗಟ್ಟಲೆ ಉದ್ದಗಲದ ಅದೊಂದು ಛತ್ರೀ ಹಬ್ಬಿರುವದರಿಂದ, ಸೂರ್ಯನು ನಡುಹಗಲಿನಲ್ಲಿದ್ದರೂ ಆತನ ಕಿರಣಗಳ ಸ್ಪರ್ಶವು ಕೂಡ ಆ ಕಾಡಿನ ತಳಕ್ಕೆ ಹೇಳಿಕೊಳ್ಳುವಷ್ಟು ಅಂದರೆ, ಆ ಜವುಳನ್ನು ಒಣಗಿಸುವಷ್ಟು ಯುಗಯುಗಾಂತರಗಳಲ್ಲಿ ಬೀಳುತ್ತಲೇ ಇಲ್ಲ; ಪ್ರಕಾಶವಾದರೂ ಯುಗ ಯುಗಾಂತಗಳಲ್ಲಿ ಅಲ್ಲಿ ಬೀಳುತ್ತಲೇ ಇಲ್ಲ! ಅಡವಿಯು ಸಮೃದ್ಧಿಯು ಬೈಲಿ ನಲ್ಲೇ ಇರುವದೆಂತಲ್ಲ; ನಡುನಡುವೆ ಯಾವ ಗುಡ್ಡ-ಬೆಟ್ಟಗಳಿರುವವೋ, ಅವು ಗಳಮೇಲೂ ಅದೇ ಕಾಡು ಹಾಗೆಯೇ ಹಬ್ಬಿಬಿಟ್ಟಿದೆ. ಅದರಿಂದ ಈ ದ್ವೀಪಗಳು ದೂರಿನಿಂದ ಹಚ್ಚಗೆ ಹಸುರು ಮೂಡಿದಂತೆ ಮೋಹಕವಾಗಿ ಕಂಡರೂ, ಅವು ಮನುಷ್ಯನಸತಿಗೆ ಮುಂಚಿನಿಂದಲೂ ತೀರ ಪ್ರತಿಕೂಲವೆಂದು ನಿರ್ಧರಿಸಲ್ಪ ಟ್ಟವು. ಯಾವ ಇಂಗ್ಲಿಷ ಎಸೆಗಾರ ಜನರು ವಸಾಹತ ಸ್ಥಾಪಿಸುವ ಪ್ರಯತ್ನ ಮಾಡಿದರೋ, ಅವರಿಗೂ ಕೂಡ ಹದಿನೆಂಟನೆ ಶತಕದ ಸಾಧನಗಳಿಂದ ಸಹ ಅಲ್ಲಿ ಕಾಲೂರಿ ನಿಲ್ಲಬೇಕಾದರೆ ದುರ್ಘಟವೆನಿಸಿತು. ಅವರು ಎರಡು ಸಾರೆ ಸ್ಥಾಪಿಸಿದ ವಸಾಹತುಗಳನ್ನು ಅಲ್ಲಿಯ ಲಕ್ಷಾವಧಿ ವಿಷಾರಿ ಜೀವಜಂತುಗಳು ಜವುಳುಗಳೊಳಗಿನ ರೋಗಾಣುಗಳು ಕೊಲೆಗೆಯ್ದುಬಿಟ್ಟವು; ಪ್ರತಿಯೊಬ್ಬ ಮನುಷ್ಯನನ್ನು ಬೇನೆ-ಬೇಸರಿಕೆಗಳಿಂದ ಕೊಂದುಬಿಟ್ಟವು; ಅದರಿಂದ ಆ ವಸಾಹತುಗಳ ನಾಮಶೇಷವಾಯಿತು!

ಆ ಅಂಡಮಾನ ದ್ವೀಪಗಳಿಗೆ ಯಾವ ಪರಕೀಯ ಜನರು ಅಪಘಾತ ಪರತ್ವದಿಂದ-ಜಲಯಾನಗಳು ಬಿರುಗಾಳಿಯಲ್ಲಿ ಸಿಕ್ಕು-ಇಲ್ಲವೆ ವಸಾಹತ ಸ್ಥಾಪಿ ಸುವ ಸಲುವಾಗಿ ಬರುತ್ತಿದ್ದರೋ ಅವರ ಮೇಲೆ ಜಾವರಾ ಪ್ರಭೃತಿ ತತ್ರಸ್ಥ ಕಾಡು ಜನರು ವಿಷಾರಿ ಬಾಣಗಳ ಮಳೆಗರೆದು ಅವರನ್ನು ಹಿಡಿದು ತುಂಡ ರಿಸಿ ಬಿಡುತ್ತಿದ್ದರೆಂಬದಂತೂ ನಿಜವೆ; ಆದರೆ ಅಂಥ ಮಾನವೀ ಪ್ರತೀಕಾರ ದಿಂದ ಆ ದ್ವೀಪದ ಸ್ವಾತಂತ್ರ್ಯವು ಅನಾದಿಕಾಲದಿಂದ ಕ್ರಿ. ಶ. ದ ೧೭ನೇ ಶತಕದವರೆಗೂ ಹಾಗೆ ಅಬಾಧಿತವಾಗುಳಿದದ್ದು ಅಲ್ಲಿಯ ಆ ಸರ್ಪ-ಸುರಳಿ, ಜಿಗಳಿ ಮತ್ತು ಅಲ್ಲಿಯ ಜವುಳಿನೊಳಗಿನ ಆ ಅಸಂಖ್ಯ ವಿಷಾರಿ ನೊಣ,

ಸೊಳ್ಳೆ ಹಾಗು ರೋಗಾಣು ಇತ್ಯಾದಿ ಒಗರಿನ 'ದೇಶಭಕ್ತರ' ಲಕ್ಷಾವಧಿ ಸೂಕ್ಷ್ಮ ಸೈನಿಕರ 'ಸ್ವಾತಂತ್ರ್ಯ, ಭಕ್ತಿಯಿಂದಲೇ ಸರಿ. ಪರಕೀಯರ ದಾಳಿಗಳನ್ನು ಈ ರೋಗಾಣುಗಳೇ ನುಗ್ಗು ನುಗ್ಗು ಮಾಡುತ್ತ ಬಂದಿರುತ್ತವೆ.

ಅಲ್ಲಿಯ ಆ ದಟ್ಟ ಆರಣ್ಯದೊಳಗಿನ ಜಾನವರಾಗಳಿಗಿಂತ ಜಿಗಳಿ ಎಂಬ ಹುಳಗಳ ಸೈನ್ಯದ ಪರಾಕ್ರಮವೇ ಮಿಗಿಲಾದದ್ದು! ಇಂದಿಗೂ ಆ ಕಾಡನ್ನು ಕಡಿಯಲಿಕ್ಕೆ ಯಾವಾಗ ದಂಡಿತರ ಟೋಳಿಗಳು ಹೋಗುವವೋ, ಆಗ ಆ ಜಿಗಳಿಗಳು ಅವರನ್ನು ರಕ್ತಬಂಬಾಳ ಮಾಡಿ ಹಿಂದೋಡಿಸುತ್ತಿರುತ್ತವೆ. ಆ ಜಿಗಳಿಗಳ ಥರಗಳು ಗಿಡಗಳ ಮೇಲೆ ಹಬ್ಬಿರುತ್ತವೆ. ಕಾಡೊಳಗಿನ ಎಲೆಬಳ್ಳಿಗಳಲ್ಲಿ ಅವುಗಳ ಥರಗಳ ಮೇಲೆ ಥರಗಳು ತುಂಬಿರುತ್ತವೆ. ಪರಸ್ಥ ಮನುಷ್ಯರು ಆ ದ್ವೀಪದೊಳಗೆ ಪ್ರವೇಶಿಸಲು ಕೂಡಲೆ, ಆ ದೇಶಭಕ್ತ ಜಿಗಳಿ-ಸೊಳ್ಳೆ-ನೊಣ-ಸರ್ಪ-ಸುರಿಳೆ ಇತ್ಯಾದಿಗಳಿಗೆ ಅವರ ನಾತ ಬಡಿದ ಕೂಡಲೆ ಆ ಜಿಗಳಿಗಳು ಮರಗಳ ಮೇಲಿಂದ ಪಟಪಟನೆ ಅವರ ತಲೆ-ಬೆನ್ನುಗಳ ಮೇಲೆ ಹಾರಿಕೊಳ್ಳುವವು. ಕಾಲೊಳಗಿನ ಜಿಗಳಿಗಳು ಅಂಗಾಲಿನಿಂದ ತೊಡೆಯ ವರೆಗೆ ಲಗುಬಗನೆ ಏರುವವು. ಯಾವ ಜಿಗಳಿಯು ಶರೀರದ ಯಾವ ಭಾಗಕ್ಕೆ ಅಂಟಿಕೊಳ್ಳುವದೋ, ಅದು ಅಲ್ಲಿಯ ನೆತ್ತರವನ್ನು ಸರಸರನೆ ಕುಡಿಯಹತ್ತುತ್ತದೆ. ಕೈಯಿಂದ ಕಿತ್ತು ತೆಗೆದೊಗೆಯಬೇಕೆಂದರೂ ನುಣಚಿಕೊಳ್ಳುವದು. ಮೈಯೆಲ್ಲ ದಂಶವೇ ದಂಶ! ಅವುಗಳ ಜೊತೆಗೇ ವಿಷಾರಿ ಸೊಳ್ಳೆ-ನೊಣಗಳು, ಮುಳ್ಳುಕಂಟಿಗಳು ಮತ್ತು ಸರ್ಪ ಸುರಳಿಗಳು! ಆ ಸುರುಳಿಗಳು ಒಂದೊಂದು ಫೂಟು ಉದ್ದವಾಗಿರುತ್ತವೆ! ಅವುಗಳಿಗೆ ನೂರಾರು ಕಾಲುಗಳಿರುತ್ತವೆ! ಒಂದರ ಮೇ-ಲೊಂದು ಥರಗಟ್ಟಿಕೊಂಡು ನಿಂತಿರುತ್ತವೆ. ಆ ಸುರಳಿಗಳಿಗೆ 'ಕಾನಖಜೂರೆ' ಎಂದು ಅಂಡಮಾನದ ಬಂದಿಗಳು ಅನ್ನುತ್ತಾರೆ ಅವುಗಳ ದಂಶವು ಅತ್ಯಂತ ವಿಷಾರಿಯಿರುವದರಿಂದ, ಮೈಯು ಭಯಂಕರವಾಗಿ ಬಾಯುತ್ತದೆ; ಉರಿಉರಿಯಾಗುತ್ತದೆ; ಒಮ್ಮೊಮ್ಮೆ ಆ ಕಡಿತದ ಭಾಗವು ಚಲನವಲನವಿಲ್ಲದಾಗುವದು. ಕ್ವಚಿತ್ತಾಗಿ ಪ್ರಾಣಘಾತವೂ ಆಗುತ್ತದೆ. ಆ ಮಾನದಿಂದ ಅಲ್ಲಿ ಹಾವಿನ ಸಂಖ್ಯೆ ಕಡಿಮೆಯಾಗಿದೆ; ಆದರೆ ಯಾವ ಒಂದು 'ಫುರಶಾ'ದಂತಹ ಜಾತಿ ಇರುವುದೋ, ಅದು ಕಚ್ಚುತ್ತಲೆ ಪ್ರಾಣವೇ ಹೋಗುವದು! ಅಲ್ಲಿ ಚೇಳುಗಳು ಮೊದಲು ಇರಲಿಲ್ಲವೆಂದೆನ್ನುವರು; ಆದರೆ ಇತ್ತೀಚೆಗೆ ಅವೂ ಕಾಣಹತ್ತಿವೆ. ಅಂಥ ಆ ಕಾಡನ್ನು ಬಂದಿಗಳೊಳಗಿನ ಕಂಟಕರಲ್ಲಿಯ ಕಂಟಕರೂ ಕ್ರೂರರಲ್ಲಿಯ ಕ್ರೂರರೂ ಆದ ಬಂದಿಗಳ ತಂಡಕ್ಕೆ ತಂಡವನ್ನೇ ಬಲಪೂರ್ವಕವಾಗಿ ದೂಡಿಕೊಂಡು ಕಡೆಯಲಿಕ್ಕೆಂದು ಯಾವಾಗ ಒಯ್ಯುವರೋ, ಆಗ

ಅವರು ಥರಗುಟ್ಟಿ ನಡುಗುವರು! ಹೊಡೆಯುತ್ತ ಬಡೆಯುತ್ತ ಒಯ್ದಂತಹ ನೂರಾರು ಜನರು ಹಗಲೆಲ್ಲ ಆ ಭಯಂಕರ ಅರಣ್ಯದಲ್ಲಿ ಆ ಸಕ್ತಿಯ ಕೆಲಸ ಮಾಡಿ ಸಂಜೆಗೆ ಯಾವಾಗ ಹಿಂದಿರುಗುವರೋ, ಆಗ ಒಬ್ಬೊಬ್ಬರ ಮೈ-ಮೇಲೆ ಜಿಗಳಿಗಳು ದಂಶಿಸಿದ ಸೂಕ್ಷ್ಮ ದಂಶಗಳೊಳಗಿಂದ ನೆತ್ತರದ ಸಣ್ಣ-ಪುಟ್ಟ ಪ್ರವಾಹಗಳೇ ಹರಿಯುತ್ತಿರುತ್ತವೆ! ಕಾಲೊಳಗೆ ಮುಳ್ಳು, ಮೈಮೇಲೆ ಸೊಳ್ಳೆ-ನೊಣಗಳ ಕಡಿತದ ಗಾದರಿ, ಜವುಳಿನ ಕೆಸರಿನಿಂದ ಮುಣುಗಿದ ಅಂಗಾಂಗ ಇವುಗಳ ಆ ದಂಡಿತರ ತಂಡಗಳು ತೀರ ಕಂಗೆಟ್ಟು ಅಳುವ ಬೇತಿಗೆ ಬಂದಿರುತ್ತವೆಂಬದು ಸೋಜಿಗವೇನು? ಅದರಲ್ಲಿಯೂ ಆ ಕಾಡಿನಲ್ಲಿ ಜೇನು ನೊಣಗಳ ಹಾಗು ಕುರಡು ನೊಣಗಳ ಸಾಮ್ರಾಜ್ಯವು ಇಂದಿನವರೆಗೂ ಅಬಾಧಿತವಾಗಿದೆ. ಅವುಗಳ ಹುಟ್ಟುಗಳಿಗೆ ಯಾವನೊಬ್ಬ ಮಾನವನಿಂದ ಕೊಂಚ ಉಪದ್ರವವಾದರೆ ಸಾಕು; ಆ ಜೇನುಹುಳ-ಕುರಡು ನೊಣಗಳ ಹುಳಗಳು ಆ ಪರಕೀಯ ಶತ್ರುವಿನ ಮೇಲೆ ಏರಿ ಹೋಗಿ, ತಮ್ಮ ಸ್ವದೇಶದ ಹಾಗು ಸ್ವರಾಜ್ಯದ ಸಂರಕ್ಷಣಾರ್ಥವಾಗಿ ದೇಶಭಕ್ತ ಜಿಗಳಿ, ಸೊಳ್ಳೆ, ನೊಣ, ಕಾನ ಖಜೂರೆ, ರೋಗಾಣುಗಳು ನಡೆಸಿರುವ 'ಸ್ವಾತಂತ್ರ್ಯಯುದ್ಧ'ದಲ್ಲಿ ಭಾಗವಹಿಸದಿರುವದಿಲ್ಲ.

ಇಂಥ ಎಲ್ಲ ಪರಿಸ್ಥಿತಿಗೂ ಎದೆಗೊಟ್ಟು, ಆ ಜಾವರಾ, ಜಿಗಳಿ ಹಾಗು ಎಲ್ಲ ರೋಗಾಣುಗಳ ಪ್ರತೀಕಾರಕ್ಕೆ ಎದುರಾಗಿ ನಿಂತು, ಮಲೇರಿಯಾ ಪ್ರಭೃತಿ ರೋಗಗಳಿಂದ ಎರಡು ಸಾರೆ ವಸಾಹತಿಗೆ ವಸಾಹತುಗಳೇ ಕೊಲ್ಲಲ್ಪಟ್ಟರೂ ಕೂಡ ಮತ್ತೆ ಪ್ರಯತ್ನಪಟ್ಟು, ಇಂಗ್ಲಿಷರು ಆ ಅಂಡಮಾನ ದ್ವೀಪದಲ್ಲಿ ಕಡೆಗೊಂದು ಚಿರಸ್ಥಾಯಿಯಾದ ಮತ್ತು ಭರಭರಾಟೆಗೆ ಹೊಂದಲಿರುವ ವಸಾಹತು ಸ್ಥಾಪಿಸಿದ ಯಶವನ್ನು ಇಂದು ದೊರಕಿಸಿರುತ್ತಾರೆ. ಆ ವಸಾಹತಿಗೇ 'ಕರಿನೀರು' ಎನ್ನುತ್ತಾರೆ.

ಜೀವಾವಧಿ ಕರಿನೀರಿನ ದಂಡಿತರ ಆ 'ಮಹಾರಾಜಾ' ಉಗಿಹಡಗವು ಆ ಅಂಡಮಾನಕ್ಕೆ ತಲುಪುತ್ತಲೆ, ಪ್ರತಿಯೊಬ್ಬನ ಎದೆಯೂ ನಡುಗಹತ್ತಿ, "ಆಯಾ! ಕಾಲಾ ಪಾನೀ ಆಯಾ!" ಎಂದೆನ್ನಹತ್ತುತ್ತಾರೆ!

———

೧೨ನೇ ಪ್ರಕರಣ.

ಕರಿನೀರು ಬರುತ್ತಲೆ ಉಗೆಹಡಗದೊಳಗಿಂದ ಕಾಲೊಳಗೆ ಹಾಕಿದ್ದ ಬೇಡಿಗಳ ಸಹಿತವಾಗಿ ದಂಡಿತರನ್ನು ಕೆಳಗಿಳಿಸಿದವರೇ ಅವರನ್ನು ನೆಟ್ಟಗೆ ಆ ದ್ವೀಪದ ಮೇಲೆ ಸಮುದ್ರದ ದಂಡೆಗೆ ಕಟ್ಟಲ್ಪಟ್ಟಿರುವ ಬಹು ಭದ್ರವೂ ವಿಸ್ತೀರ್ಣವೂ ಮುಖ್ಯವೂ ಆದ ಒಂದು ಜೇಲಿಗೆ ಸಶಸ್ತ್ರ ಪೋಲೀಸರ ಪಹರೆಯಲ್ಲಿ ಒಯ್ಯುತ್ತಾರೆ. ಅದೇ ಕಾರಾಗೃಹಕ್ಕೇ ಕಕ್ಷ-ಕಾರಾಗಾರ (Cellular Jail) ಎಂಬ ಹೆಸರಿದೆ. ಆ "ಸೆಲ್ಯೂಲರ ಜೇಲ" ಎಂಬ ಹೆಸರು ಬಂದಿಗಳ ಭಾಷೆಯಲ್ಲಿ "ಸಿಲ್ವ್ಹರ ಜೇಲ" (ಬೆಳ್ಳಿಯ ಬಂದಿಶಾಲೆ) ಎಂಬ ಮೋಹಕ ರೂಪಾಂತರವಾಗಿರುತ್ತದೆ! ಅರೆಮಾಪಿ ಕಲಿತಂಥ ಯಾರು ಆ ಜೀವಾವಧಿ ದಂಡಿತರಲ್ಲಿರುವರೋ, ಅವರಿಗೆ "ಸಿಲ್ವ್ಹರ ಜೇಲಿಗೆ ಒಯ್ಯಿರಿ!" ಎಂಬ ಪೋಲೀಸರ ನುಡಿಗಳನ್ನು ಕೇಳುತ್ತಲೆ ಆಶ್ಚರ್ಯವೆನಿಸುತ್ತದೆ. ಬೆಳ್ಳಿಯ ಕಾರಾಗೃಹಕ್ಕೆ ಹೋಗುವದೇ! ಕೆಲ ಗುಡಿಗಳ ಕಂಬಗಳಿಗೂ ಕಳಸಕ್ಕೂ ಬೆಳ್ಳಿಯ ತಗಡು ಬಡೆದಿರುತ್ತಾರೆ. ಆ ಸಿಲ್ವ್ಹರ ಜೇಲು ಎಂಬ ಹೆಸರನ್ನು ಕೇಳಿ, ಅಂಥದೊಂದು ವಿಲಕ್ಷಣವಾದ ಭವ್ಯ ಕಾರಾಗೃಹದ ದೃಶ್ಯವು ಕಣ್ಣೆದುರಿಗೆ ಅಕಸ್ಮಾತ್ತಾಗಿ ಬಂದು ನಿಲ್ಲುತ್ತದೆ ಕರಿನೀರ ಮೇಲೆ ಎಲ್ಲವೂ ವಿಚಿತ್ರವೇ! ಅಲ್ಲಿಯ ನೀರು ಹೇಗೆ ಕರಿದೋ (ಕಪ್ಪೋ), ಹಾಗೆಯೇ ಅಲ್ಲಿಯ ಸೆರೆಮನೆಯಾದರೂ ಬೆಳ್ಳಿಯದಲ್ಲವೆಂದು ಅದಾರು ಹೇಳಬೇಕು!

ಆ 'ಸಿಲ್ವ್ಹರ ಜೇಲ' ಎಂಬ ಹೆಸರನ್ನು ದಂಡಿತರ ಹಾಗು ಪೋಲೀಸರ ಬಾಯಿಂದ ಕೇಳುತ್ತಿರುವಾಗ ಕಂಟಕನಿಗಂತೂ ಅದೊಳ್ಳೇ ಆಕರ್ಷಕವಾಗಿ ತೋರಿತು. ನಿಜವಾಗಿ ನೋಡಿದರೆ ಭಯಂಕರರೂ ನಿಗರಗಟ್ಟಿರೂ ಆದ ಪಾಪಿಗಳನ್ನು ಅವರ ಭೀಷಣ ಪಾಪಕ್ಕೆ ಕಠೋರ ದಂಡನೆಯನ್ನೀಯುವ ಸಲುವಾಗಿ ಯಾವ ದ್ವೀಪದಲ್ಲಿ ಒಯ್ದು ಬಿಡುವರೋ, ಅದರ ಹೆಸರು ಮೈ ಮೇಲೆ ಮುಳ್ಳೇಳುವಂಥ 'ಕರಿನೀರು' ಎಂದಿಡಲಾಯಿತು. ಅದರಂತೆಯೇ ಆ ಕಾರಾಗೃಹದ ಹೆಸರನ್ನಾದರೂ ಯಾವುದೊಂದು "ನರಕದ ಹೊದರು" ಇಲ್ಲವೆ 'ಕಾಟದ ಮನೆ' ಎಂದು ಆ ಹೆಸರು ಕೇಳಿಕೊಳ್ಳುತ್ತಲೆ ಅಂಜಿಕೆಯುಂಟಾಗುವಂತಹದಿರಬೇಕಿತ್ತು! ಆದರೆ ಅದು ಹಾಗಿಲ್ಲದೆ ಎಷ್ಟು ಮೋಹಕವಾಗಿದೆ ನೋಡಿದಿರಾ? 'ಸಿಲ್ವ್ಹರ ಜೇಲ!' ಬೆಳ್ಳಿಯ ಕಾರಾಗೃಹ!!

ಅದು ಕೇವಲ ಹೆಸರಿನಿಂದಲೇ ಮೋಹಕವಾಗಿಲ್ಲ. ಅಗೋ ನೋಡಿರಿ, ಇಲ್ಲಿಂದಲೇ ಆ ಭವ್ಯ ಸೆರೆಮನೆ ಕಾಣಿಸುತ್ತಿರುವುದನ್ನು ನೋಡಿರಿ! ಅದೇ ಆ ಸಿಲ್ವ್ಹರ ಜೇಲು! ಅಂ? ಅದೇ? ತೀರ ಬೆಳ್ಳಿಯಂತಿರದಿದ್ದರೂ, ಎಷ್ಟು ಆಕ

ರ್ಷಕ ಭವನವದು! ಒಳ್ಳೇ ಭವ್ಯ, ಸುಂದರ, ತೀರ ಹೊಸದಾದ, ಉದ್ದ, ಅಗಲ, ಸಮಾಂತರ, ಪ್ರಶಸ್ತ, ನೋಡಿದಲ್ಲಿ ಕಿಟಕಿಗಳೇ ಕಿಟಕಿಗಳು, ಒಂದರ ಮೇಲೊಂದರಂತೆ ಮೂರು ಅಂತಸ್ತಿನದು, ನಟ್ಟನಡುವೆ ಬಹು ಎತ್ತರವಾದ ದ್ದೊಂದು ಗುಮುಟ! ಅವನ್ನು ಕಂಡು ನನ್ನ ಚೇಷ್ಟೆಯನ್ನು ಬೇರೆ ಈ ಪೋಲೀ ಸರು ಮಾಡುತ್ತಿರಲಿಕ್ಕಿಲ್ಲವಷ್ಟೇ? ಎಂದು ಕಂಟಕನಿಗೆ ಕ್ಷಣಕಾಲವೆನಿಸಿತು! ಕರಿನೀರಲ್ಲಿಯ ಮುಖ್ಯ ಕಾರಾಗೃಹವೆಂದು ಇವರು ನನಗೆ ಯಾವುದೊಂದು ಶ್ರೀಮಂತ ಅಧಿಕಾರಿಗಳಿಗಾಗಿ ಕಟ್ಟಿಸಿದ ಭವ್ಯವಾದ ಆರೋಗ್ಯಭವನವನ್ನು ತೋರಿಸುತ್ತಿರಲಿಕ್ಕಿಲ್ಲವಷ್ಟೇ? ಎಂದು ಆತನಿಗನಿಸಿತು.

ಒಳಗೆ ಕಾಲಿಟ್ಟರೂ ಕೂಡ ಬಂದಿಗೃಹವೆಂದ ಕೂಡಲೆ ಸಾದಾ ಹಿಂದೀ ಬಂದಿಗೃಹದಲ್ಲಿ ಸಹ ಯಾವ ಒಂದು ಬಗೆಯ ಉದಾಸವೂ, ಭಯಾನಕವೂ, ಕತ್ತಲೆಯ ಸಾಮ್ರಾಜ್ಯವೂ ತೋರುವದೋ ಅಲ್ಲಿ ಅದು ತೋರಲಿಲ್ಲ! ಪ್ರಕಾಶ-ವಾಯುಗಳನ್ನು ಅಲ್ಲಿ ಸಾಕಷ್ಟು ಬರಮಾಡಿಕೊಂಡಂಥ, ಒಂದೇ ಅಳತೆಯ ಹಾಗು ಅಚ್ಚುಕಟ್ಟಾದ ಒಂದೇ ಬಗೆಯ ಕೋಣೆಗಳು ಒಂದಕ್ಕೊಂದು ಹೊಂದಿ ಕೊಂಡಂಥ ಮೂರಂತಸ್ತಿನ ಳ್ಳ ಐದಾರು ರೆಕ್ಕೆಗಳು ಆ ನಟ್ಟ ನಡುವಿನ ಗುಮು ಟದ ನಾಲ್ಕೂ ಕಡೆಗೆ ದೂರ ದೂರದವರೆಗೆ ಶಿಸ್ತಿನಿಂದ ಹಬ್ಬಿರುವವು. ಆ ಕಟ್ಟ ಡಕ್ಕೆ ನಡು ನಡುವೆ ದೊಡ್ಡ ದೊಡ್ಡ ಅಂಗಳಗಳನ್ನು ಬಿಟ್ಟಿರುತ್ತಾರೆ. ಆ ಕಾರಾ ಗಾರವು ಒಟ್ಟಿನಲ್ಲಿ ವರ್ತುಲಾಕಾರದ್ದಿದ್ದು, ಸುತ್ತಲೂ ತೆಂಗು-ಬಾಳೆಗಳ ದಟ್ಟ ವನವಿರುತ್ತದೆ. ಆ ಅಂಡಮಾನದೊಳಗಿನ ಆ ಘನ ದಟ್ಟವಾದ ಕಾಡಿನಲ್ಲಿ ಒಮ್ಮೊಮ್ಮೆ ಮೂವತ್ತು-ಮೂವತ್ತೈದು ಫೂಟ ಉದ್ದವಾದಂಥ ಮೆತ್ತನ್ನ ಮೈಯ್ಯ ಹೆಬ್ಬಾವುಗಳು ಹೇಗೆ ಸುತ್ತುಗಟ್ಟಿಕೊಂಡು ಬಿದ್ದಿರುತ್ತವೆಯೋ, ಹಾಗೆ ಯೆ ಆ ಸಿಲ್ವರ ಜೇಲೆಂಬುದೊಂದು ಹೆಬ್ಬಾವೇ ಆಗಿದೆ! ಹೆಬ್ಬಾವು ಎಷ್ಟು ಮೋಹಕವಾಗಿ ಕಾಣುವದೋ, ಅದು ಅಷ್ಟೇ ಮೋಹಕವಾಗಿ ತೋರುತ್ತದೆ!

ಅಲ್ಲಿಯ ಪ್ರತಿಯೊಬ್ಬ ದಂಡಿತನ ಸ್ವತಂತ್ರವಾದಂಥ ಒಂದೊಂದು ಒಬ್ಬೊಂಟಿಗರ ಕೋಣೆಗೆ ಸಲಾಕಿಯ ಬಾಗಿಲುಹಚ್ಚಿಡಲ್ಪಟ್ಟಿರುತ್ತದೆ. ಅಂಥ ಏಳು ಏಳುವರೆ ನೂರು ಒಬ್ಬೊಂಟಿಗರ ಕೋಣೆಗಳು ಅಲ್ಲಿವೆ. ಅಂತೆಯೇ ಅದಕ್ಕೆ Cellular jail ಕಕ್ಷಗಾರಾಗೃಹ ಎಂಬ ಯಥಾರ್ಥ ಹೆಸರಿದೆ.

ಆ ಪ್ರತಿಯೊಂದು ಕೋಣೆಯಲ್ಲಿ ಹೊರಗಿನಿಂದ ನೋಡುವವರ ಕಣ್ಣಿಗೆ ಸಾಕಷ್ಟು ಪ್ರಕಾಶ ಕಾಣುವದು; ಆದರೆ ಆ ಪ್ರಕಾಶದ ವಿಶೇಷವೇನಂದರೆ, ಆ ಕೋಣೆಯೊಳಗೆ ಕಾಲಿಡಿಸಿ, ಸಲಾಕಿಯ ಬಾಗಿಲಿಗೆ ಹೊರಗಿನಿಂದ ಕೀಲಿ ಹಾಕಿತೆಂದರೆ, ಕಣ್ಣಿಗೆ ಎಷ್ಟೇ ಸ್ಪಷ್ಟವಾಗಿ ಕಂಡರೂ, ಹೃದಯದಲ್ಲಿ ಒಮ್ಮೆಲೆ

ಕತ್ತಲೆಯೇ ಹಬ್ಬಬೇಕು! ಜೀವವು ಕಸವಿಸಿಗೊಳ್ಳಬೇಕು! ಆ ಪ್ರಶಸ್ತ ಕೋಣೆಯು ಒಬ್ಬೊಂಟಿಗರ ಕೋಣೆಯಾಗಿಬಿಡಬೇಕು!

ಅಂಥ ಒಂದೊಂದು ಒಬ್ಬೊಂಟಿಗರ ಕೋಣೆಯಲ್ಲಿ ಆ ಕರಿನೀರಿಗೆ ಅಂದು ಬಂದಿದ್ದ ಆ ಚಲಾನದೊಳಗಿನ ಒಬ್ಬೊಬ್ಬ ದಂಡಿತನನ್ನು ಬೇರೆ ಬೇರೆಯಾಗಿ ಕೂಡಿದರು. ಮೂರು-ನಾಲ್ಕು ದಿನಗಳವರೆಗೆ ಆ ಒಬ್ಬೊಂಟಿಗರ ಕೋಣೆಯಲ್ಲಿ ಒಬ್ಬೊಬ್ಬ ದಂಡಿತನನ್ನು ಕೂಡಿಟ್ಟ ಬಳಿಕ, ಅವರ ಶಿಕ್ಷಾಪತ್ರಕದೊಳಗಿನ ಸಂಗತಿಯನ್ನು ನಿರೀಕ್ಷಿಸಿ, ಅವರ ಅಪರಾಧ ಮತ್ತು ಪೂರ್ವವೃತ್ತ ಇವುಗಳಿಗನುಸಾರವಾಗಿ ಬೇರೆ ಬೇರೆ ವರ್ಗ ಮಾಡಲಾಯಿತು. ಯಾರು ತಾತ್ಕಾಲಿಕ ಉತ್‌ಕ್ಷೋಭದಲ್ಲಿ ಅಪರಾಧಮಾಡಿದ್ದರೋ ಹಾಗು ಅವರದದು ಮೊದಲನೇ ಸಾರೆಯ ಅಪರಾಧವೋ ಅವರು ಸುಧಾರಣೀಯರೆಂದು ಒಂದು ವರ್ಗದವರು; ಯಾರು ನಿಗರಗಟ್ಟ ಅಪರಾಧಿಗಳೋ ಅವರು ದುಸ್ಸಾಧಾರಣೀಯರೆಂದು ಮತ್ತೊಂದು ವರ್ಗದವರು. ಹೀಗೆ ಅಪರಾಧ ವಿಜ್ಞಾನದ (Criminology) ಮೇಲಿಂದ ಎರಡು ವರ್ಗ ಮಾಡಲ್ಪಟ್ಟವು. ಕಂಟಕನು ಮೊದಲನೇ ವರ್ಗಕ್ಕೆ ಸೇರಿದನು; ಮತ್ತು ಆತನು ಇಂಗ್ಲಿಷ, ಹಿಂದೀ ಅಕ್ಷರಸ್ಥನಾದುದರಿಂದ, ತಿಂಗಳೆರಡು-ತಿಂಗಳುಗಳಲ್ಲೇ ಲೇಖ್ಯಾಲಯದೊಳಗೆ ಯಾವ ಬಂದಿಲೇಖಕ ವರ್ಗವಿರುವದೋ ಅದರಲ್ಲಿ ಅಲ್ಪಸ್ವಲ್ಪ ಬರೆವ ಕೆಲಸ ದೊರೆತು, ದಂಡಿತರೊಳಗೆ ಆತನು 'ಬಾಬು' ಆಗಿ ಮೆರೆಯುವನೆಂಬದು ಸ್ಪಷ್ಟವಾಯಿತು; ಆದರೆ ರಫೀಉದ್ದೀನನ ಶಿಕ್ಷಾವೃತ್ತವು ಭಯಂಕರ ವರ್ಗದಲ್ಲಿ ಗಣಿಸಲ್ಪಟ್ಟದ್ದರಿಂದ, ಐದುವರ್ಷಗಳ ವರೆಗೆ ಆತನನ್ನು ಆ ಸೆರೆಮನೆಯಲ್ಲೇ ಕಠಿಣ ಪಹರೆಯಲ್ಲಿ ಕೂಡಿಟ್ಟು, ವರ್ತನವು ವಿಹಿತವೆಂದು ತೋರುವವರೆಗೆ ಸಕ್ತ ಕೆಲಸ ಮಾಡಿಸಿಕೊಳ್ಳುವ ಪ್ರತಿಬಂಧವು ಮಾಡಲಾಯಿತು.

ಅಂಡಮಾನಕ್ಕೆ ಇತ್ತೀಚಿಗೆ ಭಯಂಕರ ಹಾಗು ನಿಗರಗಟ್ಟ (Habitual) ದಂಡಿತರನ್ನು ಕಳಿಸಲಾಗುವದಿಲ್ಲ. ಆದರಿಂದ ಅತ್ತಣ ಬಂದಿಗಳಿಗೆ ಇತ್ತೀಚಿಗೆ ವಿಶೇಷ ರಿಯಾಯತಿಗಳು ದೊರೆಯುತ್ತಿರುವವು; ಆದರೆ ಮೂವತ್ತು-ಮೂವತ್ತೈದು ವರ್ಷಗಳ ಮುಂಚೆ ಭಯಂಕರ ಮತ್ತು ನಿಗರಗಟ್ಟರಾದ ಹಿರಿದಿನ ದಂಡಿತರನ್ನೇ ಬಹುಶಃ ಅತ್ತ ಕಡೆಗೆ ಕಳಿಸುತ್ತಿದ್ದುದರಿಂದ, ಅವರನ್ನು ದುಡಿಸಿಕೊಳ್ಳುವ ಸಲುವಾಗಿ ಅಂಥ ಕಠಿಣ ನಿಯಮಗಳನ್ನೂ ಅವರ ದುಷ್ಟ ತಿಂಡಿಯನ್ನು ತಗ್ಗಿಸುವದಕ್ಕಾಗಿ ಅಂಥವೇ ಸಕ್ತ ಕೆಲಸಗಳನ್ನೂ ಯೋಜಿಸಬೇಕಾಗುತ್ತಿತ್ತು. ಅದರ ವಿನಃ ಬೇರೆ ಯಾವ ಸಾಮಾನ್ಯ ವ್ಯವಸ್ಥೆಯಿಂದಲೂ ಅಂಥ ರಕ್ಕಸರಾದ ದಂಡಿತರನ್ನು ದಾರಿಗೆ

ತರುವದೂ ಸಮಾಜಕ್ಕೆ ಹಿತಕರವಾದ ಕೆಲಸಗಳನ್ನು ಅವರಿಂದ ಮಾಡಿಸಿ ಕೊಳ್ಳುವುದೂ, ಕಿಮಾನಪಕ್ಷ ಸಮಾಜಕ್ಕೆ ಅವರ ಸ್ವೈರ ಅಸ್ತಿತ್ವದಿಂದುಂಟಾಗುವ ಉಪದ್ರವವನ್ನು ನಿವಾರಿಸುವದೂ ಬಹು ಮಟ್ಟಿಗೆ ಅಸಾಧ್ಯವೇ ಆಗುವಂತಿತ್ತು.

ರಫೀಉದ್ದೀನನಂಥ ಕಠೋರ ಹೃದಯದ ಕೆಲ ದಂಡಿತ(Convicts)ರು ಅಂಥ ಕಠಿಣ ವ್ಯವಸ್ಥೆಗೂ ಧೂಳ ಮುಕ್ಕಿಸಿ ಕರಿನೀರಿನಿಂದ ಕೂಡ ಓಡಿ ಹೋಗುತ್ತಿದ್ದರು; ಸ್ವದೇಶಕ್ಕೆ ಮರಳಿ ತಲುಪುತ್ತಿದ್ದರು; ಮತ್ತು ಪುನಃ ಸಮಾಜದ ಮೇಲೆ ಅಘೋರ ಅತ್ಯಾಚಾರ ಮಾಡುತ್ತಾರೆಂಬದು ತಿಳಿಯಲು, ರಫೀ ಉದ್ದೀನನು ಮುಂಚೆ ಓಡಿ ಹೋದ ನಂತರದ ಮಧ್ಯಕಾಲದಲ್ಲಿ ಆ ವ್ಯವಸ್ಥೆಯು ಇನ್ನಿಷ್ಟು ಬಿಗಿಯಾಗಿ ಮಾಡಲಾಗಿತ್ತು. ಆ ದುರ್ದಮನೀಯ ಬಂದಿಗೂ ಸಾಕಾಗಿ ಉಳಿಯುವಂತಹ, ಪ್ರಸಂಗ ವಿಶೇಷದಲ್ಲಿ ಅವರಿಗಿಂತಲೂ ಕಠೋರವಾಗಿ ನಡೆಯುವ ಚಾಣಾಕ್ಷ ಅಧಿಕಾರಿಗಳು ಆ ಕಕ್ಷ-ಕಾರಾಗೃಹದ ಮೇಲೆ ಈ ಮಧ್ಯೆ ನೇಮಿಸಲ್ಪಟ್ಟಿದ್ದರು. ಆತನಿಗೆ ಅವನಿಗಿಂತಲೂ ಒಂದು ತೂಕ ಹೆಚ್ಚೇ ಕಠೋರವಾದಂಥ ದಂಡವು ಬಂದಿಪಾಲನು ಗಂಟುಬಿದ್ದನು!

ತನ್ನ ಮುಂಚಿನ ಪರಿಚಯದ ವ್ಯವಸ್ಥೆಯೂ ಅಧಿಕಾರಿಗಳೂ ಬದಲಿಸಲಾಗಿರುವರೆಂಬುದು ರಫೀಉದ್ದೀನನಿಗೆ ಕೂಡಲೆ ಗೊತ್ತಾಯಿತು; ಮತ್ತು ಆ ಹೊಸ ಅಧಿಕಾರಿಗಳ ಕಣ್ಣಲ್ಲಿ ಧೂಳೆರಚುವ ಸಲುವಾಗಿ ಎಲ್ಲಿ ಏನೇನು ಉಪಯುಕ್ತವಾದೀತೋ, ಅಲ್ಲಿ ಅದನ್ನು-ಚಾಡಿ, ಮನಸ್ಸು ಒಲಿಸಿಕೊಳ್ಳುವದು, ದೈನ್ಯತನ ತೋರಿಸುವದು, ಹರಟೆ, ಬೆದರಿಕೆ, ಬೆಯ್ಯುವದು, ಹುಚ್ಚುಚ್ಚಾರ ಮಾಡುವದು, ಅಡಮುಟ್ಟತನ, ನಕ್ಕು ಪ್ರಸನ್ನೀ ಕರಿಸುವದು. ಇಲ್ಲವೆ ಶೀರ ನಿಗರಗಟ್ಟತನ ಇತ್ಯಾದಿ ಪ್ರಕಾರಗಳ ವರ್ತನದ ಸಾಧನೆ ಯೋಜಿಸಲಿಕ್ಕೆ ಆತನು ಪ್ರಾರಂಭಿಸಿದನು.

ಆ ಹೊಸ ಬಂದಿಪಾಲನು ಭಯಂಕರರೂ ಅಧಮರೂ ಆದ ಯಾವ ಹೊಸ ದಂಡಿತರು ಬರುವರೋ ಅವರ ಪೂರ್ವವೃತ್ತಗಳನ್ನು ಸರಕಾರೀ ಟಿಪ್ಪಣಿಗಳಿಂದ ಅರಿತು ಅವರ ವಿಷಯವಾಗಿ ಯಾವ ಧೋರಣವನ್ನಿಡಬೇಕೆಂಬದನ್ನು ತನ್ನ ಮನಸ್ಸಿನಲ್ಲಿ ನಿರ್ಧರಿಸುವನು; ಹಾಗು ಆ ಮೇಲೆ ಪ್ರಸ್ತುತದಲ್ಲಿ ಅವರ ಮನೋವೃತ್ತಿಯು ಹೇಗಿದೆಯೆಂಬದನ್ನು ತಿಳಿಯುವ ಸಲುವಾಗಿ ಅವರನ್ನು ಎರಡು ಮೂರುಸಾರೆ ಸಮಕ್ಷ ಭೆಟ್ಟಿಯಾಗಿ ಮಾತು-ಕಥೆಯಾಡುವನು; ಅವಶ್ಯಕಂಡಲ್ಲಿ ಅವರೊಡನೆ ಶೀರ ಮನೆಯವರಂತೆ ಮಾತಾಡುವ ಧೋರಣ ವಿಡಬೇಕು; ಸೌಮ್ಯತನ ತೋರಿಸಬೇಕು; ಮತ್ತು ಆ ಮೇಲೆ ಸ್ಕ್ರೂವೊಳೆ

ಯನ್ನು ಬೇಕಾದಷ್ಟು ಗಟ್ಟಿಯಾಗಿ ತಿರುವಿಕೊಳ್ಳುವಂತೆ ಅವರನ್ನು ಹತ್ತೋಟ್ತಿ ಕೊಳ್ಳಬೇಕು. ಆದರಂತೆ ಆ ಹೊಸ ಚಲಾನದೊಳಗಿನ ದಂಡಿತರನ್ನು ಒಬ್ಬೊಂಟಿಗರ ಕೋಣೆಯಲ್ಲಿ ಕೊಳೆಯ ಹಾಕಿದ ನಂತರ, ಒಂದು ದಿನ ಜೇಲಿನ ಮುಖ್ಯ ಜಮಾದಾರನೊಡನೆ ಆ ಬಂದಿಪಾಲನು ರಫೀ ಉದ್ದೀನನ ಕೋಣೆಯ ಮುಂದೆ ಆಕಸ್ಮಿಕವಾಗಿ ಹೋಗಿ ನಿಂತನು! ಸ್ವತಃ ಜೇಲರರು ಯಾವಾತನ ಒಬ್ಬೊಂಟಿಗ(Solitery cell)ಕೋಣೆಯ ಮುಂದೆ ಕರೆಯದೆ ಹೋಗುವರೋ, ಆ ದಂಡಿತನ ಮಹತ್ವವು ಬೇರೆ ದುರ್ಲಕ್ಷಿತ ಬಂದಿಗಳಲ್ಲಿ ಒಮ್ಮೆಲೆ ಬೆಳೆಯುತ್ತದೆ! ಆ ನಗಣ್ಯ ಜನರಲ್ಲಿ ತಾನೊಬ್ಬ ಗಣ್ಯಪುರುಷನಿರುತ್ತೇನೆಂದು ಆ ದಂಡಿತನಿಗೂ ಅಹಂಕಾರವುಂಟಾಗುತ್ತದೆ. ರಫೀ ಉದ್ದೀನನಿಗಾದರೂ ಹಾಗೆಯೇ ಆಯಿತು. ಆತನು ಆ ಅತ್ಯಂತ ಸಕ್ತಪಹರೆಯಲ್ಲಿ ಒಬ್ಬೊಂಟಿಗರ ಕೋಣೆಯಲ್ಲಿ ಒಂದೇ ಸವನೆ ಕೊಳೆಯುತ್ತಿದ್ದುದರಿಂದ, ಯಾರೊಬ್ಬರು ಒಂದು ಕ್ಷಣವಾದರೂ ಮಾತಾಡ ಬಂದರೆ, ಅದು ತನ್ನ ಭಾಗ್ಯವೆಂದೇ ತಿಳಿಯಬಹುದಾಗಿತ್ತು. ಅಂದಬಳಿಕ ಸ್ವತಃ ಜೇಲರ 'ಸಾಬ'ನೇ ಆತನ ಬಳಿಗೆ ತಾನಾಗಿ ಬಂದವನೇ "ಕ್ಯಾಂ ರಫೀ ಉದ್ದೀನ! ನಿನ್ನದೆಲ್ಲವೂ ವಿಹಿತವಾಗಿದೆಯಷ್ಟೇ? ನಿನ್ನದೇನಾದರೂ ತಕರಾರು ಇದೆಯೇನು?" ಎಂದು ಕೇಳಲು,

"ಸರಕಾರ! ಆಪ ಹೀ ಮಾಬಾಪ ಹೈ ಅಬ ಹಮಾರೆ" ಎಂದು ರಫೀ ಉದ್ದೀನನು ಕೇವಲ ನಮ್ರತೆಯ ಬುರುಕೀ ಧರಿಸಿ, ಕಕ್ಕಾವಿಕ್ಕಿಯಾದವನಂತೆ ನಟಿಸುತ್ತ:—"ಬೇಕಾದರೆ ನನ್ನನ್ನು ಗಲ್ಲಿಗೇರಿಸಿರಿ; ಆದರೆ ಹೀಗೆ ಒಬ್ಬೊಂಟಿಗನನ್ನಾಗಿ ಸೆರೆಯಲ್ಲಿ ಕೂಡಬೇಡಿರಿ. ನಾನು ಯಾರೊಡನೆಯೂ ಪಿಟ್ಟೆನ್ನುವಂತಿಲ್ಲ! ನಾನು ಇನ್ನು ಕೆಲ ದಿನ ಹೀಗೆಯೇ ಒಂಟಿಗನಾಗಿ, ಈ ಏಕಾಂತದಲ್ಲಿದ್ದರೆ ನನಗೆ ಹುಚ್ಚು ಹಿಡಿದೀತು ಹುಚ್ಚು!"

"ಒಬ್ಬನೇ ಇರಲಿಕ್ಕೆ ನೀನು ಬೇಸತ್ತೆಯಾ?" ಎಂದಂದು, ಬಂದಿಪಾಲನು ನಕ್ಕು:—"ಇಷ್ಟೇ ಅಲ್ಲವೆ? ನಿನ್ನ ಚಿಂತೆಯ ಕಾರಣವು? ಅಚ್ಛಾ, ಜಮಾದಾರ, ಇವನಗೊಬ್ಬಳು ಜೊತೆ ಬೀಬಿಯನ್ನು ತಂದುಕೊಡಿರಿ ನಮ್ಮ ಆ ಸ್ತ್ರೀಯರ ಬಂದಿಖಾನೆಯಲ್ಲಿ ಬೇಕಾದಷ್ಟು ಜನ ಬೀಬಿಗಳಿರುತ್ತಾರೆ"

ಬಂದಿಪಾಲನು ನಗೆಚೇಷ್ಟೆಯುವನಿರುವನೆಂಬದು ಗೊತ್ತಾಗಲು, ರಫೀ ಉದ್ದೀನನು ಒಮ್ಮೆಲೆ ಹುರಿದುಂಬಿದನು! ಅದರಲ್ಲಿಯೂ ಬೀಬಿಯ ಮಾತೇ ಹೊರಟಿತ್ತು. ಆತನ ಮುದ್ರೆಯು ಒಮ್ಮೆಲೆ ಕಾಮವಿಕಾರದಿಂದ ಮಿನುಗಲು, ಆತನು:—"ಸಾಬ! ಅದಕ್ಕೆ ಹೆಂಗಸರ ಬಂದಿಶಾಲೆಯೆಂದೇಕನ್ನುತ್ತೀರಿ? ಬಹುತರವಾಗಿ ಎಲ್ಲ ದಂಡಿತರೂ ಅದಕ್ಕೆ 'ಬಿಬೀ ಘರ' ಎನ್ನುತ್ತಾರೆ; ಮತ್ತು

ನಮ್ಮಗಳಲ್ಲಿ ಯಾರು ನಿಜವಾದ ರಸಿಕರಿರುವರೋ, ಅವರಂತೂ ಅದಕ್ಕೆ 'ಚಿಡಿಯಾ ಖಾನಾ!-ಹಕ್ಕಿಗಳ ಗೂಡು!!' ಅನ್ನುವರು; ಆದರೆ ಸಾಬ, ಆ ಹಕ್ಕಿಗಳ ಗೂಡೊಳಗಿನ ಹಕ್ಕಿಗಳನ್ನು ನೀವು ನಮ್ಮಂಥವರ ಪಾಲಿಗೆಲ್ಲಿ ಬರಗೊಡುವಿರಿ? ಅಗೋ, ಅಲ್ಲಿ ಎದುರಿಗೆ ಕತ್ಥಾಕುಟ್ಟುತ್ತ ಕುಳಿತಿರುವನಲ್ಲ-ಆ ಕರೀ ಮಾತಾಳಿ! ಅಂಥ ಡಂಬರ ಕಾಗಿಗಳಿಗೇ ನೀವು ಆ ಹಕ್ಕಿಗಳನ್ನು ಕೊಡುವವರು! ಸಾಬ! ಸರಕಾರವು ಪಂಕ್ತಿಪ್ರಪಂಚವನ್ನೇಕೆ ಮಾಡುವದು? ಆ ಡಂಬರ ಕಾಗಿಯು-ಆ ಕಂಬಕನು ನನ್ನ ಚಲಾನಿಯು. ಆತನು ಕುತ್ತಿಗೆಗೊಯ್ಕ ದಂಡಿತನು-ಜೀವಾವಧಿ ಕರಿನೀರಿನ ಅಪರಾಧಿಯು! ನಾನೂ ಅಂಥವನೇ! ಆದರೆ ನನಗ ಐದು ವರ್ಷ ಈ-ಜೇಲಿನಲ್ಲಿ-ಈ ಏಕಾಂತದಲ್ಲಿ-ಕೊಳೆಯುತ್ತಿರುವ ಶಿಕ್ಷೆ; ಮತ್ತು ಆತನನ್ನು ಕೂಡಲೆ ಕೋಣೆಯೊಳಗಿಂದ ಹೊರಗೆ ಬಿಟ್ಟು, ಆ ಕತ್ಥಾಕುಟ್ಟುವ ಹಗುರ ಕೆಲಸ ಕೊಡಲಾಗಿದೆ; 'ಹಾಗು ನಿನಗೆ ಬೇಗನೆ ಬಂದಿಲೇಖಕರಲ್ಲಿ ನೇಮಿಸುವೆವೆ'ಂದು ಹೇಳಲಾಗಿದೆ! ಆತನಿಗೆ ಓದು-ಬರೆಹ ಬರುತ್ತಿದ್ದರೆ, ಸಾಬ! ನನಗೂ ಏನಾದರೂ ಬಂದೇ ಬರುತ್ತದೆ! ಆ ಬಾಬೂಗೆ ಬರೆಯಬರುತ್ತಿದ್ದರೆ, ಸಾಬ! ನಮಗೆ ಯುದ್ಧ ಮಾಡಬರುತ್ತದೆ! ಸರಕಾರ, ನಾನು ದಂಡಿನಲ್ಲಿದ್ದೆ; ಸಾಬ, ನಾನು ಮರ್ದನಿರುತ್ತೇನೆ!-ಆದರೆ ನಮ್ಮನ್ನು "ಭಯಂಕರರೆ"ಂದು ಈ ಕರಿನೀರಲ್ಲಿ ಈ ಏಕಾಂತದಲ್ಲಿ ಸುಮ್ಮನೆ ಕೊಳೆಹಾಕುತ್ತೀರಿ; ಮತ್ತು ಆ ಬಾಬುವಿಗೆ-ಆ ಡಂಬರ ಕಾಗಿಗೆ-ಆ ಮೇಕೆಯಂಥವನಿಗೆ "ಸಾಧಾರಣೀಯ"ನೆಂದು ಆರಿಸಿ, ಮದುವೆಯ ಮನ್ನಣೆಯನ್ನೀಯುತ್ತೀರಿ! ಮತ್ತು "ಆ ಹಕ್ಕಿಗಳ ಗೂಡಿ"ನೊಳಗಿನ ಬೇಕಾದ ಹಕ್ಕಿಯನ್ನು ಪೋಷಿಸಲಿಕ್ಕೆ ಒಯ್ಯಗೊಡುತ್ತೀರಿ! ಇದು ಕೇವಲ ಅನ್ಯಾಯದ ನಿಯಮವಲ್ಲೇನು? ಸಾಬ, ನಾವು ಸಿಪಾಯಿ ಜನರೆಂದರೆ, ಬಾಗಿಲು ಕಾಯುವ ನಾಯಿಗಳು! ಪ್ರಾಣಕ್ಕೆ ಬಂದರೂ, ಯಾರು ಸಾಕಿರುವರೋ ಅವರಿಗಾಗಿ ಪ್ರಾಣ ಕೊಡಲಿಕ್ಕೆ ಹಿಂದೆಗೆಯಲಾರೆವು. ಇಂಥವರನ್ನು ಒಬ್ಬೊಂಟಿಗರ ಕೋಣೆಯಲ್ಲಿ ಕೊಳೆಸಿ ಕೊಲ್ಲುವವಕ್ಕಿಂದ ಸರಕಾರವು; ನನನ್ನು ಬೇಕಾದರೆ ಯುದ್ಧಕ್ಕೆ ಕಳಿಸಲಿ. ವೈರಿಗಳ ತೋಫಿನ ಎದುರಿಗೆ ನಿಲ್ಲ ಹೇಳಿದರೂ ಸರಕಾರದ ಕೆಲಸಕ್ಕಾಗಿ ನನ್ನ ಶಿರಸ್ಸು ಕೊಡಲಿಕ್ಕೆ ನಾನು ಹಿಂದೆಗೆಯಲಾರೆನು!"

"ಭಲೆ! ಭಲೆ! ಒಳ್ಳೇ ಸಮಯಕ್ಕೆ ಹೇಳಿದೆ ಬಿಡು ನೀನು! ಸರಕಾರಕ್ಕೆ ಈಗೊಂದು ಶಿರಸ್ಸು ಬೇಕೇಬೇಕಾಗಿತ್ತು! ಆ ಜಾವರಾ ಜನರಿರುವರಲ್ಲಾ, ಈ ಕರಿನೀರಿನ ದಟ್ಟ ಕಾಡಿನಲ್ಲಿಯ ರಕ್ಕಸರು? ಅವರು ಮನುಷ್ಯನ ತಲೆಯೊಳಗಿನ ಚಿಪ್ಪು ತೆಗದು, ಅದನ್ನು ಕೆತ್ತಿ ತಿಕ್ಕಿ, ಅದರಲ್ಲಿ ಬಣ್ಣ ಬಣ್ಣದ ಶಿಂಪುಗ

ಳನ್ನು ಸುಂದರವಾಗಿ ಸೇರಿಸಿ, ಅದೊಂದು ಮದ್ಯ ಕುಡಿಯುವ ಬಹು ಸುಂದರ ಪಾತ್ರೆ ಮಾಡಿ ಕೊಡಲಿರುವರಂತೆ! ಅಂಥದೊಂದು ಪಾತ್ರವನ್ನು ಸರಕಾರವು ಲಂಡನ್ನದ ಪ್ರದರ್ಶನಕ್ಕೆ ಕಳಿಸಬೇಕೆಂದಿದೆ. ಅದಕ್ಕಾಗಿ ನಿನ್ನನ್ನು ಆ ಜಾವರಾಗಳ ಕಡೆಗೆ ಕಳಿಸಿ ಕೊಡುತ್ತೇನೆ. ನಿನ್ನ ತಲೆಯು ಅದಕ್ಕೆ ಬೇಕಾಗುವಂತಹ ಉತ್ತಮ ಪೊಳ್ಳಿನದಿರುವದರಿಂದ, ಅವರಿಗೆ ಒಳ್ಳೇ ತಲೆಚಿಪ್ಪು ದೊರಕಬಹುದಾಗಿದೆ!" ಎಂದಂದು ಜೇಲರಸಾಬನು ಗಟ್ಟಿಗಟ್ಟಿಯಾಗಿ ನಕ್ಕನು.

"ನನ್ನ ತಲೆಯೋ? ಛೇ-ಛೇ! ಆ ಎದುರಿಗೆ ಕಾಣುವ ಡಂಬರ ಕಾಗೆಯಂತಹ ಆ ಕಂಟಕ ಬಾಬುವಿನ ತಲೆಯೋ ಆ ಕೆಲಸಕ್ಕೆ ಹೆಚ್ಚು ಉಪಯುಕ್ತ ಕಂಡೀತು! ಸಾಬ, ತಲೆಯ ಕೆಲಸದಲ್ಲಿ ಬಾಬೂ ಜನರ ತಲೆಗಳೇ ಹೆಚ್ಚು ಉಪಯುಕ್ತವಾದವು. ಅವರ ತಲೆಯು ಮೆತ್ತಗಿರುವದರಿಂದ, ಅದನ್ನು ತಿಕ್ಕಲಿಕ್ಕೂ ಕೆತ್ತಲಿಕ್ಕೂ ಅದರ ಮೇಲೆ ನಕ್ಷಿಯ ಕೆಲಸ ಮಾಡಲಿಕ್ಕೂ ಒಳ್ಳೇ ಅನುಕೂಲವಾಗಿರುತ್ತದೆ."

"ಆದರೆ ಆ ಕಂಟಕನ ತಲೆಯು ಬ್ರಾಹ್ಮಣನದಿದೆ, ಹೌದಲ್ಲವೋ ಜಮಾದಾರ? ಬ್ರಾಹ್ಮಣರ ತಲೆಯೆಂದರೆ ತುಂಬಿದ್ದಿರುತ್ತದೆ. ಅದರೊಳಗೆ ಒಳ್ಳೇ ಮಿದುಳಿರುತ್ತದೆ! ನಮಗೆ ನಿನ್ನಂಥವನ ಪೊಳ್ಳು ತಲೆ ಬುರುಡೆಯೇ ಬೇಕಾಗಿದೆ. ಪೋಲೀಸರು ನನಗೆ ಹೇಳಿರುವರೇನಂದರೆ, ಆ ಕಂಟಕನು ದೊಡ್ಡಮನೆತನದವನು. ಕುಲ-ಶೀಲ-ಬುದ್ಧಿವಂತರೆಂದು ಅವರು ಪ್ರಖ್ಯಾತರು. ಆತನ ತಂದೆಯು ಪ್ರಸಿದ್ಧ ಶಾಸ್ತ್ರಿಯಿದ್ದನಂತೆ!"

"ಅಹುದರೀ ಅಹುದು. ಬರಿಯ ಶಾಸ್ತ್ರಿಯೇ ಅಲ್ಲ, ಈ ಕಂಟಕನ ತಂದೆಯು ದೊಡ್ಡ ದಾನಶೂರನೂ ಪರೋಪಕಾರಿಯೂ ಆಗಿದ್ದನು! ಈತನ ತಂದೆಯು ತನ್ನ ಬಳಿಯಲ್ಲಿದ್ದ ಅಪಾರವಾದ ಸಂಪತ್ತಿಯನ್ನು ಕೊನೆಗೊಂದು ಅನಾಥಾಲಯಕ್ಕೆ ಧರ್ಮಾರ್ಥ ಕೊಟ್ಟುಬಿಟ್ಟನು!"

"ಹಾಗೆಯೋ? ಹಾಗಾದರೆ ಆ ಸಂಪತ್ತಿಯಾದರೂ ಎಷ್ಟಿತ್ತು?" ಆಶ್ಚರ್ಯದಿಂದ ಜಮಾದಾರನು ನಡುವೇ ಕೇಳಿಬಿಟ್ಟನು.

"ಮೂರು ಸಾಯಲಾದ ಗಂಡುಮಕ್ಕಳು; ಮತ್ತು ಒಬ್ಬ ಹೆಣ್ಣು ಹುಡುಗಿ!!" ಎಂದು ಹೇಳಿ ರಫೀ ಉದ್ದೀನನು ನಕ್ಕನು. ಭೋಳೇ ಜಮಾದಾರನು ಫಜೀತಿಗೊಂಡಂತಾದನು. ರಫೀ ಉದ್ದೀನನು ತನ್ನ ಹೇಳಿಕೆಯನ್ನು ಮುಂದರಿಸುತ್ತ "ಆ ಎಲ್ಲ ಹುಡುಗರನ್ನು ಆತನು ಅನಾಥಾಲಯಕ್ಕೆ ಕೊಟ್ಟನು. ಈ ಕಂಟಕನು ಆ ಖೋಡಿ ಹುಡುಗರೊಳಗಿನ ಹಿರಿಯ ಹುಡುಗನು, ಇಲ್ಲಿ ಕರಿನೀರಲ್ಲಿ ಬಾಬೂ ಆಗಹತ್ತಿದ್ದಾನೆ; ಮತ್ತು ಈತನ ತಂಗಿಯು ಕಲಕತ್ತೆಯ

ವಿೊನಾಬರಘೂರದಲ್ಲಿ ಬಿಬೀ ಬನಕೆ ಪಾನ ಪಟ್ಟಿಕೇ ದುಕಾನ ಚಲಾತೀ ಹೈ. ಸಾಬ! ಮೈನೆ ಖುದ್ದ ಉಸಕೋ ದೇಖೀಹೈ. ಪಾನಭೀ ಚಬಾಯಾ ಹೈ ಉಸಕೆ ದುಕಾನಕಾ! ಕಿಧರ ಕಾ ಕುಲ, ಔರ ಕಿಧರಕಾ ಶೀಲ. ಪೋಲೀಸಕೋ ಇಸನೇ ಜೋ ಕುಂಥ ಗಪೋಡ ಬಾತೆ ಬತಾದೀ ಉಸ್ಕೋ ಉನ್ಹೋಭೀ ಲಿಖ ಮಾರೀ ಔರಕ್ಯಾ? ಐಸೇ ಭುಕ್ಕಡ ಆದಮಿೂ ಕೋ ಆಪ ಬಾಬೂ ಬನಾತೇ, ಔರ ಹಮಾರೆ ಸರೀಖೇ ಸರಕಾರಕೇ ವಿಶ್ವಾಸ ಪಲಟನವಾಲೇ ಮರ್ದ ಶಿಪಾಯಿ ಕೋ ಕುತ್ತೇಕೇ ಮೋತಸೇ ಮರವಾತೇ ಹೈ ಇಸ ಕೊಠಡೀಮೆ!"

"ಪರಂತು ತುಮ ಕಾಲೇಪಾನೀಸೆ ಪೀಛೇ ಭಾಗಾ ಹುವಾ ಬಂದಿವಾನ ಹೈ! ಯಹಾ ಭೂಲೋ ಮತ!"

"ಸರಕಾರ! ನಾನು ಮಾಡಿದ ಅಕ್ಷಮ್ಯ ಅಪರಾಧವದು! ಆದರೆ ಪಶ್ಚಾತ್ತಾಪದಿಂದನನ್ನ ಮನಸ್ಸು ಈ ಮೊದಲೇ ಬೂದಿಯಾಗಿಹೋಗಿದೆ! ಆ ದುಷ್ಕೃತ್ಯದಿಂದ ನನಗಾದ ಲಾಭವೇನು? ಮೊದಲಿಗಿಂತ ನೂರಾರು ಪಟ್ಟು ಹೆಚ್ಚು ಯಾತನೆಗಳಲ್ಲಿ ಮಾತ್ರ ಈ ಏಕಾಂತದ ಕೋಣೆಯೊಳಗೆ ಕೈ-ಕಾಲುಗಳಲ್ಲಿ ಬೇಡಿ ಹಾಕಿಸಿಕೊಂಡು ಬಿದ್ದೆನು! ಇನ್ನು ನೀವು ನನ್ನನ್ನು ದೂಡಿಕೊಟ್ಟರೂ ನಾನು ಈ ಕರಿನೀರಿನಿಂದ ಹೋಗಲಾರೆನು! ಕೊಟ್ಟಂಥ ಕೆಲಸ ಮಾಡೇನು, ಅಪ್ಪಣೆ ಕೊಟ್ಟಾಗ ಇಲ್ಲಿಯೇ ಮನೆ-ಮಠ ಮಾಡೇನು; ಆದರೆ ಸರಕಾರ, ನನ್ನ ಶಾದೀ ಮಾತ್ರ ಬೇಗನೆ ಮಾಡಿಬಿಡಬೇಕರೀs. ನನ್ನ ಗೋರಿಯು ಇನ್ನು ಇಲ್ಲಿಯೇ ಆಗತಕ್ಕದ್ದು; ಆದ್ದರಿಂದ ಈ ಒಬ್ಬೊಂಟಿಗರ ಕೋಣೆಯಿಂದ ನನ್ನನ್ನು ಕೂಡಲೆ ತೆಗೆಯಬೇಕೆಂದು ತಮ್ಮ ಚರಣಗಳೆಡೆಗೆ ನಾನು ಪ್ರಾರ್ಥಿಸುತ್ತೇನೆ."

"ಅಚ್ಛಾ! ಜಮಾದಾರ, ನಾಳಿನಿಂದ ಈತನಿಗೆ ಎಣ್ಣೆಯ ಗಾಣ-ಕೋಲೂ-ದ ಕೆಲಸ ಕೊಡಿರಿ! ನೀನು ಅಲ್ಲಿಯ ಸಂಪೂರ್ಣ ಕೆಲಸ ಚೆನ್ನಾಗಿ ಮಾಡಹತ್ತಿದರೆ ಆರುತಿಂಗಳ ಮೇಲೆ ನಿನಗೆ ಸುಲಭ ಕೆಲಸ ಕೊಡಿಸುವೆನು; ಆದರೆ ಎಚ್ಚರ! ನೀನು ನಿನ್ನ ಈ ಬಾಯಿಬಡಾಯಿಯ ಚಾಳಿಯನ್ನು ಬಿಟ್ಟುಬಿಡಬೇಕು; ಯಾರೊಡನೆಯೂ ಸೊಕ್ಕಿನ ಚಕಾರ ಶಬ್ದ ನುಡಿಯಕೂಡದು; ಮತ್ತು ಲಕ್ಷ್ಯದಲ್ಲಿಡತಕ್ಕದ್ದೇನಂದರೆ, ನೀನು ಮತ್ತೆ ಬಂದಿಗೃಹದ ನಿಯಮವನ್ನುಲ್ಲಂಘಿಸಿದರೆ, ಸೊಕ್ಕಿನಿಂದ ನಡೆದರೆ, ನಿನ್ನ ಎಲುವು ಪುಡಿ ಪುಡಿಯಾದಾವು! ಓಡಿಹೋಗಲು ಪ್ರಯತ್ನಿಸುವ ದಂಡಿತನಿಗೆ ಒಮ್ಮೆಲೆ ಗುಂಡು ಹಾಕುವ ಹೊಸ ಅಧಿಕಾರವು ನಮಗೀಗ ಪ್ರಾಪ್ತವಾಗಿರುತ್ತದೆ! ಹಿಂದಿನ ಸರಕಾರದ ಅಸಡ್ಡೆಯ ಭರವಸೆಯ ಮೇಲೆ ನೀನು ಮತ್ತೆ ಮೊದಲಿನ ಸಾಹಸಕ್ಕೆ ಬೀಳ

ಬೇಡ! ಇನ್ನು ನನ್ನೊಡನೆ ಸಂಬಂಧವಿದೆ! ನಿನ್ನ ಹಿಂದಿನ ಭಯಂಕರ ಅಪರಾಧಗಳನ್ನೆಲ್ಲ ನಾನು ಮರೆತುಬಿಡುತ್ತೇನೆ; ಆದರೆ ಸಮಾಜಕ್ಕೆ ಇನ್ನು ಮುಂದಾದರೂ ಉಪದ್ರವಗೊಡದೆ, ಕಷ್ಟಪಟ್ಟು ಹೊಟ್ಟೆ ತುಂಬಿಕೋ. ಜಮಾದಾರ, ಈತನನ್ನು ಈ ಏಕಾಂತದೊಳಗಿಂದ ತೆಗೆದು ಕಳಿಸಿರಿ ಆ ಗಾಣದ ಕೆಲಸಕ್ಕೆ; ಮತ್ತು ಈತನನ್ನು ಅಲ್ಲಿಯ ದಂಡಿತರಲ್ಲಿ ಹಗಲೆಲ್ಲ ಕಲೆಯಗೊಡಿರಿ; ಆದರೆ ರಾತ್ರಿಯಲ್ಲಿ ಮಾತ್ರ ಇವನನ್ನು ಮತ್ತೆ ಇಲ್ಲಿಯೇ ಕೂಡಹಾಕಿ ಕೀಲಿ ಹಾಕುತ್ತಿರಿ.”

ಆ ಕಕ್ಷಗಾರಾಗೃಹದಲ್ಲಿ ಪ್ರತಿಯೊಂದು ಓಣಿಯ ಅಂಗಳದಲ್ಲಿ ಒಂದೊಂದು ಚಪ್ಪರ ಹಾಕಲ್ಪಟ್ಟಿರುತ್ತದೆ. ಅದರಲ್ಲಿಯೇ ಆ ‘ಕಾಲ ಕೋಲೂ’ ಅಂದರೆ ಗಾಣವನ್ನು ಹಿಡಿದು ಸುತ್ತುವ ಕೆಲಸ ನಡೆಯುತ್ತಿತ್ತು. ಒಂದು ದೊಡ್ಡ ಕಟ್ಟಿಗೆಯ ಗಾಣಕ್ಕೆ ನೊಗದಂತಹ ಒಂದು ದೊಡ್ಡ ಕಾವು ಕೂಡಿಸಿ, ಅಂಥ ಪ್ರತಿಯೊಂದು ಗಾಣಕ್ಕೆ ಇಬ್ಬಿಬ್ಬರನ್ನು ಹೂಡಿ ಸುತ್ತ ಹಚ್ಚುವರು. ಗಾಣದಲ್ಲಿ ಸರಸೂ (ಸಾಸಿವೆಯ ಜಾತಿಯ ಸಣ್ಣ ಕಾಳಿನ ಧಾನ್ಯ) ಹಾಕಿ ಪ್ರತಿಯೊಬ್ಬನು ಸಂಜೆಯ ವರೆಗೆ ಮೂವತ್ತು ಪೌಂಡು ಎಣ್ಣೆ ತೆಗೆಯಬೇಕಾಗುತ್ತಿತ್ತು. ಎತ್ತಿನ ಬದಲು ಹೂಡಿದ್ದ ಆ ಮನುಷ್ಯರು ಹಗಲೆಲ್ಲ ಆ ಗಾಣದ ಸುತ್ತು ಗರಗರನೆ ತಿರುಗುವರು. ಅವರಲ್ಲಾರಾದರೂ ಮೈಗಳ್ಳತನ ಮಾಡಿದರೆ, ಅವರನ್ನು ಎತ್ತಿನಂತೆ ಹೊಡೆದು ಬಡೆದು ತಿರುವ ಹಚ್ಚಲಿಕ್ಕೆ ವಾರ್ಡರರು ನಿಯಮಿಸಲ್ಪಡುತ್ತಿದ್ದರು. ಆ ಚಪ್ಪರದಲ್ಲಿ ಅಂಥ ಗಾಣಗಳ ಸಾಲಿಗೆ ಸಾಲೇ ಇದ್ದು, ಆ ಎಲ್ಲ ಗಾಣಗಳ ಮೇಲ್ವಿಚಾರಣೆ ಮಾಡುವ ಸಲುವಾಗಿ ಒಬ್ಬ ತಾಂಡೇಲ-ದಂಡಿತರೊಳಗಿನವನೇ ಬಡತಿ ಹೊಂದಿದಂತಹ ಒಬ್ಬ ದುಯ್ಯಮ ಜಮಾದಾರ-ನನ್ನು ನಿಯಮಿಸಿರುತ್ತಿದ್ದರು.. ಆ ಕೆಲಸವು ಅತ್ಯಂತ ಕಠಿಣವಾದ್ದರಿಂದ, ನಿಗರಗಟ್ಟ ದಂಡಿತನು ಕೂಡ ಆ ಚಪ್ಪರದಲ್ಲಿ ಕಾಲಿಟ್ಟ ಕೂಡಲೆ ಅಳುಮೋರೆ ಮಾಡುತ್ತಿದ್ದನು! ಅವರೊಳಗಿನ ನಿಗರಗಟ್ಟ ಲಫಂಗನು ಮೈಗಳ್ಳತನ ಮಾಡಹತ್ತಿದರೆ, ಸಂಜೆಗೆ ಎಣ್ಣೆ ಪೂರ್ತಿಯಾಗುವವರೆಗೂ ಅವನನ್ನು ಹೂಡುತ್ತಿದ್ದರು. ಒಂದೊಂದು ವೇಳೆ ರಾತ್ರಿ ಎಂಟು-ಒಂಬತ್ತು ಗಂಟೆಯವರೆಗೂ ಅವರನ್ನು ಹೂಡಿ ಅವರ ಕೆಲಸ ಪೂರೈಸಿಕೊಳ್ಳುತ್ತಿದ್ದರು! ಸಂಜೆಯ ಊಟವನ್ನು ರಾತ್ರಿ ಎಣ್ಣೆ ಪೂರೈಸಿದ ನಂತರವೇ ಕೊಡಲಾಗುತ್ತಿತ್ತು. ಅಷ್ಟು ಸಕ್ತಿ ಇದ್ದಿತೆಂದೇ ಆ ನಿಗರಗಟ್ಟ ದರವಡೆಖೋರರೂ, ಕೊಲೆಗಡಕರೂ, ಸುಲಿಗೆಗಾರರೂ ಆದ ದಂಡಿತರು ಅಲ್ಪವಾದರೂ ಶಿಸ್ತಿನಿಂದ ನಡೆಯುತ್ತಿದ್ದರು; ಅವರ ಕಡೆಯಿಂದ ಸ್ವಲ್ಪವಾದರೂ ಕೆಲಸ ಮಾಡಿಸಿಕೊಳ್ಳಬರುತ್ತಿತ್ತು ಯಾರು ದುರ್ಬಲರೋ

ಅಥವಾ ಆ ಜೇಲಿನಲ್ಲಾದರೂ ಯಾರು ಸದ್ವರ್ತನದವರಿರುವರೊ, ಅವರನ್ನು ಆ ಕಠೋರ ಕಷ್ಟದ ಹೋರೆಗೆ ಬಹಳ ಮಾಡಿ ಹಚ್ಚುತ್ತಿದ್ದಿಲ್ಲ; ಹಾಗು ಅಂಥವರಿಗೆ ಆ ಕೆಲಸ ಕೊಡಲಾಗದೆಂಬ ಪ್ರಾಘಾತವಾದರೂ ಅಸ್ತಿದ್ದಿತು.

ಆ ಕೋಲೂ ಕೆಲಸದ ಅನುಭವವು ರಫೀ ಉದ್ದೀನನಿಗೆ ಮುಂಚೆಯೇ ಆಗಿತ್ತು. ಆದ್ದರಿಂದ ಆ ಕೆಲಸವನ್ನು ತಾನು ಸ್ವತಃ ಮಾಡದೆ ಹೇಗೆ ಕಾಲಹರಣ ಮಾಡಬರುತ್ತದೆಂಬ ಅಂತಸ್ಥ ಯುಕ್ತಿಗಳು ಆತನಿಗೆ ಚೆನ್ನಾಗಿ ಪರಿಚಿತವಾಗಿದ್ದವು. ಅದಲ್ಲದೆ ಆ ಕೋಲೂವಷ್ಟೇ ಅಲ್ಲ, ಆದರೆ ಆ ಕಾಲಕ್ಕೆ ಅದರ ಮೇಲ್ವಿಚಾರಣೆ ಮಾಡುವದಕ್ಕೆಂದು ನಿಯಮಿಸಲ್ಪಟ್ಟಿದ್ದ ಆ ದಂಡಿತರೊಳಗಿನ ಒಬ್ಬ ದುಯ್ಯಮ ಅಧಿಕಾರಿ (Convict-petty officer), ಯಾವ ಆ ತಾಂಡೇಲನು ಸಹ ರಫೀ ಉದ್ದೀನನ ಮುಂಚಿನ ಕರಿನೀರಿನ ವಾಸ್ತವ್ಯದ ಕಾಲದ ಗುರ್ತಿನವನಿದ್ದನು. ಅದರಿಂದ ಬಂದಿಪಾಲನು ಯಾವ ಕಠಿಣತಮ ಕೆಲಸವೆಂದು ಆತನಿಗೆ ಕೊಟ್ಟಿದ್ದನೋ, ಅದೇ ಕೋಲೂ ಕೆಲಸವು ಅವನಿಗೆ ಸುಲಭತರವಾಗಿ ಹೋಯಿತು. ಮೊದಲನೇ ದಿನವೇ ರಫೀ ಉದ್ದೀನನು ಒಂದು ಹೊನ್ನನ್ನು ಮುಚ್ಚಿ ಮುಚ್ಚಿ ಯಾರಿಗೂ ಗೊತ್ತಾಗದ ಹಾಗೆ ತಾಂಡೇಲನ ಕೈಯಲ್ಲಿ ಕೊಟ್ಟ ಕೂಡಲೆ, ಅವರಲ್ಲಿಯ ಹಳೇ ಗೆಳೆತನಕ್ಕೆ ಹೊಸ ಒಪ್ಪ ಕೊಟ್ಟಂತಾಯಿತು! ಮತ್ತು ರಫೀ ಉದ್ದೀನನು ಸ್ವಸ್ಥವಾಗಿ ಕುಳಿತು ಹಗಲೆಲ್ಲ ಹರಟೆ ಹತ್ತಿದನು. ಅವನ ಸ್ಥಳದಲ್ಲಿ ಆ ತಾಂಡೇಲನು ಬೇರೆ ಅಭಿಪ್ರಾಣಿ ದಂಡಿತರನ್ನು ಕದ್ದು ಮುಚ್ಚಿ ಹಚ್ಚಿ, ಸಂಜೆಯೊಳಗಾಗಿ ರಫೀ ಉದ್ದೀನನ ಪಾಲಿನ ಎಣ್ಣೆಯು ಆತನ ಹೆಸರಿಗೆ ಸಂಪೂರ್ಣವಾಗಿ ಅಳೆದು ಕೊಡಲಾಗಹತ್ತಿತು.

ಹೀಗೆ ನಾಲ್ಕೈದು ದಿನ ನಡೆದಿರಲು, ಆ ದಂಡಿತ ತಾಂಡೇಲನ ಕೈಕೆಳಗೆ ಯಾವ ದಂಡಿತ ವಾರ್ಡರರಿರುತ್ತಿದ್ದರೋ, ಅವರಲ್ಲಿಯ ಜೋಸೆಫ ಎಂಬವನು ಆತನ ಸಂಪೂರ್ಣ ನಂಬಿಗೆಗೆ ಪಾತ್ರನಾಗಿದ್ದನು; ಯಾಕಂದರೆ, ಆತನು ಆ ತಾಂಡೇಲನಿಗೆ ದೊಡ್ಡ ದೊಡ್ಡ ಪಾತ್ರೆ ತುಂಬ ಮೊಸರನ್ನು ಕದ್ದು ತಂದುಕೊಡುತ್ತಿದ್ದನು. ದಂಡಿತರಿಗೆ ಅಲ್ಲಿ ವಾರದಲ್ಲೆರಡು ಸಾರೆ ಮೊಸರು ಸಿಗುವದು. ಅದನ್ನು ಹಂಚುತ್ತಲೆ, ಈ ಚಾಳಿನೊಳಗಿನ ಎಲ್ಲ ದಂಡಿತರೆದುರಿಗಿನ ಮೊಸರನ್ನು ಈ ಜೋಸೆಫ ವಾರ್ಡರನು ಹೆದರಿಕೆ-ಬೆದರಿಕೆಗಳನ್ನು ತೋರಿ, ಎತ್ತಿಕೊಂಡೊಯ್ದು ಆ ತಾಂಡೇಲನಿಗೆ ಅರ್ಪಿಸುತ್ತಿದ್ದನು. ಆತನು ಅದನ್ನು ಆ ಚಪ್ಪರದ ಮರೆಗೆ ಕುಳಿತು ಬಾವುಗದಂತೆ ತಿಂದು ಬಿಡುತ್ತಿದ್ದನು. ಈ ಜೋಸೆಫನಿಗೆ ದುಡ್ಡು ಆಭರಣಗಳನ್ನು ಎತ್ತಿಹಾಕುವ ನೆವದಿಂದ ಇವನು

ತನ್ನ ಹೆಂಡತಿಯ ಇಬ್ಬರು ಚಿಕ್ಕ-ಪುಟ್ಟ ತಂಗೆಂದಿರನ್ನು ಮೋಸಪಡಿಸಿ ತನ್ನ ಮನೆಗೆ ಊಟಕ್ಕೆ ಕರೆದೊಯ್ದು ವಿಷವಿಟ್ಟು ಕೊಂದ ಅಘೋರ ಅಪರಾಧದ ಬಗ್ಗೆ ಜೀವಾವಧಿ ಕರಿನೀರಾಗಿತ್ತು; ಮತ್ತು ಆ ತಾಂಡೇಲನು ಮತ್ಸರದಿಂದ ತನ್ನ ಹೆಂಡತಿಯನ್ನು ಕೊಡ್ಲಿಯಿಂದ ತುಂಡರಿಸಿದ ಅಪರಾಧದ ಸಲುವಾಗಿ ಜೀವಾವಧಿ ಕರಿನೀರಿನ ಶಿಕ್ಷೆ ಹೊಂದಿ, ಕಳೆದ ಹತ್ತು ವರ್ಷಗಳಿಂದಲೂ ಅದನ್ನು ಭೋಗಿಸುತ್ತಿದ್ದನು. ಹೀಗೆ ಆ ತಾಂಡೇಲ-ಜೋಸೆಫ್ ವಾರ್ಡರರ ಜೊತೆಯಿದ್ದಿತು. ಆ ಚಾಳಿನೊಳಗಿನ ಗಾಣಗಳಿಗೆ ಹೂಡಿದ್ದ ನಾಲ್ವತ್ತು-ಐವತ್ತು ದಂಡಿತರನ್ನು ಹೊಡೆದು, ಬಡೆದು, ಬೆದರಿಸಿ, ಏನು ಮಾಡಿ ಯಾದರೂ ಎಣ್ಣೆಯ ಪ್ರಮಾಣವನ್ನು ಪೂರೈಸಿಕೊಡುವ ದಾಯಿತ್ವವು ಆ ಜೊತೆಯ ಮೇಲೆಯೇ ಇದ್ದಿತು. ಯಾರು ಲಂಚಕೊಡುತ್ತಿದ್ದರೋ, ಅತ್ಯಂತ ದಂಡಮರಿದ್ದರೂ ಅಥವಾ ತಾಂಡೇಲನ ದಾಸರಾಗಿರುವರೋ ಅವರನ್ನೆಲ್ಲ ಸ್ವಸ್ಥವಾಗಿ ಕುಳ್ಳಿರಿಸಿ ಬಿಡಲಾಗುತ್ತಿತ್ತು; ಮತ್ತು ಅವರ ಭಾಗದ ಕೆಲಸವನ್ನೆಲ್ಲ ಅವರಲ್ಲಿಯೇ ಯಾರು ಸದ್ವರ್ತನದವರೋ, ಭೋಳೆ ಭಾವಿಕರೋ, ಸಹನ ಶೀಲರೋ ಅವರನ್ನು ಸಾಯುವವರೆಗೂ ದುಡಿಸಿ ಮಾಡಿಸಿ ಕೊಡಲಾಗುತ್ತಿತ್ತು.

ತಾಂಡೇಲನ ಎಲ್ಲ ಛದ್ಮ ಕೆಲಸಗಳಿಗೂ ಸಹಾಯಕನಾಗಿರುತ್ತಿದ್ದುದರಿಂದ ಜೋಸೆಫನ ಮೇಲೆ ಆತನ ನಂಬಿಗೆಯಿದ್ದು, ಅವನು ಜೋಸೇಫನಿಗೆ ಕದ್ದು ಬಹುಶಃ ಏನನ್ನೂ ಮಾಡುತ್ತಿರಲಿಲ್ಲ; ಮತ್ತು ಹಾಗೆ ಮಾಡುವದೂ ಕಠಿಣವಿದ್ದಿತು. ರಫೀ ಉದ್ದೀನನು ಜೋಸೇಫನಿಗಾದರೂ ಹಿಡಿದಷ್ಟು ತಂಬಾಕವನ್ನೂ ಪ್ರಸಂಗ ವಿಶೇಷದಲ್ಲಿ ಅತ್ಯಲ್ಪ-ಸಾಸುವೆಕಾಳಷ್ಟು ಅಫುವನ್ನೂ ಕೊಟ್ಟು ಪ್ರಸನ್ನೀಕರಿಸಿಕೊಂಡರೂ, ತನಗೆ ವಾರ್ಡರನ ಮೇಲಿನ ಬಡತಿಯನ್ನು ಕೊಟ್ಟು ತಾಂಡೇಲನು ತನ್ನ ತಾಂಡೇಲ ಪದವನ್ನೇನೂ ಅರ್ಪಿಸಲಾರನು. ಅದನ್ನು ಸಾಧಿಸಿಕೊಳ್ಳಬೇಕಾದರೆ ಬಂದಿಪಾಲನ ಕೃಪೆಯನ್ನೇ ಸಾಧಿಸಿ ದೊರಕಿಸಿಕೊಳ್ಳಬೇಕೆಂಬದನ್ನು ಜೋಸೇಫನೇನೂ ಅರಿಯದವನಿರಲಿಲ್ಲ. ಅಂತೆಯೇ ಬಂದಿಪಾಲನ ಆ ಕೃಪೆಯನ್ನು ಸಾಧಿಸುವ ಪ್ರಯತ್ನವನ್ನು ಆತನು ಎಡಬಿಡದೆ ನಡೆಯಿಸಿದ್ದನು; ಮತ್ತು ಅದರ ಸಾಧನವು-ಬಂದಿಗೃಹದೊಳಗಿನ ಬಡತಿಯ ಬಹುಮಟ್ಟಿಗೆ ಯಾವ ಒಂದೇ ತುರ್ತದಾನ ಮಹಾಪುಣ್ಯದಾಯಕ ಸಾಧನವಿರುವುದೋ-ಅದೆಂದರೆ ಚಾಡೀ ಹೇಳುವದು! ಅದಕ್ಕಾಗಿ ತನ್ನ ಛದ್ಮೀ ವರ್ತನದ ಸಂಬಂಧವು ಹೆಚ್ಚಾಗಿ ಯಾತರಲ್ಲಿ ಬರಲಾರದೋ, ತನ್ನ ಹಾನಿಯು ಏತರಿಂದ ಒಟ್ಟಿನಲ್ಲಿ ಹೆಚ್ಚಾಗಿ ಆಗಲಾರದೋ, ಅಂಥ ಆ ಗಾಣದ ಚಪ್ಪರದೊಳಗಿನ ಆ ತಾಂಡೇಲನ ಹಲವು ದುಷ್ಕೃತ್ಯಗಳ ಚಾಡಿಗಳನ್ನು ಯಾರಿಗೂ

ತಿಳಿಯದ ಹಾಗೆ ಸಂಧಿಸಾಧಿಸಿ ಬಂದಿಪಾಲನೆದುರಿಗೆ ಗುಪ್ತವಾಗಿ ಹೋಗಿ ಹೇಳುತ್ತಿದ್ದನು. 'ಶಠಾಸೀ ಆಣಾವಾ ಶಠ!' ಈ ಸಮರ್ಥರ ಉಕ್ತಿಯಂತೆ ಆ ಶಠರ ರಾಜ್ಯದಲ್ಲಿ ವ್ಯವಸ್ಥೆಯಿಡಬೇಕಾಗಿತ್ತಾದ್ದರಿಂದ ಬಂದಿಪಾಲ ಸಾಹೇಬರು ಇಂಥ ಹೇರರನ್ನು ಬೇಕಂತ ಸಾಕಿರುತ್ತಿದ್ದರು. ಅವರು ಹೇಳಿದ ಚಾಡಿಗಳಲ್ಲಿ ಅನೇಕ ದುಷ್ಕೃತ್ಯಗಳು ಅಪರಿಹಾರ್ಯವೆಂದು ಹೊಟ್ಟೆಯಲ್ಲಿ ಹಾಕಿಕೊಳ್ಳುತ್ತಿದ್ದರು. ಯಾವು ತೀರ ಅಕ್ಷಮ್ಯಗಳೋ ಅವುಗಳನ್ನು ಸ್ವತಃ ಹೋಗಿ ಆಕಸ್ಮಿಕವಾಗಿ ಹಿಡಿಯುತ್ತಿದ್ದರು; ಆದರೆ ಜೋಸೇಫನಂತಹ ನಿಪುಣ ಹೇರನೇ ಆ ಚಾಡಿ ಹೇಳಿದನೆಂಬುದು ಹಾಗು ಇಂಥಿಂಥವರೇ ಹೇರರಿರುವರೆಂಬದು ತಿಳಿಯದ ಹಾಗೆ-ಬಂದಿಗಳಿಗೆ ಸಹಸಾ ತಿಳಿಯದ ಹಾಗೆ-ಬಹು ಚಾಣಾಕ್ಷತನದಿಂದ ಹಿಡಿಯುತ್ತಿದ್ದರು. ಹಾಗೆ ಮಾಡದಿದ್ದರೆ ಆ ಹೇರರ ಮುಂದೆ ಅವರನ್ನು ನಂಬಿ ಯಾರೂ ಯಾವ ದುಷ್ಕೃತ್ಯವನ್ನೂ ಮಾಡಲಿಕ್ಕಿಲ್ಲ!

ಮುಂದೆ ಎಂಟು ದಿನಗಳಿಗೆ ಮಧ್ಯಾಹ್ನ ಹನ್ನೆರಡು ಗಂಟೆಗೆ ಲೇಖ್ಯಾಲಯದೊಳಗಿನ ಎಲ್ಲ ಲೇಖಕರೂ ಗಣಕರೂ ಮನೆಗೆ ಹೋದಾಗ, ಬಂದಿಪಾಲನು ಆ ಕಾಲದಲ್ಲಿ ಒಬ್ಬನೇ ಆ ಲೇಖ್ಯಾಲಯಕ್ಕೆ ಬಂದನು. 'ಶಿಪಾಯಿ' ಎಂದು ಕೂಗುತ್ತಲೆ, ಪಹರೆಯ ಮೇಲಿನ ಶಿಪಾಯಿಯು ಒಳಗೆ ಬಂದನು. 'ಜೋಸೆಫ ವಾರ್ಡರಕೂ ಬುಲಾವ!' ಎಂದು ಜೇಲರನು ಹೇಳಿದ ಕೂಡಲೆ ಶಿಪಾಯಿಯು ಜೇಲಿನೊಳಗೆ ಹೋಗಿ, ಜೋಸೇಫನನ್ನು ಕರೆತಂದು ಬಂದಿಪಾಲನೆಡೆಗೆ ಕಳಿಸಿ, ತಾನು ತನ್ನ ಪಹರೆಯ ಕೆಲಸಕ್ಕೆ ಹೊರಗೆ ಹೊರಟು ಹೋದನು.

"ಕ್ಯಾಂ ಜೋಸೇಫ? ನಿನ್ನ ಚಪ್ಪರದೊಳಗಿನ ಗಾಣದ ಕೆಲಸ ಹೇಗೆ ಸಾಗಿದೆ? ಆ ಹೊಸ ದಂಡಿತನಾದ ರಫೀಉದ್ದೀನನು ತನ್ನ ಪಾಲಿನ ಗಾಣದ ಎಣ್ಣೆಯನ್ನು ಸಂಪೂರ್ಣವಾಗಿ ತಿರುವಿ ಕೊಡುತ್ತಿರುವನೋ? ಆತನೊಡನೆ ಯಾರವೇನಾದರೂ ಎಳೆ ಕೂಡುತ್ತಿರುವದೋ ಹೇಗೆ?" ಎಂದು ಬಂದಿಪಾಲನು ಕೇಳಲು,

'ಸಾಬ! ಆತನ ಎಣ್ಣೆಯನ್ನು ಆತನು ಪೂರ್ತಿಯಾಗಿ ಕೊಡುತ್ತಿರುವನು.'

"ಹಾಗೆಯೋ? ಅಂಥ ನಿಗರಗಟ್ಟೆ ದಂಡಿತನು ಕೂಡ ಮೊದಲನೇ ದಿನದಿಂದಲೂ ಪೂರ್ಣ ಕೆಲಸ ಮಾಡುವನೊ? ಸುಳ್ಳು ಹೇಳಬೇಡ, ಅಂಜಬೇಡ!"

"ಸಾಬ, ಆತನು ಎಣ್ಣೆಯನ್ನು ಪೂರ್ತಿಯಾಗಿ ಅಳೆದುಕೊಡುತ್ತಾನೆ; ಆದರೆ ಅದನ್ನೆಲ್ಲ ಆತನು ಸ್ವತಃ ತೆಗೆಯುವದಿಲ್ಲ. ತಮ್ಮ ಬೆಳಗಿನ ಬಂದಿಶಾಲೆಯೊಳಗಿನ ಸಂಚಾರವು ತೀರುವವರೆಗೆ ಆತನು ಹೇಗಾದರೂ ಗಾಣ

ವನ್ನು ತಿರುವುತ್ತಾನೆ; ಆದರೆ ಆ ಮೇಲೆ ಆತನು ಕುಳಿತೇಬಿಡುವನು; ಮತ್ತು ಆತನ ಬಾಕಿ ಕೆಲಸವನ್ನು ಬೇರೆ ಯಾರಾದರೂ ಹಗಲೆಲ್ಲ ಗಾಣ ತಿರುವಿ ಪೂರ್ತಿಗೊಳಿಸುತ್ತಾರೆ ತಾಂಡೇಲರೇ ಬೇರೆ ಆಳು ಗಾಣಕ್ಕೆ ಹೂಡುತ್ತಾರೆ''

"ಏನು?" ಬಂದಿಪಾಲನು ಸಂತಾಪದಿಂದ "ಇದನ್ನು ನೀನು ಇದು ವರೆಗೂ ನನಗೆ ತಿಳಿಸದೆ ಬಚ್ಚಿಟ್ಟೆಯೇಕೆ? ನಾನು ನಿನ್ನನ್ನು ಅಲ್ಲಿ ಹೇರನಾಗಿಟ್ಟ ಪ್ರಯೋಜನವೇನು?"

"ಸಾಬ, ಕ್ಷಮಿಸಬೇಕು; ಆದರೆ ಮುಂಚೆ ಹೀಗೆಯೇ ಕೆಲ ಜನ ಬಂದಿಗಳನ್ನು ಕೂಡ್ರಿಸಿ, ಅವರ ಬದಲು ಬೇರೆ ಜನರನ್ನು ಹಚ್ಚಿ ತಾಂಡೇಲರು ಕೆಲಸ ಮಾಡಿಸಿಕೊಳ್ಳುತ್ತಿದ್ದರು. ಅದನ್ನು ನಾನು ಗುಪ್ತರೀತಿಯಿಂದ ತಮ್ಮ ಕಿವಿಯ ಮೇಲೆ ಹಾಕಲು, ತಾವು ಅತ್ತ ಕಡೆಗೆ ಲಕ್ಷ್ಯಗೊಡಲಿಲ್ಲ ಅಂತೆಯೇ ನಾನು ಅಂಜಿದೆನು, ಅದನ್ನೇ ಪುನಃ ಪುನಃ ಹೇಳಲಿಕ್ಕೆ!"

"ದುರ್ಲಕ್ಷಿಸುವದು ಯಾವಾಗ, ದುರ್ಲಕ್ಷಿಸದಿರುವದು ಯಾವಾಗ ಆ ಕೆಲಸವು ನನ್ನದಿದೆ. ನಿಜವಾಗಿಯೂ ಯಾರು ದುರ್ಬಲರೂ ಅಥವಾ ಸಾಧಾರಣೀಯರೂ ಇರುವರೋ, ಆ ದಂಡಿತರು ಪ್ರಸಂಗ ವಿಶೇಷದಲ್ಲಿ ತುಸ ಶಿಸ್ತು ಭಂಗ ಮಾಡಿದರೂ ನಡೆದೀತು; ಕೆಲಸ ಪೂರ್ಣವಾದರೆ ತೀರಿತು; ಆದರೆ ಆ ರಫೀಉದ್ದೀನನು ಹಲವು ಅಧಮಾಧಮ ಅಪರಾಧ ಮಾಡಿದಂಥವನು; ಅದರಲ್ಲಿಯೂ ಕರಿನೀರಿನಿಂದ ಓಡಿ ಹೋದವನು! ಆತನ ಎಳೆಯು ಯಾರೊಡನೆಯೂ ಹೊಂದಕೂಡದು. ತಾಂಡೇಲನು ಆತನನ್ನೇಕೆ ಕೂಡ್ರಿಸುತ್ತಿರುವನೆಂಬದನ್ನು ಹೇಳು? ಆತನು ರಫೀಉದ್ದೀನನ ಋಣಾನುಬಂಧಿಯೇನು? ಬೇಗನೆ ಹೇಳು."

"ಸರಕಾರ! ಅದು ನನಗಿನ್ನೂ ಚೆನ್ನಾಗಿ ತಿಳಿದಿಲ್ಲ. ಗೊತ್ತಿದ್ದರೆ ಆ ಗುಪ್ತ ಸಂಗತಿಯನ್ನು ನಾನು ಆಗಲೆ ತಿಳಿಸಿಬಿಡುತ್ತಿದ್ದೆನು; ಆದರೆ ರಫೀಉದ್ದೀನನು ತಾಂಡೇಲನಿಗೆ ಹೊನ್ನು ಕೊಟ್ಟಿರಬೇಕು!"

"ಹೊನ್ನೇ? ಮತ್ತು ಅದು ರಫೀಉದ್ದೀನನಲ್ಲೇ? ಆತನ ಅಂಗಝಡತಿಯನ್ನು ದಿನಾಲು ಬೆಳಗು-ಸಂಜೆಗಳಲ್ಲಿ ಸ್ವತಃ ಜಮಾದಾರನು ಚೆನ್ನಾಗಿ ತಕ್ಕೊಳ್ಳುತ್ತಿರುವನಲ್ಲವೇ? ನನ್ನ ಸಕ್ತ ಆಜ್ಞೆಯೇ ಹಾಗಿದೆ!"

"ಜಮಾದಾರರು ಝಡತಿಯನ್ನು ಚೆನ್ನಾಗಿ ತಕ್ಕೊಳ್ಳುತ್ತಾರೆ; ಆದರೆ ರಫೀಉದ್ದೀನನ ಬಳಿಯಲ್ಲಿ ಎಲ್ಲಿಯೋ ಮುಚ್ಚಿಡಲ್ಪಟ್ಟ ಹೊನ್ನುಗಳಿರುವದು ನಿಜ. ಅದಿಲ್ಲದಿದ್ದರೆ ತಾಂಡೇಲನು ತಂಬಾಕ-ಅಫುಗಳನ್ನು ಆವನಿಗಾಗಿ ತನ್ನ ದುಡ್ಡು ಖರ್ಚುಮಾಡಿ ಕದ್ದು-ಕಳವಿನಿಂದ ಬಂದಿಶಾಲಿಗೇಕೆ ತರಿಸುತ್ತಿದ್ದನು?"

"ಹಾ! ಅವರೊಳಗಿನ ಕೆಲ ತಂಬಾಕ-ಅಫುಗಳನ್ನು ನಿನಗೂ ತಿನಿಸು ತ್ತಿರಬಹುದು; ಅಂತೆಯೇ ನೀನು ಆ ಚಾಡಿಯನ್ನು ನನಗಿದುವರೆಗೂ ಹೇಳಿರ ಲಿಕ್ಕಿಲ್ಲ!"

"ದೇವರಾಣೆ! ಸಾಬ, ನಾನು ಆತನ ತಂಬಾಕದ ಕಡ್ಡಿಗೆ ಕೂಡ ಎಂದೂ ಮುಟ್ಟಿರುವದಿಲ್ಲ; ಆದರೆ ತಾಂಡೇಲರಿಗೆ ಆತನು ಹೊನ್ನು ಕೊಡುವ ನೆಂಬದರ ಖಂಡಿತ ಪುರಾವೆ ಸಿಗದ ಹೊರತು ನಾನು ಚಾಡಿ ಹೇಳಿದ್ದರೆ, ತಾವು ನನ್ನನ್ನೇ ಖೊಟ್ಟಿಯನ್ನಾಗಿ ನಿರ್ಧರಿಸಬಹುದೆಂದು ನಾನು ಇದು ವರೆಗೂ ನನ್ನ ದೃಷ್ಟಿಯನ್ನಿಟ್ಟು ಸುಮ್ಮನಿದ್ದೆನು. ತಾಂಡೇಲನ ಹೊಟ್ಟೆಯಲ್ಲಿ ಹೊಕ್ಕು ಸಾಬ, ನಾನು ಆತನ ಒಳಸಂಚನ್ನು ಬೇಗನೆ ಬೈಲಿಗೆಳೆಯುವೆನು. ಬಹಳ ಮಾಡಿ ನಾಳೆಯೇ ಅವರದೇನಾದರೂ ಕೊಡ-ಕೊಳ್ಳುವ ವ್ಯವಹಾರವು ಮತ್ತೆ ಆಗತಕ್ಕದ್ದಿದೆ, ಎಂಬ ನುಡಿಗಳನ್ನು ನಾನು ಆ ಚಪ್ಪರದ ಮರೆಗೆ ನಿಂತು ಕೇಳಿಕೊಂಡಿರುತ್ತೇನೆ; ಆದರೆ ಸಾಬ, ನನಗೆ ತಾಂಡೇಲನ ಅಂಜಿಕೆಯೆನಿಸು ತ್ತದೆ; ನಾನೊಬ್ಬ ಸಾಮಾನ್ಯ ವಾರ್ಡರನು! ಸಾಬ, ತಾವು ಧಣೇರು ನನ್ನನ್ನು ತಾಂಡೇಲನನ್ನಾಗ ಮಾಡುವಿರಾ?...."

"ಅಂದರೆ ನೀನು ಆ ತಾಂಡೇಲನಿಗಿಂತಲೂ ಹೆಚ್ಚು ಲಂಚಗುಳಿಯೂ ದುರ್ಜನನೂ ಆದೀಯೇ! ಆದಿರಲಿ. ರಫೀಉದ್ದೀನನಿಂದ ತಾಂಡೇಲನು ಹೊನ್ನು ಪಡೆಯುವಾಗ ನೀನು ಹಿಡಿದುಕೊಡು; ಇಲ್ಲವೆ ರಫೀ ಉದ್ದೀನನು ಆ ಹೊನ್ನುಗಳನ್ನೆಲ್ಲಿಟ್ಟಿರುತ್ತಾನೆಂಬದನ್ನಾದರೂ ತಿಳಿದು ಹೇಳು; ಅಂದರೆ ಆ ವೇಳೆ ನೋಡೋಣ ನಿನ್ನ ಬಡತಿಯ ಬಗ್ಗೆ. ಹೋಗು. ತೊಡಗು ನಿನ್ನ ಕೆಲ ಸಕ್ಕೆ; ಆದರೆ ತುಸ ತಡೆ. ನಾನು ನಿನ್ನೊಬ್ಬನನ್ನೇ ಕರೆಸಿದ್ದಕ್ಕಾಗಿ ಬಂದಿ ಗಳು ನಿನ್ನನ್ನು ಹೇರನೆಂದು ಸಂಶಯಗೊಂಡಾರು. ಇದಕ್ಕಾಗಿಯೇ ಏನಾ ದರೂ ಈ ತೋರಿಕೆಯ ಕೆಲಸಗಳನ್ನೊಯ್ಯು. ಮೂರು ದೊಡ್ಡ ಪಿಪಾಯಿ ಗಳನ್ನು ಸರಸೂ ಎಣ್ಣೆಯಿಂದ ಈಗಿಂದೀಗಲೇ ತುಂಬಿಡಬೇಕೆಂದೂ, ಅವು ಗಳನ್ನು ಕೂಡಲೆ ಮದ್ರಾಸದ ಹಡಗದ ಮೇಲೇರಿಸುವುದಿದೆಯೆಂದೂ ತಾಂಡೇಲನಿಗೆ ಹೇಳು. ಇದಕೋ ಚೀಟಿಯನ್ನು! ಹಾ! ಹೊರಡು. ಇದಕ್ಕೆಂದೇ ಕರೆದಿದ್ದೆನೆಂದು ತಿಳಿಸು."

ಬಹುತರ ಎಲ್ಲ ಬಂದಿಶಾಲೆಗಳಲ್ಲೂ ಮಧ್ಯಾಹ್ನದ ಹನ್ನೆರಡರಿಂದ ಎರ ಡರ ವರೆಗೆ ಯಾವ ಬಗೆಯಿಂದಲೂ ಅಷ್ಟೊಂದು ಶಿಸ್ತು ಇರುವುದಿಲ್ಲ. ಆಗ ಅಲ್ಲಿಯ ಜವಾಬುದಾರ ಮೇಲಧಿಕಾರಿಗಳು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋಗಿರುತ್ತಾರೆ. ಆದ್ದರಿಂದ ಶಿಪಾಯಿಗಳೇನು, ದಂಡಿತ ಅಧಿಕಾರಿಗಳೇನು

(Convict-officers) ಎಲ್ಲ ಶಿಸ್ತನ್ನು ಕಿತ್ತೊಗೆದು. ಸ್ವಸ್ಥವಾಗಿ ಅಡ್ಡಾಗಿರುತ್ತಾರೆ ತೀರ ಅಪರಿಹಾರ್ಯವಾದ ಶಿಸ್ತು ಹಾಗು ಕೆಲಸಗಳಷ್ಟೇ ಆಗ ನಡೆದಿರುತ್ತವೆ.

ಆ ಸಮಯದಲ್ಲಿ ಬಂದಿಪಾಲನು ದಿನದಂತೆ ಆ ಕಕ್ಷಕಾರಾಗೃಹದ ಮಹಾದ್ವಾರದ ಬಳಿಯಲ್ಲೇ ಇದ್ದ ತನ್ನ ಬಂಗಲೆಯ ಮೇಲಟ್ಟದ ಕಿಟಕಿಯ ಬಳಿಯಲ್ಲಿ ನಿಂತುಕೊಂಡಿದ್ದನು. ಅಷ್ಟರಲ್ಲಿ ಕಾರಾಗಾರದೊಳಗಿಂದ ಜೋ-ಸೇಫ ವಾರ್ದಶನು ತನ್ನೆಡೆಗೆ ಬರುತ್ತಿರುವವನನ್ನು ಅವನು ಕಂಡನು. ಬಂದಿಪಾಲನು ಮೇಲಿನಿಂದಲೇ ಸೂಚಿಸಿ, ಅಲ್ಲಿಯೇ ಜೋಸೇಫನನ್ನು ಬರಮಾಡಿಕೊಂಡನು. ಅಲ್ಲಿಗೆ ಹೋದ ಕೂಡಲೆ ಜೋಸೇಫನು ತಲೆ ಬಾಗಿ "ಸಾಬ, ಈಗಿಂದೀಗಲೇ ಬಂದರೆ, ತಾಂಡೇಲನನ್ನು ಪುರಾವೆಯೊಡನೆ ಹಿಡಿಯಬಹುದು. ರಫೀಉದ್ದೀನನು ಚಿನ್ನದ ನಾಣ್ಯವನ್ನು ತಾಂಡೇಲನಿಗೆ ಕೊಟ್ಟನು ತಾಂ-ಡೇಲನು ಅದನ್ನು ತನ್ನ ಕುಡತಿಯ ಕೆಳಗಿನ ಪಟ್ಟಿಯೊಳಗಿದ್ದ ಕಳ್ಳಕಿಸೆಯಲ್ಲಿಟ್ಟು, ಮೇಲೆ ಹೊಲಿದುಬಿಟ್ಟಿರುತ್ತಾನೆ. ರಫೀಉದ್ದೀನನ ಹತ್ತರ ಇನ್ನೂ ಎರಡು ಚಿನ್ನದ ನಾಣ್ಯಗಳಾದರೂ ಆತನ ಮೈಮೇಲೆಯೇ ಇರುತ್ತವೆ. ತಂಬಾಕ-ಅಫೀಗಳನ್ನು ತಾಂಡೇಲನು ಆತನಿಗೆ ತಂದು ಕೊಟ್ಟನು. ಅದನ್ನಾದರೂ ಈಗಿನ ಮಟ್ಟಿಗೆ ರಸೂದ ಚೀಲದಲ್ಲಿ ಬಚ್ಚಿಟ್ಟು, ಅವರಿಬ್ಬರೂ ಗೋಣದ ಚಪ್ಪರದ ಹಿಮ್ಮಗ್ಗಲಿನ ಮರೆಯಲ್ಲಿ ಯೋಚನೆಯಿಲ್ಲದೆ ತೂಗಡಿಸುತ್ತ ಬಿದ್ದುಕೊಂಡಿರುತ್ತಾರೆ. ನಾನು ಬಟ್ಟೆತೊಳೆಯುವ ನೆವದಿಂದ ಚಾಳಿನಿಂದ ಹೊರಬಿದ್ದೆನು; ಹಾಗು ನಡುವೆ ಯಾರೂ ಇರದ್ದನ್ನು ಕಂಡು ನೆಟ್ಟಗೆ ಇಲ್ಲಿಗೆ ತಮ್ಮೆಡೆಗೆ ಬಂದೆನು; ಆದರೆ ಸರಕಾರ! ನನ್ನ ಹೆಸರು ಮಾತ್ರ ಹೇಳಲಾಗದು! ಇಲ್ಲದಿದ್ದರೆ ಆ ದಂಡಿತರು ನನಗೆಲ್ಲಿಯಾದರೂ ಗಂಟುಬಿದ್ದು, ನನ್ನ ಬಡವನ ತಲೆಯನ್ನೇ ಒಡೆದು ಬಿಟ್ಟಾರು! ಆದರೆ ತಾವು ಮಾತ್ರ ಅತಿ ತೀವ್ರ ಬರಬೇಕು!"

"ಒಳ್ಳೇದು. ನೀನು ಹೋಗು. ಅವರೆಲ್ಲರೂ ಪುರಾವೆ ಸಹಿತ ಸಿಕ್ಕರೆ, ನಿನಗೆ ಬಡತಿ ದೊರೆತೀತು! ನೀನು ಚಪ್ಪರಕ್ಕೆ ಹೋಗಿ, ನಿನ್ನ ಕೆಲಸಕ್ಕೆ ಸುಮ್ಮನೆ ತೊಡಗು."

ಜೋಸೆಫನು ಹೊರಟು ಹೋದ ಮೇಲೆ ಬಂದಿಪಾಲನು ಜಮಾದಾರನನ್ನು ಸಂಗಡ ಕರಕೊಂಡು, ನಿತ್ಯದ ಕೆಳಗಿನ ದಾರಿಯನ್ನು ಬಿಟ್ಟು, ಟಾವರದ ಮೇಲಿನ ಮೂರನೇ ಅಂತಸ್ತಿನೊಳಗಿನ ವರ್ತುಲಕ್ಕೆ ಬಂದನು. ಆ ಅಲ್ಲಿ ಎಲ್ಲ ಛಾಳಿಗಳ ಬಾಗಿಲುಗಳು ವರ್ತುಲಾಕಾರವಾಗಿದ್ದದ್ದರಲ್ಲಿ ರಫೀ ಉದ್ದೀನನಿದ್ದ ಚಾಳಿನ ಬಾಗಿಲವನ್ನು ಆ ಮೂರನೇ ಅಂತಸ್ತಿನಲ್ಲಿ ಮೇಲಿಂದ ಮೇಲೆ

ಯೋ ತೆರೆದುಕೊಂಡು, ಆ ಬಂದಿಪಾಲನು ಅಕಸ್ಮಾತ್ತಾಗಿ ಆ ಚಪ್ಪರದ ಅಂಗಳದಲ್ಲಿ ಇಳಿದನು; ಹಾಗು ಜನರು ನೋಡು-ನೋಡುವಷ್ಟರಲ್ಲಿ ಆತನು ಚಪ್ಪರದ ಹಿಂದುಗಡೆಯುಲ್ಲಿದ್ದ ಮರೆಶಿನ ಭಾಗಕ್ಕೆ ಹೋದನು. ಜೋನೇಫನು ತಿಳಿಸಿದಂತೆ ಅಲ್ಲಿ ರಫೀ ಉದ್ದೀನನೂ ತಾಂಡೇಲನೂ ತೂಕಡಿಸುತ್ತ ಬಿದ್ದುಕೊಂಡಿದ್ದಾರೆ; ಮತ್ತು ರಫೀ ಉದ್ದೀನನ ಗಾಣಕ್ಕೆ ತಾಂಡೇಲನು ಹೆದರಿಸಿ-ಬೆದರಿಸಿ ತಂದು ಹೂಡಿದ್ದ ಬೇರೊಬ್ಬ ದೀನ ದುರ್ಬಲ ದಂಡಿತನು ಅಳುಮೋರೆಯಿಂದ ನಿರ್ವಾಹವಿಲ್ಲದೆ ಆ ಗಾಣವನ್ನು ಜಗ್ಗುತ್ತಿದ್ದಾನೆ!

ಅದನ್ನೆಲ್ಲ ಕಂಡು ಬಂದಿಪಾಲನು "ತಾಂಡೇಲ" ಎಂದು ಕೂಗಿದನು.

ಒಮ್ಮೆಲೆ ಮೆಟ್ಟಿ ಬಿದ್ದು ತಾಂಡೇಲನು ಎದ್ದನು. ಆತನ ಕೈಕಾಲು ನಡುಗುತ್ತಿದ್ದವು; ಅಳುಮೋರೆಯಾಯಿತು. ಆಗ ಆತನು ಕೈಜೋಡಿಸಿಕೊಂಡು ನಿಂತನು.

"ನಿನ್ನ ಬಳಿಯಲ್ಲಿ ನಿಯಮಕ್ಕೆ ವಿರುದ್ಧವಾದ ಯಾವುದೊಂದು ವಸ್ತುವಿದೆಯೋ?-ಇಲ್ಲವೆ? ಆ ಕುಡತಿಯಲ್ಲೇನು ಹೊಲಿದಿರುತ್ತಿ?-ಏನೂ ಇಲ್ಲವೇ? ಜಮಾದಾರ, ಇವನ ಅಂಗಝಡತಿ ಮಾಡಿರಿ. ಈತನ ಕುಡತಿಯ ಆ ಕೆಳಗಿನ ಪಟ್ಟಿಯನ್ನು ಹರಿಯಿರಿ!"

ಬಂದಿಪಾಲನು ಜಮಾದಾರನಿಗೆ ಹೇಳುವಷ್ಟರಲ್ಲಿ ರಫೀ ಉದ್ದೀನನು ಹಿಂದ ಹಿಂದಕ್ಕೆ ಸರಿಯುತ್ತ, ತನ್ನ ಗಾಣದ ಕಡೆಗೆ ಹೋಗಹತ್ತಿದನು.

"ಠೇರ್ರ್ಯೊ! ಐ ಬಂದಿವಾನ! ರಫೀ ಉದ್ದೀನ, ಠೇರ್ರ್ಯೊ! ಪಕಡೋ ಉಸಕೋ!"

ಬಂದಿಪಾಲನ ದನಿಯು ಕೇಳಿಸದಂತೆ ನಟಿಸುತ್ತ ಸುಮ್ಮನೆ ಚಪ್ಪರದಲ್ಲಿ ಹೋಗುತ್ತಿದ್ದ ರಫೀ ಉದ್ದೀನನನ್ನು ಇಬ್ಬರು-ಮೂವರು ವಾರ್ಡರರು ಸೇರಿ ಹಿಡಿದರು. ಆತನು ನಿಂತುಕೊಂಡನು; ಆದರೆ ಅಂಜಿಕೆಯಿಂದ ಗಾಬರಿಯಾಗಿ ನಿಲ್ಲಲಿಲ್ಲ; ತದ್ವಿರುದ್ಧವಾಗಿ ಯಾವುದೊಂದು ತಲೆಮಾಸಿದ ಸರ್ಕಸ್ಸಿನೊಳಗಿನ ಹುಲಿಯಂತೆ ಆತನ ಎಲ್ಲ ಹಿಂಸ್ರವೃತ್ತಿಯೂ ಆಗ ವ್ಯಕ್ತವಾಗುತ್ತಿತ್ತು. ಕಣ್ಣು ಕೆಕ್ಕರಿಸಿದ್ದವು; ಹಾಗು ತನ್ನನ್ನು ತಡೆದು ನಿಲ್ಲಿಸಿದ್ದ ಆ ವಾರ್ಡರರ ಕೈಗಳನ್ನು ಆಗಾಗ್ಗೆ ಕೊಸರಿಕೊಳ್ಳುತ್ತ ನಿಂತಿದ್ದನು.

ಜಮಾದಾರನು ತಾಂಡೇಲನ ಕುಡತಿಯನ್ನು ತೆಗೆದು ಪಟ್ಟಿಯನ್ನು ಹರಿದನು. ಕೂಡಲೆ ಝಣ್ಣ ಎಂದು ಒಂದು ಚಿನ್ನದ ನಾಣ್ಯವು ಹೊರಬಿದ್ದಿತು!

"ಈ ರಫೀ ಉದ್ದೀನನ ಝಡತಿಯನ್ನೂ ಮಾಡಿರಿ!" ಬಂದಿಪಾಲನು ಆಜ್ಞೆಯಿತ್ತ ಕೂಡಲೆ ಜಮಾದಾರನು ಮುಂದೆ ಸರಿದನು. ಬಂದಿಪಾಲನಿಗೆ

ಮರೆಯಾಗಿ ಜಮಾದಾರನು ಒಂದಿಷ್ಟು ಬಂದ ಕೂಡಲೆ, ರಫೀ ಉದ್ದೀನನು ಸ್ವಂತದ ನಡುವಿನಲ್ಲಿ ಸಿಕ್ಕಿಸಿಕೊಂಡಿದ್ದ ಏನನ್ನೋ ಟೊಂಕದ ಹಿಂದಿನಿಂದ ಕೈ ನೀಡಿ ಚಾಲಾಕಿಯಿಂದ ತಕ್ಕೊಂಡನು. ಆ ಕೂಡಲೆ ಜಮಾದಾರನು "ಸಾಬ! ಸಾಬ! ಈತನು ನಡದೊಳಗಿನ ನಾಣ್ಯಗಳನ್ನು ಕೈಗೆ ತಕ್ಕೊಂಡಿದ್ದಾನೆ. ಈತನ ಕೈಯಲ್ಲಿ ಚಿನ್ನದ ನಾಣ್ಯಗಳಿರುತ್ತವೆ. ಇಗೋ, ಈ ಕೈಯಲ್ಲಿ! ಹಿಡಿಯಿರಿ, ಈ ಕೈಯನ್ನು ಒತ್ತಿ ಹಿಡಿಯಿರಿ.!"

ಜಮಾದಾರನೂ ವಾರ್ಡರರೂ ರಫೀ ಉದ್ದೀನನ ಕೈ ಹಿಡಿದು ಒತ್ತಿಕ್ಕುವಷ್ಟರಲ್ಲಿ ರಫೀ ಉದ್ದೀನನು ಸರ್ರನೆ ತನ್ನ ಮೈ ಸುತ್ತು ಸುತ್ತಿ ಗಿರಕಿ ಹೊಡೆದು, ಬಂದಿಪಾಲನ ಕಡೆಗೆ ಬೆನ್ನಾದ ಕೂಡಲೆ ಕೈಯೊಳಗಿನ ಏನನ್ನೋ ಬಾಯಲ್ಲಿ ಚಲ್ಲಿದನು!

"ಸಾಬ! ಈತನು ಆ ನಾಣ್ಯಗಳನ್ನು ಬಾಯಲ್ಲಿ ಚೆಲ್ಲಿಕೊಂಡನು. ಸರಕಾರ! ಅವು ನಾಣ್ಯಗಳೇ ನಿಜ! ನಾನು ನೋಡಿದೆ, ನಾನು ನೋಡಿದೆ ಈಗ ಈತನ ಬಾಯಲ್ಲೇ ಇವೆ!" ಎಂದು ಜಮಾದಾರ, ವಾರ್ಡರರು ಪ್ರತಿಜ್ಞಾಪೂರ್ವಕವಾಗಿ ಒದರಹತ್ತಿದರು.

'ಬಾಯಿ ತೆರೆ, ರಫೀ ಉದ್ದೀನ ಬಾಯಿತೆರೆ! ತೆರೆ ಬಾಯಿ' ಎಂದು ಬಂದಿಪಾಲನು ಕೂಗಿಕೊಂಡನು.

ಒಂದೆರಡು ಸಾರೆ ಜಮಾದಾರನ ಕೈ ಕೊಸರಿ, ಗೋಣು ಕೆಳಗೆ ಮೇಲೆ ಮಾಡಿದ ಬಳಿಕ ರಫೀ ಉದ್ದೀನನು ಸ್ಪಷ್ಟಶಬ್ದಗಳಲ್ಲಿ ಗಟ್ಟಿಯಾಗಿ ಹೇಳಿದನೇನಂದರೆ, "ಎಂಥ ನಿಷ್ಕಾರಣ ಪೀಡೆ ನಡೆಸಿರುತ್ತೀರಿ ಸಾಹೇಬ? ಈ ಲಫಂಗ ಹರಾಮಖೋರರ ಮಾತು ಕೇಳಿ ನಮ್ಮಂತಹ ಬಡವರ ಮೇಲೇಕೆ ಏರಿಬಂದಿರುತ್ತೀರಿ? ಇಕೋ ನೋಡಿರಿ. ಬಾಯಿ ತೆರೆಯುತ್ತೇನೆ! ಅಲ್ಲಿ ಏನಾದರೂ ಇದೆಯೇ? ಬಾಯಲ್ಲಿ ಚಿನ್ನದ ಖಣಿಯಿದ್ದರೆ ಮಾತಾಡಲಿಕ್ಕಾದರೂ ಬಂದೀತೇ?"

ಎಂದಂದು ರಫೀ ಉದ್ದೀನನು ಆಃ ಎಂದು ಬಾಯಿತೆರೆದು, ಜಮಾದಾರನಿಗೆ ಅಣಕಿಸಹತ್ತಿದನು; ಆಃ ಮಾಡಿ ಬಂದಿಪಾಲನಿಗೆ ಬಾಯಿತೋರಿಸಹತ್ತಿದನು! ಆಗ ಬಂದಿಪಾಲನು:-"ನಾಲಿಗೆಯನ್ನು ಒಳಗೆ ಎಳೆದುಕೋ; ಹಿಂದಕ್ಕೆ ಮಡಿಚಿಕೋ; ಈ ದವಡೆಯನ್ನು ಚೆನ್ನಾಗಿ ತೆರೆ; ಅದನ್ನು ಹಾಗೆ ಹೊರಳಿಸಿ ತೆಗೆ" ಎಂದು ಹೇಳಿ ಹೇಳಿದ ಹಾಗೆ ರಫೀ ಉದ್ದೀನನು ಮಾಡಿದನು; ಆದರೆ ಆತನ ಬಾಯಲ್ಲಿ ಆಗ ಏನೂ ಕಂಡುಬರಲಿಲ್ಲ!

"ಕ್ಯಾಂ ಜಮಾದಾರ, ಕಿಧರ ಹೈ ಇಸಕೇ ಮೂಹಮೇ ಗಿನಿಯಾ?" ಎಂದು ಬಂದಿಪಾಲನು ಕೇಳಲು,

'ಸಾಬ, ಏನೇ ಅನ್ನಿರಿ; ಆದರೆ ಈತನ ಬಾಯಲ್ಲಿ ಅದೇನೋ ಇದ್ದೇಇತ್ತು!'

"ನನ್ನ ಬಾಯಲ್ಲಿ ಏನಾದರೂ ಇರುವದಲ್ಲವೆ? ಇದ್ದೇ ಇದೆ; ಆದರೆ ಅದು ಏನಾದರೂ ಅಂದರೆ, ಚಿನ್ನದ ಮೊಳೆ ಬಡಿಸಿದ ನನ್ನ ಹಲ್ಲುಗಳು! ಅವು ಹೊಳೆಯುವಾಗ ನಿನ್ನಂತಹ ಭಿಕಾರಿಗೆ ಚಿನ್ನದಂತೆ ಕಂಡಿರಬೇಕು; ಅನಿಸಿರಬೇಕು; ಮತ್ತು ಎಲೆ ನೀಚಾ! ಇಂದಿಲ್ಲ ನಾಳೆ ನಿನ್ನ ಗಂಟಲನ್ನು ಅವು ಒಡೆಯದಿರಲಾವು!" ಇತ್ಯಾದಿಯಾಗಿ ರಫೀ ಉದ್ದೀನನು ಜಮಾದಾರನನ್ನು ಬೈಯ್ಯಹತ್ತಿದನು! ಈ ದುರ್ಜನನು ತಾಳದಪ್ಪಿರುವನೆಂಬದು ತಿಳಿಯುತ್ತಲೆ, ಬಂದಿಪಾಲನು "ಈಗಿಂದೀಗಲೆ ಈತನ ಕೈಗಳಿಗೆ ಬೇಡಿಹಾಕಿರಿ! ಮತ್ತು ಈತನನ್ನು ಇಲ್ಲಿಯೇ ಹಿಡಿದಿಟ್ಟರ್ರಿ! ಈತನು ಆಗಲೆ ಹೆಚ್ಚಾಗಿ ಗೋಣು ಅಲ್ಲಾಡಿಸುತ್ತಿದ್ದನಾದ್ದರಿಂದ, ಈತನು ಅದನ್ನು ನಮಗಾರಿಗೂ ತಿಳಿಯಬಾರದೆಂದು ನುಂಗಿರಲಿಕ್ಕೆ ಸಾಕು!"

ಶಿಪಾಯಿ-ವಾರ್ಡರರು ಸೇರಿ ರಫೀಉದ್ದೀನನ ಕೈ-ಕಾಲುಗಳಿಗೆ ಬೇಡಿ ತೊಡಿಸುತ್ತಿರುವಷ್ಟರಲ್ಲಿ ಬಂದಿಪಾಲನು ಚಪ್ಪರದೊಳಗೆ ಹೋಗಿ, ಅಲ್ಲಿರುವ ಮೂಲೆಯೊಳಗಿನ ಸರಸೂದ ಚೀಲವನ್ನು ಬಿಚ್ಚಿ ಕಾಳು ಸುರುವಿ ನೋಡಿದನು; ಆಗ ಅದರೊಳಗೆ ತಂಬಾಕದ ಒಂದು ದೊಡ್ಡ ಪುಡಿಕೆಯೂ ಅದರಲ್ಲಿಯೇ ಅಫುವಿನ ಡಬ್ಬಿಯೂ ದೊರೆತವು.

ಜೋಸೇಫನು ತಿಳಿಸಿದ ಗುಪ್ತಸಂಗತಿಯು ಸಂಪೂರ್ಣ ನಿಜವಿತ್ತು. ಜೋಸೇಫನು ದೂರಿನಿಂದಲೇ ಏನೂ ಅರಿಯದ ತ್ರಯಸ್ಥನಂತೆ ನಿಂತು ನೋಡುತ್ತಿದ್ದನು; ಆದರೆ ಆ ಅಷ್ಟು ಗೊಂದಲದಲ್ಲಿ ಯಾವನು ಮುಖ್ಯ ಅಪರಾಧಿಯೋ ಆ ರಫೀ ಉದ್ದೀನನ ಮೈಮೇಲೆ ಅಥವಾ ಅವನನ್ನು ತಪ್ಪಿತಸ್ಥನೆಂದು ನಿರ್ಧರಿಸಲಿಕ್ಕೆ ಅನುಕೂಲವಾದಂಥ ಯಾವ ಪುರಾವೆಯೂ ಸಿಗಲಿಲ್ಲ; ಆದರೂ ಸಾವಿರಲ್ಲೊಬ್ಬ ದಂಡಿತನು ಇಷ್ಟು ನಿರ್ಭೀತನೂ ನಿಗರಗಟ್ಟನೂ ಇರುವದರಿಂದ, ಅವನು ಇಂಥ ಪ್ರಸಂಗಗಳಲ್ಲಿ ತಾನು ಸಿಕ್ಕುಬೀಳದೆ, ಆ ವಸ್ತುವನ್ನೇ ನುಂಗಿಬಿಟ್ಟು, ಅದನ್ನು ಕಾಣದ ಹಾಗೆ ಮಾಡಿಬಿಡುತ್ತಾನೆಂಬ ಎರಡು-ಮೂರು ಅನುಭವಗಳು ಆ ಬಂದಿಪಾಲನಿಗೆ ಈ ಮೊದಲು ಬಂದಿದ್ದವು. ಆದರಿಂದ ಆತನು ಅದನ್ನೆಲ್ಲ ಮನಸ್ಸಿನಲ್ಲಿ ನೆನೆದೇ ರಫೀ ಉದ್ದೀನನ್ನು ಇನ್ನಿಷ್ಟು ಪರೀಕ್ಷಿಸುವ ಹವ್ಯಾಸ ತಾಳಿದನು. ಆ ತಾಂಡೇಲನನ್ನು ಆಗಿಂದಾಗ ಬರತರ್ಫ್ ಮಾಡಿ, ಆತನ ಮೇಲೆ ಖಟ್ಲೆ ಮಾಡಲಾಯಿತು; ಹಾಗು ಡಾಕ್ಟರನನ್ನು ಕರೆಯಿಸಿ ರಫೀ ಉದ್ದೀನನಿಗೆ ವಾಂತಿಯ ಔಷಧ ಕೊಡ ಹೇಳಿದನು.

ಕೈ-ಕಾಲುಗಳಿಗೆ ಬೇಡಿತೊಡಿಸಿದ ಬಳಿಕ ರಫೀ ಉದ್ದೀನನನ್ನು ಆತನ

ಒಬ್ಬೊಂಟಿಗರ ಕೋಣೆಗೆ ಸಾಗಿಸಿ ವಾಂತಿಯ ಔಷಧವನ್ನು ಆತನ ಮುಂದಿಡಲು, ಅವನು ಅದನ್ನು ಎದುರಿಗಿನ ಗೋಡೆಯ ಮೇಲೆ ಚೆಲ್ಲಿಬಿಟ್ಟನ.! ಆಗ ಆತನು ತೀರ ತಾಳದಪ್ಪಿದನು; ಅದರಿಂದ ಬಂದಿಪಾಲನು "ಒತ್ತಾಯದಿಂದ ಕುಡಿಸಿರಿ." ಎಂದು ಕಟ್ಟಪ್ಪಣೆ ಮಾಡಲು, ವಾರ್ಡರ-ಜಮಾದಾರ-ಶಿಪಾಯಿ ಇವರೆಲ್ಲರೂ ಮುಂದರಿದರು. ಜಗ್ಗುತ್ತ-ಮುಗ್ಗುತ್ತ, ಗುದಿಕೆ-ಒದಿಕೆಗಳನ್ನು ಕೊಡುತ್ತ-ತಿನ್ನುತ್ತ ಕೊನೆಗೆ ರಫೀಉದ್ದೀನನು ಕೆಳಗೆ ಬಿದ್ದನು. ಕೂಡಲೆ ಆತನ ಕೈ-ಕಾಲುಗಳನ್ನು ಹತ್ತಿಕ್ಕಿ ಹಿಡಿದು ಧನುರ್ವಾತವಾದವನಿಗೆ ಬಾಯಲ್ಲಿ ಇಟ್ಟು ಬಾಯಿತೆರೆಯಲಿಕ್ಕೆಂದು ಮಾಡಿರುವಂತಹ ಸಾಧನವನ್ನು ಆತನ ಬಾಯಿಗೆ ಇಟ್ಟು ತೆರೆದು, ಹೇಗಾದರೂ ಮಾಡಿ ಆತನಿಗೆ ಆ ವಾಂತಿಯ ಔಷಧ ಕುಡಿಸಿದರು. ಆತನ ಹತ್ತರ ಸ್ಪೆಶಲ್ ಪಹರೆ ಇಡಲಾಯಿತು. ಆತನಿಗೆ ಸಂಜೆಯವರೆಗೆ ಮೂರು-ನಾಲ್ಕು ವಾಂತಿಗಳಾದವು; ಆದರೆ ಅದರಲ್ಲೇನೂ ಬೀಳಲಿಲ್ಲ! ಅದರಿಂದ ಆಗ ಬಂದಿಪಾಲನೂ ತುಸ ಗಾಬರಿಗೊಂಡನು! ಯಾಕಂದರೆ, ರಫೀ ಉದ್ದೀನನು ನಾಣ್ಯ ನುಂಗುವಾಗ ಆತನು ಸ್ವತಃ ನೋಡಿರಲಿಲ್ಲ. 'ಜಮಾದಾರನು ತನ್ನ ಮೇಲೆ ಇಲ್ಲದ ಆರೋಪವನ್ನು ಸುಮ್ಮನೆ ಹೊರಿಸುತ್ತಿರುವನೆಂ'ದು ರಫೀ ಉದ್ದೀನನು ಆತನಿಗೆ ಬಾಯಿಗೆ ಬಂದ ಹಾಗೆ ಗಲಿಚ್ಚ ಬೈಗಳಿಂದ ಬೈಯುತ್ತಿದ್ದನು; ಆದರೆ ಪ್ರಥಮದಲ್ಲಿ ಝುಡತಿ ತಕ್ಕೊಂಡ ವಾರ್ಡರರೂ 'ಈತನು ನಾಣ್ಯ ನುಂಗಿದ್ದೇ ನಿಜ' ಎಂದು ಪ್ರಮಾಣಪೂರ್ವಕವಾಗಿ ಹೇಳಹತ್ತಿದರು. 'ಈತನಿಗೆ ಜುಲಾಬು ಕೊಡಲಿಕ್ಕೆ ಯೋಚಿಸುವ ಕಾರಣವಿಲ್ಲ; ಜುಲಾಬು ಕೊಡದೆ ಹಾಗೆಯೇ ಬಿಟ್ಟರೆ, ಆ ನಾಣ್ಯಗಳು ಈ ದಂಡಿತನ ಕರಳುಗಳಲ್ಲಿ ಸಿಕ್ಕು ಈತನ ಜೀವಕ್ಕೆ ಅಪಾಯವಾದೀತು' ಎಂದು ಜೇಲಿನ ಡಾಕ್ಟರನು ಅಭಿಪ್ರಾಯಪಟ್ಟನು ಆಗ ರಫೀಉದ್ದೀನನನ್ನು ಬಲಪೂರ್ವಕವಾಗಿ ಹಿಡಿದು ನೆಲಕ್ಕೆ ಕೆಡಹಿ ಬಾಯಿತೆರೆದು ಜುಲಾಬಿನ ಔಷಧವು ಆತನ ಹೊಟ್ಟೆಯಲ್ಲಿ ನೆಲೆ ನಿಲ್ಲುವವರೆಗೂ ಕುಡಿಸಿದ್ದಾಯಿತು; ಮತ್ತು ಆತನ ಕೋಣೆಯಲ್ಲಿ ದಿನಾಲು ಪ್ರತಿಯೊಬ್ಬ ದಂಡಿತನ ಒಬ್ಬೊಂಟಿಗರ ಕೋಣೆಯಲ್ಲಿಡುವದಕ್ಕಿಂತ ದೊಡ್ಡ ಮಡಿಕೆಯನ್ನು ಇಡಿಸಿ, ಪಹರೆಯನ್ನಿರಿಸಿ, ಕೋಣೆಗೆ ಕೀಲಿ ಹಾಕಲ್ಪಟ್ಟಿತು ಡಾಕ್ಟರ-ಬಂದಿಪಾಲಾದಿಗಳೆಲ್ಲರೂ ರಾತ್ರಿಯ ಪದ್ಧತಿಯ ಮೇರೆಗೆ ಗಣತಿಯ ತಕ್ಕೊಂಡು, ಚಾಳುಗಳಿಗೆ ಕೀಲಿ ಹಾಕಿಕೊಂಡು ತಂತಮ್ಮ ಮನೆಗೆ ಹೊರಟು ಹೋದರು.

ರಫೀ ಉದ್ದೀನನು ಆ ರಾತ್ರಿಯನ್ನು ಅತ್ಯಂತ ಅಸಹ್ಯ-ಅಸ್ವಸ್ಥತೆಯಲ್ಲಿ ಕಳೆದನು. ಜುಲಾಬುಗಳಾಗುವಾಗ ಆ ಹೊಟ್ಟೆನೋವಿನಿಂದ ಶರೀರಕ್ಕೆ

ಯಾವ ಅಸ್ವಸ್ಥತೆಯೆನಿಸುವದೋ, ಅದಂತೂ ಆಗೆಯೇ ಆಗುತ್ತಿತ್ತು; ಆದರೆ ಆ ಇಡೀ ದಿವಸ ತನಗುಂಟಾಗಿದ್ದ ಪೀಡೆ ಮತ್ತು ಅನ್ಯಾಯಗಳ ಮೂಲಕ ಆತನ ಶರೀರವೆಲ್ಲ ಕಾಯ್ದು ಹೋಗಿತ್ತು. ಆತನು ಈ ಮೊದಲೆಂದಾದರೂ ಲೋಕದವರನ್ನೇನಾದರೂ ಪೀಡಿಸಿದ್ದನೆ? ಎಂಬ ಪ್ರಶ್ನೆಯು ಆತನ ಸಮೀಪಕ್ಕೆ ಸಹ ಸುಳಿಯಲಿಲ್ಲ! ಪೀಡೆಯೆಂಧರೆ, ತನಗೆ ತ್ರಾಸವಾಗುವಂತೆ ಜನರು ಏನೇನು ಮಾಡುವರೋ ಅದು, ಎಂದಿಷ್ಟೇ ಆತನ ಪೀಡೆಯ ವಿಷಯದ ಕಲ್ಪನೆಯು! ತನ್ನ ಇಚ್ಛೆಯ ವಿರುದ್ಧವಾಗಿ ಬೇರೆಯವರು ಏನೇನು ಮಾಡುವರೋ ಅದು ಅನ್ಯಾಯವು! ಇದರ ಹೊರತು ಆ ಶಬ್ದಗಳಿಗೆ ಆತನ ಕೋಶದಲ್ಲಿ ಬೇರೆ ಅರ್ಥಗಳೇ ಇರಲಿಲ್ಲ! ಆ ಜಮಾದಾರನು ತಾನು ನಾಣ್ಯಗಳನ್ನಡಗಿಸುವಾಗ ನೋಡದಿದ್ದರೆ, ಈ ಪ್ರಸಂಗವೇಕೆ ಉಂಟಾಗುತ್ತಿತ್ತು? ನೋಡಿಯೂ ತಾನು ನೋಡಿಲ್ಲವೆಂದು ಆ ಜಮಾದಾರನು ಅಂದಿದ್ದರೆ ಎಲ್ಲವೂ ಸಂದಿಹೋಗುತ್ತಿತ್ತು! ಅದೂ ಅಲ್ಲದೆ, ಬಂದಿಪಾಲನು ಆ ಕೃತಿಯ ಬಗ್ಗೆ ದುರ್ಲಕ್ಷಿಸಿ, ತಾನು ನಡೆಯುವಂತೆಯೇ ನಡೆಯಲೆಂದು ಬಿಟ್ಟು ಬಿಟ್ಟಿದ್ದರೂ ಏನು ಹಾಳಾಗುತ್ತಿತ್ತು? ಅರ್ಥಾತ್ ಹಾಗೆ ಏನೂ ಮಾಡದೆ, ಆ ಜಮಾದಾರನು ಅದನ್ನು ನೋಡಬೇಕು; ಹೇಳಬೇಕು; ಮತ್ತು ಬಂದಿಪಾಲನು ರಫೀಉದ್ದೀನನನ್ನು ಹಾಗೆ ಪೀಡಿಸಬೇಕು; ಆತನ ತಂಬಾಕ-ಅಫುಗಳನ್ನು ಕಸಿದಿಡಬೇಕು; ಆತನ ನಾಣ್ಯಗಳ ಪತ್ತೆ ಹಚ್ಚುವ ಲಫಂಗತನ ನಡೆಯಿಸಬೇಕು. ಇದು ಅವರೆಲ್ಲರ ಎಂಥ ದುಷ್ಟತನವು? ಎಷ್ಟು ಅನ್ಯಾಯದ ಛಲನವು? 'ನನ್ನನ್ನು ಅಡ್ಡ ಕೆಡಹಿ, ಹೊಡೆದು-ಬಡೆದು ಮೆತ್ತಗೆ ಮಾಡಿ, ಬಾಯಿತೆರೆದು ಔಷಧಿ ಕುಡಿಸಿದಿರಲ್ಲವೆ?!!'

ಇವೇ ವಿಚಾರಗಳು ಆತನ ಕಾದ ಮತ್ತು ಹುಚ್ಚೆದ್ದ ತಲೆಯಲ್ಲಿ ಒಂದೇ ಸವನೆ ಗಿರಿಕೆ ಹೊಡೆಯಹತ್ತಿದವು. ಆತನ ಸಂತಾಪವು ತೀರ ಅವಸಾನಗೆಟ್ಟು ಹೋಯಿತು! ಆ ಜಮಾದಾರನ ಮತ್ತು ಬಂದಿಪಾಲನ ಗಂಟಲ ಶೀಳಲೋ, ರಕ್ತಕುಡಿಯಲೊ ಎಂದೆನಿಸಹತ್ತಿತು! ಆದರೆ ಉಪಾಯವೇನು? ಆದರೂ ಏನೊಂದು ಬಗೆಯಿಂದ ಸೇಡುಹಾಯಿಸಿಕೊಳ್ಳಲೇ ಬೇಕು. ಕೋಣೆಯಲ್ಲಿ ಕೂಡಿ ಹೋಗುವಾಗ ಜಮಾದಾರನು ಆತನ ಕೈಗಳ ಬೇಡಿ ತೆಗೆದಿದ್ದನು; ಆದರೆ ಬರಿಯ ಕೈಯು ಏನು ಮಾಡಬಲ್ಲದು! ಆದರೆ ಆಗ ಅವನಿಗೊಂದು ಒಳ್ಳೇ ಹಂಚಿಕೆಯು ಹೊಳೆಯಿತು. ಲಾಹೋರದ ಬಂದಿಶಾಲೆಯಲ್ಲಿ ನೂರ ಮುಹಮ್ಮದನೆಂಬ ದಂಡಿತನು ಹುಚ್ಚನ ವೇಷವನ್ನು ಹಾಕಿದ್ದನು; ಆಗ ಆತನು ಕೇವಲ ಇದರಂತೆಯೇ ಮಾಡಿದ್ದನಲ್ಲವೆ? ಆತನು ಹುಚ್ಚು ಸಾಧಿಸುವ

ದಕ್ಕೆಂದು ಏನು ಮಾಡಿದ್ದನೋ, ಅದನ್ನೇ ನಾನು ಸೇಡುಹಾಯಿಸಿಕೊಳ್ಳುವ ಸಲುವಾಗಿ ಮಾಡತಕ್ಕವನು. ಇದೇ ನನ್ನ ನಿರ್ಧಾರ! ಇನ್ನು ಬರಲಿ, ಬೆಳಗ್ಗೆ ನನ್ನ ಕೋಣೆಯ ಬಾಗಿಲ ತೆರೆಯಲಿಕ್ಕೆ ಆ ಜಮಾದಾರನು, ಜೇಲರ ಹಾಗು ಡಾಕ್ಟರರು! ಈಗಲೇ ಬಂದರಂತೂ ವಿಹಿತವೇ ಆದೀತು. ನೀವು ನನಗೆ ಜುಲಾಬು ಕೊಡುತ್ತೀರಲ್ಲವೆ? ಹಃ-ಹಃ-ಹಃ! ಬರ್ರಿ. ನಿಮ್ಮದೆಲ್ಲ ಫಜೀತಿ ಹೇಗಾದೀತೋ ನೋಡಿಕೊಳ್ಳುವಿರಂತೆ!"

ಈ ಪ್ರಕಾರವಾಗಿ ಆತನು ಸೇಡಿನ ಯಾವ ಬೇತನ್ನು ತನ್ನ ಮನಸ್ಸಿನಲ್ಲಿಯೇ ಯೋಚಿಸಿದನೋ ಅದು ಘಟಿಸುತ್ತಲೇ ತನ್ನ ಅಪಮಾನದ ಭರ್ಪಾಯಿಯಾಗಿ, ಆ ಛಲನಗಾರನಾದ ಜಮಾದಾರನೇ ಮೊದಲಾದವರು ಯಾವ ದುರ್ಗತಿಗೆ ತಲುಪುವರೋ ಅದು ಸದ್ಯದಲ್ಲೇ ಆಗಿದೆಯೆಂಬ ಚಿತ್ರಗಳು ಈಗಲೆ ಆತನಿಗೆ ಕಾಣಹತ್ತಿದವು! ಆತನು ತನ್ನ ಹೊಟ್ಟೆ ಹಿಡಿಹಿಡಿದು ಸಮಾಧಾನದಿಂದ ತನ್ನಷ್ಟಕ್ಕೆ ತಾನೇ ನಗಹತ್ತಿದನು!

ಬಂದಿಶಾಲೆಯೊಳಗಿನ ಸಾವಿರದೊಳಗೆ ಒಬ್ಬ ಅಘೋರ ದಂಡಿತನು ಯಾವ ಯಾವಾಗ ಹೀಗೆ ಏನಾದರೊಂದು ಪದಾರ್ಥ ನುಂಗಿ ಬಿಡುವನೋ ಮತ್ತು ಆತನಿಗೆ ಆಗ ಜುಲಾಬು ಕೊಡಲಾಗುವದೋ ಆಗ ಮರು ದಿನ ಬೆಳಗ್ಗೆ ಅಂಥವನ ಕೋಣೆಯನ್ನು ಅಧಿಕಾರಿಗಳು ಸ್ವತಃ ತೆರೆಯುತ್ತಾರೆ; ಮತ್ತು ಭಂಗಿಯಕಡೆಯಿಂದ ಆತನ ಜುಲಾಬಿನ ಗಡಿಗೆಯ ಝಡತಿ ತಕ್ಕೊಳ್ಳುತ್ತಾರೆ. ನುಂಗಿದಂತಹ ಆ ಪದಾರ್ಥವು ಹೊಟ್ಟೆಯಿಂದ ಹೊರಬಿದ್ದಿತೋ ಇಲ್ಲವೋ ಎಂಬದು ನಿರೀಕ್ಷಿಸಲಾಗುತ್ತದೆ. ಆ ಪದ್ಧತಿಯ ಮೇರೆಗೆ ಭಂಗಿಯನ್ನು ಕರಕೊಂಡು ಜಮಾದಾರನೂ ಇಬ್ಬರು ವಾರ್ಡರರೂ ಬೆಳಗಾಗುತ್ತಲೆ ರಫೀ ಉದ್ದೀನನ ಕೋಣೆಯ ಎದುರಿಗೆ ಬಂದರು. ಸಲಾಕಿಯ ಬಾಗಿಲದ ಕೀಲಿತೆಗೆದು ಜಮಾದಾರನು ಒಳಗೆ ಕಾಲಿಟ್ಟಕೂಡಲೆ, ರಫೀ ಉದ್ದೀನನು ತನ್ನ ನೀರು ಕುಡಿಯುವ 'ಟಂಬ್ರೇಲ' ಎಂಬ ಪಾತ್ರವನ್ನು ಭರ್ರನೆ ಜಮಾದಾರನ ಮುಸುಡೆಯ ಮೇಲೆ ಬೀಸಿ ಚಲ್ಲಿದನು! ಅಂದು ಆತನು ಆ ಟಂಬ್ರೇಲದಲ್ಲೇ ಜುಲಾಬು ಮಾಡಿದ್ದನು! ಅದೆಲ್ಲ ನರಕವು ಜಮಾದಾರನ ಬಾಯಿ, ಕಣ್ಣು, ಮೂಗು ಕಿವಿ, ಮೀಸೆ, ಮೈಮೇಲಿನ ಎಲ್ಲ ಅರಿವೆಗಳ ಮೇಲೆ ಹೋಳೀಹುಣ್ಣಿಮೆಯಲ್ಲಿ ಜೀಕಳಿಯಿಂದ ಹಾರಿಸಿದ ಬಣ್ಣದಂತೆ ಬಿದ್ದು, ಆತನ ಸರ್ವಾಂಗವು ಹೊಲಸು ನಾತಿಟ್ಟಿತು! ಆ ದುರ್ಗಂಧದಿಂದ ಆತನ ಉಸಿರುಗಟ್ಟಿತು; ವಾಂತಿಯಾಯಿತು! ಆ ಕೂಡಲೆ ಜಮಾದಾರನು 'ಶೀಃ ಶೀಃ ಶೀಃ' ಎಂದು ಕೂಗಿದನು.

ಅದೇ ಕಾಲಕ್ಕೆ ಆ ಅಘೋರಿಯಾದ ರಫೀ ಉದ್ದೀನನು "ಹಾಃ ಹಾಃ

ಹಾಃ'' ಎಂದು ಗಟ್ಟಿಗಟ್ಟಿಯಾಗಿ ನಗಹತ್ತಿದನು. ''ನನ್ನ ಹೊಟ್ಟೆಯೊಳಗಿನ ಚಿನ್ನವು ನಿನಗೆ ಬೇಕಾಗಿತ್ತಲ್ಲವೇ! ಇವಕೋ, ತಿನ್ನು-ಕುಡಿ! ಆ ಚಿನ್ನದಿಂದ ನಿನ್ನನ್ನು ತುಂಬಿಬಿಟ್ಟಿರುತ್ತೇನೆ ನೋಡು. ಹರಾಮಜಾದಾ!........''

ಅವಾಚ್ಯವಾದ ಸಾವಿರಾರು ಬೈಗಳನ್ನು ಬೈಯುತ್ತ ರಫೀ ಉದ್ದೀನನು ಒಂದು ಮೂಲೆಯಲ್ಲಿ ಆಶ್ರಯಹೊಂದಿ, ಆ ಟಂಬ್ರೇಲವನ್ನು ಗುರಿಯಿಟ್ಟು ಹಿಡಿದು ಕುಳಿತುಗೊಂಡನು!

ನಾಚಿಕೆಯಿಂದ, ಸಿಟ್ಟಿನಿಂದ ಹೊಲಸೇ ಹೊಲಸಾದ ಜಮಾದಾರನು ''ನೋಡುತ್ತೀರೇನು! ವಾರ್ಡರರೇ, ಜಗ್ಗಿರಿ ಆ ಹಂದಿಯನ್ನು.'' ಎಂದು ಕೂಗಿಕೊಂಡನು.

ವಾರ್ಡರರು ಮುಂದಾದರು; ಆದರೆ ಆತನ ಮೈಮೇಲೆ ಏರಿಹೋಗಲಾರದೆ ಅಲ್ಲಿಯೇ ನಿಂತುಕೊಂಡರು. ಅಲ್ಲಿ ಸಾಕಷ್ಟು ಜನರಿದ್ದರೂ ಯಾರಿಂದಲೂ ಆತನ ಮೈಗೆ ಕೈಹಚ್ಚುವ ಧೈರ್ಯವಾಗಲಿಲ್ಲ! ಯಾಕಂದರೆ, ಆ ನಾಚಿಕೆಗೇಡಿ ಪಶುವು ತನ್ನನ್ನು ಮುಟ್ಟಲಿಕ್ಕೆ ಯಾರೂ ಮುಂದರಿಯಬಾರದೆಂದು ಒಂದು ವಿಲಕ್ಷಣವಾದ ಹೊಲಸು ಉಪಾಯವನ್ನು ಮೊದಲೇ ಯೋಜಿಸಿಟ್ಟಿದ್ದನು. ಆತನು ತನ್ನ ಮೈಯನ್ನೆಲ್ಲ ತನ್ನ ನರಕದಿಂದಲೇ ಮುಳುಗಿಸಿಕೊಂಡು ಬಿಟ್ಟಿದ್ದನು! ಕೆಲ ದಿನಗಳ ಮುಂಚೆ ತನ್ನ ಅಘೋರ ಕೃತ್ಯದಿಂದ ಸುಪ್ರಸಿದ್ಧನಾದ ಲಫಂಗ ಸಾಧು ಉಪಾಸನೀ ಮಹಾರಾಜನಿಂದಲೇ ಆತನು ಗುರುಮಂತ್ರ ಪಡೆದಂತಾಗಿತ್ತು! ಆ ವಾರ್ಡರರಿಗೆ ಆ ನರಕದ ಹೇಸಿಕೆಯುಂಟಾಗಿ, ಅವರು ಆತನನ್ನು ಮುಟ್ಟಲಿಕ್ಕೆ ಹಿಂದು ಮುಂದೆ ನೋಡಹತ್ತಿದರು. ಸಂತಾಪದ ಭರದಲ್ಲಿ ಸ್ವಂತದ ಬಡಿಗೆಯನ್ನೇ ರಫೀ ಉದ್ದೀನನ ತಲೆಗೆ ಹೊಡೆಯಬೇಕೆಂದು ಜಮಾದಾರನು ಮುಂದಾದನು; ಆದರೆ ಬಂದಿಪಾಲನ ಆಜ್ಞೆಯ ಹೊರತು ಹೊಡೆದ ಪೆಟ್ಟಿನಿಂದ ದಂಡಿತನ ತಲೆ-ಗಿಲೆ ಒಡೆದರೆ, ತಾನೇ ಸಂಕಟಕ್ಕೆ ಸಿಲುಕಬೇಕಾದೀತೆಂದು ನೆನೆದು, ಆತನು ತನ್ನ ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಡಲಿಲ್ಲ. ಬರಿಯ ಕೈಯಿಂದ ರಫೀ ಉದ್ದೀನನು ತನಗೊಬ್ಬನಿಗೇ ಅಸುಕಲಾರನೆಂದು ತಿಳಿದು ಅವನು ಸುಮ್ಮನಾದನು,

ಬಂದಿಪಾಲನು ಇತ್ತಕಡೆಗೇ ಬರುತ್ತಿದ್ದನು; ಅಷ್ಟರಲ್ಲಿ ಇಲ್ಲಿಯ ಕೂಗಾಟ-ಚೀರಾಟಗಳನ್ನು ಕೇಳಿ ಸಿಪಾಯಿಜನರೊಡನೆ ಆತನು ಓಡುತ್ತಲೆ ಅಲ್ಲಿಗೆ ಬಂದನು. ಅಲ್ಲಿಯ ಸ್ಥಿತಿ-ಗತಿಗಳನ್ನು ಕಂಡು ಸಿಟ್ಟುಬೆಂಕಿಯಾದನು; ಮತ್ತು ಸೀಸದ ಹಿಡಿಕೆಯುಳ್ಳ ತನ್ನ ಕೋಲಿನಿಂದ ಆತನು ರಫೀ ಉದ್ದೀನನ ತಲೆಗೆ ಹೊಡೆದನು. ರಫೀ ಉದ್ದೀನನು ತನ್ನ ಕೈಯಲ್ಲಿಯ ಟಂಬ್ರೇಲದೊಳಗಿನ

ನರಕವನ್ನು ಬಂದಿಪಾಲನ ಮೇಲೂ ಸಿಂಪಡಿಸಿದನು! ಆ ಕೂಡಲೆ ಜಮಾದಾರ, ವಾರ್ಡರ, ಶಿಪಾಯಿ ಇವರೆಲ್ಲರೂ ಕೂಡಿ ಆತನ ಮೇಲೆ ಸಾಗಿ ಹೋದರು. ಫಟ್ ಫಟ್ ಎಂದು ಎಲ್ಲರೂ ತಮ್ಮ ತಮ್ಮ ದಂಡುಕಗಳಿಂದ ಹೊಡೆದು ಆತನನ್ನು ನೆಲಕ್ಕೆ ಕೆಡಹಿದರು. ಆತನು ದನಗಳ ಹಾಗೆ ಗಟ್ಟಿಗಟ್ಟಿ ಒದರಹತ್ತಿದನು!

"ಮಾರೋ ಮತ್! ಸಾಬ, ತುಮಕೋ ಬಂದಿವಾನಕೋ ಮಾರನೇಕಾ ಹುಕೂಮ ನಹೀ! ಬಂದೀಗೃಹಕಾ ನಿಯಮ ತೋಡತೇ ಹೋ ತುಮ! ಅನ್ಯಾಯ! ಕುತ್ತಿಗೆಗೊಯ್ಕರು! ಕಟುಕರು! ನೀವೆಲ್ಲರೂ ಹೇಡಿಗಳಿರುತ್ತೀರಿ!"

"ರೇ ಡುಕ್ಕರ!" ಬಂದಿಪಾಲನು ಕೂಗಿ:—"ಬಂದಿಗೃಹಗಳ ನಿಯಮಗಳು ನಿನಗೆ ಈಗ ನೆನಪಾಗುತ್ತಿವೆಯೇನು? ಹೆರವರ ಕುತ್ತಿಗೆಗಳನ್ನು ಕಚಕಚನೆ ಕಡಿಯುವ ರಕ್ಕಸಾ, ನಿನ್ನ ಗೋಣು ಮುರಿಯಹತ್ತಲು, ಅದರ ನ್ಯಾಯಾನ್ಯಾಯಗಳಷ್ಟೇ ನಿನಗೆ ತಿಳಿಯ ಹತ್ತಿದವಲ್ಲವೆ? 'ಕುತ್ತಿಗೆಗೊಯ್ಕ' ಎಂಬದು ಬೈಗಳಿರುವದೆಂಬದು ನಿನಗೆ ತಿಳಿಯಿತಲ್ಲವೆ? ಹೊಡೆಯಿರಿ, ಇವನನ್ನು ಇನ್ನಿಷ್ಟು! ಸತ್ತರೂ ಚಿಂತೆಯಿಲ್ಲ. ಮೂರ್ಖ, ಪಶು, ನರಕದೊಳಗಿನ ಕ್ರಿಮಿ!"

ಆ ಪೆಟ್ಟುಗಳಿಂದ ಕೆಲಹೊತ್ತಿನ ಮೇಲೆ ರಫೀ ಉದ್ದೀನನು ನಿಜವಾಗಿಯೂ ಮೆತ್ತಗಾದನು. ಆತನು ಗಟ್ಟಿಗಟ್ಟಿಯಾಗಿ ಉಸುರಾಡಿಸುತ್ತ ಬಿದ್ದುಕೊಂಡನು.

ಭಂಗಿಯು ಗಡಿಗೆಯೊಳಗಿನ ಜುಲಾಬನ್ನು ಬಂದಿಪಾಲನೆದುರಿಗೆ ಸುರವಿ ನೋಡಿದನು. ಆ ಹೊಲಸಿನಲ್ಲಿ ರಫೀ ಉದ್ದೀನನ ಹೊಟ್ಟೆಯೊಳಗಿಂದ ನುಂಗಿದಂತಹ ಯಾವ ಪದಾರ್ಥವೂ ಬಿದ್ದಂತೆ ಕಾಣಲಿಲ್ಲ ಅದರಲ್ಲಿ ಏನೂ ದೊರಕದೆಂಬದು ರಫೀ ಉದ್ದೀನನಿಗೆ ಗೊತ್ತಿದ್ದದರಿಂದ ಆತನಿಗೆ ಅಂಜಿಕೆಯೇ ಇರಲಿಲ್ಲ; ಯಾಕಂದರೆ ಆತನು ನಾಣ್ಯ-ಗೀಣ್ಯಗಳನ್ನೇನೂ ನುಂಗೇ ಇರಲಿಲ್ಲ ಬಂದಿಪಾಲನು ಫಜೀತಿಗೊಂಡದ್ದನ್ನು ಕಂಡು ಆತನಿಗೆ ಹರ್ಷವೇ ಆಯಿತು. ಅಂಥ ಆ ಗಾಯಗೊಂಡ ಅವಸ್ಥೆಯಲ್ಲೂ ಆ ನಿಗರಗಟ್ಟೆ ಹಂದಿಯು ಒಳ್ಳೇ ವಿನೋದದಿಂದ ಉಪಹಾಸ ಮಾಡಿದನೇನಂದರೆ:—"ಏನು? ಸಂಪೂರ್ಣ ಚಿನ್ನವು ನನ್ನ ಹೊಟ್ಟೆಯೊಳಗಿಂದ ಹೊರಬೀಳಲಿಲ್ಲವೆ? ತಕ್ಕೊಳ್ಳಿರಿ. ಅದನ್ನು ನೀವೆಲ್ಲರೂ ಬೇಕಾದ ಹಾಗೆ ಬೇಕಾದಷ್ಟು ಹಂಚಿಕೊಂಡು ಬಿಡಿರಿ"!

ಆತನ ನುಡಿಗಳನ್ನು ಕೇಳಿ ಡಾಕ್ಟರನು ಕೂಡ ಮೋರೆ ಕೆಳಗೆ ಹಾಕಿದನು. ನಾವು ಈತನಿಗೆ ಸುಮ್ಮನೆ ಜುಲಾಬು ಕೊಟ್ಟೆವೆಂದು ಜೇಲಿನ ಸುಪರಿಂಟೆಂಡೆಂಟರು ಸಿಟ್ಟಾಗಲಿಕ್ಕಿಲ್ಲವಷ್ಟೆ? ಯಾಕಂದರೆ ಈತನೇನೂ ನುಂಗಿ

ದಂತೆ ತೋರುವುದಿಲ್ಲ" ಎಂದು ಡಾಕ್ಟರನು ಅಲ್ಲಿಂದ ಹೊರಗೆ ಬಂದು ಬಂದಿಪಾಲನನ್ನುದ್ದೇಶಿಸಿ ಹೇಳಿದನು

ಅದಕ್ಕೆ ಬಂದಿಪಾಲನು "ಆ ಜವಾಬುದಾರಿಯು ನನ್ನ ಮೇಲೆ. ನಿಮಗೆ ಮನುಷ್ಯರ ಪ್ರಕೃತಿಯು ಪರೀಕ್ಷೆಯಾಗುವದು; ರಕ್ಕಸರ ಇಲ್ಲವೆ ಕಾಡುಹಂದಿಗಳ ಪರೀಕ್ಷೆಯೆಂತಾದೀತು? ಜೇಲಿನೊಳಗಿನ ಜಗತ್ತು ಹೇಗಿರುತ್ತದೆಂಬದರ ಸಂಪೂರ್ಣ ಅನುಭವವು ನಿಮ್ಮಂತಹ ಈ ಖಾತೆಯಲ್ಲಿ ಹೊಸದಾಗಿ ಸೇರ್ಪಡೆಯಾದ ಡಾಕ್ಟರರಿಗೆ ಈಗಲೆ ಬರಲಾರದು. ನೀವು ಈತನಿಗಿನ್ನೊಮ್ಮೆ ವಾಂತಿಯ ಔಷಧವನ್ನು ಕೊಡಲೇಬೇಕು"

"ಏನಂದಿರಿ? ವಾಂತಿಯ ಔಷಧವೇ" ಅದರ ಉಪಯೋಗವೇನೂ ಆಗಲಾರದು! ಈತನ ಹೊಟ್ಟೆಯಲ್ಲಿ ಯಾವ ನಾಣ್ಯವೂ ಇರಲಾರದು. ಅದಿದ್ದರೆ ಮೊದಲಿಗೇ ಬಿದ್ದು ಹೋಗುತ್ತಿತ್ತು"

"ಹೊಟ್ಟೆಯಲ್ಲಿಲ್ಲ; ಆದರೆ ತುಸ ತಡೆಯಿರಿ. ಮತ್ತೊಮ್ಮೆ ಚೆನ್ನಾಗಿ ನಿರೀಕ್ಷಿಸಿ ಹೇಳುತ್ತೇನೆ." ಎಂದಂದು, ಬಂದಿಪಾಲನು ಜಮಾದಾರನಿಗೆ ಹೇಳುತ್ತಾನೆ "ಈತನಿಗೆ ಕೈ ಬೇಡಿ ಹಾಕಿರಿ; ಈತನನ್ನು ಭಂಗಿಯ ಕಡೆಯಿಂದ ಚನ್ನಾಗಿ ತೊಳಿಸಿ ತನ್ನಿರಿ."

ಹೀಗೆ ಬಂದಿಪಾಲನು ನುಡಿಯುತ್ತಿರುವಾಗಲೇ ರಫೀಉದ್ದೀನನು ಮತ್ತೆ ರೇಗಿಕೊಂಡು "ಏನು? ಭಂಗಿಯಿಂದ ನನ್ನನ್ನು ತೊಳಿಸುವಿರಾ? ನಾನೇನು ಕಕ್ಕಸದೊಳಗಿನ ಫರಸುಗಲ್ಲೇ? ನನ್ನನ್ನು ಕುಲಗೆಡಿಸುವಿರಾ? ಭಂಗಿಯನ್ನು ಕೊಲೆ ಮಾಡೇನು! ನೀನು ಸಾಹೇಬನಲ್ಲ; ಯಾವನೊಬ್ಬ ಭಂಗಿಗೇ ಹುಟ್ಟಿದವ,..."

ಈ ಅಪಶಬ್ದವನ್ನು ಕೇಳಿ ಮತ್ತೆ ಎಲ್ಲರೂ ಆತನನ್ನು ಗುದಿಕೆ-ಒದಿಕೆಗಳಿಂದ ಮೆತ್ತಗೆ ಮಾಡಿದರು; ಮತ್ತು ಸ್ವತಃ ಬಂದಿಪಾಲನು ಆತನನ್ನು ಹತ್ತಿಕ್ಕಿ, ಕುತ್ತಿಗೆಯ ಹತ್ತರ ಬಹು ಬಲವಾಗಿ ಚಿವುಟಿದ್ದರಿಂದ, ರಫೀಉದ್ದೀನನು ಒಮ್ಮೆಲೆ ಚೀರಿಕೊಂಡನು! ಡಾಕ್ಟರನು ಗಾಬರಿಗೊಂಡನು! ಅವನು ಮುಂದುವರಿದು ಬಂದಿಪಾಲನ ಕೈ ಹಿಡಿದು ಹಿಂದೆ ಸರಿಸಿಕೊಂಡು, ಸಮಾಧಾನ ಪಡಿಸುತ್ತ:—"ಇದೇನಿದು? ಸಿಟ್ಟಿನ ಭರದಲ್ಲಿ ನೀವು ಈತನ ಕುತ್ತಿಗೆ ಹಿಚುಕಿ ಕೊಂದೇ ಬಿಡುತ್ತಿದ್ದಿರಲ್ಲ! ಹೀಗೆ ಮಾಡುವದರಿಂದ ಒಂದಾನೊಂದು ಸಮಯದಲ್ಲಿ ಏನಾದರೂ ವಿಪರೀತವೇ ಆದೀತು"

"ವಿಚಿತ್ರವಂತೂ ಆಗಲಿಕ್ಕಿಲ್ಲ; ಆದರೆ ಸಚಿತ್ರ ಮಾತ್ರ ನಿಜವಾಗಿಯೂ ಆದಂತಾಗಿದೆ!" ಎಂದಂದು, ಬಂದಿಪಾಲನು ನಕ್ಕು:—"ಡಾಕ್ಟರರೇ, ಈ

ಮಾನವರೂಪೀ ರಕ್ಕಸನ ಗಂಟಲಲ್ಲೊಂದು ಹಗೇವು ಇರುತ್ತದೆ ಹಗೇವು! ಮತ್ತು ಅದು ತುಂಬಿರುತ್ತದೆಂಬದಕ್ಕೆ ಸಂಶಯವಿಲ್ಲ! ಅಂತೆಯೇ ನಾನು ಈತನ ಕುತ್ತಿಗೆ ಹಿಚುಕಿ ನೋಡುವ ಆ ಸಂಧಿಯನ್ನು ಸಾಧಿಸಿಕೊಂಡೆನು. ತಿಳಿಯಿತೇ! ನಾನು ಆ ಹಗೇವನ್ನು ದಬ್ಬುತ್ತಲೆ, ಒಳಗಿನ ಪದಾರ್ಥವು ಈತನ ಗೊಮ್ಮಲೆ ನೆಟ್ಟಿತು! ಚುಚ್ಚಿತು! ಅಂತೆಯೇ ಈತನು ಹತ್ತೊತ್ತಿಕೊಳ್ಳುತ್ತ ಮತ್ತೆ ಮತ್ತೆ ನುಂಗಹತ್ತಿದನು! ಈತನಿಗೆ ಈಗಲೆ ಬಲವಾಗಿ ವಾಂತಿಯಾಗುವಂತಹ ಔಷಧವನ್ನು ಕೊಡಿರಿ; ಅಂದರೆ ಈತನ ಬಾಯೊಳಗಿನ ಆ ಹಗೇವು ಒಮ್ಮೆಲೆ ಬಾಯಿಬಿಡುವದು"

"ಆದರೆ ಬಾಯಿ-ಹಗೇವು ಅಂದರೇನು?" ಎಂದು ಡಾಕ್ಟರನು ಕೇಳಲು,

"ಅದರ ವಿವರಣವನ್ನು ಸ್ವಲ್ಪದರಲ್ಲಿ ನಿಮಗೆ ತಿಳಿಸುತ್ತೇನೆ. ದನಗಳು ಮೆಲಕಾಡಿಸುವ ಸಲುವಾಗಿ ಕುತ್ತಿಗೆಯ ಯಾವ ಪೊಳ್ಳಿನಲ್ಲಿ ಚರ್ವಣ ಮಾಡತಕ್ಕ ಪದಾರ್ಥಗಳನ್ನು ಸಂಗ್ರಹಿಸಿಡುವವೋ, ಆ ಪೊಳ್ಳನ್ನು ಮನುಷ್ಯನಿಗೂ ತನ್ನ ಅದೇ ಸ್ಥಳದಲ್ಲ ಮಾಡಿಕೊಳ್ಳಲಿಕ್ಕೆ ಬರುತ್ತದೆ ತೀರ ನಿಗರಗಟ್ಟಿರಾದ ಅಪರಾಧಿಗಳು ಗುರುಪರಂಪರೆಯಿಂದ ಈ ವಿದ್ಯೆಯಲ್ಲಿ ಪಾರಂಗತರಾಗುತ್ತಾರೆ. ಬಾಯೊಳಗ ಮಾಂಸಜ್ವಲನ ರಸಾಯನ ಹಚ್ಚಿದ ಸೀಸದ ಗುಂಡನ್ನು ಇಟ್ಟುಕೊಳ್ಳುತ್ತಾರೆ. ಅದನ್ನು ಕುತ್ತಿಗೆಯೊಳಗೆ ಕಿವಿಯ ಕಡೆಗೇ ನಿಲ್ಲುವಂತೆ ಕೆಲ ದಿನ ಹಿಡಿದರೆ, ಆ ಸೀಸವು ಸ್ವಂತದ ಭಾರದಿಂದ ಅಲ್ಲಿಯ ಮಾಂಸದಲ್ಲಿ ಕೆಳಗಿಳಿಯುತ್ತ ಇಳಿಯುತ್ತ ಅಷ್ಟಯೊಂದು ಹೊಂಡವನ್ನೇ ಕೆಡಹುತ್ತದೆ. ಹಲವರಿಗೆ ಅದನ್ನು ಮಾಡಿಕೊಳ್ಳುವದು ಚೆನ್ನಾಗಿ ಸಾಧಿಸುವದಿಲ್ಲ. ಕೆಲವರಿಗೆ ಆ ಪ್ರಯೋಗದಿಂದ ಆಗಲಾದ ಹಗೇವು ಉಂಟಾಗುತ್ತದೆ. ಚವಲಿ-ಪಾವಲಿಗಳು ಹಿಡಿಯುವಷ್ಟು ಯಾರಿಗೆ ಸಾಕಾಗುವದೋ, ಅವರಿಗೆ ಅದಕ್ಕೂ ದೊಡ್ಡ ಹಗೇವು ಮಾಡಿಕೊಳ್ಳುವದು ಸಾಧಿಸುತ್ತದೆ. ಗಾರುಡಿಗರು ತಮ್ಮ ಆಟದಲ್ಲಿ ಬಾಯೊಳಗಿಂದ ನಾನಾ ಬಗೆಯ ಪದಾರ್ಥಗಳನ್ನು ತೆಗೆದು ತೋರಿಸುತ್ತಾರೆ. ಅವುಗಳೆಲ್ಲ ಇಂಥ ಹಗೇವುಗಳಲ್ಲೇ ಶೇಖರಿಸಲ್ಪಟ್ಟಿರುತ್ತವೆ ಬರಿಯ ವಾಂತಿಯಿಂದ ಅವು ಹೊರಬೀಳದ ಹಾಗೆ ನುರಿತ ದಂಡಿತನು ಅವುಗಳನ್ನು ಇದ್ದಲ್ಲಿಯೇ ತಡೆದಿಡುತ್ತಾನೆ; ಆದರೆ ಕುತ್ತಿಗೆಯ ಸ್ನಾಯುಗಳು ದಣಿದವೆಂದರೆ, ಒಳಗಿನ ಒತ್ತುವಿಕೆಯಿಂದ ಆ ಜೀನಸುಗಳು ಹೊರಬಿದ್ದು ಹೋಗುತ್ತವೆಂಬುದು ನನಗೆ ಈ ಮೊದಲಿನ ಎರಡು-ಮೂರು ಉದಾಹರಣೆಗಳಿಂದ ಅನುಭವ ಬಂದಿದೆ ಅದರಿಂದ ಇಂದು ನನ್ನ ಮನಸ್ಸಿನ ಶಂಕೆಯ ಸಮಾಧಾನವಾಗುವವರೆಗೂ ನಾನು ಈತನ ಬೆನ್ನು ಹತ್ತತಕ್ಕವನೇ ಇನ್ನು ಈತನಿಗೆ

ವಾಂತಿಗಳಾದರೆ ಅವು ಒಣ ಓಕರಿಕೆಗಳೇ ಆಗತಕ್ಕವು. ಈತನ ದಮನ ಶಕ್ತಿಯು ಈಗ ಹೇಗೂ ಕ್ಷೀಣಿಸಿರುತ್ತದೆ! ಅದಲ್ಲಕ್ಕೆ ಜವಾಬುದಾರನು ನಾನು. ನನ್ನ ಅಪ್ಪಣೆಯೆಂದು ನೀವು ಈತನಿಗೆ ಮತ್ತೆ ವಾಂತಿಯ ಔಷಧ ಕೊಡಿರಿ."

ಬಂದಿಪಾಲನ ಒತ್ತಾಯಕ್ಕಾಗಿ ಡಾಕ್ಟರನು ಅಂಜುತ್ತಂಜುತ್ತಲೆ ಮತ್ತೆ ವಾಂತಿಯ ಔಷಧ ತಂದನು. ಆಗ ಆತನು ತನ್ನ ಮನಸ್ಸಿನಲ್ಲಿ ಈ ದಂಡಿತನು ಹೇಗೆ ವಿಕ್ಷಿಪ್ತನಿರುವನೋ, ಅದರಂತೆಯೇ ಈ ಬಂದಿಪಾಲನಾದರೂ ವಿಕ್ಷಿಪ್ತವರ್ಗದೊಳಗಿನವನೇ ಸರಿ! ಎಂದೆಂದುಕೊಂಡನು. ಈತನು ಹಟಕ್ಕೆ ಬಿದ್ದಿರುವನು. ಸುಮ್ಮನೆ ಆತನನ್ನು ಪೀಡಿಸುತ್ತಿರುವನು ಕುತ್ತಿಗೆಯೊಳಗೆ ಹಗೇವು ಇರುವುದುಂಟೇ? ಇದ್ದರೂ ಅದರಲ್ಲಿ ನಾಣ್ಯಗಳಿರಬಲ್ಲವೆ? ನಾಳೆ ಈ ಬಂದಿಪಾಲನು ದಂಡಿತರ ಕೈಬೇಡಿಗಳಲ್ಲಿ ದೊಡ್ಡ ದೊಡ್ಡ ಹಗೇವುಗಳಿದ್ದು, ಅವುಗಳಲ್ಲಿ ಮಣಗಟ್ಟೆ ನೀರುಳ್ಳಿ ತುಂಬಿರುತ್ತವೆಂದು ಹೇಳಬಹುದ ! ಏನಾದರೂ ಈ ಪ್ರಕರಣದಲ್ಲಿ ಬಂದಿಪಾಲನು ಫಜೀತಿ ಹೊಂದುವದೇ ಖಂಡಿತ!

ಆ ವಾಂತಿಯ ಔಷಧವನ್ನು ಎಲ್ಲರೂ ಸೇರಿ ರಫೀ ಉದ್ದೀನನಿಗೆ ಹೇಗಾದರೂ ಮಾಡಿ ಕುಡಿಸಿಬಿಟ್ಟರು. ಕೆಲಹೊತ್ತಿನಲ್ಲಿಯೇ ಆ ದುರ್ಜನನಿಗೆ ಬಹು ದೊಡ್ಡ ಒಣ ಓಕರಿಕೆಗಳು ಬರಹತ್ತಿದವು. ಅದರಿಂದ ಕರಳುಗಳು ಹೀರಿ ಹೀರಿ ಆತನು ಆವಸಾನಗೆಡಹತ್ತಿದನು ಇಷ್ಟರಲ್ಲಿ ಒಂದರಹಿಂದೊಂದರಂತೆ ಓಕರಿಕೆಗಳು ಬರಹತ್ತಿದ್ದನ್ನು ಕಂಡು, ಬಂದಿಪಾಲನು ಆತನ ಕುತ್ತಿಗೆ-ಕಿವಿಗಳ ಮಧ್ಯದಲ್ಲಿಯ ಎರಡೂ ಕಡೆಯ ಭಾಗಗಳನ್ನು ಒತ್ತಿ ಹಿಡಿದನು ರಫೀ ಉದ್ದೀನನಿಗೆ ಈ ಮೊದಲೇ ಕೈಬೇಡಿಗಳನ್ನು ಹಾಕಿಸಿದ್ದರಿಂದ, ಆತನು ಪ್ರತೀಕಾರ ಮಾಡಲಿಕ್ಕೆ ಸಮರ್ಥನಾಗಲಿಲ್ಲ. ಆ ಕೂಡಲೆ ಇನ್ನೊಂದು ಬಲವಾದ ಓಕರಿಕೆ ಬರಲು, ಮೂರು, ನಾಲ್ಕು, ಐದು ಬಂಗಾರದ ನಾಣ್ಯಗಳು ರಫೀ ಉದ್ದೀನನ ಬಾಯೊಳಗಿಂದ ಬಳಬಳನೆ ಉದುರಿ, ನೆಲದ ಮೇಲೆ ಬಿದ್ದವು! ಮತ್ತು ಅವುಗಳೊಡನೆ ಒಂದು ಪುಟ್ಟ ಡಬ್ಬಿಯೂ ಬಿದ್ದಿತು ಅದರ ತುಂಬಾ ಅಫುವಿದ್ದಿತು!

"ಹೊನ್ನು! ಹೊನ್ನಿನ ನಾಣ್ಯಗಳು ಬಾಯೊಳಗಿಂದ ಜಾರಿ ಬಿದ್ದವು!" ಎಂದು ವಾರ್ಡರ-ಶಿಪಾಯಿ-ಜಮಾದಾರ ಇವರೆಲ್ಲರೂ ಒದರಿ ಒದರಿ ಅಂದು ಗೊಂದಲವೆಬ್ಬಿಸಿದರು! ಅವರೆಲ್ಲರಲ್ಲಿಯೂ ಹೆಚ್ಚು ಸಂತಸಗೊಂಡವನು ಜಮಾದಾರನು! ಆ ಹೊನ್ನುಗಳು ರಫೀ ಉದ್ದೀನನ ಬಾಯೊಳಗಿಂದ ಬಿದ್ದ ಕೂಡಲೆ ಆತನ ಹೆಂಡತಿಯು ಪುತ್ರರತ್ನಕ್ಕೆ ಸುಖವಾಗಿ ಜನ್ಮವಿತ್ತಂತಾಯಿತು!

ಜಮಾದಾರನ ಮೇಲೆ ಸುಳ್ಳು ಹೇಳಿದ ಯಾವ ಆರೋಪವು ಬಂದಿದ್ದಿತೋ ಅದು ನಿವಾರಣವಾಯಿತು. ತದ್ವಿರುದ್ಧವಾಗಿ ಅಪರಾಧವನ್ನು ಕಂಡು ಹಿಡಿಯುವ ನಿಪುಣ ಜಮಾದಾರನೆಂದು ಇನ್ನು ಆತನ ಪ್ರಖ್ಯಾತಿಯಾಗಲಿದ್ದಿತು!

ರಫೀ ಉದ್ದೀನನು ಇದುವರೆಗೆ ತನ್ನ ಬಾಯೊಳಗಿನ ಹಗೇವಿನಲ್ಲಿ ತುಂಬಿಕೊಂಡು ಹೋಗುತ್ತಿದ್ದ ಹೊನ್ನುಗಳ ಆಧಾರದಿಂದ ಆತನು ಯಾವ ಹಲವು ಸಾರೆ ಹಲವು ಬಂದಿಗೃಹಗಳಲ್ಲಿ ಸೇರ್ಪಡೆ ಹೊಂದಿದ್ದನೋ, ಅವುಗಳಲ್ಲಿ ಬದುಕಿದ್ದನು; ವಿರಾಮವಾಗಿದ್ದನು; ಆದರೆ ಈಗ ಮಾತ್ರ ಎಂದೂ ಇಲ್ಲದಂತೆ ಆತನು ಮೊಟ್ಟ ಮೊದಲೇ ಹತಾಶಗೊಂಡನು! ಆ ಐದು ಹೊನ್ನುಗಳೆಂದರೆ ಬಂದಿಗೃಹದಲ್ಲಿ ಐದು ಲಕ್ಷ ಸಂಪತ್ತಿಯೇ ಸರಿ! ಯಾಕೆಂದರೆ ತಂಬಾಕದ ಒಂದು ಚಿಮಟಿಗೆಯೆಂದರೆ ಬಂದಿಗಳ ಜಗತ್ತಿನಲ್ಲಿ ಒಂದು ರೂಪಾಯಿ! ಒಂದು ರೂಪಾಯಿಯಿಂದ ಬಾಹ್ಯಜಗತ್ತಿನಲ್ಲಿ ಎಷ್ಟು ಕೆಲಸ ಮಾಡಿಸಿಕೊಳ್ಳಬರುತ್ತದೋ ಅದನ್ನು ಆ ಬಂದಿಗಳ ಜಗತ್ತಿನಲ್ಲ ಒಂದು ಚಿಮಟಿಗೆ ತಂಬಾಕ ದಾನದಿಂದ ಸಾಧಿಸಿಕೊಳ್ಳಬಹುದು; ಮತ್ತು ನೂರಾರು ರೂಪಾಯಿಗಳಿಂದ ಹೊರಗೆ ಯಾವ ಕೆಲಸ ಮಾಡಿಸಿಕೊಳ್ಳಬಹುದೋ, ಅದನ್ನು ಅಲ್ಲಿ ಒಂದು ಸಾಸುವೆ ಕಾಳಷ್ಟು ಅಫುವಿನಿಂದ ಸಹಜವಾಗಿ ಸಾಧಿಸಿಕೊಳ್ಳಬರುತ್ತದೆ! 'ಒಂದು ಚಿಮಟಿಗೆ ತಂಬಾಕ ಅಂದರೆ ಒಂದು ರೂಪಾಯಿ' ಬಂದಿಶಾಲೆಯೊಳಗಿನ ಈ ಕೋಷ್ಟಕದಿಂದ ಐದು ಹೊನ್ನುಗಳೆಂದರೆ ಐದುಸಾವಿರ ರೂಪಾಯಿಗಳಿದ್ದವು ಆ ರಫೀ ಉದ್ದೀನನವು. ಅವುಗಳ ಆಧಾರದಿಂದ ಸ್ವಂತ ಯಾವ ಕಷ್ಟದ ಕೆಲಸವನ್ನೂ ಮಾಡದೆ, ಐವತ್ತು ಜನ ದಂಡಿತರನ್ನು ತನ್ನ ಸೇವೆಗಿರಿಸಿಕೊಂಡು, ಐದು ವರ್ಷಗಳ ವರೆಗೆ ಬಂದಿಗೃಹದೊಳಗಿನ ಆತನ ಎಲ್ಲ ಶ್ರೀಮಂತಿಕೆಯ ಸಂಸಾರವೂ ನಡೆಯುತ್ತಿತ್ತು; ಆದರೆ ಇನ್ನು ಆತನು ನಿಷ್ಕಾಂಚನನು, ಭಿಕಾರಿಯಾದನು! ಇನ್ನು ಅವನನ್ನು ಆ ದಂಡಿತರೇಕೆ ಮನ್ನಿಸುವರು? ಅದರಿಂದಲೇ ಇಂದು ಆತನು ತೀರ ಹತಾಶನಾದನು!

ಮತ್ತು ಅದರಲ್ಲಿ ಆ ಹೊನ್ನು ಮುಂತಾದವುಗಳ ಆಧಾರದ ಮೇಲೆ ಅಂದಿನ ಆ ಎಲ್ಲ ಆತತಾಯಿ ದುರ್ವರ್ತನದ ಬಗ್ಗೆ ರಫೀ ಉದ್ದೀನನ ಮೇಲೆ ಖಟ್ಲೆಯಾಯಿತು. ನಿರ್ಣಯ ಹೇಳುವಾಗ ಜೇಲಿನ ಸುಪರಿಂಟೆಂಡೆಂಟನು ಬಂದಿಗೃಹದ ನಿಯಮಗಳಿಗನುಸಾರವಾಗಿ ಆತನಿಗೆ ಘಟಕೆಯ ಶಿಕ್ಷೆ ವಿಧಿಸಿದನು!!

'ಘಟಕೆ' ಈ ಶಬ್ದವನ್ನು ಕೇಳುತ್ತಲೆ ರಫೀ ಉದ್ದೀನನಿಗೆ ನಡುಗೇ ಹುಟ್ಟಿತು! ಹಿಂಸ್ರಶ್ವಾಪದಗಳು ಹೇಗೆ ಶಾರೀರಿಕ ಶಿಕ್ಷೆಗೇಅಂಜುವವೋ-ಮಾನ

ಸಿಕ ಶಿಕ್ಷೆಯೆಂಬುದು ಅವುಗಳಿಗೆ ಗೊತ್ತಿಲ್ಲವೋ, ಅದರಂತೆಯೇ ಹಿಂಸ್ರಶ್ವಾಪದ ಮನುಷ್ಯರೂ ಯಾವುದೊಂದು ದಂಡನಕ್ಕೆ ಹೆದರುತ್ತಿದ್ದರೆ, ಅದು ಶಾರೀರಿಕ ಶಿಕ್ಷೆಗೇ-ಮಾನಸಿಕ ಶಿಕ್ಷೆಗಲ್ಲ. ಮನ್ನಣೆಯು ಮನಸ್ಸೆಂಬುದು ಅವರಲ್ಲಿರುವುದೇ ವಿರಳ. ಹಿಂಸ್ರಶ್ವಾಪದಗಳು ಈಲಾಗುವುದಾದರೆ, ಚಬಕದ ಪೆಟ್ಟಿನಿಂದಲೇ! ಹಿಂಸ್ರಸ್ವಾಪದ ಮನುಷ್ಯನು ನಿಜವಾದ ಮನುಷ್ಯನಾಗಬೇಕಾದರೆ ಘಟಕೇಯ ಶಿಕ್ಷೆಯಿಂದಲೇ! ಆ ನೂರಾರು ಅಘೋರ ದಂಡಿತರನ್ನು ಮನುಷ್ಯರನ್ನಾಗ ಮಾಡಿ ಅನುಭವಗಂಡಿದ್ದ ಬಂದಿಪಾಲನ ಯುಕ್ತಿಯು ರಫೀ ಉದ್ದೀನನ ಪ್ರಕ ರಣದಲ್ಲಿಯೂ ಸತ್ಯವಾಗುವದೆಂದು ತೋರಹತ್ತಿತು. ಜೀವಾವಧಿ ಕರಿನೀರಿನ ಶಿಕ್ಷೆಯನ್ನು ಆತನು ನಗುತ್ತಲೇ ಕೇಳಿಕೊಳ್ಳುತ್ತಿದ್ದನು; ಆದರೆ ಘಟಕೆಯ ಶಿಕ್ಷೆ ಯನ್ನು ಕೇಳಿದೊಡನೆಯೇ ಇಂದು ಆತನು ಮೊಟ್ಟಮೊದಲೇ ಥರಥರವೆಂದು ನಡುಗಿದನು; ಖಂಡಿತವಾಗಿಯೂ ಅಂಜಿದನು!

ಘಟಕೆ ಹೊಡೆಯುವ ಮುಂಚಿನ ರಾತ್ರಿಯಲ್ಲಿ ರಫೀ ಉದ್ದೀನನಿಗೆ ನಿದ್ದೆಯೆಂಬುದು ಒಂದಿಷ್ಟೂ ಹತ್ತಲಿಲ್ಲ. ನಿದ್ದೆಗಣ್ಣಿನಲ್ಲಿ ಘಟಕೆಯ 'ಸಪ್ಪ ಸಪ್ಪ' ಎಂಬ ಸಪ್ಪಳವು ಕೇಳಬರುತ್ತಿತ್ತು. ಅದರಿಂದ ಆತನ ಮನಸ್ಸು ನಡುಗ ಹತ್ತಿತು; ಆವರೂ ಕೂಡ ಆತನು ತನ್ನದೊಂದು ವೈದ್ಯಶಾಸ್ತ್ರವನ್ನು-ಆತ ತಾಯಿಯ ಸಂಪ್ರದಾಯದಲ್ಲಿ ಆತನು ಏನನ್ನು ಕಲಿತದ್ದನೋ ಅದನ್ನೇನೂ- ಅವನು ಮರೆತಿರಲಿಲ್ಲ; ಅದರ ಮೇಲಿನ ಆತನ ನಂಬಿಕೆಯು ಹಾರಿದ್ದಿಲ್ಲ! ಘಟಕೆ ಹೊಡೆಸಿಕೊಳ್ಳುವ ಮುಂಚಿನ ರಾತ್ರಿಯಲ್ಲಿ ಮನುಷ್ಯನು ಒಂದು ವೇಳೆ ತನ್ನ ಉಚ್ಚಿಯನ್ನು ತಾನೇ ಕುಡಿದರೆ, ಅದರಿಂದ ಆತನ ಶರೀರವೂ ಮನಸ್ಸೂ ಬಧಿರವಾಗುತ್ತವೆ; ಮತ್ತು ಘಟಕೆಯ ಪೆಟ್ಟು ಅಷ್ಟೊಂದು ಹತ್ತುವದಿಲ್ಲ, ಎಂಬ ತಿಳುವಳಿಕೆಯು ಇಂಥ ಅಘೋರ ಆತತಾಯಿ ದಂಡಿತರಲ್ಲಿ ಪ್ರಚಲಿತ ವಾಗಿರುತ್ತದೆ; ಮತ್ತು ಆ ಪ್ರಕಾರ ಅವರು ಆ 'ಪರಮೌಷಧ'ವನ್ನು ಕುಡಿ ಯುತ್ತಾರೆಂಬ ಸಂಗತಿಯೂ ತೀರ ದಿಟವಿರುತ್ತದೆ! ರಫೀ ಉದ್ದೀನನು ಅಂದು ಬೆಳಗಿನ ಝಾವದಲ್ಲೇ ಎದ್ದನು; ಮತ್ತು ಆತನು ತನ್ನ ಕುಡಿಯುವ ಟಂಬ್ರೇಲ ದಲ್ಲಿ ಉಚ್ಚಿಯನ್ನು ಹೊಯ್ದುಕೊಂಡು ಯಥಾವಿಧಿಯಾಗಿ ಕುಡಿದನು! ಆಗ ಆತನು ಕುರಾಣದೊಳಗಿನ ಕೆಲ ಆಯತ-ಮಂತ್ರಗಳನ್ನು ಅಂದನು; ಮತ್ತು ನಿಮಾಜ ಮಾಡಿ ದೇವರನ್ನು ಕುರಿತು ಪ್ರಾರ್ಥಿಸಿದನೇನಂದರೆ:— "ಎಲೈ ದೇವರೇ! ಘಟಕೆಯ ಪೆಟ್ಟುಗಳನ್ನು ಮೇಲಿಂದ ಮೇಲೆಯೇ ತೂಗಿ ಹಿಡಿ! ಮೈದೊಗಲಿನ ದಾಹವಾಗಗೊಡಬೇಡ!" ಮನುಷ್ಯರಂತೆ ರಕ್ಕಸರಿಗೂ ಒಬ್ಬ ದೇವರು ಇದ್ದೇ ಇರುತ್ತಾನೆ! ರಫೀ ಉದ್ದೀನನು ನೆಲವನ್ನು ಕೆದರಿ

ಒಂದು ಚಿಮುಟಿಗೆ ಮಣ್ಣನ್ನು ಆ ಮಂತ್ರವನ್ನುಚ್ಚರಿಸಿ ಮಂತ್ರಿಸಿಕೊಂಡನು; ಹಾಗು ಆ ಅಂಗಾರವನ್ನು ತನ್ನ ಮೈಗೆಲ್ಲ ಹಚ್ಚಿಕೊಂಡು, ಅಲ್ಲಾನ ಹೆಸರಿನ ಅಖಂಡ ಜಪ ಮಾಡುತ್ತ, ಬೆಳಗಾಗುವವರೆಗೂ ಆ ಒಬ್ಬೊಂಟಿಗರ ಕೋಣೆಯಲ್ಲಿ ಅಡ್ಡಾಡಹತ್ತಿದನು! ಅಂದು ಆತನು ಹಾಗೆ ದೇವರ ಹೆಸರು ಹೇಳಿ ಒಂದು ಧರ್ಮಯುದ್ಧಕ್ಕೆ ಹೊರಟಿದ್ದನು!!

ಆದರೆ ಆತತಾಯಿಗಳೂ ಹಾಗು ನಿಗರಗಟ್ಟಿರಾದ ದಂಡಿತರು ಇಂಥ ವೇಳೆಯಲ್ಲಿ ಹೀಗೆಯೆ ಮಾಡುತ್ತಾರೆಂಬದು ನಿಜವು! ಎರಡು-ಮೂರು ಉದಾಹರಣೆಗಳಾದರೂ ನಮ್ಮ ಸ್ವಂತಕ್ಕೆ ಪ್ರತ್ಯಕ್ಷ ಗೊತ್ತಿನವಿರುತ್ತವೆ; ಮತ್ತು ಯಮಪುರಿಯನ್ನು ನೋಡಹೋಗಬೇಕಾದರೆ, ಮಖಮಲ್ಲಿನ ಹಾಸುಗಂಬಳಿಗಳ ಮೇಲೆ ನಡೆದು ಹೋಗಲಿಕ್ಕೆ ಬರುವದಿಲ್ಲ. ಡಬಗಳ್ಳಿಯು ಹಾಗು ಹಲವು ಕಾಡು ಮುಳ್ಳುಗಳೊಳಗಿಂದಲೇ ದಾರಿ ಹುಡುಕುತ್ತ ಸಾಗಬೇಕಾಗುವದೆಂಬದು ನಿಜವೇ. ಸುಡುಗಾಡಿನಲ್ಲೇ ವಸತಿಗೆಂದು ಉಳುಕೊಳ್ಳುವದಾದರೆ, ಹೊತ್ತಿದ್ದ ಚಿತೆಗಳು, ಎಲುವಿನ ತುಂಡುಗಳು, ಕಾಲು ಸುಡುವಂತಹ ಬೂದಿ-ಕೆಂಡಗಳ ರಾಶಿಗಳು, ಫಟ್ ಫಟ್ಟೆಂದು ಬಡೆಯುವ ತಲೆಬುರುಡೆಗಳ ಧಡಲ್ ಬಾಜಿಗಳು, ಭೂತಗಳ ಚೀರಾಟ ಇವೇ ಅಲ್ಲಿಯ ನೆರೆಹೊರೆಗಳು! ಭೇಸೂರ ಭಯಾನಕ ವಿರಸವೇ ರಸವು! ಮಾನವೀ ಮನಸ್ಸಿನ ಕರಿನೀರು ಹೇಗಿರುತ್ತದೆಂಬದನ್ನು ತಿಳಿಯುವ ಜಿಜ್ಞಾಸೆಯಿದ್ದರೆ, ಅದು ಹೇಗಿರುತ್ತದೋ ಅಂಥ ಕರಿನೀರೇ ತೋರಿಸಬೇಕಾಗುತ್ತದೆ. ಸುಮ್ಮನೆ ಶಿಷ್ಟಾಚಾರವೆಂದು ಪನ್ನೀರು ತೋರಿಸಿದರೆ, ಅದೇ ಅದರ ವಂಚನೆಯಾದೀತು! ಪನ್ನೀರೇ ಕರಿನೀರಿನ ವಿಡಂಬನೆಯು! ಶೋಭೆಯಲ್ಲ!

“ಅಲ್ಲಾ! ನೀನು ರಹಿಮನು; ದೇವಾ, ನೀನು ದಯಾಳುವಿರುತ್ತೀ” ಎಂದು ನಾಮಘೋಷ ಮಾಡುತ್ತ ಆ ಒಂಟಿಗರ ಕೋಣೆಯಲ್ಲಿ ಅಡ್ಡಾಡುತ್ತಿದ್ದ ರಫೀ ಉದ್ದೀನನಿಗೆ ಆ ಮಂತ್ರ-ತಂತ್ರಗಳಿಂದ ತುಸ ಧೈರ್ಯವೂ ಬಂದಂತಾಯಿತು. ಅಷ್ಟರಲ್ಲಿ ಶಿಪಾಯಿಯು ಬಂದು ‘ಖಡ ಖಡಲ್’ ಎಂದು ಬಾಗಿಲು ತೆರೆದನು. ಬಂದಿಗೃಹದ ನಡುವಿನ ಚೌಕದಲ್ಲಿ, ಎಲ್ಲ ಬಂದಿಗಳಿಗೂ ಸಹಜವಾಗಿ ಕಾಣಬಹುದಾದ ಸ್ಥಳದಲ್ಲಿ ಆತನನ್ನೊಯ್ದು ನಿಲ್ಲಿಸಿದರು. ಮೂರು ದೊಡ್ಡ ದೊಡ್ಡ ಮುಂಡಿಗೆಗಳಿಂದ ಹೂಡಿದ ಒಂದು ತ್ರಿಕೋಣವಿರುತ್ತದೆ; ಅದಕ್ಕೆ ಆ ಬಂದಿಗಳ ಭಾಷೆಯಲ್ಲಿ ‘ತಿಗಡಿ’ ಎನ್ನುತ್ತಾರೆ. ಆ ತಿಗಡಿಯನ್ನು ಅಲ್ಲಿಗೆ ತಂದರು. ಆ ತಿಗಡಿಯ ಮೆಟ್ಟಿಲ ಮೇಲೆ ಹತ್ತಿಸಿ, ಅದಕ್ಕೆ ಹೊಂದಿಸಿ ರಫೀ ಉದ್ದೀನನನ್ನು ಹಿಮ್ಮುಖವಾಗಿ ಕಟ್ಟಿದರು. ಆತನ ಎರಡೂ

ಕಾಲುಗಳನ್ನು ಎರಡೂ ಪಕ್ಕಗಳಲ್ಲಿದ್ದ ಕಬ್ಬಿಣದ ಬಳೆಗಳಲ್ಲಿ ಚೆನ್ನಾಗಿ ಹೊಗಿಸಿದರು. ಆತನ ಕೈಗಳನ್ನೆತ್ತಿ ಹಿಡಿದು ಆ ಎರಡೂ ಕಟ್ಟಿಗೆಗಳ ಮೇಲ್ಬದಿಗಿದ್ದ ಬೇರೆ ಎರಡು ಕಬ್ಬಿಣದ ಬಳೆಗಳಲ್ಲಿ ತೋಡಕಿಸಿ ಬಿಟ್ಟರು. ಗೋಣನ್ನು ಒಂದು ಚರ್ಮದ ಪಟ್ಟಿಯಲ್ಲಿ ತೊಡಕಿಸಿದರು.

ಜಂತುಘ್ನದ ಔಷಧವನ್ನು ಒಂದು ತಟ್ಟೆಯಲ್ಲಿರಿಸಿಕೊಂಡು ಹಾಗು ಘಟಕೆ ಹೊಡೆಯುವದು ಮುಗಿದ ಕೂಡಲೆ ಆ ಗಾಯದ ಮೇಲೆ ಕಟ್ಟುವ ಪಟ್ಟಿಗಳನ್ನು ಕೈಯಲ್ಲಿ ಹಿಡಿದುಕೊಂಡು ದವಾಖಾನೆಯ ಕಾಂಪಾವುಂಡರನೂ ಆತನ ಹಿಂದುಗಡೆಯಲ್ಲೇ ಡಾಕ್ಟರನೂ ಅಲ್ಲಿಗೆ ಬಂದರು ಶಿಪಾಯಿಗಳು ಸಾಲುಗೊಂಡು ನಿಂತರು ಮೈ ಮೇಲೆ ಒಂದು ಲಂಗುಟವನ್ನಷ್ಟು ಇಟ್ಟು, ರಫೀಉದ್ದೀನನನ್ನು ಅಂಗಾಲಿನಿಂದ ನಡುನೆತ್ತಿಯವರೆಗೂ ಸಂಪೂರ್ಣ ನಗ್ನವಾಗಿ ಮಾಡಲಾಯಿತು. ಆತನು ಯಾವ ಗಡಿಬಿಡಿ-ಬಡಬಡಿಕೆಗಳನ್ನೂ ಮಾಡಲಿಲ್ಲ. ದಿನದ ನಿಗರಗಟ್ಟಿತನವೂ ದುಃಶ್ಚಟಗಳೂ ಇಂದು ಆತನಲ್ಲಿ ಇದ್ದವೋ ಇಲ್ಲವೋ ಎಂಬಂತಾಗಿತ್ತು ಮುಂದನಾಗಿದ್ದ ಆತನು ತನ್ನ ಆ ದುರವಸ್ಥೆಯನ್ನು ಬೇರೆಯವರದನ್ನು ನೋಡುತ್ತಿರುವ ಹಾಗೆ, ಈಗಲೂ ಹಾಗೆಯೇ ನೋಡುತ್ತಿದ್ದನು. ಅದೆಲ್ಲ ವ್ಯವಸ್ಥೆಯನ್ನು ಅಲ್ಲಿಯೇ ನಿಂತುಕೊಂಡು ಮಾಡಿಸುತ್ತಿದ್ದ ಆತನ ಆ ವೈರಿಯಾಗಿದ್ದ ಜಮಾದಾರನಿಗೆ ಕೂಡ ಆಗ ಅವನು ಪಿಟ್ಟೆಂದು ಏನೂ ಅನ್ನಲಿಲ್ಲ; ಅಥವಾ ಮಾತಾಡಲಿಕ್ಕೇ ಸಮರ್ಥನಾಗಲಿಲ್ಲವೆನ್ನಬಹುದು.

ಘಣ-ಘಣ-ಘಣ ಗಂಟೆಯಾಯಿತು. ಆ ಕೂಡಲೆ ಟಪ್ಪ-ಟಪ್ಪ ಎಂದು ಬೂಟಿನ ಸಪ್ಪಳ ಮಾಡುತ್ತ ಟಾವರದೊಳಗೆ ಕುಳಿತಿದ್ದ ಜೇಲರನು ಹೊರಗೆ ಬಂದನು; ಮತ್ತು ಆತನನ್ನು ಸರಿಸಿಯೇ ಚಡ್ಡಿ-ಜಾಕೀಟುಗಳನ್ನಷ್ಟೇ ಮೈ ಮೇಲೆ ಧರಿಸಿದ್ದ, ತನ್ನ ತಲೆಗೂದಲುಗಳನ್ನು ಬೆನ್ನಮೇಲೆ ಹರವಿಕೊಂಡಿದ್ದ, ರಟ್ಟೆಯ ಸ್ನಾಯುಗಳು ಚೆನ್ನಾಗಿ ಉಬ್ಬಿದಂತಹ ಘಟಕೆ ಹೊಡೆಯುವವನೂ ಬಂದನು. ಆತನ ಕೈಯಲ್ಲಿ ಒಂದು ಉದ್ದವಾದ ಮೂರು ಬೊಟ್ಟು ದಪ್ಪಾದ ನೆಟ್ಟನ್ನ ಬೆತ್ತವಿದ್ದಿತು.

ರಫೀ ಉದ್ದೀನನನ್ನು ಬೆನ್ನು ಕಡೆಗೆ ಕಟ್ಟಿದ್ದರಾದ್ದರಿಂದ ಅದು ಆತನಿಗೆ ಕಾಣಿಸಲಿಲ್ಲ; ಆದರೆ ಅದು ಆತನಿಗ ಕಂಡಿರಬೇಕೆಂದು ಅನಿಸುತ್ತಿತ್ತು; ಯಾಕಂದರೆ ಆತನು ಒಮ್ಮೆಲೆ ಥರಥರನೆ ನಡುಗಿದನು!

'ಮಾರ್ರೊ' ಬಂದಿಪಾಲನು ಕೂಗಿದನು! ಆ ಕೂಡಲೆ ಆ ಬೆತ್ತವೇ ಕುಂಡಿಯ ಮೇಲೆ ಮೂಡಿದಂತಾಗಿ, ರಫೀ ಉದ್ದೀನನು ದೈನ್ಯದಿಂದ ಒದರಿ "ಸಾಬ! ಸಾಬ! ಆಸ್ತೆ! ಮೆಲ್ಲಗಾದರೂ ಹೊಡೆಯಿರಿ!"

ಕೈಯೊಳಗಿನ ಬೆತ್ತವನ್ನು ತೂಗಿ ತಲೆಯ ಸುತ್ತಲೂ ತಿರುವಿಕೊಂಡು ಘಟಕೆಯುವನು ಗುರಿಯಿಟ್ಟನು. "ಒಂದು" ಬಂದಿಪಾಲನು ಕೂಗಿದನು! ಫಡಲ್ಲೆಂದು ರಫೀ ಉದ್ದೀನನ ಕುಂಡಿಯ ಮೇಲೆ ಬೆತ್ತದ ಪೆಟ್ಟು ಬಿದ್ದಿತು.

"ಅಯ್ಯಯ್ಯೋ........!" ಎಂದು ರಫೀ ಉದ್ದೀನನು ಚೀರಿದನು.

"ಎರಡು" ಎಂದು ಬಂದಿಪಾಲನು ಅಂದಕೂಡಲೆ ಘಟಕೆ ಹೊಡೆಯು ವವನು ಬೆತ್ತವನ್ನು ಮತ್ತೆ ತಲೆಯ ಸುತ್ತಲೂ ಗುರಿಯಿಟ್ಟು ಎರಡನೇ ಪೆಟ್ಟು ಹಾಕಿದನು. ರಫೀ ಉದ್ದೀನನು ದನದಂತೆ ಒದರಿದನು! ಅಕ್ಕಪಕ್ಕದ ದಂಡಿ ತರ ಶರೀರಗಳೂ ಗಡಗಡನೆ ನಡುಗಹತ್ತಿದವು ಎಷ್ಟೋ ಜನರಿಗೆ ಆತನ ಬಗ್ಗೆ ದಯೆಯುಂಟಾಯಿತು. ಅವರಲ್ಲಿ ಕಂಟಕನೂ ಒಬ್ಬನಾಗಿದ್ದನು; ಆದರೆ ಆತನಿಗೆ ದಯೆಯುಂಟಾಗುವಷ್ಟರಲ್ಲಿ ಈತನೇ ಆ ರಫೀ ಉದ್ದೀನನೆಂಬದು ನೆನಪಾಯಿತು! ಮನುಷ್ಯರನ್ನು ಕಟ್ಟಿಗೆಗಳನ್ನು ಕಡಿಯುವಂತೆ ಕೊಡ್ಲಿಯಿಂದ ಕಡಿಯುವವನು ಈತನೇ! ವರ್ಷಕ್ಕೆ ಒಬ್ಬೊಬ್ಬ ತರುಣಿಯನ್ನಾದರೂ ವಿಲಾಸವೆಂದು ಕೊಲೆಗೆಯ್ಯುವ ನೃಶಂಸ ನರರಕ್ಕಸನೀತನೇ, ಎಂಬುದು ನೆನಪಾಯಿತು!

'ಮೂರು!' "ನಾಲ್ಕು!" "ಐದು!" "ಆರು!" "ಏಳು!" ಪ್ರತಿಯೊಂದು ಸಾರಿಯು ಬೆತ್ತದ ಏಟಿನಗೂಡ ರಫೀ ಉದ್ದೀನನ ಎರಡೂ ಕುಂಡಿಗಳಿಂದ ರಕ್ತವು ಕಾರಂಜಿಯಂತೆ ಪುಟಿಯುತ್ತಿತ್ತು! ಮಾಂಸವು ಹೊಟ್ಟನಂತೆ ಹೊರ ಹೊರಡುತ್ತಿತ್ತು! ಆತನು ನಡುವೇ ಒಮ್ಮೆ ದನದಂತೆ ಒದರ ಹತ್ತಿದರೆ, ಇನ್ನೊಮ್ಮೆ 'ಬಿಟ್ಟು ಬಿಡಿರಿ; ಸಾಕು ಮಾಡಿರಿ. ಕಾಲಿಗೆರಗುತ್ತೇನೆ.' ಎಂದು ಅನ್ನುತ್ತ ಬಿಕ್ಕಿ ಬಿಕ್ಕಿ ಅಳಹತ್ತುದನು ಮತ್ತೊಮ್ಮೆ ಆ ಜಮಾದಾರನಿಗೂ ಬಂದಿಪಾಲನಿಗೂ 'ಅವ್ವ-ಅಕ್ಕ' ಎಂದು ಬೀಭತ್ಸವಾಗಿ ಬೈಯ ಹತ್ತುವನು!

"ಇಪ್ಪತ್ತೆಂಟು! ಇಪ್ಪತ್ತೊಂಬತ್ತು! ಮೂವತ್ತು!!"

ಆ ಮೂವತ್ತನೇ ಘಟಕೆ ಹೊಡೆದೊಡನೆಯೇ ಬೆತ್ತವನ್ನು ಚೆಲ್ಲಿಕೊಟ್ಟು, ಬೆವತು ಹೋಗಿದ್ದ ಆ ಘಟಕೆ ಹೊಡೆಯುವವನು ನಿಟ್ಟುಸಿರುಗರೆಯುತ್ತ ಒಮ್ಮೆಲೆ ನೆಲಕ್ಕೆ ಕುಸಿಕುಳಿತನು!

ಡಾಕ್ಟರನು ತಟ್ಟನೆ ಮುಂದೆ ಬಂದು, ತಿಗಡಿಯಿಂದ ಬಿಚ್ಚಿ ಕೆಳಗೆ ಬೋರಕ್ಕುಬೋರ್ಲಾಗಿ ಮಲಗಿಸಿದ್ದ, ರಕ್ತದಿಂದ ಮುಳುಗಿದ್ದ ರಫೀ ಉದ್ದೀನನ ನಾಡಿಗಳನ್ನು ಹಿಡಿದು ಜೀವಿಸಿರುವನೋ ಇಲ್ಲವೊ ಎಂಬದನ್ನಷ್ಟು ತಿಳಿಯುವ ಮಟ್ಟಿಗೇ ನೋಡಿದನು. ಗಾಯದ ಮೇಲೆ ಆ ಕೂಡಲೆ ಮಲಮು ಪಟ್ಟಿ ಯನ್ನು ಕೂಡ್ರಿಸಿ, ರಫೀ ಉದ್ದೀನನನ್ನು ಬಂದಿಗೃಹದೊಳಗಿನ ದವಾಖಾನೆ

ಯೊಳಗಿನ ಒಂದು ಒಂಟಿಗರ ಕೋಣೆಗೆ ಒಯ್ದನು; ಹಾಗು ಆ ಕೋಣೆಯ ಬಾಗಿಲಿಗೆ ಬೀಗಮುದ್ರೆಗಳನ್ನು ಹಾಕಿದನು!

ಅಂದಿನ ರಾತ್ರಿಯಲ್ಲಿ ಗಾಯದ ನೋವು ವಿಶೇಷವಾದದ್ದರಿಂದ, ರಫೀ ಉದ್ದೀನನಿಗೆ ಹೆಚ್ಚಾಗಿ ಜ್ವರ ಬಂದವು. ಜ್ವರದಲ್ಲಿ ತಲೆಯ ಉಷ್ಣತೆಯು ಮಿತಿಮೀರಿತೆಂದರೆ, ಮಜ್ಜಾಕೇಂದ್ರಗಳು (Brain cells) ಕ್ಷುಬ್ಧಗೊಳ್ಳುತ್ತವೆ. ಆ ಮಜ್ಜಾಕೇಂದ್ರಗಳಲ್ಲಿ ವಿಚಾರದ ತಾಕಲಾಟದಿಂದ ಯಾವವು ಅಕಸ್ಮಾತ್ತಾಗಿ ಮುಂದಾಗುವವೋ, ಅವುಗಳ ಚಿತ್ರಾವಲಿಯು (Film) ತತ್ಕಾಲಕ್ಕೆ ಒಳ್ಳೇ ಉತ್ಕಟತೆಯಿಂದ ಎದ್ದು, ಆಯಾ ಘಟನೆಗಳು ಜೀವಿತದಲ್ಲಿ ನಡೆದೇ ಇರುತ್ತವೆಂದು ಗುಂಗಿನಿಂದ ಆವೃತ್ತವಾದ ಆ ಜೀವಕ್ಕೆ ಭಾಸವಾಗುವದು. ಅಷ್ಟರಲ್ಲಿ ಆ ವಿಚಾರ ಸಂಬಂಧವಾಗಿ ಬೇರೆ ಮಜ್ಜಾಪಿಂಡವು ಚಲಿಸಿತೆಂದರೆ, ಅದು ಅದರ ವಾರ್ಪಟವನ್ನು ಚಲಿಸಹತ್ತುತ್ತದೆ. ಆಗ ದೇಶ, ಕಾಲಗಳ ಕ್ರಮದ ಅರಿವೇ ಸ್ಥಿರವಾಗುಳಿಯುವುದಿಲ್ಲ. ಅದರ ದೆಸೆಯಿಂದ ಸ್ಮೃತಿ ಘಟನಾಭಾವನೆಗಳ ವಿಕ್ಷಿಪ್ತಮಿಶ್ರಣವಾಗಿ, ಹಲವು ಅಸಂಭಾವ್ಯ ದೃಶ್ಯಗಳು ಪ್ರತ್ಯಕ್ಷದಂತೆಯೇ ಕಾಣಹತ್ತುತ್ತವೆ. ಅಂದು ರಫೀ ಉದ್ದೀನನಿಗಾದರೂ ಹಾಗೆಯೇ ಆಯಿತು.

ಜ್ವರವು ಹೆಚ್ಚು ಹತ್ತಿದ ಬಳಿಕ ಎಲ್ಲಿಯವರೆಗೆ ಆತನ ಮೈಮೇಲೆ ಎಚ್ಚರಿದ್ದಿತೋ, ಅದುವರೆಗೂ ಆತನು ಗಾಯದ ವಿಶೇಷ ನೋವಿನಿಂದ ನೆರಳುತ್ತಿರುವಾಗ ತನ್ನ ಈ ದುರ್ದೆಶೆಯನ್ನು ತನ್ನ ದುಷ್ಕೃತ್ಯಗಳಿಂದ ಸುಮ್ಮನೆ ಮಾಡಿಕೊಂಡನೆಂಬ ಬಗ್ಗೆ ಆತನಿಗೆ ಮೇಲಿಂದ ಮೇಲೆ ಪಶ್ಚಾತ್ತಾಪವೆನಿಸಹತ್ತಿತು. ನಿಜವಾದ ಪಶ್ಚಾತ್ತಾಪವೆಂಬುದು ಆತನಿಗೆ ಇಡೀ ಜನ್ಮದಲ್ಲಿ ಇಂದೇ ಮೊಟ್ಟ ಮೊದಲಾಗಿದ್ದಿತು! ಪಾಪವನ್ನೇಕೆ ಮಾಡಿದೆನೆಂಬ ಬಗ್ಗೆ ಆತನಿಗೆ ಪಶ್ಚಾತ್ತಾಪವಾಗಿರದಿದ್ದರೂ, ಪಾಪವನ್ನು ಪಚನವಾಗುವ ಮಟ್ಟಿಗೇ ಮಾಡಿ, ಕೂಡಲೆ ಬಿಟ್ಟುಬಿಡಲಿಲ್ಲವೇಕೆ? ಅಜೀರ್ಣವಾಗುವವರೆಗೂ ಅಪಚನವಾಗುವವರೆಗೂ ಅದೇ ಭಯಂಕರ ಆತತಾಯಿ ಮಾರ್ಗವನ್ನೇಕೆ ಹಿಡಿದೆನು? ಎಂಬದಕ್ಕಾದರೂ ಆತನಿಗೆ ಖೇದವೆನಿಸಹತ್ತಿತು. ಕರಿನೀರೊಳಗಿಂದ ಓಡಿ ಹೋದೆನು, ಸ್ವದೇಶಕ್ಕೆ ಸುಖರೂಪ ತಲುಪಿದೆನು; ಮತ್ತೆ ದರವಡೆ ಹಾಕಿ, ಮರ್ದತನ ತೋರಿಸಿ, ಅಪಾರ ಧನ ಸಂಪಾದಿಸಿದೆನು, ಅನನ್ವಿತ ಇಂದ್ರಿಯಭೋಗ ಪಡೆದೆನು. ಅಲ್ಲಿಯ ವರೆಗೆ ನಾನು ಮಾಡಿದ್ದು ವಿಹಿತವಾಯಿತು; ಆದರೆ ಅದಕ್ಕೂ ಮುಂದೆ ಕೈ ಬಿಗಿಹಿಡಿದು, ಸಂಪಾದಿಸಿದ್ದರಲ್ಲೇ ಸಮಾಧಾನ ತಾಳಿ, ಯಾವುದೊಂದು ಪರಪ್ರಾಂತದಲ್ಲಿ ವ್ಯವಸ್ಥಿತವಾಗಿ ಜೀವಿಸಿದ್ದರೆ, ಜೀವಾವಧಿಯವರೆಗೆ

ಮತ್ತೆ ಸಂಕಟದಲ್ಲೇನೂ ಬೀಳುತ್ತಿರಲಿಲ್ಲ; ಹೀಗೆ ಆತನ ವಿವೇಕವು ಆತನನ್ನು ಬೋಧಿಸುತ್ತಿದ್ದಿತು. ಆತನ ಆ ವಿಕ್ಷಿಪ್ತ ವಿವೇಕಕ್ಕೆ ಆತನ ಯಾವ ತಪ್ಪು ಅಂದು ತೋರಿತೋ ಅದು ಏನಂದರೆ, ಸಾಕಷ್ಟು ಹಣ ಹಾಗು ಖುಷಿಮೋಜು ಇವುಗಳ ಸಲುವಾಗಿ ಸಮಾಜದ ಮೇಲೆ ಭಯಂಕರ ಅತ್ಯಾಚಾರಗಳನ್ನು ಮಾಡುತ್ತ ಮಾಡುತ್ತ ಯಾವಾಗ ಆತನು ಬಿಹಾರದ ಹಿಂದೂ ತರುಣಿಯನ್ನು ಓಡಿಸಿಕೊಂಡು ಬಾಗಲಾಣಕ್ಕೆ ಓಡಿ ಬಂದು ಅಡಗಿದನೋ, ಆಗ ಆತನು ತನ್ನ ಆ ಭಯಂಕರ ಉಪದ್ರವೀ ದುಷ್ಕೃತ್ಯಗಳಿಗೆ ಕೊನೆಯ ಶರಣು ಹೊಡೆದು ಬಿಡಬೇಕಾಗಿತ್ತು. ಆ ತರುಣ ಸ್ತ್ರೀಯನ್ನೂ ಆ ದುಡ್ಡನ್ನೂ ತಕ್ಕೊಂ-ಡು ಸಿಂಧದ ಕಡೆಗೆ ಎಲ್ಲಿಯಾದರೂ ಒಬ್ಬ ಸದ್ಗೃಹಸ್ಥನಾಗಿದ್ದು, ನಿರ್ಬಂಧತನದಲ್ಲಿ ಯಾವ ಖುಷಿಮೋಜು ಮಾಡಲಿಕ್ಕೆ ಬರುವದೋ ಅದನ್ನು ಮಾಡಿ, ಶಾಂತತೆಯಲ್ಲಿ ಆಯುಷ್ಯವನ್ನು ಕಳೆಯಬೇಕಾಗಿತ್ತು. ಆತನು ತನ್ನ ಆ ಕೃತಿಗಳಿಗೆ ದುಷ್ಕೃತ್ಯಗಳೆಂದು ಅಂದು ಮನಸ್ಸಿನ ಭಾಷೆಯಲ್ಲಿ ಸಂಬೋಧಿಸಿಬಿಟ್ಟನು! ಜ್ವರದ ಗುಂಗೂ ತಾಪವೂ ಹೇಗೆ ಹೇಗೆ ಹೆಚ್ಚತೊಡಗಿತೋ, ಹಾಗೆ ಹಾಗೆ ಈ ಕೊನೆಯ ವಿಚಾರವೇ ಆತನ ಚಿತ್ತದಲ್ಲಿ ಥೈ ಥೈ ಎಂದು ಕುಣಿಯಲಾರಂಬಿಸಿತು.

“ಎಲಎಲ! ಆ ಬಿಹಾರಿಗೆ-ಬಿಹಾರದ ಆ ಸುಂದರ ಹುಡುಗಿಯನ್ನೇ ಪದ್ಧತಿಯಂತೆ-ನೀಕಾದಿಂದ ಹೆಂಡತಿಯಾಗಿ ಮಾಡಿಕೊಂಡು ನಾನು ಸುಖದಿಂದೇಕೆ ಜೀವಿಸಲಿಲ್ಲ? ಎಲಎಲ! ನಾನು ಅವಳನ್ನು ನೆರೆಹಾವಳಿಯಲ್ಲಿ ಹಂಚಿನ ಚೂರು ಚಲ್ಲುವ ಹಾಗೇಕೆ ಚೆಲ್ಲಿದೆನು? ನೀಚಾ! ಪರಮ ನೀಚಾ! ನೀರಲ್ಲಿ ಉಸಿರು ಕಟ್ಟಿ,-ಅವಳ ಜೀವದ ಅವಸ್ಥೆಯು ಏನಾಗಿದ್ದೀತು?-ಅವಳ ತಲೆಯು ಆ ಬಂಡೆಗಲ್ಲಿಗಪ್ಪಳಿಸಿ-ಒಡೆದು! ಅಬ್ಬಬ್ಬ! ಅವ್ವವ್ವ! ಎಂಥಾ ನೋವಿದು!!”

ಮತ್ತೆ ಮತ್ತೆ ನರಳುತ್ತ, ಬಡಬಡಿಸುತ್ತ, ಗುಂಗಿನಲ್ಲಿ ಏನೇನೋ ದೃಷ್ಟಿಸುತ್ತ, ಭಾವಿಸುತ್ತ, ಆತನ ತಲೆಯೊಳಗಿನ ಗುಲಾಮ ಹುಸೇನನ ಸ್ಮೃತಿಯ ಕೇಂದ್ರವು ಎತ್ತಣಿಂದಲೋ ಚಲಿಸಹತ್ತಿತು. ಆ ಕೂಡಲೆ ಆತನು “ಹರಾಮ........ಏ ದುಷ್ಟಾ! ಕೊಡು, ನನ್ನ ಮಾಲತಿಯನ್ನು ಮರಳಿ ನನಗೆ! ಕೊಡು. ಇಡಿಗಂಡು ಎಂದು ನಾನು ಅವಳನ್ನು ನಿನ್ನಲ್ಲಿಟ್ಟಿದ್ದೆನು! ನನ್ನವಳು; ಅವಳು ನನ್ನವಳಾಗಿದ್ದಾಳೆ....ತಂದಿದ್ದಾನೆ ನಿಮ್ಮಪ್ಪ! ಗುಲಾಮ, ಕೊಡುತ್ತೀಯೋ ಇಲ್ಲವೋ?....ಹೊಡೆಯಿರಿ! ಬಡೆಯಿರಿ! ಕಾಲು ಮುರಿಯಿತು! ಅಯ್ಯಯ್ಯೋ! ಸತ್ತೆನು! ಸತ್ತೆನು!”

........ಮತ್ತೆ ಆತನು ತುಸ ಎಚ್ಚತ್ತನು. ಜ್ವರವು ಹೆಚ್ಚುತ್ತಲೆ ಇತ್ತು.

ಗುಂಗಿನಲ್ಲಿ ಗುಲಾಮುಹುಸೇನನೊಡನಾದ ಹೊಡೆ-ಬಡೆದಾಟದಲ್ಲಿ ಆತನು ಕಾಲುಗಳನ್ನು ಒಳ್ಳೇ ತ್ವೇಷದಿಂದ ಬಡಿದನು; ಮತ್ತು ಆ ಕೂಡಲೆ ಆತನ ಕಾಲು ನೋಯುಹತ್ತಿತು. ಆಗ ಆತನಿಗೆ ಅದೇ ನೆನಪಾಗಹತ್ತಿತು.

"ಮಾಲತಿಯನ್ನು ಗುಲಾಮ ಹುಸೇನನು ಓಡಿಸಿಕೊಂಡೊಯ್ದಿಲ್ಲವೆ? ಎಲ್ಲಿರಬಹುದು ಅವಳು? ಎಲ ಎಲ! ಕಳ್ಳರ ಹಿಂಡನಾದನಲ್ಲವೇ ಅವನು? ಅವನು ತನ್ನ ಪಂಜರದಲ್ಲಿಯೇ ಇಟ್ಟಿರಬಹುದು ಆ ನನ್ನ ಅಚ್ಛದ ಮಾಲತಿಯನ್ನು!"

ಮಥುರೆಯಲ್ಲಿ ರಫೀಉದ್ದೀನನು ಮಾಲತಿಯನ್ನು ಆ ರಾತ್ರಿ ಗುಲಾಮ ಹುಸೇನನ ಮನೆಯಲ್ಲಿ ಯಾವಾಗ ಅಡಗಿಸಿಟ್ಟನೋ, ಆ ಬಳಿಕ ಆಕೆಯದೇನಾಯಿತೆಂಬದು ಅವನಿಗೆ ಏನೂ ಗೊತ್ತಿರಲಿಲ್ಲ; ಮತ್ತು ಕಿಶನನು-ತನ್ನೊಡನೆಯೇ ಕೊಲೆ, ಸುಲಿಗೆ, ದರೋಡೆಗಳ ಸಂಬಂಧದ ಆ ಖಟ್ಲೆಯೊಳಗಿಂದ ನಿರ್ದೋಷಿಯೆಂದು ಬಿಡುಗಡೆಯಾದವನು-ಆತನ ವಿಷಯವಾಗಿಯಾದರೂ ರಫೀಉದ್ದೀನನಿಗೆ ಅದೇ ಕೊನೆಯ ಮಾಹಿತಿಯು. ಅದೇ ವಿಚಾರವು ಆತನ ಕ್ಷೀಣತಾಸ್ವೈರ ಮನಸ್ಸಿನಲ್ಲಿ ಈಗ ಒಂದೇಸವನೆ ಭ್ರಮಿಸಹತ್ತಿತು! ಗುಂಗಿಯೂ ವಾಯುವಿನ ಲಹರಿಗಳೂ ಬರಹತ್ತಿದವು. "ಮಾಲತಿಯು ಏನಾಗಿರಬಹುದು? ಗುಲಾಮುಹುಸೇನನ ಝನಾನೆಯಲ್ಲಿರಬಹುದೇ? ಅಹುದು; ಅದೇ ಝನಾನೆಯಲ್ಲಿ! ಆದರೆ ಮಾಲತೀ-ಅಗೋ-ಅಗೋ-ಆಂ? ಲಾಹೋರದಲ್ಲೀ? ಇಲ್ಲಿ, ಈ ಪೇಟೆಯಲ್ಲಿ ನೀನೇಕೆ?........"

ಅಷ್ಟರಲ್ಲಿ ಜ್ವರನ ತಾಪದ ಉತ್‌ಕ್ಷುಬ್ಧ ಗುಂಗಿನಲ್ಲಿ ಅದೇ ವಿಚಾರದ ಇಳುಕಲಿನಿಂದ ಬಾವಿಯಲ್ಲಿ ಬೀಳುವ ಹಾಗೆ ಆತನು ಕೆಳಗೆ, ತೀರ ಕೆಳಗೆ ಸರಿಯುತ್ತ ನಡೆದನು!

ಲಾಹೋರದ ಪೇಟೆಯಲ್ಲಿ ನಿಂತುಕೊಂಡಿದ್ದ ಮಾಲತಿಯನ್ನು ಆಕಸ್ಮಿಕವಾಗಿ ನೋಡುತ್ತಲೆ ಆತನು ಅವಳನ್ನು ಬಲವಾಗಿ ಅವಚಿಕೊಂಡು:—"ಮಾಲತೀ ಪ್ಯಾರೀ!" "ಓ! ಆವ ಪ್ಯಾರೇ ರಫೀಉದ್ದೀನ! ಮೇರೆಕೋ ಛೋಡಕೇ ಕಿಧರ ಗಯೇಥೇ ಪೀತಮ ಆಜತಕ?"

ಕುತ್ತಿಗೆಯ ಮೇಲೆ ಕುತ್ತಿಗೆಯಿರಿಸಿ ಮಾಲತಿಯು ಹೇಗೆ ಆತನನ್ನು ತನ್ನ ಬಂಗ್ಲೆಯೊಳಗೆ ಒಯ್ದಳು, ಹೇಗೆ ಬಾಗಿಲು ಮುಚ್ಚಿಕೊಂಡಳು, ಆತನ ಎಲ್ಲ ಅರಿವೆಗಳನ್ನು ಹೇಗೆ ಬಿಚ್ಚಿಟ್ಟಳು; ಮತ್ತು ಇಷ್ಟರಲ್ಲಿ ಅಲ್ಲಿದ್ದ ಒಂದು ದೊಡ್ಡ ಪೆಟ್ಟಿಗೆಯೊಳಗಿಂದ ಖಡಲ್ಲೆಂದು ಕತ್ತಿ ಹಿರಿದು ಕಿಶನನು ಹೇಗೆ ಹೊರಬಿದ್ದನು? ಅಬ್ಬಬ್ಬ! ಘಾತವು-ಘಾತವು. ಈ ದುಷ್ಟ ಸ್ತ್ರೀಯು

ಘಾತ ಮಾಡಿದಳು! ಈ ಕೊಲೆಗಡಕನ, ಈ ಕಿಶನನ ಕೈಗೆ ನನ್ನನ್ನು ಒಪ್ಪಿಸಿದೆ ಯೇನು? ಚಂಡಾಲಿನೀ, ಮಾಲತೀ, ರಕ್ಕಸೀ!

'ಚೂಪ ರಕ್ಕಸಾ! ಕಿಶನ, ಬಿಗಿ ಈತನನ್ನು ಆ ತಿಗಡಿಗೆ! ಕಟ್ಟು. ನನ್ನ ತ್ವೇಷದ ಇತ್ತ ನೋಡು, ನಾನೊಂದು ಬಲವಾದ ಮುರಿಗೆಯ ಚಿತ್ರ ಮಾಡಿರುತ್ತೇನೆ. ನೀನು-ಕಿಶನ! ಯಾತರ ಮೇಲೆ ಈತನು ನನ್ನೊಡನೆ ಕೂಡ್ರಬೇಕೆಂದಿದ್ದನೋ, ಅದೇ ಈ ಮಂಚದ್ದೇ ತಿಗಡಿಯನ್ನು ಮಾಡು!'....

ಆ ಪಲ್ಲಂಗವೇ ಅಕಸ್ಮಾತ್ತಾಗಿ ತಿಗಡಿಯಾಯಿತು. ಮಾಲತಿಯ ತ್ವೇಷ ವೇ ಭಯಂಕರವಾದ ಚಿತ್ರವಾಯಿತು ಮಾತು ಮಾತಾಡುತ್ತಿರಲಿಕ್ಕೆ ಮಾಲ ತಿಯು ಕೂದಲು ಹರವಿದ್ದ, ಸಿಂಧೂರವನ್ನು ಹಣೆಗೆ ಬಡಕೊಂಡಿದ್ದ, ಕೆಂಪು ನೆತ್ತರದಂತಹ ನಾಲಿಗೆಯನ್ನು ಹಾವಿನಹಾಗೆ ಹೊರಗೆ ಚಾಚುತ್ತಿದ್ದ ಯಾವ ಳೊಬ್ಬ ವಿಕರಾಳ ಸೆಟವಿಯಾದಳು! ಕಿಶನನು ರಫೀಉದ್ದೀನನನ್ನು ತಿಗಡಿಯ ಮೇಲೆ ಚನ್ನಾಗಿ ಬಿಗಿದನು; ಮತ್ತು ಮಾಲತಿಯ ತ್ವೇಷದ ಆ ಚಿತ್ರವನ್ನು ಆವನು ತಿರುತಿರುವಿ ರಫೀ ಉದ್ದೀನನ ಬೆನ್ನ ಮೇಲೆ ನೆತ್ತರದ ಕಾರಂಜಿಯನ್ನು ಹರಿಸುವಂತಹ ಒಂದೇ ಒಂದು ಭಯಂಕರ ಘಟಕೆಯನ್ನು ಹೊಡೆದನು!

"ಅಯ್ಯಯ್ಯೋ! ಅಯ್ಯಯ್ಯೋ! ಕಾಲಿಗೆ ಬೀಳುತ್ತೇನೆ, ಬಿಡು, ಮಾ ಲತೀ, ಬಿಟ್ಟುಬಿಡು! ಅಯ್ಯಯ್ಯೋ! ಮೆತ್ತಗೆ! ಮಾಲತೀ, ಕ್ಷಮೆ-ಕ್ಷಮೆ-ಕ್ಷಮೆ!"

........ಆದರೆ ಮಾಲತಿಯು ಆ ರಕ್ತಚಿಮ್ಮುವ ಮುಳ್ಳುಘಟಕೆಗಳನ್ನು ಎಣಿಸುತ್ತ ಹಾಗು ಹೊಡೆಯುತ್ತಲೇ ಸಾಗಿದಳು!........

"ಮೂರು-ನಾಲ್ಕು-ಐದು-ಐವತ್ತು-ನೂರು—!!!

ವಾಯುವಿನ ಲಹರಿಯಲ್ಲಿ ರಫೀ ಉದ್ದೀನನೂ ಆಗ ಸ್ವತಃ ಅಂದ ನೇನಂದರೆ, "ನೂರು!"

—

## ೧೩ನೇ ಪ್ರಕರಣ.

"ಉಷಾ! ಏ ಉಷಾ! ಏನೇ, ಇಂದು ಮಾತಾಡುವುದಿಲ್ಲೇಕೆ? ಅತ್ತ ಮನೆಯಲ್ಲೇನು ಮಾಡುತ್ತಿರುವೆ? ಬಾ, ಇತ್ತ ಬಾ."

ಮೂರಿಪ್ಪತ್ತು ಮೀರಿದ, ಆದರೆ ಇನ್ನೂ ಸಶಕ್ತನೂ ಗಂಭೀರಧ್ವನಿ ಯುವನೂ ಆದ ಒಬ್ಬ ಮನುಷ್ಯನು ತನ್ನದೊಂದು ಸಾಧಾರಣವಾದ ಹಂಚಿನ ಮನೆಯ ಮುಂದೆ ಸಾರಿಸಿ ಸ್ವಚ್ಛಪಡಿಸಿದ ಅಂಗಳದಲ್ಲಿಯ ಮಂಚದ ಮೇಲೆ ಬಂದು ಕೂಡ್ರುವಾಗ ತನ್ನ ಒಬ್ಬ ಏಳೆಂಟು ವರ್ಷದ ಚಿಕ್ಕ ಮೊಮ್ಮಗಳನ್ನು ರಮಿಸಿ ರಮಿಸಿ ಕರೆಯುತ್ತಿದ್ದನು. ಮಧ್ಯಾಹ್ನದ ಎರಡು-ಮೂರು ಗಂಟೆಗೆ

ಆ ಅಂಗಳದಲ್ಲಿ ನೆಳಲು ಬಿದ್ದ ಕೂಡಲೆ, ಆತನು ಇತ್ತೀಚೆಗೆ ಆ ಮಂಚದ ಮೇಲೆ ಕೂಡ್ರುತ್ತಿದ್ದನು. ಹೊಲಗಳೊಳಗಿನ ಕೆಲಸಗಳನ್ನೆಲ್ಲ ತೀರಿಸಿ ಹೊತ್ತು ಹೊರಳುವ ಕಾಲಕ್ಕೆ ದನ-ಕರುಗಳು ಹಿಂದಿರುಗುವಾಗ, ಹುಡುಗರು ಶಾಲೆ ಯಿಂದಲೂ ಆತನ ಸೊಸೆಯು-ಆತನ ಆ ಮೊಮ್ಮಕ್ಕಳ ತಾಯಿಯು-ತನ್ನ ನೌಕರಿಯಿಂದಲೂ ತಿರುಗಿ ಬರುವವರೆಗೂ ಆ ಮುದುಕನು ಆ ಮಂಚದ ಮೇಲೆ ಯಾವಾಗ ಹೀಗೆ ಕೂಡ್ರುವನೋ, ಆಗ ಆತನ ಜೊತೆಗಾರರೆಂದರೆ, ಆತನದೊಂದು ಚಂಚಿಯೂ ಆತನ ಇಬ್ಬರು ಚಿಕ್ಕಮೊಮ್ಮಕ್ಕಳೂ-ಉಷೆಯೂ ಆಕೆಯ ಹಿರಿಯ ಅಣ್ಣನಾದ ಸುಮಾರು ಹನ್ನೆರಡು ವರ್ಷದ ಮೋಹನನೂ-ಆಗಿದ್ದರು. ಅವರಿಗೆ ಏನಾದರೂ ಕಲಿಸುತ್ತ, ಕೆಲವು ಕಥೆ ಹೇಳುತ್ತ, ನಡುವೇ ಎದುರಿಗಿನ ಹೂವಿನ ಗಿಡಗಳಿಗೆ ತೊಟ್ಟಿಯಿಂದ ನೀರು ಎರಚುತ್ತ ಇಲ್ಲವೆ ಚಿಗಿತು ಹೂ-ಕಾಯಿ ಬಿಟ್ಟ ಮಾವು-ಹಲಸಿನ ದಿನಗಳಲ್ಲಿ ಅಂಗಳಕ್ಕೆ ಹೊಂದಿ ಇದ್ದ ತೋಟದೊಳಗಿನ ಆಯಾ ಗಿಡಗಳನ್ನು ಕಾಯುತ್ತ ಆ ಮುದುಕನು ಅಲ್ಲಿ ಗುಂಗಾಗಿ ಹೋಗುತ್ತಿದ್ದನು

ಆತನ ಮನೆಯ ಅಕ್ಕಪಕ್ಕಗಳಲ್ಲಿ ಸುಮಾರು ಮೂವತ್ತು-ನಾಲ್ವತ್ತು ಅಂಥ ಮನೆಗಳೂ ಹಾಗು ಅವುಗಳಿಗಿಂತಲೂ ಸಾಮಾನ್ಯವಾದ ಗುಡಿಸಿಲು-ಚಪ್ಪರಗಳೂ ಸೇರಿ ಅದೊಂದು ಹಳ್ಳಿಯೇ ನೆಲೆಸಿದ್ದಿತು. ಆ ಹಳ್ಳಿಯು ಅಂಡ ಮಾನದಲ್ಲೇ ಇದ್ದರೂ ಕೊಂಕಣಪ್ರಾಂತದೊಳಗಿನ ಯಾವುದೊಂದು ಹಳ್ಳಿಯೇ ಆದಾಗಿದ್ದಿತು! ಯಾಕಂದರೆ ಒಟ್ಟಿನಲ್ಲಿ ಅಂಡಮಾನವೆಂಬುದು ಪೂರ್ವ ಸಮುದ್ರದೊಳಗಿನ ಒಂದು ಪ್ರತಿ ಕೊಂಕಣಪ್ರಾಂತವೇ ಆಗಿದೆ. ಗಿಡಗಳು, ಋತುಗಳು, ಪಕ್ಷಿಗಳು, ಮಳೆ-ಬೆಳೆಗಳು ಇವೆಲ್ಲವೂ ಕೊಂಕಣ ಪದ್ಧತಿಯವೇ ಆಗಿವೆ! ಪಶ್ಚಿಮ ಸಮುದ್ರದ ಬದಿಯ ಕೊಂಕಣ ಪ್ರಾಂತವನ್ನು ಕಿತ್ತೊಯ್ದು ಪೂರ್ವ ಸಮುದ್ರದ ಹತ್ತರ ಹಿಡಿದರೆ, ಆ ಪೂರ್ವ ಸಮುದ್ರದ ದಂಡೆಯಲ್ಲಿ ಆಗ ಯಾವ ಪ್ರತಿಬಿಂಬವು ಬಿದ್ದೀತೋ, ಕೇವಲ ಅದರಂತೆಯೇ ಆ ಅಂಡಮಾನ ವಿರುತ್ತದೆ! ಕೊಂಕಣದೊಳಗಿನ ಅಡವಿ-ಕಾನನಗಳನ್ನು ಕಡಿದು ಮನುಷ್ಯನು ಇದುವರೆಗೆ ಯಾವ ವಿಶೇಷ ಕಾಯಾಪಲ್ಲಟ ಮಾಡಿರುವನೋ, ಬಹುಮಟ್ಟಿಗೆ ಅಷ್ಟೇ ಹೆಚ್ಚು ಕಡಿಮೆಯು.

"ಉಷಾ! 'ಓ' ಕೂಡ ಏಕನ್ನುವದಿಲ್ಲೇ? ಮೋಹನಾ, ಉಷೆಯು ಎಲ್ಲಿ ರುವಳಪ್ಪಾ?" ಆ ಮುದುಕನು ಮತ್ತೆ ಕೇಳಿದನು.

"ಅವಳು ಇಲ್ಲಿಯೇ ಗೊಂಬೆಯೊಡನೆ ಆಡುತ್ತಿದ್ದಾಳೆ. ತಾನು ಇಂದು ಅಪ್ಪಾಜಿಯ ಮೇಲೆ ಸಿಟ್ಟಾಗಿರುತ್ತೇನೆನ್ನುವಳು" ಎಂದು ಮೋಹನನು ಮನೆ

ಯೊಳಗಿಂದಲೇ ಹೇಳಿದನು.

"ಅದೇಕಪ್ಪಾ? ನನ್ನಿಂದ ಅದಾವ ಅಪರಾಧ ಘಟಿಸಿತು? ಅದಿರಲಿ. ಮೋಹನ, ನೀನೇ ಬಾರಪ್ಪಾ ಇತ್ತಕಡೆಗೆ. ಒಳ್ಳೇ ಹಣ್ಣಾದ ಎಲೆಗಳ ವೀಳ್ಯವನ್ನು ಈ ದಿನ ನಾನು ಉಷೆಗೆ ಕೊಡತಕ್ಕವನಿದ್ದೇನೆ; ಅವಳು ಸಿಟ್ಟಾಗಿದ್ದರೆ, ನೀನೇ ಅದನ್ನು ತಕ್ಕೊಂಡು ಬಿಡು. ಹೂಂ ಹಿಡಿ."

ಆ ವೃದ್ಧ ಅಪ್ಪಾಜಿಯು ಆ ಆಮಂತ್ರಣವನ್ನು ಸ್ವೀಕರಿಸಿ, ಮೋಹನನು ಆ ಕೂಡಲೆ ಓಡಿ ಬಂದನು. ಮೋಹನನು ಇನ್ನು ಆ ತಾಂಬೂಲವನ್ನೆತ್ತಿ ಹಾಕುತ್ತಾನೆಂಬದನ್ನು ಕಂಡು, ಗೊಂಬೆಯನ್ನು ಚೆಲ್ಲಿಕೊಟ್ಟು, ಉಷೆಯೂ ಮೆಲ್ಲನೆ ಎದ್ದಳು. ಬಾಗಿಲ ಬಳಿಗೆ ಬಂದಳು; ಆದರೆ ತೀರ ಶರಣು ಹೋಗುವದು ಜೀವದ ಮೇಲೆ ಬರಲು, ಬಾಗಿಲದೊಳಗಿಂದಲೆ ತನ್ನ ಮುದ್ದು ಮೊಗವನ್ನಷ್ಟು ಹೊರಗೆ ದೋರಿ, ತನ್ನ ವಕೀಲನು ತಾನೇ ಆಗಿ, ಅವಳು ಸಿಟ್ಟಿನ ದನಿಯಲ್ಲಿ:—

"ಅಪ್ಪಾ, ನಾನು ನಿಮ್ಮ ಮೇಲೆ ಸಿಟ್ಟಾಗಿರುತ್ತೇನರೀS!"

"ಎಲ! ಅದೇಕೆಂಬದನ್ನು ಹೇಳಬಾರದೆ? ಈ ಅರಿಷಿನ ಬಣ್ಣದ ಸುಂದರ ತಾಂಬೂಲವು ನಿನಗೆ ಬೇಕಿಲ್ಲವಷ್ಟೇ?"

"ಬೇಕು; ಆದರೆ ಅಲ್ಲಿಂದಲೇ ಮೋಹನನೊಡನೆ ನನಗೆ ಕಳಿಸಿ ಕೊಡಿರಿ. ನಾನು ನಿಮ್ಮ ಹತ್ತರ ಬರಲಾರೆನು. ಅಲ್ಲಿಗೆ ನಾನು ಬಂದ ಕೂಡಲೆ ನೀವು ನಿನ್ನೆಯಂತೆ ನನ್ನ ಮುದ್ದು ತಕ್ಕೊಳ್ಳುವವರು. ನನ್ನ ಗಲ್ಲಕ್ಕೆ ನಿಮ್ಮ ಮೀಸೆಗಳು ಚುಚ್ಚುವದಿಲ್ಲೇನು? ನೀವು ಬೇಕಂತಲೇ ಅವುಗಳನ್ನು ನನ್ನ ಗಲ್ಲಕ್ಕೆ ಹತ್ತೊತ್ತಿ ಚುಚ್ಚುತ್ತೀರಿ. ಬೇಕಾಗಿದ್ದರೆ ನೀವೇ ಇಲ್ಲಿಗೆ ವೀಳ್ಯವನ್ನು ಕಳಿಸಿ ಕೊಡಿರಿ." ಹೀಗೆಂದು ಉಷೆಯು ತನ್ನ ಒಪ್ಪಂದದ ಕರಾರು ತಿಳಿಸಿದಳು.

"ನನ್ನದೇನೂ ತಟಿದು ನಿಂತಿಲ್ಲ! ಯಾರಿಗೆ ವೀಳ್ಯವು ಬೇಕಿದ್ದೀತೋ, ಅವರು ಮುದ್ದು ಕೊಟ್ಟಾರು! ಒಂದು ವೇಳೆ ಮೀಸೆ ಚುಚ್ಚದಂತೆ ಮುದ್ದು ತಕ್ಕೊಂಡರೆ ಕೊಡುತ್ತೀಯೇನು?" ಅಪ್ಪಾಜಿಯು ಒಪ್ಪಂದದ ವಿರುದ್ಧ ಪಕ್ಷದ ಕರಾರು ತಿಳಿಸಿದನು.

ಆ ವಿರುದ್ಧದ ಕರಾರಿಗೆ ಅವಳು ಬಾಯಿಂದ ಸಮ್ಮತಿಯನ್ನು ಕೊಡದಿದ್ದರೂ, ಒಂದೊಂದೇ ಹೆಜ್ಜೆಯನ್ನು ನೆಲದ ಮೇಲೆ ಜಾರಿಸುತ್ತ ಜಾರಿಸುತ್ತ ಆದರೆ ಅಲ್ಲಿಗೆ ಬರುವ ಮನಸ್ಸಿಲ್ಲದವಳಂತೆ ಉಷೆಯು ಮೆಲ್ಲ ಮೆಲ್ಲನೆ ತಮ್ಮಜ್ಜನ ಹತ್ತರ ಬರಹತ್ತಿದಳು. ಹೀಗೆ ಮೋಜಿನಿಂದ ಅವಳೊಮ್ಮೆ ಅಜ್ಜನ ಕೈಪಾಡಿಗೆ ಬರಲು, ನಗುನಗುತ್ತಲೆ ಅವಳನ್ನು ಹತ್ತರ ಎಳೆದುಕೊಂಡು, ಪದ್ಧತಿಯ

ಮೋರೆಗೆ ಒಂದು ಸಿಹಿಯಾದ ಮುದ್ದಿನ ಕಪ್ಪವನ್ನು ತಕ್ಕೊಂಡ ನಂತರ ಒಂದು ವೀಳ್ಯವನ್ನು ಉಷೆಗೂ ಒಂದು ವೀಳ್ಯವನ್ನು ಮೋಹನನಿಗೂ ಕೊಟ್ಟು, ಆ ಇಬ್ಬರೂ ಅಚ್ಛದ ಮೊಮ್ಮಕ್ಕಳನ್ನು ತನ್ನ ಎಡ-ಬಲಗಳಲ್ಲಿ ಕೂಡ್ರಿಸಿ ಕೊಂಡು, ಸ್ವಂತದ ಬಾಯೊಳಗೆ ಹಾಕಿಕೊಳ್ಳಲಿಕ್ಕೆಂದು ತಂಬಾಕವನ್ನು ಕೈಯಲ್ಲಿ ತಿಕ್ಕಹತ್ತಿದನು.

ಉಷೆಯ ವೀಳ್ಯವು ಆಕೆಯ ಬಾಯಲ್ಲಿ ನುರಿತು ಅದು ಹೇಗೆ ಹೇಗೆ ರುಚಿ ಹತ್ತಹತ್ತಿತೋ, ಹಾಗೆ ಹಾಗೆ ಆಕೆಯು ಸುಪ್ರಸನ್ನಳಾಗಿ ತೋರಹತ್ತಿದಳು. ಆಕೆಯು ತಾನಾಗಿಯೇ ಅಜ್ಜನ ತೊಡೆಯ ಮೇಲೆ ಯಾವಾಗ ಕುಳಿತಳೋ, ಮತ್ತು ನಗುನಗುತ್ತ ಅವನೊಡನೆ ಗುಲುಗುಲು ಮಾತಾಡಹತ್ತಿದಳೋ ಅದು ಅವಳ ಧ್ಯಾನದಲ್ಲಿ ಕೂಡ ಬರಲಿಲ್ಲ. ಉಷೆ ಮತ್ತು ಮೋಹನ ಇವರಿಬ್ಬರೂ ಹುಡುಗರು ಒಳ್ಳೇ ಮೋಹಕ, ಆಟಗುಳಿ, ವಾಕ್ಚತುರ ಮತ್ತು ತೇಜಃಪುಂಜ ರಾಗಿದ್ದರು.

ಇಷ್ಟರಲ್ಲಿ ಎದುರಿಗಿನ ಒಂದು ದಿನ್ನೆಯ ಮೇಲಿಂದ ಒಬ್ಬ ಮನುಷ್ಯನು ಇಳಿಯುತ್ತಿರುವದನ್ನು ಕಂಡು ಮೋಹನನು ಚಪ್ಪಾಳೆ ಬಡಿದು:-"ಅಪ್ಪಾಜಿ, ಅಪ್ಪಾಜಿ, ಕಂಟಕಬಾಬುಗಳು ಬರುತ್ತಿರುವರು. ಅತ್ತ ನೋಡು, ಕಂಟಕ ಬಾಬುಗಳನ್ನು."

ಉಷೆಯು ಅದಕ್ಕೆ ಅನುಮೋದಿಸಿ:—"ಅಹುದೋ ಅಹುದು; ಅವರು ಕಂಟಕಬಾಬುಗಳೇ ಅಹುದು!"

ಅಪ್ಪಾಜಿಯವರು ಆಗ ಹತ್ತಿರದಲ್ಲೇ ಬಿದ್ದಿದ್ದ ಕಲಕತ್ತೆಯ ಒಂದು ಹಿಂದೀ ವೃತ್ತಪತ್ರವನ್ನೋದುತ್ತಿದ್ದರು. ಅದನ್ನು ಬದಿಗೆ ಸರಿಸಿ, ದೃಷ್ಟಿ ಯನ್ನು ದಿಟ್ಟಿಸಿ ದಿಟ್ಟಿಸಿ ನೋಡಹತ್ತಿದರು; ಆದರೆ ಅವರ ಕಣ್ಣಿಗೆ ಚೆನ್ನಾಗಿ ಕಾಣಿಸಲಿಲ್ಲ. ಬೇರೆ ಯಾರೋ ಬರುತ್ತಿರುವರೆಂದು ಅವರಿಗೆ ಭಾಸವಾಯಿತು. ಆದರಿಂದ ಅವರು:—"ಅವರು ಕಂಟಕಬಾಬುಗಳಲ್ಲ. ನೀವು ಏನಾದರೂ ಸುಮ್ಮನೆ ಕೂಗಿಕೊಳ್ಳುತ್ತಿರುವಿರಿ."

ಅವರ 'ನ'ಕಾರವು ರುಚಿಸದ್ದರಿಂದ ಉಷೆಯು:—"ಅಪ್ಪಾಜಿ, ಅವರು ಕಂಟಕರೇ. ನಿಮಗೆ ಚೆನ್ನಾಗಿ ಕಾಣಿಸದಿದ್ದರೆ, ನನ್ನ ಕಣ್ಣೊಳಗಿಂದ ನೋಡಿರಿ. ಇಕೋ, ನೋಡಿರೆಂದರೆ, ನನ್ನ ಕಣ್ಣೊಳಗಿಂದ ನೋಡಿಕೊಳ್ಳಿರಿ!"

ಹೀಗೆಂದು ಹೇಳಿ, ಅವಳು ತನ್ನ ಪುಟ್ಟ ತಲೆಯನ್ನು ಅಪ್ಪಾಜಿಯ ಮೋರೆಯಹತ್ತರ ಹಿಡಿದಳು. ಅವರ ಕಣ್ಣಿಗೆ ತನ್ನ ಕಣ್ಣುಗಳನ್ನು ಹೊಂದಿಸ ಬೇಕೆಂದು ಅವಳು ಅವರ ತೊಡೆಯ ಮೇಲೆ ಕುಳಿತಳು. ತನ್ನ ಮೃದು ಕೂದಲು

ಗಳಿಂದ ಆಚ್ಛಾದಿತವಾದ ತಲೆಯ ಹಿಂಭಾಗವನ್ನು ಅವರ ಮೋರೆಯ ಮೇಲೆ ಆನಿಸಿ, ಅವರ ಕಣ್ಣೆದುರಿಗೆ ತನ್ನ ಕಣ್ಣು ಬರುವ ಹಾಗೆ ಕುಳಿತು, ಆ ಪುಟ್ಟ ಉಷೆಯು ಒಳ್ಳೆ ಒತ್ತಾಯದಿಂದ ಹೇಳಹತ್ತಿದಳೇನಂದರೆ:—"ಅಪ್ಪಾಜಿ, ಈಗ ನೋಡಿರಿ, ನನ್ನ ಕಣ್ಣುಗಳಿಂದ! ಕಂಡಿತೇ? ಹೀಗಾದರೆ ಕಾಣುವದೇ? ಈಗ ಕಂಡಿತೇ ಚೆನ್ನಾಗಿ?" ಆವಳಿಗೆ ಅದೊಂದು ಆಟವೇ ಆಗಿಬಿಟ್ಟಿತು.

ಆ ತಿಳಿಗೇಡಿ ಹುಡುಗರ ಆಟದೊಳಗಿನ ಮೋಜಿನ ವಿರಸವಾಗಬಾರದೆಂದು ಅಜ್ಜನಾದರೂ ಆ ತನ್ನ ಚಿಕ್ಕ ಮೊಮ್ಮಗಳ ಆ ಕುಂತಲ ಮೃದುಲ ಮಸ್ತಕವನ್ನು ತನ್ನ ಕಣ್ಣ ಮುಂದೆ ಯಾವುದೊಂದು ದುರ್ಬೀಣು ಧರಿಸುವಂತೆ ಗಂಭೀರತನದಿಂದ ಹಿಡಿದು, ಆಕೆಯ ಕಣ್ಣುಗಳೊಳಗಿಂದ ದಿಟ್ಟಿಸಿ ನೋಡಿದಂತೆ ಮಾಡಿ, ಏನೇನು ಕಾಣುತ್ತದೆಂಬದನ್ನು ಹೇಳಹತ್ತಿದನು:—"ಉಷೆ, ದಿಟವಾಗಿಯೂ ನಿನ್ನ ಕಣ್ಣುಗಳೊಳಗಿಂದ ನನಗೆ ಬಹು ಚೆನ್ನಾಗಿ ಕಾಣಹತ್ತಿರುತ್ತದೆ! ಅದು ನೋಡು, ಕಂಟಕಬಾಬುಗಳೇ ಅತ್ತ ಬರುತ್ತಿರುವರು; ಮತ್ತು ಅತ್ತ ನೋಡು, ಆ ನನ್ನ ಪುಟ್ಟ ಉಷೆಯು ಯಾವಳೊಬ್ಬ ಸೂಕ್ಷ್ಮ ಹಾಗು ತಿಳುವಳಿಕೆಯುಳ್ಳ ಹುಡುಗೆಯಂತೆ ತನ್ನ ಪಾಟಿ-ಪೆನ್ಸಿಲ್ಲುಗಳನ್ನೂ ಒಂದನೇ ಪುಸ್ತಕವನ್ನೂ ತಕ್ಕೊಂಡು ಕಲಿಯಲಿಕ್ಕೆ ಹೇಗೆ ಕೂಡ್ರುತ್ತಿದ್ದಾಳೆ? ನೋಡು. ಆ ನನ್ನ ಮೋಹನನು ಪಾಠ ಓದಹತ್ತಿದನು. ನೋಡು, ನನಗೆ ನಿನ್ನ ಕಣ್ಣೊಳಗಿಂದ ಎಷ್ಟು ಚೆನ್ನಾಗಿ ಕಾಣುತ್ತಿದೆಯೆಂಬದನ್ನು? ಇನ್ನು ಇದೆಲ್ಲ ಕೇವಲ ಅದರಂತೆಯೇ ನಿಜವಾಗಲಿಕ್ಕೆಬೇಕು ನೋಡು; ಇಲ್ಲದಿದ್ದರೆ ನಿನ್ನ ಕಣ್ಣೊಳಗಿಂದ ಏನಾದರೂ ಸುಳ್ಳು ಸುಳ್ಳೇ ಕಾಣುತ್ತದೆಂದು ನಾನು ಅಂದೇನು. ಹಾಗಾದರೆ ಇನ್ನು ಬಿಟ್ಟೇಬೇಸರ ಮಾಡದೆ, ಕಂಟಕ ಬಾಬುಗಳ ಹತ್ತರ ಕಲಿಯಲಿಕ್ಕೆ ಕೂಡ್ರುವೆಯಲ್ಲವೇ?"

"ಹೂಂ. ಕಲಿಯಲಿಕ್ಕೆ ಕೂಡ್ರುತ್ತೇನೆ; ಆದರೆ..........!" ಉಷೆಯು ಕೊಂಚ ಅಸಂತುಷ್ಟ ಮುದ್ರೆಯಿಂದ ಹೇಳಹತ್ತುತ್ತಾಳೆ:—"ಆದರೆ ನಾನು ನಿನ್ನ ಬಳಿಯಲ್ಲೇ ಕೂಡ್ರುವೆನು. ಕಂಟಕಬಾಬುಗಳ ಹತ್ತರ ಕೂಡ್ರಲಾರೆನು."

"ಅದೇಕೆ? ಅವರು ನಿಮ್ಮೊರ್ವರಿಗೂ ಅದೆಷ್ಟು ಚೆನ್ನಾಗಿ ಕಲಿಸುತ್ತಾರೆ! ಅವರು ಒಳ್ಳೇ ಗುರುಗಳಾಗಿದ್ದು, ಬಹು ಚೆನ್ನಾಗಿರುತ್ತಾರೆ."

"ಇಶ್ಯ! ಅವರೇನು ಚೆನ್ನಾಗಿರುವರು? ಅಪ್ಪಾಜಿ! ಅವರಿಗೆ ನಿಜವಾಗಿ ಅಂದರೆ, ನಿಜವಾಗಿಯೂ ಏನೂ ಬರುವದಿಲ್ಲ."

"ಅದು ಹೇಗೆ? ಕಂಟಕ ಬಾಬುಗಳಿಗೆ ಏನೂ ಬರುವದಿಲ್ಲವೆ? ಮತ್ತು ಅದು ನಿನಗೆ ಹೇಗೆ ತಿಳಿಯಿತು?"

"ಏನರೀ, ಅದರಲ್ಲೇನು ತಿಳಿಯುವದು? ಸ್ಪಷ್ಟವಾಗಿಯೇ ಕಾಣಿಸು ತ್ತದೆ ನನಗದು! ಇಷ್ಟೇಅಲ್ಲ, ಅಪ್ಪಾಜೀ, ಆ ಕಂಟಕ ಗುರುಗಳು ನಮ್ಮ ಮೋ ಹನನಿಗೂ ನನಗೂ ಎಲ್ಲವನ್ನೂ ಕೇಳಿಕೊಳ್ಳುತ್ತಾರೆ. ತಮಗೆ ನೆನಪಾಗದಾಗಲು ಕಲಕತ್ತೆಯು ಎಲ್ಲಿರುತ್ತದೆಂದು ಮೋಹನನಿಗೆ ಕೇಳುತ್ತಾರೆ. ಮುಂಬಯಿ ಎಲ್ಲಿದೆ, ಇಂಗ್ಲಿಷಿನಲ್ಲಿ ಅವ್ವನಿಗೆ ಏನೆನ್ನುತ್ತಾರೆ, ಬೆಕ್ಕಿಗೆ ಏನೆಂದು ಕರೆಯು ತ್ತಾರೆ? ಎಂದು ಆತನನ್ನು ಕೇಳುವದಲ್ಲದೆ, ನನ್ನನ್ನು ಎರಡು ಎಂಟಲೆ ಏನು? ಮೂರು ಹತ್ತಲೆ ಏನು? ಹೀಗೆ ಹಗಲೆಲ್ಲ ಕೇಳುತ್ತಿರುತ್ತಾರೆ. ಅವರಿಗೆ ಅದೆಲ್ಲ ಬರುತ್ತಿದ್ದರೆ, ನಮಗೇಕೆ ಕೇಳುತ್ತಿದ್ದರವರು ಅದನ್ನೆಲ್ಲ? ಅಪ್ಪಾಜೀ, ಅವರಿಗೆ ಮಗ್ಗಿಗಳು ಕೂಡ ಬರುವದಿಲ್ಲ!"

"ಭಲೆ! ಭಲೆ! ಹುಚ್ಚಿಯೋ ಹುಚ್ಚಿ!" ಎಂದು ಆಕೆಯನ್ನು ರೇಗಿಗೆಬ್ಬಿ ಸುತ್ತ, ಮೋಹನನು ಗಟ್ಟಿ ಗಟ್ಟಿಯಾಗಿ ನಗಹತ್ತಿದನು. ಅಜ್ಜನಿಗೂ ನಗೆ ಬಂದಿತು. ಉಷೆಯು ಸಿಟ್ಟುಬೆಂಕಿಯಾದಳು.

ಆದರೆ ಇಷ್ಟರಲ್ಲಿ ಕಂಟಕ ಬಾಬುಗಳು ಅಂಗಳದಲ್ಲಿ ಬಂದರು; ಮತ್ತು ದಿನದಂತೆ ಹುಡುಗರಿಗೆ ತಿನಿಸೆಂದು ತಂದ ಮಿಠಾಯಿಯ ಪುಡಿಕೆಯು ಅವರ ಕೈಯಲ್ಲಿ ಇದ್ದದ್ದನ್ನು ಕಂಡು, ಸಿಟ್ಟಿನಿಂದ ತಪ್ತವಾದ ಉಷೆಯ ವಾತಾವರ ಣವು ಅಷ್ಟರಲ್ಲೇ ಶಾಂತವಾಯಿತು. ಉಷೆಯ ಲಕ್ಷ್ಯವು ಆ ಪುಡಿಕೆಯ ಕಡೆಗೆ ವೇಧಿಸಲು, ಆಕೆಯು ನಗೆಮೊಗದಿಂದಲೇ ಕಂಟಕಬಾಬುಗಳ ಸ್ವಾಗತ ಕ್ಕಾಗಿ ಅವರೆಡೆಗೆ ನಡೆದಳು.

"ಏನು ಕಂಟಕಬಾಬುಗಳೇ" ಅಪ್ಪಾಜಿಯು ನಕ್ಕು "ಪರೀಕ್ಷೆಯಲ್ಲಿ ನಿಮ್ಮ ವಿದ್ಯಾರ್ಥಿಗಳು ನಿಮ್ಮನ್ನೇ ನಾಪಾಸ ಮಾಡಿರುತ್ತಾರರೀs!"

"ಅದು ಹೇಗೆ ಅಪ್ಪಾಜಿ?" ಕಂಟಕನು ಜಿಜ್ಞಾಸೆಯಿಂದ ಕೇಳಿದನು.

"ಏನರೀ, ನಿಮಗೆ ಮಗ್ಗಿಗಳು ಕೂಡ ಬರುವುದಿಲ್ಲೆಂದು ನಮ್ಮ ಉಷೆ ಯು ಹೇಳುತ್ತಾಳೆ. ನಿಮಗೆ ಬಾರದಿದ್ದನ್ನೆಲ್ಲ ನೀವೇ ಅವಳಿಗೆ ಎರಡು ಎಂಟಲೆ ಏನು; ಮೂರು ಹತ್ತಲೆ ಏನು? ಎಂದು ಕೇಳುತ್ತಿರುವಿರಂತೆ; ಮತ್ತು ಅವಳು ಹೇಳಿದ ಮೇಲೆಯೇ ನಿಮಗದು ಗೊತ್ತಾಗುತ್ತದಂತೆ! ಆಕೆಗೆ ಬರುವಷ್ಟು ಕೂಡ ನಿಮಗೆ ಬರುವುದಿಲ್ಲವಂತೆ!"

'ಹೀಗೆಯೋ?' ಕಂಟಕನಿಗೆ ಆ ಆಕ್ಷೇಪದ ಕೌತುಕವೆನಿಸಲು, ಆತನು ನಕ್ಕನು. "ಹಾಗೆಯೇ ಆಗಲಿ; ನಾನು ಈಗ ಯಾವ ಲೆಕ್ಕ ಹೇಳುವೆನೋ ಅದನ್ನು ಉಷೆಯು ಮಾಡಿದರೆ ಮಾತ್ರ ನಾನು ಅದನ್ನು ನಿಜವೆಂದು ಅಂ- ದೇನು ಉಷಾ, ನಿನಗೊಂದು ಲೆಕ್ಕ ಹೇಳಲೋ!"

"ಹೂಂ ಹೇಳಿರಿ. ಈಗ ಮಾಡಿಬಿಡುತ್ತೇನೆ ನೋಡಿರಿ; ಆದರೆ ಬರತಕ್ಕದ್ದನ್ನೇ ಹೇಳಬೇಕರೀಪ್ಪಾ!" ಈ ಕರಾರಿನ ಮೇಲೆ ಉಷೆಯು ಕಂಟಕ ಗುರುಗಳ ಆಹ್ವಾನವನ್ನು ಸ್ವೀಕರಿಸಿದಳು.

"ಹಾಗಾದರೆ ಹೇಳಲೊ? ಒಬ್ಬಳು ಮಾವಿನ ಹಣ್ಣಿನ ಒಂದು ಹೆಡಿಗೆ ತಂದಳು. ಅದಕ್ಕೆ ಅವಳು ಎರಡು ರೂಪಾಯಿ ಬೆಲೆ ಹೇಳಿದಳು. ಇನ್ನು ಆ ಮಾವಿನ ಹಣ್ಣುಗಳನ್ನು ಅರ್ಧ ಅರ್ಧ ಮಾಡಿ, ಅವುಗಳಿಂದ ಸಮನಾಗಿ ಎರಡು ಬುಟ್ಟಿಗಳನ್ನು ತುಂಬಿದೆವು. ತಿಳಿಯಿತೇ! ಅರ್ಧ ಅರ್ಧ ಮಾವಿನ ಹಣ್ಣುಗಳನ್ನು ಎರಡು ಬುಟ್ಟಿಗಳಲ್ಲಿ ತುಂಬಿದೆವು; ಆದರೆ ಆ ಎರಡು ಬುಟ್ಟಿಗಳಲ್ಲಿಯು ಪ್ರತಿಯೊಂದು ಬುಟ್ಟಿಗೆ ನೀನು ಏನು ಬೆಲೆ ಕೊಟ್ಟೀ? ಮೋಹನಾ, ನೀನೂ ಇದರ ಉತ್ತರ ಹೇಳು."

ಕೂಡಲೆ ಮೋಹನನು "ಪ್ರತಿಯೊಂದು ಬುಟ್ಟಿಗೆ ಒಂದೊಂದು ರೂಪಾಯಿ." ಎಂದು ಅಂದನು.

ಆಕುಂಚಿನ ನೇತ್ರಗಳಿಂದ ತುಸ ಹೊತ್ತು ವಿಚಾರ ಮಾಡಿದ ಬಳಿಕ, ಉಷೆಯು ಸಿಟ್ಟಿನಿಂದ ಹೇಳುತ್ತಾಳೆ:-"ನಾನು ಒಂದು ಪೈ ಕೂಡ ಕೊಡಲಾರೆನು ಆ ಪ್ರತಿಯೊಂದು ಬುಟ್ಟಿಗೆ" ಎಂದು ಅಂದಳು.

ಅಪ್ಪಾಜಿಯು:—"ಅದೇಕೇ ಉಷೆ?" ಎಂದು ಪ್ರಶ್ನೆ ಮಾಡಲು,

"ಅದೇಕೆಂದರೆ? ಸುಂದರವಾದ ಇಡೀ ಮಾವಿನಹಣ್ಣುಗಳು ಪೇಟೆಯಲ್ಲಿ ಬೇಕಾದಷ್ಟು ಸಿಗುತ್ತಿರಲಿಕ್ಕೆ, ಅರ್ಧ ಅರ್ಧ ಹೋಳಿಕೆ ಮಾಡಿದಂಥ ಆ ಹೊಲಸು ಹಣ್ಣುಗಳನ್ನು ಅದಾರು ಕೊಂಡುಕೊಂಡಾರಪ್ಪಾ!"

"ಮಾವಿನಹಣ್ಣು ಅರ್ಧ ಅರ್ಧ ಮಾಡಿ" ಈ ವಾಕ್ಯದ ಮೇಲೆ ತಿಳಿಯದ ಹಾಗೆ ಕೋಟಿ ಮಾಡಿ, ಉಷೆಯು ಹೀಗೆ ತೀರ ಅನಪೇಕ್ಷಿತವಾಗಿ ಉತ್ತರವಿತ್ತಳು!

ಆ ಹುಡುಗೆಯ ಅಜ್ಞಾನದ, ಆದರೆ ಸ್ವತಂತ್ರ ಬುದ್ಧಿಯ ಆ ಕಿಡಿಯನ್ನು ಕಂಡು, ಆ ತೀರ ಅನಪೇಕ್ಷಿತ ಉತ್ತರವನ್ನು ಕೇಳಿ, ಅಪ್ಪಾಜಿಯು ಉಷೆಯ ಬೆನ್ನ ಮೇಲೆ ಚಪ್ಪರಿಸಿ, ಕಂಟಕಬಾಬುಗಳಿಗೆ ಅನ್ನುತ್ತಾರೆ:—"ಏನು ಗುರುಗಳೇ! ನಮ್ಮ ಉಷೆಗೆ ಬರುವಷ್ಟು ಕೂಡ ನಿಮಗೆ ಬರುವದಿಲ್ಲೆಂಬದು ಚೆನ್ನಾಗಿ ಖಾತ್ರಿಯಾಯಿತಲ್ಲವೆ?"

"ತೀರ ಸತ್ಯವಾಯಿತು! ಮತ್ತು ನಮ್ಮ ಈ ಪುಟ್ಟ ವಿದ್ಯಾರ್ಥಿನಿಯು ಗುರುವಿಗೇ ಯಾವ ಪಾಠ ಕಲಿಸಿದಳೋ, ಅದಕ್ಕಾಗಿ ಗುರುವೇ ಈ ಶಿಷ್ಯಳಿಗೆ ಈ ಫೀಯನ್ನು ಕೊಡುವನು!" ಹೀಗೆಂದು ಕಂಟಕನು ಮಿಠಾಯಿಯ ಒಂದು

ಪುಡಿಕೆಯನ್ನು ಉಷೆಗೆ ಕೊಟ್ಟನು; ಇನ್ನೊಂದನ್ನು ಮೋಹನನಿಗೆ ಕೊಟ್ಟನು. ಅವನು ಇನ್ನು ಆ ಮಂಚದ ಮೇಲೆ ಕೂಡ್ರುತಕ್ಕವನು; ಆತನಿಗೆ ಸ್ಥಳಮಾಡಿ ಕೊಡುವ ಸಲುವಾಗಿ ಅಪ್ಪಾಜಿಯು ತುಸ ಸರಿಯ ಹತ್ತಿದರು. ಅಷ್ಟರಲ್ಲಿ ಅವರ ಮೊಣಕಾಲಲ್ಲಿ ನೋವು ಉಂಟಾಗಲು, ಅವರು "ಅವ್ವವ್ವಾ!" ಎಂದು ಗಟ್ಟಿಗಟ್ಟಿಯಾಗಿ ನರಳಹತ್ತಿದರು.

"ಏನು? ಒಮ್ಮೆಲೆ ಅಷ್ಟು ನೋವಾಯಿತೇ? ಕಾಲಿಗೆ ಏನಾಯಿತು?" ಎಂದು ಕಂಟಕನು ಅವಸರವಸರದಿಂದ ಕೇಳುತ್ತ, ಅಪ್ಪಾಜಿಯ ಕಾಲು ಒತ್ತ ಹತ್ತಿದನು.

"ಇಲ್ಲಿ, ಇಲ್ಲಿ, ಈ ಮೊಣಕಾಲಲ್ಲಿ" ಎಂದಂದು, ಅಪ್ಪಾಜಿಯು ಮೆಲ್ಲ ಮೆಲ್ಲನೆ ಮೊಣಕಾಲನ್ನು ಹಿಂದೆ ಮುಂದೆ ಮಾಡಿ, ಅವರು ಅದನ್ನು ಚಾಚುವ ಪ್ರಯತ್ನ ಮಾಡುತ್ತ ನರಳುತ್ತ:—"ಈ ಮೊಣಕಾಲಲ್ಲಿ ಕಳೆದ ಎರಡು ದಿನ ಗಳಿಂದಲೂ ಹೀಗೆಯೇ ಅಸಹ್ಯವಾದ ನೋವೇಳುತ್ತದೆ. ಕಾಲು ಚಾಚಿ ಕುಳಿ ತರೆ ಕೆಲಹೊತ್ತಿನಲ್ಲಿಯೇ ಕಡಿಮೆಯಾದೀತು. ಒಂದು ಬಹು ಪುರಾತನದ ಪೆಟ್ಟು ಅಲ್ಲಿ ಬಿದ್ದಿದ್ದಿದೆ! ಈಗ ಅಶಕ್ತತನವುಂಟಾಗಲು, ಅದು ಮತ್ತೆ ನೋವಾಗ ಹತ್ತಿದೆ?"

'ಹಳೇ ಪೆಟ್ಟೇ? ಅದೇತರದು" ಕಂಟಕನು ಜಿಜ್ಞಾಸೆಯಿಂದ ಕೇಳಿದನು.

"ಅದೇ? ಆ ಬಗ್ಗೆ ಒಂದು ಇತಿಹಾಸವೇ ಇದೆ! ಅದು ೧೮೫೭ನೇ ಸ್ವಾತಂತ್ರ್ಯ ಯುದ್ಧದಲ್ಲಿ ಇಂಗ್ಲಿಷರಿಂದ ನನಗೆ ಬಡಿದ ಗುಂಡಿನ ಪೆಟ್ಟಾಗಿದೆ; ಅಹುದು. ಇಂಗ್ಲಿಷರ ಗುಂಡಿನ ಪೆಟ್ಟೇ ಅದು! ಯಾಕಂದರೆ, ಆಗ ನಾನು ಬಂಡುಗಾರರ ವಶಿಯಿಂದ ಕಾದುತ್ತಿದ್ದೆನು. ನಾನೊಬ್ಬ ಬಂಡುಗಾರನಿದ್ದೆನು." ಮಾತು ಮಾತಾಡುತ್ತ ಎರಡನೇ ಕಾಲನ್ನು ಮಂಚದ ಮೇಲೆ ಇಟ್ಟು, ಅದರ ಮೇಲೆ ಭಾರ ಹಾಕಿ ನೆಟ್ಟಗೆ ಎದ್ದು ನಿಂತುಕೊಂಡು, ಎದೆಯನ್ನು ಸೆಟೆಸುತ್ತಿದ್ದ ಆ ಮುದುಕನು ಇರುವುದಕ್ಕಿಂತಲೂ ಹೆಚ್ಚು ಎತ್ತರಕಾಣುವಂತೆ ತೋರಹತ್ತಿ ದನು!

"ನೀವು ಬಂಡುಗಾರರಾಗಿದ್ದಿರಾ? ಆ ಬಂಡಿನಲ್ಲಿ ಇಂಗ್ಲಿಷರೊಡನೆ ಪ್ರತ್ಯಕ್ಷ ಕಾದಿದ್ದಿರಾ?" ಕಂಟಕನು ಈ ಪ್ರಶ್ನೆಗಳನ್ನು ಬಿಡಿಬಿಡಿಯಾಗಿ ಹೊಂದಿಸಿ ಕೇಳುತ್ತ, ಆ ವೃದ್ಧಪುರುಷನು ಗರ್ವದಿಂದ ಉಬ್ಬಿದ ತನ್ನ ಗೋ ಣನ್ನು ಸಮ್ಮತಿಗಾಗಿ ಕೊಂಚ ಅಲ್ಲಾಡಿಸುತ್ತಿರುವಾಗಲೇ ಆತನ ಕಡೆಗೆ ವಿಸ್ಮಯಪೂರ್ಣದೃಷ್ಟಿಯಿಂದ ನೋಡಹತ್ತಿದನು; ಮತ್ತು ಆ ದೃಷ್ಟಿಯಿಂದ ನೋಡುತ್ತಲೆ ಇದುವರೆಗೆ ಇದ್ದ ಆ ಸಾಧಾರಣ ಮುದುಕ ಮನುಷ್ಯನು ಕಂ-

ಟಕನಿಗೆ ಒಬ್ಬ ಸುರಿತ ಸೈನಿಕ, ಒಬ್ಬ ವಂದನೀಯ ವೀರ, ಒಬ್ಬ ಪೌರಾಣಿಕ ಯೋದ್ಧನಾಗಿ ತೋರಹತ್ತಿದನು.

ಕಂಟಕನು ಕ್ಷಣಕಾಲವೇ ಆ ವೃದ್ಧನ ಕಡೆಗೆ ವಿಸ್ಮಯಪೂರ್ಣ ಆದರದಿಂದ ನೋಡಿದ ಬಳಿಕ "ಅಪ್ಪಾಜಿ, ಇದನ್ನು ಇದುವರೆಗೂ ನನಗೇಕೆ ಹೇಳಲಿಲ್ಲ? ಕಳೆದ ಆರು ತಿಂಗಳುಗಳಿಂದಲೂ ನಾನು ನಿಮ್ಮ ಪ್ರೇಮಲ ಕುಟುಂಬದಲ್ಲಿ ಆಡ್ಡಾಡುತ್ತಿದ್ದರೂ, ನಾನಾಗಿ ನಿಮ್ಮ ಪೂರ್ವವೃತ್ತವನ್ನು ನಿಮಗೇಕೆ ಕೇಳಲಿಲ್ಲೆಂಬದರ ಕಾರಣವು ತೀರ ಸ್ಪಷ್ಟವಿದೆ ಯಾವ ಜೀವಾವಧಿ ಕರಿನೀರಿನ ಜನರು ತಮ್ಮ ಸಕ್ತೀ ಕೆಲಸಗಳ ಯಾವ ಹತ್ತು-ಹನ್ನೆರಡು ವರ್ಷಗಳನ್ನು ಕಳೆಯುವರೋ, ಮತ್ತು ತಮ್ಮ ವರ್ತನವನ್ನು ಸರಿಯಾಗಿಟ್ಟದ್ದರಿಂದ ಇದೇ ದ್ವೀಪದಲ್ಲಿ ಸ್ವತಂತ್ರ ಕುಟುಂಬ ಮಾಡಿಕೊಂಡು ಇರಲಿಕ್ಕೆ ಯಾರಿಗೆ ನಿಮ್ಮಂತೆ ಅನುಜ್ಞೆಯು ದೊರೆಯುವದೋ, ಅಂಥ ಈ ಅಂಡಮಾನದೊಳಗಿನ ದಾಖಲೆಗಾರ (Pass holder) ಜೀವಾವಧಿ ಗೃಹಸ್ಥರಿಗೆ ತಮಗೆ ಯಾವ ಘೃಣಿತ ಅಪರಾಧಕ್ಕಾಗಿ ಮುಂಚೆ ಶಿಕ್ಷೆಯಾಯಿತೋ ಅದನ್ನು ಹೇಳಲಿಕ್ಕೆ ಬಹುಶಃ ಬಹು ಸಂಕೋಚವೆನಿಸುತ್ತದೆ. ಸ್ವಂತದ ಪೂರ್ವವೃತ್ತವನ್ನು ಈ ನಿಮ್ಮ ದಾಖಲೆಗಾರ ವರ್ಗದೊಳಗಿನ ಜನರಾದ ಸ್ತ್ರೀ-ಪುರುಷರು ಬಹಳಮಾಡಿ ಮುಚ್ಚ ಬಯಸುತ್ತಾರೆ. ಆದಕ್ಕಾಗಿಯೇ ಹಲವು ಸಾರೆ ಕೇಳಬೇಕೆಂದೆನಿಸಿದ್ದರೂ ನಾನು ನಿಮಗೆ ನಿಮ್ಮ ಪೂರ್ವವೃತ್ತವನ್ನು ಕೇಳಲಿಲ್ಲ; ಆದರೆ ನೀವು ಸ್ವತಃ ಆದರೂ ಐವತ್ತೇಳನೇ ಇಸವಿಯ ಆ ಸ್ವಾತಂತ್ರ್ಯ ಯುದ್ಧದಲ್ಲಿ ಕಾದುವದು ರಾಜಕೀಯ ಅಪರಾಧವೆಂದು ಗಣಿಸಲ್ಪಡುತ್ತಿದ್ದರೂ ನೈತಿಕ ನೀಚತೆಯಲ್ಲೆಂದೇ ತಿಳಿಯುವವರಿರುತ್ತೀರೆಂಬದು ಸ್ಪಷ್ಟವಿದೆ. ಅಂದಮೇಲೆ ನೀವಾಗಿ ನಿಮ್ಮ ಆ ಸಂಬಂಧದ ಪೂರ್ವವೃತ್ತವನ್ನಾದರೂ ನನಗೇಕೆ ತಿಳಿಸಲಿಲ್ಲ? ಐವತ್ತೇಳರ ಬಂಡಿನ ಕಥೆಗಳನ್ನು ಕೇಳಿಕೊಳ್ಳುವ ಅಭಿರುಚಿಯು ನನಗೆ ಚಿಕ್ಕಂದಿನಿಂದಲೂ ಇರುತ್ತದೆ. ನಮ್ಮ ಅಜ್ಜನು ಬ್ರಹ್ಮಾವರ್ತದಲ್ಲಿ ೨ನೇ ಬಾಜೀರಾಯನಲ್ಲಿ ಒಬ್ಬ ಆಶ್ರಿತನಾಗಿದ್ದನೆಂದು ನಮ್ಮ ಅಪ್ಪನು ನನ್ನ ಚಿಕ್ಕಂದಿನಲ್ಲಿ ನನಗೆ ಹೇಳುತ್ತಿದ್ದರು. ಸೇನಾಪತಿ ತಾತ್ಯಾ ಟೋಪೆಯ ಹೆಸರಂತೂ ಅವರ ಬಾಯಲ್ಲಿ ಹಗಲೆಲ್ಲ ಇರುತ್ತಿತ್ತು."

"ಅದೇ ವೀರ ವರ ತಾತ್ಯಾ ಟೋಪೆಯ ದಂಡಿನೊಳಗೇ ನಾನೊಬ್ಬ ಸೈನಿಕನಾಗಿದ್ದೆನು!"

"ಏನೆನ್ನುತ್ತೀರಿ? ಆಹಹ! ಸೇನಾಪತಿ ತಾತ್ಯಾ ಟೋಪೆಯೇ! ಯಾವನ ಹೆಸರು ಬಾಲ್ಯದಲ್ಲಿ ನಮಗೆ ಒಬ್ಬ ಪೌರಾಣಿಕ ವೀರನಂತೆ ಅದ್ಭುತವಾಗಿ ತೋರು

ತ್ತಿತ್ತು! ಆ ಸೇನಾಪತಿ ತಾತ್ಯಾಟೋಪೆಗಳನ್ನು ಪ್ರತ್ಯಕ್ಷ ಕಂಡ ಹಾಗು ಅವರ ಸ್ವಾತಂತ್ರ್ಯ ಸೈನಿಕರೊಳಗಿನ ಒಬ್ಬ ಸೈನಿಕನಾಗಿದ್ದ ಪುರುಷನು ಪ್ರತ್ಯಕ್ಷವಾಗಿ ನನ್ನೆದುರು ನಿಂತುಕೊಂಡಿದ್ದಾನೆಂಬೀ ಕಲ್ಪನೆಯು ನನಗೆ ಈಗಲೂ ಕೂಡ ಅದ್ಭುತವೇ ಎನಿಸುತ್ತಿದೆ! ಅಪ್ಪಾಜೀ, ಇದು ನೋಡಿರಿ; ನಿಮಗೆ ಅದರಲ್ಲಿ ಏನೂ ಅಂಜಿಕೆಯೆನಿಸದಿದ್ದರೆ, ನೀವು ಆಗ ಯಾವ ಯಾವ ಸಂಗತಿಗಳನ್ನು ಪ್ರತ್ಯಕ್ಷ ನೋಡಿದಿರಿ? ಕೇಳಿಕೊಳ್ಳುವ ಬಗ್ಗೆ ನನ್ನ ಉತ್ಕಟ ಇಚ್ಛೆಯಿರುತ್ತದೆ! ಅದರಲ್ಲೇನಾದರೂ ಅಂಜಿಕೆಯಿದೆಯೋ ಇಲ್ಲವೋ?''

''ಅಂಜಿಕೆಯೇ? ಕಂಟಕಬಾಬೂ, ಮುಂಚಿನ ಕಾಲದಲ್ಲಿ 'ತಾತ್ಯಾಟೋಪೆಯನ್ನು ನಾನು ಬಲ್ಲೆನು' ಎಂದಿಷ್ಟೇ ಅಂದಿದ್ದರೂ ಯಾವ ಮರವು ಎದುರಿಗೆ ಕಂಡೀತೋ ಅದಕ್ಕೇ ನನ್ನನ್ನು ತೂಗುಗಟ್ಟುತ್ತಿದ್ದರು! ಅಂದಬಳಿಕ ನಾನು ತಾತ್ಯಾಟೋಪೆಯ ಪಕ್ಷ ಹಿಡಿದು ಕಾದಿದೆನೆಂದು ಹೇಳುವದಂತೂ ದೂರವೇ. ಆ ಕಾಲಕ್ಕೆ ಆ ಮಾಹಿತಿಯನ್ನು ಹೇಳುವದಕ್ಕೆ ನಮ್ಮ ಮನಸಿಗೆ ಯಾವ ಅಂಜಿಕೆಯು ಅನಿಸಿತೋ ಮತ್ತು ಆ ಸ್ಮೃತಿಯ ಮೂಲಕ ಅದನ್ನು ನಮ್ಮ ಮನಸ್ಸಿನ ಆಳವಾದ ನೆಲಮನೆಗಳಲ್ಲಿ ಹೇಗೆ ಹತ್ತೊತ್ತಿಕ್ಕಿ ಬಿಟ್ಟೆವೋ, ಅದನ್ನು ಇನ್ನು ಕೆದರಿ ಕೆದರಿ ತೆಗೆಯಬೇಕೆಂದರೂ ತೆಗೆಯ ಬರುವಂತಿಲ್ಲ. ಹಾಗೆ ಹೇಳಬೇಕಾದರೆ ಈಗ ಕಾಲವೇ ಪರಿವರ್ತನಗೊಂಡಿದೆ. ಆ ಸ್ವಾತಂತ್ರ್ಯ ಯುದ್ಧವು ಈಗ ಇತಿಹಾಸವಾಗಿದೆ. ಪ್ರಸ್ತುತದ ಪರಿಸ್ಥಿತಿಗೂ ಅದಕ್ಕೂ ಏನೂ ಸಂಬಂಧ ಉಳಿದಿಲ್ಲ; ಇದ್ದರೂ ಇತಿಹಾಸಕ್ಕೂ ವರ್ತಮಾನ ಪರಿಸ್ಥಿತಿಗೂ ಎಷ್ಟು ಸಂಬಂಧವಿರುವದೋ ಅಷ್ಟೇ ಇದೆ. ಸ್ವತಃ ಇಂಗ್ಲಿಷ ಜನರೇ ಆ ಕಾಲದ ಮಾಹಿತಿಯ ನೂರಾರು ಪುಸ್ತಕಗಳನ್ನು ಬರೆದಿರುತ್ತಾರೆ. ಒಬ್ಬಿಬ್ಬ ಇಂಗ್ಲಿಷ ಗೃಹಸ್ಥರು ನಾನು ಪ್ರತ್ಯಕ್ಷ ಕಂಡ ಮಾಹಿತಿಯನ್ನು ಕೇಳಿಕೊಳ್ಳಲಿಕ್ಕೆ ಮನಸ್ಸಿನ ಸಂಕೋಚವನ್ನು ತೊರೆದು ಇಲ್ಲಿಗೆ ನನ್ನೆಡೆಗೆ ಬಂದಿದ್ದರು; ಆದರೆ ಆ ಮೊದಲಿನ ಯಾವ ಅಂಜಿಕೆಯು ಒಮ್ಮೆ ನನಗೆ ಅನಿಸಿದ್ದಿತೋ, ಅದರಿಂದ ಅದನ್ನು ಮನಬಿಚ್ಚಿ ಹೇಳಲಾಗಲಿಲ್ಲ. ಇಲ್ಲದಿದ್ದರೆ ಅದರಲ್ಲಿ ಮುಚ್ಚಿಡುವಂತಹ ಸಂಗತಿಯು ಇಂದಿಗೇನಿದೆ? ಮತ್ತು ಅದಕ್ಕಾಗಿ ಯಾವ ಶಿಕ್ಷೆಯಾಗಬೇಕೋ ಅದನ್ನೇ ಭೋಗಿಸುವ ಸಲುವಾಗಿ ನಮ್ಮನ್ನು ಈ ಅಂಡಮಾನಕ್ಕೆ ಕಳಿಸಲಾಗಿದೆ; ಹಾಗು ನಾನು ಆ ಜೀವಾವಧಿ ಕರಿನೀರಿನ ಶಿಕ್ಷೆಯನ್ನು ಭೋಗಿಸಿಯೂ ಮುಗಿಸಿರುತ್ತೇನೆ!''

"ಅಂದರೆ, ಐವತ್ತೇಳರ ಬಂಡಿನಲ್ಲಿ ಕಾದಿದ್ದಕ್ಕಾಗಿಯೇ ನಿಮಗೆ ಜೀವಾವಧಿ ಕರಿನೀರಾಗಿತ್ತೇನು? ಈ ಅಂಡಮಾನಕ್ಕೆ ಆಗಿನಿಂದಲೇ ಜೀವಾವಧಿ

ಶಿಕ್ಷೆಯ ದಂಡಿತರನ್ನು ಕಳಿಸಹತ್ತಿರುತ್ತಾರೇನು?"

"ಐವತ್ತೇಳಕ್ಕಿಂತ ನಾಲ್ವತ್ತು-ಐವತ್ತು ವರ್ಷಗಳ ಮುಂಚೆಯೇ ಒಂದೆರಡು ಸಾರೆ ಈ ಅಂಡಮಾನದಲ್ಲಿ ಇಂಗ್ಲಿಷರು ವಸಾಹತು ಸ್ಥಾಪಿಸುವ ಪ್ರಯತ್ನವನ್ನು ಮಾಡಿದ್ದರು; ಆದರೆ ಆ ಕಾಲಕ್ಕೆ ಯಾವ ಅಲ್ಪ ಸ್ವಲ್ಪ ಹಿಂದೀ ಜನರನ್ನು ಈ ಕಡೆ ತಂದರೋ, ಅವರು ಇಲ್ಲಿಯ ಭಯಂಕರವಾದ ಅಡವಿ ಕಾನನಗಳಲ್ಲೂ ಇಲ್ಲಿಯ ಜವುಳಿನಲ್ಲೂ ಅನಾದಿಕಾಲದಿಂದಲೂ ಮಿತಿಮೀರಿ ಮಲೆತ ರೋಗಾಣುಗಳಿಗೆ ಹಾಗು ವಾತಾವರಣಕ್ಕೆ ಆಹುತಿಯಾದರು! ವಿಶೇಷವಾಗಿ ಚಳಿಜ್ವರದಿಂದಲೇ ಅವರ ಸತ್ಯಾನಾಶವಾಗಿ ಹೋಯಿತು! ಮತ್ತು ಈ ದ್ವೀಪಗಳು ಮನುಷ್ಯ ವಸತಿಗೆ ತೀರ ಅಯೋಗ್ಯಗಳೆಂದು ತ್ಯಜಿಸಲಾಯಿತು; ಆದರೆ ಐವತ್ತೇಳರ ಬಂಡಿನ ನಂತರ ಈ ದ್ವೀಪಗಳಲ್ಲಿಯ ಕ್ವಚಿತ್ತಾದ ಅದೇ ಸದ್ಗುಣಕ್ಕಾಗಿ ಆ ಬಂಡಿನಲ್ಲಿ ಇಂಗ್ಲಿಷರ ವಿರುದ್ಧ ನಿಂತು ಕಾದುವಾಗ ಸೋತ ನಮ್ಮಂತಹ ಶತಾವಧಿ ಬಂಡಖೋರರನ್ನು ಇದೇ ದ್ವೀಪಕ್ಕೆ ಜೀವಾವಧಿ ಶಿಕ್ಷೆಗೆಂದು ಕಳಿಸಲಾಯಿತು! ಮತ್ತು ಆಶ್ಚರ್ಯದ ಸಂಗತಿಯೆಂದರೆ, ನಾವು ಇಲ್ಲಿಗೆ ಬಂದವರೆಲ್ಲರೂ ಸಾಯಲಿಲ್ಲ! ಆ ದಟ್ಟವಾದ ಅಡವಿ-ಕಾನನಗಳಿಗೂ ಆ ಕೊಳೆತು ದುರ್ಗಂಧವಿಡಿಗಿದ ಜವುಳು-ಕೊಳಚೆಗಳಿಗೂ, ಆ ಭೀಷಣ ರೋಗಾಣುಗಳಿಗೂ, ಆ ಮಾದಕ ವಾತಾವರಣಕ್ಕೂ, ಆ ಅಸಾಧ್ಯ ಚಳಿಜ್ವರಗಳಿಗೂ ನಾವು ಸಾಕಾಗಿ ಉಳಿದೆವು! ಮತ್ತು ಈ ರೀತಿಯಾಗಿ ನಾವು ಇಂದಿನ ಈ ವಸಾಹತಿಯ ಮೂಲ ಸಂಸ್ಥಾಪಕರು, ಆದ್ಯಪೂರ್ವಜರು, ಕುಲಪುರುಷರು ಆಗಿರುತ್ತೇವೆ! ಈ ದ್ವೀಪದಲ್ಲಿ ವಸಾಹತು ಮಾಡಲಿಕ್ಕೆಂದು ಕಳಿಸಿದ ಆ ಮೊದಲನೇ ಬಂಡುಗಾರರ ಗುಂಪಿನೊಳಗಿನವನೇ ನಾನೂ ಒಬ್ಬನು! ಈಗುಳಿದ ಆ ಬಂಡುಗಾರರಾದ ನಾಲ್ಕೈದು ಜನರಲ್ಲಿಯ ಹಿರಿಯನು! ಆದರೆ ಈ ದೀರ್ಘಜೀವನದ ಆನಂದಕ್ಕಿಂತಲೂ ನನ್ನ ಸೇನಾಪತಿಗಳಾದ ತಾತ್ಯಾಟೋಪೆ ಇವರು ಎಲ್ಲಿ ಗಲ್ಲಿಗೇರಿದ್ದರೋ—"

'ತಾತ್ಯಾಟೋಪೆ ಇವರು ಗಲ್ಲಿಗೇರಿದಾಗ ನೀವು ಅಲ್ಲಿಯೇ ಇದ್ದಿರೇನು?'

"ಇಲ್ಲ-ಇಲ್ಲ! ಅದೇ ಆ ಶಲ್ಯವೇ ನನ್ನ ಮನಸ್ಸಿಗೆ ನಡುತ್ತಿದೆ! ಕರಿನೀರಿಗೆ ಕಳಿಸಲ್ಪಡುವದಕ್ಕಿಂತ ನಾವು ನಮ್ಮ ಸೇನಾಪತಿಯೊಡನೆಯೇ ಗಲ್ಲಿಗೇರಿಸಲ್ಪಟ್ಟಿದ್ದರೆ ನಮಗೆ ಹೆಚ್ಚು ಆನಂದವಾಗುತ್ತಿತ್ತೆಂಬದನ್ನೇ ನಾನು ಹೇಳುತ್ತಿದ್ದೆನು! ಇಂಗ್ಲಿಷರು ಆ ಕಾಲಕ್ಕೆ ನಮ್ಮ ವೈರಿಗಳಾಗಿದ್ದರು; ಹೀಗಿದ್ದರೂ ಕೂಡ ಇಂಗ್ಲಿಷರು ಜಾತಿವಂತ ವೀರರು! ವೀರತನದ ಪರೀಕ್ಷೆಯು ಅವರಿಗೆ ಚನ್ನಾಗಿದೆಯೆಂಬದನ್ನು ನಾವು ತಿಳಿದಿದ್ದೆವು! ತಾತ್ಯಾ ಟೋಪೆಯವರು ಸಾಯುವ

ವರೆಗೂ ಸಶಸ್ತ್ರಯುದ್ಧದಲ್ಲಿ ಇಂಗ್ಲಿಷರು ಬೊಟ್ಟುಕಚ್ಚಿಕೊಳ್ಳುವಂತೆ ಸಿಕರ ದಿಂಪಲೂ ಶೌರ್ಯದಿಂದಲೂ ಕಾದಿದರು. ಮರಣದಂಡನದ ಕಾಲಕ್ಕೆ, ಗಲ್ಲಿಗೇರುವ ಸಮಯದಲ್ಲಿ "ನಾನು ಮಹಾರಾಷ್ಟ್ರದ ರಾಜರ, ಶ್ರೀಮಂತ ನಾನಾಸಾಹೇಬ ಪೇಶ್ವೆಯವರ ಸೇನಾಪತಿಯು; ನಾನು ಇಂಗ್ಲಿಷರ ಅಂಕಿತದ ಪ್ರಜೆಯಲ್ಲ! ನಮ್ಮ ರಾಜನ ಆಜ್ಞೆಯಿಂದ ನಮ್ಮ ಸ್ವಾತಂತ್ರ್ಯಕ್ಕಾಗಿ ಕಾದಿದೆನು!' ಎಂದು ಹೇಳಿದನು. ಆತನ ಆ ವಿರೋಚಿತ ಭಾಷಣದಿಂದ ಇಂಗ್ಲಿಷರ ಮನಸ್ಸಿನ ಮೇಲೆ ಹೆಚ್ಚಾಗಿ ಪರಿಣಾಮವಾಯಿತು. ಇಂಗ್ಲಿಷರಿಗೆ ಹೆಚ್ಚಾಗಿ ಆದರವೆನಿಸಿದ್ದರಿಂದ, ತಾತ್ಯಾ ಟೋಪೆ ಇವರಿಗೆ ಗಲ್ಲಿನಿಂದ ಮರಣವುಂಟಾದ ಬಳಿಕ ಅದನ್ನು ನೋಡುವ ಸಲುವಾಗಿ ನೆರೆದಿದ್ದ ನೂರಾರು ಕೆಂಪುಜನರು ಆತನ ಹೆಣದ ಸುತ್ತಲೂ ಸೇರಿದರು; ಮತ್ತು ಆತನ ಸ್ಮೃತಿ ಚಿಹ್ನಗಳೆಂದು ಎಷ್ಟೋ ಮಂದಿ ಇಂಗ್ಲಿಷ, ಫ್ರೆಂಚ ಸ್ತ್ರೀ-ಪುರುಷರು ಆತನ ಕೂದಲುಗಳನ್ನು ಕತ್ತರಿಸಿಕೊಂಡು ಒಯ್ದರು! ಫ್ರಾನ್ಸದೇಶದ ಪತ್ರಗಳಲ್ಲಿ ಆತನ ಸಂಬಂಧದ ದುಃಖಪೂರ್ಣ ವೃತ್ತಲೇಖಗಳು ಪ್ರಸಿದ್ಧವಾದವು! ಆದರೆ ನಾನು ಆತನ ಸೈನಿಕನಾಗಿದ್ದು, ನನಗೆ ಆತನೊಡನೆ ಅದೇ ಸ್ವಾತಂತ್ರ್ಯಯುದ್ಧದಲ್ಲಿ ಮರಣವೊದಗುವ ಭಾಗ್ಯವು ಲಭಿಸಲಿಲ್ಲ ಕೊನೆಯ ದರ್ಶನ ಕೂಡ ಆಗಲಿಲ್ಲ!" ಎಂದೆಂದು ಆ ಮುದುಕ ವೀರನು ನಿಟ್ಟುಸಿರುಗರೆದನು!

"ನೀವು ಮೊದಲಿನಿಂದಲೂ ತಾತ್ಯಾಟೋಪೆಯವರ ಸೈನ್ಯದಲ್ಲೇ ಇದ್ದಿರೇನು? ಅವರ ಮರಣಕ್ಕೆ ಮುಂಚೆ ಅದೆಷ್ಟು ದಿನಗಳ ಹಿಂದೆ ಗಾಯಗೊಂಡಿದ್ದಿರಿ? ನೀವು ಇಂಗ್ಲಿಷರ ಕೈಗೆ ಸಿಕ್ಕ ಬಗೆ ಹೇಗೆ?"

"ಆ ಕಥೆಯು ಬಹು ದೀರ್ಘವಾಗಿದೆ. ಸ್ವಲ್ಪದರಲ್ಲಿ ಹೇಳಬೇಕೆಂದರೆ, ನನಗೂ ಪೇಶ್ವೆಯವರಲ್ಲಿಯ ಯಾರಿಗೂ ಪ್ರತ್ಯಕ್ಷ ಗುರುತೆಂಬುದು ಇರಲೇ ಇಲ್ಲ. ನಾವು ಮಹಾರಾಷ್ಟ್ರೀಯ ಬ್ರಾಹ್ಮಣರು. ಎಲ್ಲಕ್ಕೂ ಮೊದಲು ಬುಂದೇಲಖಂಡದ ಗೋವಿಂದ ವಲ್ಲಭಪಂತನ ಆಶ್ರಿತರಾಗಿ ಉತ್ತರ ಹಿಂದುಸ್ಥಾನಕ್ಕೆ ಹೋದೆವು. ಮುಂದೆ ನಮ್ಮ ತಂದೆಯ ಕಾಲಕ್ಕೆ ಆರಾ ಪಟ್ಟಣದ ಕಡೆಗೆ ನಮ್ಮ ಕುಟುಂಬವು ಸ್ಥಾಯಿಕವಾಯಿತು. ಐವತ್ತೇಳಕ್ಕಿಂತ ಮೊದಲು ಒಂದೆರಡು ವರ್ಷ ಶ್ರೀಮಂತ ನಾನಾಸಾಹೇಬರ ದೂತರು ನಮ್ಮ ಊರಿಗೆ ಬಂದು ತೀವ್ರವೇ ಒಂದು ಬಹು ದೊಡ್ಡ ಬಂಡು ಆಗುವದಿದೆಯೆಂದು ಹೇಳುತ್ತಿದ್ದರು; ಮತ್ತು ನಮ್ಮೊಳಗಿನ ತರುಣರಲ್ಲಿ ಮಹಾರಾಷ್ಟ್ರದ ಹಿಂದುಪದಪಾತಶಾಹಿಯನ್ನು ಮತ್ತೆ ಸ್ಥಾಪಿಸುವ ಚೇತನೆಯನ್ನು ಹುಟ್ಟಿಸುತ್ತಿದ್ದರು. ಮರಾಟರ ಅರಸನು ಸ್ವರಾಜ್ಯಕ್ಕಾಗಿ ಮತ್ತೆ ಶಸ್ತ್ರವೆತ್ತುವನು, ಎಂಬ ಕಲ್ಪನೆಯೊಡ

ನೆಯೇ ನನ್ನ ತರುಣ ರಕ್ತವು ಪುಟಿಯಹತ್ತಿತು. ಅಷ್ಟರಲ್ಲಿ ಕಾನಪುರದಲ್ಲಿ ಬಹು ದೊಡ್ಡ ಬಂಡು ಆಗಿ, ಪೇಶ್ವೆ ನಾನಾಸಾಹೇಬರು ಕಾನಪುರವನ್ನು ಗೆದ್ದು ಕೊಂಡರೆಂದೂ, ಬಹಿರಂಗವಾಗಿ ಯುದ್ಧವನ್ನು ಆಹ್ವಾನಿಸಿದರೆಂದೂ ಸುದ್ದಿ ಬಂದಿತು. ಆ ಮೇಲೆ ಪ್ರತಿದಿನವೂ ಹೊಸ ಹೊಸ ಸುದ್ದಿಗಳು ಬರಹತ್ತಿದವು. ದಿಲ್ಲಿ, ಲಖನೌ, ಜಮಶೇದಪುರ, ಅಲ್ಲಿ-ಇಲ್ಲಿ ಎಲ್ಲ ಕಡೆಗೂ ಆ ರಾಷ್ಟ್ರೀಯ ಯುದ್ಧದ ಬೇಗೆಯು ಹಬ್ಬಿ, ರಾಜ-ಮಹಾರಾಜರು, ಸರದಾರರು, ಭೂಮಿದಾರರು, ಸೈನಿಕರು, ನಾಗರಿಕರು ಹೀಗೆ ಎಲ್ಲ ಹಿಂದುಸ್ಥಾನವೂ ಆ ಬಂಡಿನಲ್ಲಿ ಸಾಮಿಲಾಯಿತು! ಆ ಕೂಡಲೆ ನಮ್ಮ ಆರಾ ಪಟ್ಟಣದೊಳಗಿನ ಸೈನ್ಯದ ಒಂದು ಪಥಕವೂ ಬಂಡು ಮಾಡಿತು; ನಾವೆಲ್ಲರೂ ತರುಣರು ತತ್‌ಕ್ಷಣವೇ ಅದರಲ್ಲಿ ಸೇರ್ಪಡೆಯಾದೆವು.

"ಆ ಮೇಲೆ? ಅಲ್ಲಿಯ ಇಂಗ್ಲಿಷ ಸೈನ್ಯವು ನಿಮ್ಮನ್ನು ಆ ಕೂಡಲೆ ಪ್ರತಿಬಂಧಿಸಲಿಲ್ಲವೇನು?"

"ತಾಲೂಕ-ತಾಲೂಕಗಳಲ್ಲಿ ಇಂಗ್ಲಿಷರ ಸೈನ್ಯವೆಲ್ಲಿತ್ತು? ಇದ್ದ ಎಲ್ಲ ಹಿಂದೀ ಸೈನಿಕರೂ ವಿರುದ್ಧವಾಗಿ ನಿಂತವರು! ಇಂಗ್ಲಿಷ ಅಧಿಕಾರಿಯೆಂಬುವವನು ಆಗ ಅಲ್ಲ ಒಬ್ಬನೇ ಇದ್ದನು. ಆತನೇ ಕಲೆಕ್ಟರ, ಮ್ಯಾಜಿಸ್ಟ್ರೇಟ ಮುಂತಾದ ಎಲ್ಲ ಅಧಿಕಾರ ನಡೆಯಿಸುವವನಾದ ಏ. ಓ. ಹ್ಯೂಮ ಸಾಹೇಬನು. ಇಡೀ ಆರಾ ನಗರವು ಒಮ್ಮೆಲೆ ತಿರುಗಿ ನಿಂತದ್ದನ್ನು ಕಂಡೊಡನೆಯೇ ಹ್ಯೂಮ ಸಾಹೇಬನು ಜೀವಗಳ್ಳನಾಗಿ ಓಡಿಹೋಗಲಿಕ್ಕೆ ಸಿದ್ಧನಾದನು; ಆದರೆ ಆತನು ಓಡುವುದಾದರೂ ಎಲ್ಲಿಗೆ? ಆತನ ಠಾಣ್ಯಕ್ಕೆ ಮುತ್ತಿಗೆ ಬೀಳುವ ಮೊದಲೆ ಆತನೊಂದು ಹಂಚಿಕೆ ಹಾಕಿದನು. ತನ್ನ ಕೈ, ಕಾಲು, ಮೋರೆಗಳಿಗೆಲ್ಲ ಕರೀ ಬಣ್ಣವನ್ನು ತೊಡಕೊಂಡನು. ತನ್ನ ಒಬ್ಬ ಹಿಂದೀ ನೌಕರಳ ಬುರುಕೆಯನ್ನು ಇಸಕೊಂಡನು; ಹಾಗು ಅದನ್ನು ಅತ್ತ ಕಡೆಯ ಸ್ತ್ರೀಯರಂತೆ ಮೈ-ಮೋರೆಗಳ ಮೇಲೆ ಹಾಕಿಕೊಂಡು, ಆ ಹ್ಯೂಮ ಸಾಹೇಬನು ಆ ಸ್ತ್ರೀ ವೇಷದಲ್ಲಿ ನಡುರಾತ್ರಿಯಲ್ಲೇ ಅಲ್ಲಿಂದ ಜಾರಿ ಹೋದನು. ಆ ಕಾಲಕ್ಕೆ ಇಂಗ್ಲಿಷರು ಎಲ್ಲಿ ಕಾಣುವರೋ ಬಂಡುಗಾರರು ಅಲ್ಲಿಯೇ ಅವರನ್ನು ಸಂಹರಿಸುತ್ತಿದ್ದರು! ಆದರೆ ಅಂಥ ಭಯಂಕರ ಸ್ಥಿತಿಯಲ್ಲೂ ಆ ಹ್ಯೂಮ ಸಾಹೇಬನೊಡನೆ ನಂಬಿಗೆಯಿಂದಿದ್ದ ಇಬ್ಬರು-ಮೂವರು ಹಿಂದೀ ಸೈನಿಕರ ನೆರವಿನಿಂದ ಹಲವು ಪ್ರಸಂಗಗಳಲ್ಲಿ ಆತನ ಜೀವವು ಬದುಕಿತು; ಮತ್ತು ಕೊನೆಗೆ ಆತನು ಬೇರೆ ಠಾಣ್ಯಗಳಲ್ಲಿದ್ದ ಇಂಗ್ಲಿಷರ ಛಾವಣಿಗೆ ಸುಖರೂಪವಾಗಿ ತಲುಪಿದನು."

“ಎ. ಓ. ಹ್ಯೂಮಸಾಹೇಬನೇ? ಅಂದರೆ ರಾಷ್ಟ್ರೀಯ ಸಭೆಯನ್ನು ಸ್ಥಾಪಿಸಿದ ಹ್ಯೂಮಸಾಹೇಬರೇ ಏನು?”

“ಅಹುದು; ಅವರೇ ಮುಂದೆ ಆ ಸಂಸ್ಥೆಯನ್ನು ಸ್ಥಾಪಿಸಿದರು. ಇಷ್ಟೇ ಅಲ್ಲ, ಆ ಬಂಡಿನಲ್ಲಿ ಅವರ ಮೇಲೆ ಒದಗಿದ ಆ ಭಯಂಕರ ಸಂಕಟಕ್ಕಾಗಿಯೆ ಹಿಂದೀ ಜನರಲ್ಲಿ ಮತ್ತೆ ಅಂಥ ಭಯಂಕರ ಅಸಂತೋಷವು ಹಬ್ಬಗೊಡದಿರುವುದರಲ್ಲಿಯೇ ಇಂಗ್ಲಿಷ ರಾಜ್ಯದ ಬಲವಿರುತ್ತದೆಂದು ಅವರ ಖಾತ್ರಿಯಾಯಿತೆಂಬದು ಅವರ ಆ ಮುಂದಿನ ಯಾವ ಕೆಲವು ಭಾಷಣಗಳು ನನಗೆ ಇಲ್ಲಿ ಅಂಡಮಾನದಲ್ಲಿ ಒಬ್ಬ ಸಾಹೇಬನಿಂದ ಓದಲಿಕ್ಕೆ ದೊರೆತವೋ ಅವುಗಳ ಮೇಲಿಂದ ನನಗೆ ಆ ಮೇಲೆ ತಿಳಿಯಿತು ‘ಐವತ್ತೇಳರ ಬಂಡಿನೊಳಗಿನ ಇಂಗ್ಲಿಷರ ರಾಜ್ಯದ ಮೇಲೆ ಒದಗಿದ ಭಯಂಕರ ಅರಿಷ್ಟದಲ್ಲಿ ಯಾರಿಗೆ ದಿನಗಳನ್ನು ಕಳೆಯಬೇಕಾಯಿತೋ, ಅಂಥ ಯಾವನೊಬ್ಬ ಇಂಗ್ಲಿಷ ಅಧಿಕಾರಿಗೆ ಹಿಂದುಸ್ಥಾನದಲ್ಲಿ ಹಬ್ಬುವ ಅಸಂತೋಷವು ಆಗಿಂದೀಗಲೇ ಕುದಿಯಲಿಕ್ಕೂ ಬೆಳೆಯಲಿಕ್ಕೂ ಇಂಬುಗೊಡಬಾರದೆಂಬದು ಮಾನ್ಯವಾಗಿ ಹೋಯಿತು. ಅದರಿಂದ ಆ ಅಸಂತೋಷದ ಒಳಸಂಚು ಆಗಿಂದಾಗಲೆ ಬಹಿರಂಗವಾಗಬೇಕು; ಅದರ ಉಗಿಯು ಒಟ್ಟುಗೂಡುವ ಮೊದಲೇ ಹೊರಟು ಹೋಗಿರಬೇಕು, ಹೀಗೆ ಏನಾದರೂ ಯುಕ್ತಿ ತೆಗೆಯಬೇಕು. ಉಗಿಯು ನಿರ್ಭಂಧವಿಲ್ಲದೆ ಹೊರಟು ಹೋಗಲಿಕ್ಕೆ ಒಂದು ವೇಳೆ ಯಾವುದೊಂದು ಅನುಕೂಲವಾದ ಛಿದ್ರ-ಸೆಫ್ಟೀವಾಲ್ವ-ವನ್ನು ನೀವು ಇಡದಿದ್ದರೆ ಆ ಉಗಿಯು ಎಂಜಿನನ್ನು ಒಡೆದು ಹೊರಬಿದ್ದೀತು! ಆ ಅನುಕೂಲ ಛಿದ್ರವೆಂದರೇನೇ ನಾನು ಸ್ಥಾಪಿಸಲಿರುವ ಒಂದು ರಾಷ್ಟ್ರಸಭೆಯು’ ಹೀಗೆ ಅವರ ಬುದ್ಧಿವಂತಿಕೆಯ ಭಾಷಣಗಳು ಯಾವವು ಮುಂದೆ ಬಂದವೋ ಆ ಬುದ್ಧಿವಂತಿಕೆಯನ್ನು ಆ ಹ್ಯೂಮ ಸಾಹೇಬನು ಆರಾದ ಅರಿಷ್ಟದಲ್ಲಿಯೇ ಕಲಿತಿದ್ದನು.”

“ಆರಾದಿಂದ ನೀವು ಮುಂದೆ ಎಲ್ಲಿಗೆ ಹೋದಿರಿ?”

“ಅದೆಲ್ಲ ಹೋಗಲಿ ಬಿಡಿರಿ! ಅದೆಲ್ಲ ಗತಗೋಷ್ಠಿ! ಈಗ ಅದನ್ನು ಕಟ್ಟಿಕೊಂಡು ಮಾಡುವುದೇನು? ಈಗಿನದೆಲ್ಲವೂ ಹೊಸದೇ! ಸದ್ಯದ ಪ್ರಸಂಗವನ್ನು ನೀಗಿಸಿಕೊಂಡರೆ ತೀರಿತು!”

“ಅದಂತೂ ಇದ್ದೇ ಇದೆ; ಆದರೆ ನಿಮ್ಮುಮಟ್ಟಿಗಾದರೂ ಏನಾಯಿತೆಂಬದನ್ನು ತಿಳಿಸಿರಿ. ನೀವು ಹೇಗೆ ಪ್ರತಿಬಂಧಿಸಲ್ಪಟ್ಟಿರಿ.”

“ಆರಾದಿಂದ ನಾವು ನೆಟ್ಟಗೆ ಕಾನಪುರಕ್ಕೆ ಹೋಗಿ ತಾತ್ಯಾಟೋಪೆ ಇವರ ಸೈನ್ಯದಲ್ಲಿ ಸೇರಿದೆವು. ಇಪ್ಪತ್ತು ಸಾವಿರ ಇಂಗ್ಲಿಷ ಸೈನ್ಯದೊಡನೆ

ಸಾಗಿ ಬಂದಿದ್ದ ಜನರಲ್ಲ ವಿಂದ್ಯಾಮುನನ್ನು ಕಾನಪುರದ ಆ ತುಮುಲ ಕಾಳಗ ದಲ್ಲಿ ಸೇನಾಪತಿ ತಾತ್ಯಾಟೋಪೆ ಇವರು ಸೋಲಿಸಿದರು. ಆ ಯುದ್ಧದಲ್ಲಿ ಬಂಡುಗಾರರ ವತಿಯಿಂದ ನಾನು ಸ್ವತಃ ಕಾದಿದ್ದೆನು; ಮತ್ತು ಅದೇ ರಣ ಭೂಮಿಯಲ್ಲಿ ಈ ಮೊಣಕಾಲಿಗೆ ಇಂಗ್ಲಿಷರ ಗುಂಡು ತಾಕಿ ಗಾಯಗೊಂಡು ಬಿದ್ದಿರುವಾಗ ನಾನು ಇಂಗ್ಲಿಷರ ಕೈವಶವಾದೆನು; ಆದರೆ ಇಂಗ್ಲಿಷರ ಕಡೆಯ ಹಿಂದೀ ಶಿಪಾಯಿಗಳಲ್ಲಿಯ ಒಬ್ಬನೆಂದು ಹೇಳಿ ಆ ಪ್ರಸಂಗ ದಾಟಿಸುವ ಹಂ-ಚಿಕೆಯನ್ನು ನಾನು ಯೋಜಿಸಿದೆನು; ಹಾಗು ಆಗಿನ ಅಂದಾದುಂದಿಯ ಕಾಲ ದಲ್ಲಿ ಹಲವು ಅಸಂಭವ ಸಂಗತಿಗಳು ಹೇಗೆ ಆಗುವವೋ, ಹಾಗೆಯೇ ಅದೂ ಘಟಿಸಿ, ನನ್ನ ಯುಕ್ತಿಯು ಸಫಲವಾಯಿತು. ಜನರಲ್ಲ ವಿಂದ್ಯಾಮುನು ತಾತ್ಯಾ ಟೋಪೆಯಿಂದ ಪರಾಭವವಾಗಿ ಯಾವಾಗ ಅವ್ಯವಸ್ಥಿತವಾಗಿ ಹಿಂದಿರುಗಿ ದೆನೋ, ಆಗ ಆತನು ತನ್ನ ನೂರಾರು ಗಾಯಗೊಂಡ ದಂಡಾಳುಗಳನ್ನು ಅವಸರವಸರದಿಂದ ಸಮೀಪದಲ್ಲಿಯ ಒಂದು ಇಂಗ್ಲಿಷರ ಛಾವಣಿಗೆ ಕಳಿಸಿ ದನು. ಅವರೊಡನೆ ನಾನೂ ಕಳಿಸಲ್ಪಟ್ಟೆನು. ಅಲ್ಲಿ ನಾನು ಗುಣಹೊಂದಿದ ಮೇಲೆ ನಾನು ಅಲ್ಲಿಂದ ಜಾರತಕ್ಕವನು; ಅಷ್ಟರಲ್ಲಿ ಒಬ್ಬ ಹಿಂದೀ ಶಿಪಾ ಯಿಯು ನಾನು ಬಂಡುಗಾರನಿದ್ದೆನೆಂದು ಚಾಡಿ ಹೇಳಿದನು; ಆದರೆ ಬೇರೆ ಎಷ್ಟೋಜನ ದಂಡಾಳುಗಳು ಆ ಚಾಡಿ ಹೇಳಿದವನೇ ಬಂಡುಗಾರರೊಳಗಿನವ ನೆಂದು ಚಾಡಿ ಹೇಳಿದರು.''

''ಆ ಕಾಲಕ್ಕೆ ಇಂಥ ಒಂದಕ್ಕೊಂದು ವಿರುದ್ಧವಾಗಿ ಚಾಡಿ ಹೇಳುವ ಕೆಲಸವು ನಡೆದೇ ಇದ್ದಿತು. ಅಂಥ ಆ ಗೊಂದಲದಲ್ಲೂ, ಆ ಕಾಲದ ಇಂಗ್ಲಿಷರ ಜೀವದ ಮೇಲಿನ ಪ್ರಸಂಗದಲ್ಲೂ ವೈಯಕ್ತಿತ ಚೌಕಶಿಯು ಸುದ್ದಿಯೇ ಇರ ಲಿಲ್ಲ! ಕಂಡಕಂಡವರಿಗೆಲ್ಲ ಶಿಕ್ಷೆ! ಗಲ್ಲು ಅಂದರೆ ಗಲ್ಲು, ಜೀವಾವಧಿ ಕರಿನೀರೆಂದರೆ ಕರಿನೀರು! ಬಂಡು ಬೇಗನೆ ಶಾಂತವಾಗಬೇಕೆಂದು ಕಟ್ಟಕಡೆಗೆ ಎಲ್ಲರಿಗೂ ಕ್ಷಮಾದಾನ! ಆ ಗೊಂದಲದಲ್ಲೂ, ಆ ಜೀವದ ಮೇಲಿನ ಪಣದಲ್ಲೂ ನಾನಿದ್ದ ಆ ಬಂದಿಗಳ ಇಡೀ ಗುಂಪಿಗೆ ಜೀವಾವಧಿ ಕರಿನೀರಿನ ಶಿಕ್ಷೆಯಾಯಿತು! ಮತ್ತು ಹಿಂದುಸ್ತಾನದಲ್ಲಿ ಬಂಡುಗಾರರ ವಂಶವೇ ಹಬ್ಬಬಾರದೆಂಬ ಹಟ ದಿಂದ ಬಂಡುಗಾರರ ಜೀವಾವಧಿ ಶಿಕ್ಷೆಯ ನೂರಾರು ತಂಡಗಳನ್ನು ಹಡಗು ಗಳಲ್ಲಿ ತುಂಬಿ ತುಂಬಿ 'ಮನುಷ್ಯ ವಸತಿಗೆ ಅಯೋಗ್ಯವೂ ಮಾರಕವೂ' ಎಂದು ಇಂಗ್ಲಿಷ ಅಧಿಕಾರಿಗಳೇ ಆ ಕಾಲಕ್ಕೆ ನಿಶ್ಚಯಿಸಿದ್ದ, ಈ ಅಂಡಮಾನ ದ್ವೀಪಕ್ಕೆ ತಂದು ಬಿಟ್ಟುಬಿಟ್ಟರು! ಅವರಲ್ಲಿಯೇ ನಾನೂ ಒಬ್ಬನಿದ್ದೆನು! ಆಗ ನನ್ನ ವಯಸ್ಸು ಇಪ್ಪತ್ತೈದಕ್ಕೆ ಮೀರಿರಲಿಲ್ಲ ಮನುಷ್ಯ ವಸತಿಗೆ ಮಾರಕವೆಂದೇ

ಈ ದ್ವೀಪದಲ್ಲಿ ತಂದು ಬಿಟ್ಟಿದ್ದ ಆ ನಮ್ಮ ನೂರಾರು ಐವತ್ತೇಳರ ಬಂಡು ಗಾರರು ತಮ್ಮ ಅಸಹ್ಯ ಕಷ್ಟಗಳ, ಘೋರ ಯಾತನೆಗಳ, ಹೆಪ್ಪುಗೊಂಡ ನೆತ್ತ ರದ, ಭಂಗಗೊಂಡ ಆಶೆಗಳ, ಸವೆದ ಎಲುವುಗಳ ಮತ್ತು ಹೆಣಗಳ ಬೂದಿಯು ಗೊಬ್ಬರು-ನೀರುಗಳನ್ನುಣಿಸಿ ಅದೇ ದ್ವೀಪವನ್ನು ಇಂದು ಮನುಷ್ಯವಸತಿಗೆ ಯೋಗ್ಯವನ್ನಾಗಿ ಮಾಡಿಟ್ಟಿರುತ್ತಾರೆ. ಅದೇ ಈ ಅಂಡಮಾನವು ನಮ್ಮ ಹಿಂದುಗಳ ಭರಭರಾಟೆಗೆ ಬಂದಿರುವ ಒಂದು ಹೊಸ ವಸಾಹತಾಗಿ ಉಳಿತಿದೆ. ಇಷ್ಟೇ ನಮ್ಮ ಜನ್ಮದ ಅಥವಾ ಜೀವಾವಧಿ ಶಿಕ್ಷೆಯ ಸಾರ್ಥಕವು!"

"ಆದರೆ ಇನ್ನು ನೀವು ಹಿಂದುಸ್ಥಾನಕ್ಕೆ ಹೋಗಿ ಬರುವ ಅನುಜ್ಞೆಯ ನ್ನೊಮ್ಮೆ ಏಕೆ ಪಡೆಯುವುದಿಲ್ಲ? ಈಗ ದಾಖಲೇವಾಲಾ ಎಂಬ ಸ್ವತಂತ್ರ ವರ್ಗ ದವರು ನೀವಾಗಿರುತ್ತೀರಿ. ಇಂಥ ಫ್ರೀಪಾಸ ಹೊಲ್ಡರರಿಗೆ ಸ್ವದೇಶಕ್ಕೆ ಹೋಗು ವ ಅನುಜ್ಞೆ ಕೊಡುತ್ತಿರುವರಷ್ಟೇ? ಕೆಲವು ಬಾಬುಗಳಲ್ಲಿ ಹಿಂದುಸ್ಥಾನವು ಈಗ ಹೆಚ್ಚಾಗಿ ಸುಧಾರಿಸಿರುತ್ತದೆ. ನೀವು ಅದನ್ನೊಮ್ಮೆ ನೋಡಲೇಬೇಕು."

"ಅಲ್ಲಿ ಏನು ನೋಡಬೇಕಾಗಿದೆ? ಈ ಕರಿನೀರಿನ ವಸಾಹತು ಹೇಗೆ ಭರಭರಾಟೆಗೆ ಬರಹತ್ತಿದೆಯೆಂದು ನಾನು ಅಂದೆನೋ, ಅದರಂತೆಯೇ ಹಿಂದು ಸ್ಥಾನವು ಸುಧಾರಿಸುತ್ತಿದೆಯೆಂದು ನೀವನ್ನುತ್ತೀರಿ! ಮೊದಲು ನಮ್ಮ ಐವ ತ್ತೇಳರ ದಾಖಲೇಗಾರರನ್ನು ಕೂಡ ಹಿಂದುಸ್ಥಾನಕ್ಕೆ ಯಾರೂ ಕಳಿಸಿ ಕೊಡು ವದಿಲ್ಲ; ಆದರೆ ಆ ನಿಯಮವು ನಮಗೆ ಸಂಬಂಧಿಸಿಲ್ಲವಾದ್ದರಿಂದ ನಾವು ಒಂದು ವೇಳೆ ಅಲ್ಲಿಗೆ ಹೋಗಬೇಕೆಂದರೂ ಯಾವ ಹಿಂದುಸ್ಥಾನವನ್ನು ನಾವು ನೋಡ ಬೇಕಿದ್ದಿತೋ ಈಗ ಅದೆಲ್ಲಿದೆ ಅಲ್ಲಿ? ಈಗ ಈ ಜೀವಾವಧಿ ಕರಿನೀರಿನ ಅಂಡ ಮಾನವು ಹೇಗೋ ಆ ಹಿಂದುಸ್ಥಾನವೂ ಇದರಂತೆಯೇ!" ಆತನ ಹೃದಯದಲ್ಲಿ ಅಡಗಿದ್ದ ಯಾವುದೊಂದು ಶಲ್ಯವು ಒಳಗೊಳಗೇ ಹೇಗೆ ತಿರುಗಬೇಕೋ ಹಾಗಾಗಿ ಆ ಮುದುಕ ವೀರನು ಒಂದು ನಿಟ್ಟುಸಿರುಗರೆದು ಸುಮ್ಮನಾದನು.

ತಾನು ಈತನನ್ನು ಸುಮ್ಮನೆ ನೋಯಿಸಿದೆನೆನಿಸಿ, ಈತನಿಗೆ ಏನಾದರೂ ಸಮಾಧಾನವಾಗುವಂತೆ ಮಾತಾಡಬೇಕೆಂದು ಕಂಟಕ ಬಾಬುವು:—"ಏನಾ ದರೂ ದೇವರು ನ್ಯಾಯನಿಷ್ಠನಿರುವನು ಕಡೆಗೆ ನ್ಯಾಯುವೇ ಜಯಶೀಲವು."

"ಛೀ-ಛೀ! ನ್ಯಾಯ ಮತ್ತು ಅನ್ಯಾಯ ಇವುಗಳು ಜಯ-ಪರಾಜಯ ಗಳಿಗೆ ಏನೂ ಸಂಬಂಧಿಸುವುದಿಲ್ಲವೆಂಬದನ್ನು ನಾವು ಎಷ್ಟು ಬೇಗನೆ ಕಲಿಯು ವೆವೋ ಅಷ್ಟು ವಿಹಿತವು. ನ್ಯಾಯ-ಅನ್ಯಾಯಗಳ ಪ್ರಕರಣವು ಬೇರೆ; ಜಯ-ಪರಾಜಯಗಳ ಪ್ರಕರಣವೇ ಬೇರೆ! ಜಯಾಪಜಯವು ಯಾವು ದಕ್ಕಾದರೂ ಸಂಬಂಧಪಟ್ಟಿದ್ದರೆ, ಅದು ಪರಾಕ್ರಮಕ್ಕೆ ಸಂಬಂಧಿಸಿರುತ್ತದೆ;

ನ್ಯಾಯಕ್ಕಲ್ಲ! ಲಕ್ಷ್ಯದಲ್ಲಿಡು, ಪಾಠಮಾಡು, ಆ ಪರಾಕ್ರಮ ಎಂಬ ಶಬ್ದವನ್ನು! ಜಯದ ಮಂತ್ರವೇ ಅದು! ಆ ಶಬ್ದವನ್ನು ಕಲಿ!''

''ಅಪ್ಪಾ, ಅಪ್ಪಾ, ಅಪ್ಪಾಜಿ!'' ಆತನ ಚಿತ್ತವನ್ನು ಆ ಉಚ್ಚ ವಾತಾವರಣದೊಳಗಿಂದ ಜಗ್ಗಿ ಒಮ್ಮೆಲೆ ಕೆಳಗಿಳಿಸುತ್ತ ಆ ಪುಟ್ಟ ಉಷೆಯು:—''ಅಪ್ಪಾಜಿ, ಇದು ನೋಡಿರಿ. ನೀವೂ ಕೂಡ ಕಂಟಕ ಬಾಬುಗಳಿಗೆ ಹೊಸ ಶಬ್ದ ಕಲಿಸುತ್ತಿರುವಿರಿ! ಇವರಿಗೆ ಏನೂ ಬರುವದಿಲ್ಲೆಂದು ನಾನು ಅಂದದ್ದೇ ನಿಜವು! ಅದೇ ನಿಜ! ಅದೇ ನಿಜ!'' ಆ ಬಾಲಿಕೆಗೆ ಇಷ್ಟು ಹೊತ್ತಿನ ಸಂಭಾಷಣದಲ್ಲಿ ಅದಿಷ್ಟೇ ತಿಳಿಯಿತು!

ಅಪ್ಪಾಜಿಯು ನಕ್ಕನು. ''ಹುಚ್ಚು ಹುಡುಗಿ!'' ಎಂದೆನ್ನುತ್ತ ಕಂಟಕನು ಆಕೆಯ ಗಲ್ಲದ ಮೇಲೆ ಕೌತುಕದಿಂದ ಚಿಟಗೆ ಹೊಡೆದನು!

ಅಷ್ಟರಲ್ಲಿ ಅಂಗಳದ ಬಾಗಿಲಿಗೆ ಹೋಗಿದ್ದ ಮೋಹನನು ನಗುತ್ತ ಬಂದು ''ಬಂದಳು! ಅವ್ವ ಬಂದಳು! ಅವ್ವನು ಬಂದೇಬಿಟ್ಟಳು!'' ಎಂದು ಹೇಳಲು, ಉಷೆಯು ಎದುರಿಗೆ ನೋಡಿ, ಹಾಗೆಯೇ ಅಂದು ಚಪ್ಪಾಳೆ ಹೊಡೆಯಹತ್ತಿದಳು; ಮತ್ತು ಯಾರು ಮೊದಲು ಹೋಗಿ ಅವ್ವನನ್ನು ಮುಟ್ಟುವೆವೆಂದು ಅವರಿಬ್ಬರೂ ಹುಡುಗರು ಓಡಿದರು. ಬಾಗಿಲಿಗೆ ಅವ್ವನು ಬರುತ್ತಲೆ ಮೋಹನನೇ ಅವಳನ್ನು ಮೊದಲು ಮುಟ್ಟಿದನು. ಅತನ ಹಿಂದೆಯೇ ಉಷೆಯು ಹೋಗಿ ಅವ್ವನ ತೊಡೆಗಳನ್ನು ಸುತ್ತುವರಿದಳು. ಆ ಹಡೆದವ್ವನು ಅವರಿಬ್ಬರನ್ನೂ ಮತ್ತೆ ಮತ್ತೆ ಮುದ್ದಿಸುತ್ತ, ಅವರೊಂದಿಗೆ ಮೆಲ್ಲ ಮೆಲ್ಲನೆ ನಡೆಯುತ್ತ, ಅವರ ಮೃದುಲ ಕುಂತಲಗಳ ಮೇಲೆ ಕ್ರಮಕ್ರಮದಿಂದ ಕೈಯಾಡಿಸುತ್ತ ಮಂಚದ ಬಳಿಗೆ ಬಂದಳು. ಕೂಡಲೆ ಕಂಟಕನು ಆಕೆಗೆ ಕಂಡನು.

''ಅವ್ವವ್ವ! ನೀವು ಇಲ್ಲಿ ದಾರಿ ಕಾಯುತ್ತಲೇ ನಿಂತಿರುವಿರಲ್ಲವೇ? ಆ ನಿಮ್ಮ ಗೆಳತಿಯು ಕಡೆಗೆ ನನಗೊಮ್ಮೆ ಭೆಟ್ಟಿಯಾದಳು. ಆಕೆಯೊಡನೆ ನಾನು ಸಾಕಷ್ಟು ಮಾತಾಡಿ ಬಂದಿರುತ್ತೇನೆ.'' ಎಂದು ಕಂಟಕನಿಗೆ ಹೇಳಿ, ಒಳ್ಳೇ ಸಲಗಿಯ ದನಿಯಲ್ಲಿ ಆಕೆಯು ತನ್ನ ಮಾವನನ್ನು ಕುರಿತು-''ಅಪ್ಪಾಜೀ, ಆ ಹುಡುಗೆಯು ಬಹು ಸುಲಕ್ಷಣೆಯಾಗಿರುತ್ತಾಳೆ. ಎಷ್ಟು ವಿನಯಶೀಲಳು, ಎಷ್ಟು ಮನಬಿಚ್ಚಿ ಮಾತಾಡುವವಳು, ಎಷ್ಟು ಪ್ರೇಮಲಳು; ಹಾಗು ಕರಾರವಾಕ್ಕಳಿರುವಳವಳು? ಅವಳಲ್ಲಿ ವ್ಯಂಗವೇ ಇದ್ದುದಾದರೆ, ಅದೊಂದೇ! ಆಕೆಯ ಹೆಸರೇ ಅದು! ಆಕೆಗೆ ಕಂಟಕಿಯೆಂದು ಅದಾವ ಅರಸಿಕನು ಹೆಸರಿಟ್ಟಿರುವನೋ ತಿಳಿಯದು! ಅಂಥ ಹೂವಿನಂತಹ ಕೋಮಲ ಹುಡುಗೆಯ ಹೆಸರು ಗುಲಾಬಿ, ಮಾಲತಿ ಹೀಗೆ ಏನಾದರೂ ಇಡಬೇಕಾಗಿತ್ತು! ಈ ಕಂಟಕ ಬಾಬು

ಳು ಅವಳಿಗಾಗಿ ಇಷ್ಟು ತಳಮಳಿಸುತ್ತಿದ್ದುದೇನೂ ನಿರರ್ಥಕವಾಗಿರಲಿಲ್ಲರೀ!
ಂಟಕ ಬಾಬುಗಳೇ, ನಿಮ್ಮ ಗೆಳತಿಯು ನಿಜವಾಗಿಯೂ ನಿಮಗೆ ಒಪ್ಪುವಂತ
ಹಳೇ ಆಗಿರುತ್ತಾಳೆ. ಅವಳು ಮೋಜಿನಿಂದ ತನ್ನ ಹುಬ್ಬು ಹಾರಿಸುತ್ತ ತನ್ನ
ರಡರ್ಥದ ಭಾವವನ್ನು ಸೂಚಿಸಿದಳು!"

ಐದು ವರ್ಷಗಳನಂತರ ಆ ಪ್ರಿಯ 'ಮಾಲತಿ' ಎಂಬ ಹೆಸರು ಇಂದಿಗೆ
ರವಿಲ್ಲದೆ ಯಾರಾಗಲೊಲ್ಲದು, ಆದರೆ ಆ ಹೆಣ್ಣುಮಗಳ ಬಾಯಿಂದ ಮತ್ತೆ
ತನ ಕಿವಿಗೆ ಕೇಳಿಸಿತು. ಕಳೆದ ಐದು ವರ್ಷಗಳನ್ನು ಆತನು ಆ ಕರಿನೀರ ಮೇಲೆ
ಹೇಗೆ ಕಳೆದನೋ ಆಗ ಆತನ ಮನಸ್ಸಿನಲ್ಲಿ ಆ ಹೆಸರು ಹಗಲೆಲ್ಲ ಗುಣುಗುಟ್ಟು
ತ್ತು; ಆದರೆ ಇಂದು ಆ ವ್ಯಕ್ತಿಯು, ಆ ಪ್ರಿಯ ಮೂರ್ತಿಯು ಪ್ರತ್ಯಕ್ಷ
ವಾಗಿ ಕೇವಲ ಕೂಗಳತೆಯಲ್ಲೇ ಎಲ್ಲಾದರೂ ನಿಂತುಕೊಂಡಿರುವಂತೆ ಆ
ಹೆಸರಿನಲ್ಲಿ ಇಂದು ಜೀವಕಳೆ ತುಂಬಿದಂತಾಗಿತ್ತೆಂಬ ಆ ಕಲ್ಪನೆಯ ಮೂಲಕ
ಂಟಕನ ಅಂತಃಕರಣವು ಒಳ್ಳೇ ಸ್ಫುರಣಗೊಳ್ಳಲು, ಈಗ ಆ ಬಗ್ಗೆ ಮತ್ತೆ
ನು ಕೇಳಿಕೊಳ್ಳಬೇಕೆಂಬದು ಕೂಡ ಆತನಿಗೆ ಭಾನವುಳಿಯಲಿಲ್ಲ! ಆತನು
ಸ್ವತಃ ಕರಿನೀರಿಗೆ ಬಂದಂದಿನಿಂದ ಕಳೆದು ಐದು ವರ್ಷಗಳಲ್ಲಿ ಅತ್ತ ಮಾಲ
ಗೆ ಶಿಕ್ಷೆಯಾದ ನಂತರ ಅವಳ ಗತಿಯೇನಾಯಿತೆಂಬದು ಆ ಕಂಟಕನಿಗೆ-ಆ
ಕಿಶನನಿಗೆ-ಏನೂ ಪತ್ತೆ ಹತ್ತಿರಲಿಲ್ಲ. ಇಂದು ಆ ಮಾಲತಿಯು ಆತನಿಗೆ ಮತ್ತೆ
ದೊರಕಿದಂತಾಯಿತು. ಆ ಹೆಣ್ಣುಮಗಳಿಗೆ ಅವಳನ್ನು ಶೋಧಿಸುವ ಬಗ್ಗೆ
ಆತನು ಎಷ್ಟೋದಿನಗಳಿಂದ ಹೇಳುತ್ತಿದ್ದನು. ಆ ಸ್ತ್ರೀಯು ಕರಿನೀರಿನಲ್ಲಿಯ ಸ್ತ್ರೀ
ಯರ ಬಂದಿಗೃಹದೊಳಗೆ ಒಬ್ಬ ಸ್ತ್ರೀಜಮಾದಾರ ಎಂದು ಕೆಲಸ ಮಾಡುತ್ತಿ
ದ್ದಳು. ಇಂದು ಅವಳಿಗೆ ಆ ಕರಿನೀರಲ್ಲಿಯ ಸ್ತ್ರೀ ಬಂದಿಗೃಹದಲ್ಲಿ ಕಂಟಕನು
ಹೇಳಿದ್ದ ಆ ಕಂಟಕಿ ಎಂಬ ಹೆಸರಿನ ತರುಣಿಯು ಭೆಟ್ಟಿಯಾದಳು; ಮತ್ತು
ಹೆಂಗಸು ಆ ಸಂಗತಿಯನ್ನು ಕಂಟಕನಿಗೆ ಮೇಲೆ ಹೇಳಿದಂತೆ ತಿಳಿಸಿದಳ
ಲ್ಲದೆ "ನಿಮ್ಮ ಗೆಳತಿಯು ಬಹು ಚನ್ನಾಗಿರುತ್ತಾಳೆ; ಅವಳು ನಿಮಗೆ ಒಪ್ಪುವಂ
ತಹಳೇ ಆಗಿರುತ್ತಾಳೆ" ಎಂದು ಪುನಃ ಪುನಃ ಹೇಳಿದಳು. ಅದನ್ನು ಹೇಳು
ವಾಗ ಕಂಟಕಿಯು ಕಂಟಕನ ಜೀವದ ಗೆಳತಿಯಾಗಿರುವಳೆಂಬ ಭಾವವನ್ನು
ಅವಳು ತನ್ನ ಆ ಬಗೆಯ ಹಾವ-ಭಾವಗಳನ್ನು ಮಾಡಿ ವ್ಯಕ್ತಪಡಿಸಿದಳು.
ಅದನ್ನು ಕಂಡು ಕಂಟಕನಿಗೆ ಒಳ್ಳೇ ಅಭಿಮಾನವೆನಿಸಿ, ಆಕೆಯು ನಿಜವಾ
ಗಿಯೂ ನನ್ನ ಸಖಿಯಾಗಿರುವಳು; ನಾನು ಆಕೆಯನ್ನು ಮೋಹಿಸಿರುವ ಆಕೆಯ
ಪ್ರಿಯಕರನಾಗಿರುವೆನು, ಎಂದು ಅಡ್ಡಿತೋರಿಸುವ ಮೋಹವು ಆತನ ಮನಸ್ಸಿ
ನಲ್ಲುಂಟಾಯಿತು. ಆದರೆ--

ಆ ಸುಂದರ ಹುಡುಗಿಯಲ್ಲಿ ಯಾವುದೊಂದು ವ್ಯಂಗವೇ ಇದ್ದುದಾದರೆ, ಅದು ಅವಳ ವಿಸಂಗತ ಹೆಸರೇ" ಎಂದು ಆ ಹೆಣ್ಣುಮಗಳು ಏನು ಅಂದು ತೋರಿಸಿದ್ದಳೋ, ಆ ಕೂಡಲೆ ಆಕೆಯ ಬಾಯಿ ಕಟ್ಟು ಮಾಡಿ, ಅವಳಿಗೆ:— "ಇಲ್ಲ; ಆಕೆಯಲ್ಲಿ ಆ ವಿಸಂಗತ ಹೆಸರಿನ ವ್ಯಂಗವು ಕೂಡ ಇರುವದಿಲ್ಲ. ಅವಳ ನಿಜವಾದ ಹೆಸರು 'ಕಂಟಕಿ' ಎಂದಿರದೆ, ನಿನಗೆ ಬೇಕಾಗಿರುವ 'ಮಾಲತಿ' ಎಂಬುದೇ ಅವಳ ಹೆಸರಾಗಿದೆ." ಎಂದು ಹೇಳಿಬಿಡಬೇಕೆಂಬ ಅನಾವರ ಮೋಹವು ಆತನನ್ನು ಆವರಿಸಿ ಬಿಟ್ಟಿತು. ಆದರೆ........

ಆದರೆ ಬರೆಯುವದಕ್ಕೆ ಇಷ್ಟು ಉದ್ದವಾಗಿ ತೋರುವ ಈ ಭಾವ-ಭಾವನೆಗಳು ಆತನ ಮನಸ್ಸಿನಲ್ಲಿ ಮಿಂಚಿ ಹೋಗಲಿಕ್ಕೆ ನಾಲ್ಕೆಂಟು ಕ್ಷಣಗಳು ಹಿಡಿದಿರಲಿಕ್ಕಿಲ್ಲ. ಅಷ್ಟರಲ್ಲಿ ಆತನು ವಿವೇಕ ತಾಳಿ, 'ಸದ್ಯಕ್ಕೆ ಅದಾವುದನ್ನು ಹೇಳುವುದೂ ಇಷ್ಟವಾಗಿಲ್ಲ. ಅವಳು ಕಂಟಕಿ ಎಂಬ ಹೆಸರಿನ ನನ್ನ ಭಗಿನಿಯೇ ಆಗಿರುತ್ತಾಳೆ. ಸರಕಾರೀ ಶಿಕ್ಷಾವೃತ್ತಾಂತದಲ್ಲಿ ಬರೆದಂತೆ ಅವಳನ್ನು ಓಡಿಸಿಕೊಂಡೊಯ್ದ ಒಬ್ಬ ದುಷ್ಟನ ಕೊಲೆಯು ನಮ್ಮಿಂದಾಯಿತು. ಅದೇ [ನಮ್ಮ ಅಪರಾಧವು! ಅದಕ್ಕಾಗಿಯೇ ನಮಗಿಬ್ಬರಿಗೂ ಈ ಜೀವಾವಧಿ ಕರಿನೀರಾಯಿತು.' ಮುಂತಾದುದನ್ನೇನು ಮೊದಲಿನಿಂದಲೂ ಹೇಳುತ್ತ ಬಂದಿರುವೆವೋ ಅದನ್ನೇ ಮುಂದೆ ಹೇಳುತ್ತಿರಬೇಕು. ಅವಳ ತಾಯಿಯ ಅಥವಾ ಮುಂಚಿನ ಮಥುರೆಯ ಗುರ್ತಿನ ಆ ಖಟ್ಲೆಯ ಅಥವಾ ರಫೀ ಉದ್ದೀನನ ಏನೂ ಸಂಬಂಧವನ್ನು ತೋರಿಸಿಕೊಡದಿರುವುದೇ ಇಷ್ಟವು, ಎಂದು ಆತನು ಮನದಲ್ಲಿಯೇ ನಿಶ್ಚಯಿಸಿದನು; ಆದರೆ..........

ಇವೆಲ್ಲ ವಿಚಾರಗಳ ತಾಕಲಾಟವು ಆತನ ಮನಸ್ಸಿನಲ್ಲಿ ನಡೆದಿರಲು, ಆತನು ಸುಮ್ಮನೆ ತನ್ನ ಕಡೆಗೆ ನೋಡುತ್ತ, ಕೆಲವು ಶಬ್ದಗಳಗಳನ್ನು ತನ್ನ ತುಟಿಯೊಳಗೇ ಗುಣುಗುಟ್ಟುತ್ತ ಗಾಬರಿಗೊಂಡು ನಿಂತುಕೊಂಡದ್ದನ್ನು ದಿಟ್ಟಿಸಿ ನೋಡುವ ಆ ಸ್ತ್ರೀಯು ಮತ್ತೆ ಆದೇ ಇಂಪಾದ ಚೇಷ್ಟೆಯ ಸ್ವರದಲ್ಲಿ ನಕ್ಕು:—"ನಾಚಿಕೆಗೊಂಡಿರೇನು? ಯಾರದು, ಅಪ್ಪಾಜಿಯವರ ಸಂಕೋಚವೆನಿಸುತ್ತಿದೆಯೇನು ಆ ವಿಷಯ ಮುಂದಿರಸಲಿಕ್ಕೆ?"

"ಅಹುದು. ಹಾಗೆಯೇ ಕಾಣುತ್ತದೆ" ಎಂದು ಅಪ್ಪಾಜಿಯು ನಕ್ಕು: "ಒಳ್ಳೇದು ನೀವಿನ್ನು ಒಳಗೆ ಹೋಗಿರಿ; ಯಾವ ಮಾಹಿತಿಯು ಬೇಕೋ ಆ ಬಗ್ಗೆ ಮನಬಿಚ್ಚಿ ಹೇಳಿರಿ; ಮತ್ತು ನಿಮ್ಮ ಗೆಳತಿಗೆ ಏನು ಹೇಳಿ ಕಳಿಸಬೇಕಾಗಿದೆಯೋ, ಅದನ್ನು ಅನುಸೂಯೆಗೆ ಹೇಳ ಹೋಗಿರಿ. ನಿಮ್ಮ ಪ್ರೇಮ ಭಾವನೆಗಳಿಗೆ ನನ್ನಂಥ ವಿರಸಗೊಂಡ ಹಾಗು ರುಕ್ಷ ವೃದ್ಧನಿಗಿಂತ ನಮ್ಮ

ಈ ಅನುಸೂಯೆಯಂಥ ಸವಿಮಾತಿನ, ವತ್ಸಲ ಮತ್ತು ಕಾರುಣ್ಯದ ಸ್ತ್ರೀಯ ಹೃದಯವೇ ಹೆಚ್ಚು ಸಮರಸವಾಗಲು ಶಕ್ಯವಾದೀತೆಂಬದು ನಿಜವು. ಹೋಗು, ಅನುಸೂಯಾ, ನೀನು ಇವರಿಗೆ ಮೊದಲು ಚಹ ಮಾಡಿ ಕೊಡು ಹೋಗು."

ಹೀಗೆಂದು ಆ ಸಹಾನುಭೂತಿಶೀಲ ವೃದ್ಧನು ತನ್ನ ಸೊಸೆಗೆ ಒಳಗೆ ಹೋಗಲಿಕ್ಕೆ ಒಂದು ತೋರಿಕೆಯ ಚಹ ಮಾಡಿ ಕೊಡುವ ನೆವವನ್ನು ಸೂಚಿಸಿಕೊಟ್ಟನು. ಅನುಸೂಯೆಯೂದರೂ ಸಮಯವರಿತು ಅದನ್ನು ಪರಿಪಾಲಿಸಿ ಒಳಗೆ ಹೋಗ ಹೋಗುತ್ತಲೆ ಕಂಟಕ ಬಾಬುವನ್ನು ಕುರಿತು:— "ಕಂಟಕಬಾಬುಗಳೇ, ಬನ್ನಿರಿ. ಒಳಗೆ ಬನ್ನಿರಿ ನಾನು ಚಹ ಮಾಡುವ ವರೆಗೆ ಮಾತಾಡೋಣ. ನಿಮಗೆ ರುಚಿಸುವ ನಿಮ್ಮ ಗೆಳತಿಯ ಸಂಬಂಧದ ಹೊಸ ಹೊಸ ಸಂಗತಿಗಳನ್ನು ತಿಳಿಸುತ್ತೇನೆ ಬನ್ನಿರಿ" ಎಂದು ಹೇಳಿದಳು.

ಅವಳು ತನ್ನ ಉಷೆ ಹಾಗು ಮೋಹನ ಈ ಇಬ್ಬರು ಮಕ್ಕಳ ಕೈಹಿಡಿದು ಕೊಂಡು ಒಳಗೆ ನಡೆದಳು. ಕಂಟಕ ಬಾಬುವಾದರೂ ಒಳ್ಳೇ ಒತ್ತಾಯ ದಿಂದ ಹೋಗುವವರಂತೆ ಅವರನ್ನನುಸರಿಸಿ ನಡೆದನು. ಅದನ್ನು ಕಂಡು, ಅಪ್ಪಾಜಿಯು ಮನಸ್ಸಿನಲ್ಲಿಯೇ ತುಸ ನಕ್ಕು, ಬಳಿಕ ಹತ್ತಿರದಲ್ಲಿಯೇ ಬಿದ್ದಿದ್ದ ಒಂದು ವೃತ್ತಪತ್ರವನ್ನು ಓದತೊಡಗಿದನು.

ಕಂಟಕಬಾಬುವು ಮನೆಯೊಳಗೆ ಬಂದ ಮೇಲೆ ಆತನಿಗೆ ಯಾವ ಯಾವ ಸಂಗತಿ ಹೇಳಬೇಕಾಗಿದ್ದಿತೋ ಅದನ್ನೆಲ್ಲ ಅನುಸೂಯಾಬಾಯಿಯು ಬಹು ಚೆನ್ನಾಗಿ ತಿಳಿಸಿದಳು. ದೂರಾದಂತಹ ಅಲ್ಲ, ಇಲ್ಲವಾದಂತಹ ಪ್ರಿಯ ಜನರ ಪತ್ತೆಯು ಅನಪೇಕ್ಷಿತವಾಗಿ ಆಗಲು, ಪ್ರೇಮಿ ಹೃದಯಕ್ಕೆ ಅವರ ವೃತ್ತವನ್ನು ಏನು ಕೇಳಲಿ-ಏನು ಬಿಡಲಿ? ಎಂದು ಹೇಗಾಗಿ ಹೋಗುತ್ತದೆ? ಮತ್ತು ಆ ಕಾಲಕ್ಕೆ ಬೇಸರ ಉಂಟಾಗುವಂತಹ ಅವರ ಪುನಃ ಪುನೀತ ಜಿಜ್ಞಾಸೆಯನ್ನು ವಿರಸವಾಗದಂತೆ ಸಮಾಧಾನಗೊಳಿಸುವದು ಪ್ರೇಮಿ ದೂತನ ಆದ್ಯಕರ್ತವ್ಯ ಹೇಗಿರುತ್ತದೆಂಬದನ್ನು ತಿಳಿಯುವಷ್ಟು ಸಹೃದಯತೆಯು ಅನುಸೂಯೆಯಲ್ಲಿತ್ತು. ಕಂಟಕನು ಒಂದು ತಿಂಗಳ ಹಿಂದೆ ಆಕೆಗೆ ಬಿನ್ನಯಿಸಿದ್ದನೇನಂದರೆ, ಯಾವ ಸ್ತ್ರೀ ಕಾರಾಗೃಹದಲ್ಲಿ ಆ ಸ್ತ್ರೀಯು ಜಮಾದಾರಳಾಗಿದ್ದಳೋ, ಅಲ್ಲಿ ತನ್ನೊಬ್ಬ ಭಗಿನಿಯು ಬಂದಿರಲಿಕ್ಕೆ ಬೇಕು; ತನ್ನೊಡನೆ ಅವಳಿಗೂ ಜೀವಾವಧಿ ಕರಿನೀರಿನ ಶಿಕ್ಷೆಯಾಗಿದ್ದಿತು; ಆದರೆ ಹಿಂದುಸ್ತಾನದಲ್ಲಿಯೇ ಅವಳನ್ನು ಬೇರೆ ಜೇಲಿಗೆ ಕಳುಹಿಸಲ್ಪಟ್ಟದ್ದರಿಂದ ಮುಂದೆ ಅವಳದೇನಾಯಿತೆಂಬದು,-ಅವಳೂ ತನ್ನಂತೆಯೇ ಕರಿನೀರಿಗೆ ಕಳಿಸಲ್ಪಟ್ಟಿರುವಳೋ ಇಲ್ಲವೆ ಹಿಂದುಸ್ತಾನದಲ್ಲೇ

ಯಾವದೊಂದು ಜೇಲಿನಲ್ಲಿರಿಸಲ್ಪಟ್ಟಿರುವಳೋ ಈ ಬಗ್ಗೆ ಎಷ್ಟು ಬಗೆಯಿಂದ ಶೋಧ ನಡೆಯಿಸಿದರೂ ತನಗೆ ಏನೊಂದೂ-ಪತ್ತೆ ಹತ್ತಿರಲಿಲ್ಲ. ಅದರಿಂದ ಆ ಪತ್ತೆಯನ್ನು ಹಚ್ಚಿಕೊಡುವ ಪ್ರಯತ್ನವನ್ನು ಅನುಸೂಯೆಯು ಶಕ್ಯವಿದ್ದ ಮಟ್ಟಿಗೆ ಮಾಡಬೇಕು. ಕಂಟಕನು ಈ ಬಗೆಯ ಬಿನ್ನಹ ಮಾಡಿದಂದಿನಿಂದ ಅನುಸೂಯೆಯು ಅದೇ ಶೋಧದಲ್ಲಿದ್ದಳು; ಆದರೆ ಕಂಟಕನು ಹೇಳಿದ್ದ 'ಕಂಟಕಿ' ಎಂಬ ಹೆಸರಿನ ಆತನ ಭಗಿನಿಯಂತಹ ಯಾವ ಹುಡುಗೆಯೂ ಆಗ ಆ ಕರಿನೀರೊಳಗಿನ ಸ್ತ್ರೀಯರ ಬಂದಿಗೃಹದಲ್ಲಿರಲಿಲ್ಲ; ಈ ಮೊದಲು ಬಂದ ಪತ್ರೆಯೂ ಹತ್ತಲೊಲ್ಲದು; ಆದರೆ ಈ ತಿಂಗಳಲ್ಲಿ ಯಾವ ಹೊಸ 'ಚಲಾನ' ಬಂದಿತ್ತೋ ಅದರಲ್ಲಿ 'ಕಂಟಕಿ' ಎಂಬ ಹೆಸರಿನ ಒಬ್ಬ ತರುಣಿಯು ಜೀವಾವಧಿ ಶಿಕ್ಷೆಯಾದವಳು, ಕಂಟಕನು ಹೇಳಿದಂತೆ ಇಪ್ಪತ್ತು ವರ್ಷದೊಳಗಿನವಳು, ರೂಪದವಳು ಹಾಗು ಆತನು ಹೇಳಿದಂತೆ ಯಾವಳ ಶಿಕ್ಷಾವೃತ್ತವಿದ್ದಿತೋ, ಅಂಥವಳು ಅಲ್ಲಿಗೆ ಬಂದಿರುವದು ಆ ಅನುಸೂಯಾಬಾಯಿ ಜಮಾದಾರಳಿಗೆ ಎಂಟು ಹತ್ತು ದಿನಗಳ ಮುಂಚೆಯೇ ತಿಳಿದಿದ್ದಿತು; ಮತ್ತು ಆ ಪಕ್ಕಾ ಸಂಗತಿಯನ್ನು ಅವಳು ಕಂಟಕನಿಗೆ ಐದಾರು ದಿನಗಳ ಹಿಂದೆಯೇ ತಿಳಿಸಿದ್ದಳು. ಅವಳನ್ನು ಪ್ರತ್ಯಕ್ಷವಾಗಿ ಕಂಡು ಅವಳ ಸಂಗತಿಯನ್ನು-ಶಕ್ಯವಾದಷ್ಟು ಅವಳ ಬಾಯಿಂದಲೇ-ತಿಳಿದುಕೊಂಡು ಬರುವ ಕಾರ್ಯವನ್ನು ಅನುಸೂಯೆಯು ಆಗಲೆ ತಾನಾಗಿಯೇ ವಹಿಸಿಕೊಂಡಿದ್ದಳು; ಮತ್ತು ಆ ಮೇರೆಗೆ ಸಂಧಿಸಾಧಿಸಿ 'ಕಂಟಕಿ'ಗೆ ಭೇಟಿಯಾಗಿ, ಆ ಕಾರಾಗೃಹದೊಳಗಿನ ಅವಸರದ ಬಿಡುವಿನಲ್ಲಿ ಎಷ್ಟು ಶಕ್ಯವೋ ಅಷ್ಟು ಸಂಗತಿಯನ್ನು ಇಂದು ಅವಳಿಂದ ಕೇಳಿಕೊಂಡಿದ್ದಳು. ಅವಳ ಮಾರ್ಗಪ್ರತೀಕ್ಷೆಯನ್ನೇ ಅತ್ಯಂತ ಉತ್ಸುಕತೆಯಿಂದಲೂ ವ್ಯಾಕುಲತೆಯಿಂದಲೂ ಮಾಡುತ್ತಿದ್ದ ಕಂಟಕನು ಗೊತ್ತಾದಂತೆ ಆ ಬಗ್ಗೆ ಅನುಸೂಯೆಯಿಂದ ಏನಾದರೂ ಇಂದು ತಿಳಿದೇ ತಿಳಿಯುವದೆಂಬ ಆಶೆಯಿಂದ ಇಂದು ಅವಳ ಮನೆಗೆ ವಿಶೇಷ ಸಾಹಸದಿಂದ, ಆ ಭಾಗದ ವರಿಷ್ಠ ಅಧಿಕಾರಿಯ ಕಣ್ಣು ತಪ್ಪಿಸಿ ಹಾಗು ಕೆಳಗಿನ ಚೌಕಿದಾರನಿಗೆ ಏನಾದರೂ ಲಂಚ ತಿನಿಸಿ ಸ್ವತಃ ಬಂದಿದ್ದನು.

ಯಾಕಂದರೆ, ಕಂಟಕನು ಬಂದಿ ಜನರೊಳಗಿನ 'ಬಾಬು' ಆಗಿದ್ದರೂ ಬಂದಿಯೇ ಇದ್ದದರಿಂದ, ಆ 'ದಾಖಲೆಗಾರ'ರ ಸ್ವತಂತ್ರ ಊರೊಳಗೆ ಹೀಗೆ ಬೇಕು ಬೇಕಾದಾಗ ಹೋಗಿ ಬರಲಿಕ್ಕೆ ಆತನಿಗೆ ಅಪ್ಪಣೆಯಿರಲಿಲ್ಲ; ಮತ್ತು ಅದಕ್ಕಾಗಿಯೇ ಸಂಜೆಯ ರಹದಾರಿಯು ಚೌಕ-ಚೌಕಿಗಳಲ್ಲಿ ಕಟ್ಟಾಗುವ ಮೊದಲೇ ನುಸುಳಿ ಪಾರಾಗಿ ಹಿಂದಿರುಗಿ, ಹೋಗುವ ಅವಸರವಾಗಿತ್ತು.

ಆ ಅವಸರದಲ್ಲಿಯೇ ಆತನು ಮನೆಯೊಳಗೆ ಪ್ರವೇಶಿಸಿದ ಕೂಡಲೆ ಅನುಸೂಯೆಯನ್ನು ಕುರಿತು ಎಷ್ಟೋ ಪ್ರಶ್ನೆಗಳನ್ನು ತೀರ ಅರ್ಥಮರ್ಧವಾಗಿ, ತೀರ ಅಕ್ರಮವಾಗಿ, ಕೆಲವುಗಳನ್ನು ಸುಮ್ಮನೆ ಮತ್ತೆ ಮತ್ತೆ ಕೇಳಿ, ಕೆಲವುಗಳನ್ನು ಅರ್ಧಮರ್ಧವಾಗಿಯೇ ಕೇಳಿದ್ದರಿಂದ ಅವುಗಳ ಸುಸಂಗತ ಮಥಿತಾರ್ಥವು ಅವನ ಲಕ್ಷ್ಯದಲ್ಲಿ ಬರಲಿಕ್ಕೂ ಅದರಂತೆ ಅವನಿಗೆ ತದನುರೋಧವಾಗಿ ಯಾವ ನಿಶ್ಚಿತ ನಿರೂಪವನ್ನು ಹೇಳಬೇಕಿತ್ತೋ ಅದರ ನಿಶ್ಚಿತ ರೂಪರೇಷಗಳನ್ನು ಗೊತ್ತುಪಡಿಸಲಿಕ್ಕೂ ಕೂಡ ಸಂಧಿ ಅಥವಾ ಅವಧಾನವು ಉಳಿಯಲಿಲ್ಲ ಕಳ್ಳದನವು ಕಳವಿನಿಂದ ಹೊಲದಲ್ಲಿ ಹೊಕ್ಕಿರಲು, ಹೇಗೆ ಕಣ್ಣಿಗೆ ಕಂಡ ದವಸ, ಧಾನ್ಯ, ಹುಲ್ಲುಗಳನ್ನು ಭರಭರನೆ ಕಡಿದು ಬಾಯಲ್ಲಿ ತುಂಬಿಕೊಳ್ಳುವದೋ, ಹಾಗೆಯೇ ಆ ಅಲ್ಪಾವಕಾಶದಲ್ಲಿ ಕೇಳಿಕೊಳ್ಳಬಹುದಾದ-ತಿಳಿದುಕೊಳ್ಳಬಹುದಾದ ಸಂಗತಿಗಳನ್ನು ಕೇಳಿ-ತಿಳಿದುಕೊಳ್ಳುವಷ್ಟರಲ್ಲಿಯೇ ಐದೂವರೆ ಗಂಟೆಯಾಯಿತು! ಆತನು ಅಲ್ಲಿಂದ ಹಿಂದಿರುಗುವ ತೀರ ತಡವಾದ ಕಾಲವಾಯಿತು ಅದರಿಂದ ಆತನು ಅನುಸೂಯೆಗೆ ಕೊನೆಗೆ ಇಷ್ಟೇ ಹೇಳಿದನು:

“ಗಾಬರಿಗೊಳ್ಳಬೇಡ; ಇನ್ನು ಒಂದು ವಾರದೊಳಗಾಗಿ ಮುಂದಿನ ಬೇತಿನ ಬಗ್ಗೆ ನಾನು ನಿನಗೆ ತಿಳಿಸುವೆನು; ಅದುವರೆಗೂ ಧೈರ್ಯತಾಳು; ಮತ್ತು ಆ ಖೂನಿ ಬಂದಿಗೃಹದ ಯಾತನೆಗಳಲ್ಲೂ, ಶಕ್ಯವಾದಷ್ಟು ಪ್ರಕೃತಿಯನ್ನು ಕಾಪಾಡು, ಎಂದು ಹೇಳಿರಿ.”

ಇಷ್ಟು ನಿರೂಪವನ್ನು ಕಂಟಕಿಗೆ ತಿಳಿಸುವದಕ್ಕೆಂದು ಅನುಸೂಯೆಯು ಮುಂದೆ ಹೇಳಿ, ಅಪ್ಪಾಜಿಗೆ ಅವಸರವಸರದಿಂದಲೇ ನಮಸ್ಕರಿಸಿ, ಆ ಕಂಟಕನು ಮೆಲ್ಲಮೆಲ್ಲನೆ ಆ ಮನೆಯಿಂದ ಹೊರಬಿದ್ದನು. ಮತ್ತು ಗಿಡಗಂಟೆಗಳಿಂದ ಆವರಿಸಲ್ಪಟ್ಟಿದ್ದ ಆ ದಿನ್ನೆಯೊಳಗಿನ ಸೊಟ್ಟಡೊಂಕಾದ ದಾರಿ ಹಿಡಿದು ತನ್ನ ನಿವಾಸಕ್ಕೆ ಹಿಂದಿರುಗಿ ನಡೆದನು.

---

## ೩೦ನೇ ಪ್ರಕರಣ

ಕಂಟಕನು ಅಪ್ಪಾಜಿಯನ್ನು ನಮಿಸಿ ಆ ದಿನ್ನೆಯ ಗಿಡಗಂಟೆಗಳೊಳಗಿಂದ ಅಡಗುತ್ತ ಕುಗ್ಗುತ್ತ ಅವಸರದಿಂದ ಹೊರಟವನು ಆ ದಾಖಲೆಗಾರರ ವಸತಿಯ ಸೀಮೆಯಲ್ಲಿ ಯಾವ ಚೌಕಿಯಿದ್ದಿತೋ ಅಲ್ಲಿಗೆ ಒಳ್ಳೇ ಸುರಕ್ಷಿತವಾಗಿ ತಲುಪಿದನು ಅಲ್ಲಿಯ ಚೌಕಿದಾರನು ಆತನ ಕೈ ಕೆಳಗಿನವನೇ ಇದ್ದುದರಿಂದ ಆತನು ಆತನ ಕಡೆಗೆ ಹೆಚ್ಚಾಗಿ ಲಕ್ಷ್ಯಗೊಡದೆ, ಸರ್ರನೆ ಮುಂದಾಗಬೇಕೆಂದು ಸೂಚಿಸಿದನು ಆ ಕಾದಿಟ್ಟ ದಾರಿಯು ಸಂಜೆಯ ಮುಂದೆ ಕಟ್ಟು

ಗುವ ಮೊದಲೇ ಕಂಟಕನು ಮುಂದಾದನು; ಮತ್ತು ದಂಡಿತರಿಗೆ ಓಡಾಡ ಲಿಕ್ಕೆ ಆತಂಕವಿರದಂತಹ ರಾಜಮಾರ್ಗಕ್ಕೆ ಹೇಗಾದರೊಮ್ಮೆ ಹತ್ತಿದನು. ಆ ಕೂಡಲೆ ಆತನ ಜೀವದ ಹುರುಹುರಿಯು ಕಡಿಮೆಯಾಯಿತು.

ಅಂಡಮಾನಕ್ಕೆ ಕರಿನೀರಿನ ದಂಡಿತರನ್ನು ತಂದ ಕೂಡಲೆ ಆಗಿನ ಕಾಲಕ್ಕೆ ಆ ಕಕ್ಷಕಾರಾಗೃಹದಲ್ಲಿ ಮೊಟ್ಟ ಮೊದಲು ಪ್ರತಿಬಂಧಿಸಿಡುತ್ತಿದ್ದರು. ಅಲ್ಲಿ ಅವರವರ ವರ್ಗಗಳಂತೆ ಪ್ರಥಮ ದಂಡಿತರೂ ನ್ಯೂನಾಪರಾಧಿಗಳೂ ಆದಂಥವರಿಗೆ ನಡವಳಿಯು ಚೆನ್ನಾಗಿ ಇದ್ದರೆ ಬಹುಶಃ ೬-೭ ತಿಂಗಳಿಗೆ ಕಾರಾ ಗೃಹದ ಹೊರಗೆ ಬಿಡುತ್ತಿದ್ದರು; ಮತ್ತು ಯಾರು ನಿಗರಗಟ್ಟಿರೂ ಹಲವು ಸಾರೆ ಶಿಕ್ಷೆ ಹೊಂದಿದವರೂ ಇರುವರೋ, ಅವರಿಗೆ ಅದರ ಅಪರಾಧದ ಭೀಷ ಣತೆಯು ಮತ್ತು, ಆ ಕಾರಾಗಾರದೊಳಗಿನ ಅವರ ವರ್ತನದ ಮಾನದಿಂದ ಅವರು ಸರ್ವಸಾಧಾರಣವಾಗಿ ಒಂದರಿಂದ ಐದು ವರ್ಷಗಳ ನಂತರ ಸೆರೆ ಮನೆಯು ಹೊರಗೆ ಕಳಿಸಲ್ಪಡುತ್ತಾರೆ. ಕಂಟಕನು ಅತ್ತ ಯಾವಾಗ ಕರಿ ನೀರಿಗೆ ಹೋದನೋ, ಆ ಕಾಲಕ್ಕೆ ಸೆರೆಮನೆಯಿಂದ ಹೊರಗೆ ಕಳಿಸಲ್ಪಟ್ಟ ದಂಡಿತರ ವಾಸಕ್ಕಾಗಿ ಯಾವ ಸರಕಾರೀ ಚಾಳುಗಳು ಕಟ್ಟಲ್ಪಟ್ಟಿದ್ದವೋ ಅವುಗಳಲ್ಲೇ ಅವರನ್ನಿಡುತ್ತಿದ್ದರು. ಮರದ ಕೆಲಸ, ಅಡವಿ ಕಡಿಯುವ ಕೆಲಸ, ಇಟ್ಟಂಗಿಯ ಕೆಲಸ ಉಪ್ಪಾರಿಕೆ, ಚಹತೋಟ, ರಬ್ಬರತೋಟ ಮುಂತಾದ ಬೇರೆ ಬೇರೆ ಕೆಲಸಗಳ ದೊಡ್ಡದೊಡ್ಡ ಕಾರಖಾನೆಗಳು ಅಂಡಮಾನದ ಬೇರೆ ಬೇರೆ ವಿಭಾಗಗಳಲ್ಲಿ ಸ್ಥಾಪಿಸಲ್ಪಟ್ಟಿದ್ದವು. ಆ ಸೆರೆಮನೆಯು ಹೊರಗೆ ಬಿಡ ಲ್ಪಟ್ಟ ದಂಡಿತರು ತಂಡಗಟ್ಟಲೆ ಅವುಗಳಲ್ಲಿ ಕಳಿಸಿರಲು, ಅವರನ್ನು ಆ ಚಾಳು ಗಳಲ್ಲಿ ಇರಿಸುತ್ತಿದ್ದರು. ಅವರಿಂದ ಸಕ್ತ ಕೆಲಸ ಮಾಡಿಸಿಕೊಳ್ಳಲಾಗುತ್ತಿತ್ತು; ಆದರೆ ಗೊತ್ತಾದ ಪ್ರದೇಶದಲ್ಲಿ (ತಾಲೂಕುಗಳಲ್ಲಿ) ಅವರಿಗೆ ಪ್ರತಿಬಂಧವಿಲ್ಲ ದಂತೆ ಬಿಡುವಿನ ಕಾಲವನ್ನು ಕಳೆಯುವ, ಬೇಕಾದ್ದನ್ನು ತಿನ್ನುಣ್ಣುವ, ವಿಶಿಷ್ಟ ಇಷ್ಟ-ಮಿತ್ರರಿಗೆ ಭೆಟ್ಟಿಯಾಗುವ, ಅಪ್ಪಣೆ ಪಡೆದು ಬೇರೆ ಪ್ರದೇಶ ಗಳಲ್ಲಿ ಹೋಗಿ ಬರುವ, ಮಾತಾಡುವ ಅಪ್ಪಣೆಯಿದ್ದಿತು. ಅವರಲ್ಲಿಯ ವಿಶಿಷ್ಟ ದಂಡಿತರಿಗೆ ಬಂದಿಜಮಾದಾರ ಮುಂತಾದ ಹುದ್ದೆಗಳನ್ನು ಕೊಟ್ಟು, ಅವ ರಿಗೆ ತಿಂಗಳಿಗೆ ಮೂರು-ನಾಲ್ಕು ರೂಪಾಯಿಗಳು ಮೇಲು ಖರ್ಚಿಗೂ ದೊರೆ ಯುತ್ತಿದ್ದವು. ಈ ಸ್ಥಿತಿಯಲ್ಲಿ ಸುಮಾರು ಹತ್ತೆಂಟು ವರ್ಷ ಅವರ ವರ್ತನವು ಚೆನ್ನಾಗಿದ್ದರೆ, ಅವರಲ್ಲಿಯ ವಿಹಿತವಾದವರನ್ನು "ದಾಖಲೆಗಾರ"ರನ್ನಾಗಿ ಮಾಡುವರು. ಅಂಥವರಿಗೆ ಸ್ವತಂತ್ರ ರೀತಿಯಿಂದ ಮನೆ-ಮಾರುಗಳನ್ನು, ಗದ್ದೆ-ತೋಟಗಳನ್ನು ಮಾಡಿಕೊಂಡಿರಲಿಕ್ಕೆ ಬರುತ್ತದೆ. ಅಂಥವರಿಗೇ 'ದಾಖಲೆ

ಗಾರ'ರಾದ ಸ್ವತಂತ್ರ ಜನರು ಎಂದೆನ್ನುತ್ತಾರೆ. ಆ ದಾಖಲೆಗಾರರ ಸಣ್ಣ ಸಣ್ಣ ಗ್ರಾಮುಗಳನ್ನು ಬಂದಿಗಳ ಪ್ರದೇಶಗಳ ಹೊರಗೆ ಕಾದಿಟ್ಟ ಬೇರೆ ವಸತಿಗಳಲ್ಲಿ ಸ್ಥಾಪಿಸುತ್ತಿದ್ದರು. ಆ 'ದಾಖಲೆಗಾರ'ರ ಸ್ವತಂತ್ರ ಊರೊಳಗೆ ದಾಖಲೆಯಿಲ್ಲದ ದಂಡಿತರಿಗೆ ವಿಶೇಷ ಪ್ರಕಾರದ ಅಪ್ಪಣೆಯು ಹೊರತು ಹೋಗಲಿಕ್ಕೆ ಬರುತ್ತಿರಲಿಲ್ಲ. ಆ ದಾಖಲೆಗಾರರು ದಾಖಲೆಗಾರರಾದ ಸ್ತ್ರೀ ಬಂದಿಯೊಡನೆ ಲಗ್ನವಾದನಂತರ ಯಾರಿಗೆ ಮಕ್ಕಳು-ಮರಿಗಳು ಆಗುತ್ತಿದ್ದವೋ ಅವರ ಆ ಮಕ್ಕಳು ಮರಿಗಳು ಮಾತ್ರ ಹುಟ್ಟುತ್ತಲೆ ತೀರ ಸ್ವತಂತ್ರ ನಾಗರಿಕರೆಂದು ತಿಳಿಯಲಾಗುತ್ತಿತ್ತು. ಈ ಕುಟುಂಬಗಳು ಸ್ವತಃ ಹೊಲ, ತೋಟ ಮಾಡಿ ದನ-ಕರುಗಳನ್ನು ಸಾಕಿ ಇಲ್ಲವೆ ಉದ್ಯೋಗ-ನೌಕರಿ ಇವುಗಳಿಂದ ಹೊಟ್ಟೆ ಹೊರೆಯುತ್ತಿದ್ದರು. ಅವರೊಳಗಿನ ಎಷ್ಟೋ ಜನರು ತಮ್ಮ ಕರ್ತೃತ್ವ ಶಕ್ತಿಯಿಂದ ದೊಡ್ಡ ಸಿರಿವಂತರಾಗುತ್ತಿದ್ದರು.

ಕರಿನೀರಿಗೆ ಹೋದ ದಂಡಿತ ಸ್ತ್ರೀಯರ ಗತಿಯಾದರೂ ಅದೇ; ಆದರೆ ಅವರ ಬಡತಿಯು ಮಾತ್ರ ಬೇಗನೆ ಆಗುವದು. ಗಂಡಸರಂತೆ ಅವರಿಗೆ ಕಠಿಣ ಕೆಲಸವಿಲ್ಲ. ಸ್ತ್ರೀ ಬಂದಿಗೃಹದಲ್ಲಿ ಮೊದಲು ಸುಮಾರು ಐದು ವರ್ಷಗಳ ವರೆಗೆ ಅವರನ್ನು ಪ್ರತಿಬಂಧದಲ್ಲಿಡುವರು. ಆ ಮೇಲೆ ಒಂದು ವಿಹಾರಸ್ಥಳದೊಳಗೆ ಬಿಡುವಿನ ಕಾಲದಲ್ಲಿ ಅವರು ತಿರುಗಾಡಿ ಬರಬಹುದಾಗಿತ್ತು. ಅಲ್ಲಿ ಯಾರಿಗೆ ಲಗ್ನದ ಅಪ್ಪಣೆ ದೊರೆಯುತ್ತಿತ್ತೋ, ಅಂಥ ದಂಡಿತ ಪುರುಷರಿಗೂ ಹೋಗಲಿಕ್ಕೆ ಬರುತ್ತಿತ್ತು. ಸಕ್ತ ಪಹರೆಯಲ್ಲಿ ಆ ಸ್ತ್ರೀಪುರುಷರಿಗೆ ಆ ಬಿಡುವಿನ ಕಾಲದಲ್ಲಿ ಪರಸ್ಪರರ ಗುರ್ತು-ಪರಿಚಯು, ಪ್ರೇಮ-ಪರಿಚಯು ಮಾಡಿಕೊಳ್ಳಲಿಕ್ಕೆ ಅಪ್ಪಣೆಯಿರುತ್ತಿತ್ತು. ಆ ವಿಹಾರಸ್ಥಾನವೆಂದರೆ, ಅಂಡಮಾನದ ಲಂಡನದೊಳಗಿನ 'ಹಾಯಿಡ ಪಾರ್ಕ', ಪುಣೆಯೊಳಗಿನ 'ಬಂಡಗಾರ್ಡನ', ಆ ಕರಿನೀರೊಳಗಿನ ಪಾಪಿಗಳ ಪ್ರೇಮೋದ್ಯಾನವು! ಅಲ್ಲಿ ಆಗುವ ಪ್ರತ್ಯಕ್ಷ ಪರಿಚಯದ ನಂತರ ಯಾವ ಸ್ತ್ರೀಪುರುಷರು ವಿವಾಹವಾಗಬೇಕೆಂದು ಪರಸ್ಪರರ ಸಮ್ಮತಿಯಿಂದ ನಿಶ್ಚಯಿಸುತ್ತಿದ್ದರೋ, ಅದು ಯೋಗ್ಯವೋ ಅಯೋಗ್ಯವೋ ಎಂಬದನ್ನು ನಿರೀಕ್ಷಿಸಿ, ಸರಕಾರವು ಯಾರಿಗೆ ಸಮ್ಮತಿ ಕೊಡುವದೋ ಅವರ ಲಗ್ನಗಳು ರಜಿಸ್ಟರ ಪದ್ಧತಿಯಿಂದ ಆಗುತ್ತಿದ್ದವು; ಮತ್ತು 'ದಾಖಲೆ' ದೊರೆತು, ಆ ಜೊತೆಯು ದಾಖಲೆಗಾರರ ಸ್ವತಂತ್ರ ಊರಿಗೆ ಕಳಿಸಲಾಗುತ್ತಿತ್ತು. ಅಲ್ಲಿಯು ಲಗ್ನಗಳಿಗೆ ಜಾತಿ-ಗೋತ್ರಗಳ ಅಡಚಣೆಯೇನೂ ಇರುವದಿಲ್ಲ. ನಿಶ್ಚಿತ ಕಾರಣಕ್ಕಾಗಿ ಘಟಸ್ಫೋಟವೂ ದೊರೆಯುತ್ತಿತ್ತು.

ಯಾರಾದರೂ ಮತ್ತೆ ಅಪರಾಧ ಮಾಡಿದರೆ ಅವರ 'ದಾಖಲೆ'ಯು

ರದ್ದಾಗಿ, ಅವರು ಮತ್ತೆ ಬಂದಿಗೃಹಕ್ಕೆ ಹೋಗಬೇಕಾಗುತ್ತಿತ್ತು. ಪದ್ಧತಿಯು ನೇರೆಗೆ ಚೌಕಶಿಯಾಗಿ, ಅಲ್ಲಿ ಗಲ್ಲಿನವರೆಗೂ ಶಿಕ್ಷೆಯಾಗುತ್ತಿತ್ತು. ಉದ್ದಂಡ, ಅಘೋರ ಹಾಗು ಅಮಾನುಷ ಪ್ರವೃತ್ತಿಯ ನೂರಾರು ಜೀವಾವಧಿಗಳನ್ನು ಅಂಥ ಅತ್ಯಂತ ಕಠಿಣ ಶಿಸ್ತಿನಲ್ಲಿರಿಸದ ಹೊರತು, ಆ ದ್ವೀಪದಲ್ಲಿ ಜೀವನ ಸುರಕ್ಷಿತತೆ, ಶಾಂತತೆ ಮತ್ತು ಸುವ್ಯವಸ್ಥೆ ಉಳಿಯುವದು ಒಟ್ಟಿನಲ್ಲಿ ದುರ್ಘಟವೇ ಸರಿ!

ಅಪರಾಧ ವಿಜ್ಞಾನದ (Criminology) ಧ್ಯೇಯಗಳು ಮೂರು. ಪ್ರತಿಶೋಧ, ಪ್ರಾಯಶ್ಚಿತ್ತ ಮತ್ತು ಪ್ರಗತಿ. ಅಪರಾಧಿಯ ಮೇಲೆ ಸೇಡು ತಾಯಿಸಿಕೊಳ್ಳುವದು ಮನುಷ್ಯನ ಸ್ವಾಭಾವಿಕ ಪ್ರವೃತ್ತಿಯು. 'ಕಣ್ಣಿಗೆ ಕಣ್ಣು' 'ಹಲ್ಲಿಗೆ ಹಲ್ಲು' ಎಂದು ಯಹೂದಿಯರ ಧರ್ಮದಂಡಕವೇ ಆಗಿತ್ತು. ಯಾವ ಅವಯವದಿಂದ ಅಪರಾಧವು ಮಾಡಲ್ಪಟ್ಟಿತೋ, ಅದನ್ನು ಛೇದಿಸಿ ಬಿಡಬೇಕೆಂದು ಮನುಸ್ಮೃತಿಯಲ್ಲೂ, ಗ್ರೀಕಾದಿ ಪ್ರಾಚೀನ ದೇಶಗಳ ಕಾಯಿದೆಗಳಲ್ಲಿಯೂ ನಿರ್ಬಂಧವಿದೆ; ಅಲ್ಲದೆ ತೀರ ಕಾಡು ಜನರಲ್ಲಿ 'ಯಾವನು ಕೊಲೆ ಮಾಡಿದನೋ ಆತನು ಸಿಗದಿದ್ದರೆ, ಆತನ ವಂಶಜರೊಳಗಿನವನಾವನನ್ನಾದರೂ ಕೊಲ್ಲು' ಈ ರೂಢಿಯು-ಆಚಾರವು ಪ್ರತಿಶೋಧ-ಸೇಡಿನವೇ ಉಗ್ರ ಅಥವಾ ಸೌಮ್ಯ ಪ್ರಕಾರಗಳಿದ್ದವು. ಅದರ ಮುಂದಿನ ವಿವೇಕವೆಂದರೆ, ರಾಜಸತ್ತೆಯಿಂದಂತೂ ಅಪರಾಧಿಗೆ ಪ್ರತಿಶೋಧ-ಸೇಡು ಇದೊಂದೇ ಉದ್ದೇಶವದ್ದಿಡದೆ, ಯಾವ ಬಗೆಯಿಂದ ಕೃತಕರ್ಮಕ್ಕಾಗಿ ಭೋಗಿಸಲಿಕ್ಕೆ ಬೇಕಾಗುವ ದಂಡದಿಂದ ಅವನಿಗೆ ಅಂಜಿಕೆಯುಂಟಾಗುವಷ್ಟೇ ದಂಡ, ಪ್ರತಿಬಂಧಕ ಪ್ರಾಯಶ್ಚಿತ್ತ ಈಯಬೇಕು; ಕಳ್ಳನ ಕೈಯನ್ನೇ ಕಡಿದೊಗೆಯದೆ, ಆ ಕೈಯನ್ನು ಬೇರೆ ಉಪಯುಕ್ತ ಕೆಲಸಗಳಿಗಾಗಿ ಕಾದಿಟ್ಟು, ಕಳವು ಮಾಡುವದಿಷ್ಟೇ ಅತನಿಗೆ ಬೆದರಿಕೆಯೆನಿಸಬೇಕು, ಶಿಕ್ಷೆಯ ಅಂಜಿಕೆಯಿಂದಾದರೂ ಆ ಕಳವು ಬೇಡೆನಿಸಬೇಕು, ಹೀಗೆ ಆತನ ಉದಾಹರಣೆಯನ್ನು ಕಂಡು, ಬೇರೆಯವರಿಗೂ ಬೆದರಿಕೆ ಎನಿಸಬೇಕು, ಅಂಥ ದಂಡ ಮಾಡುವದಷ್ಟೇ ಯೋಗ್ಯವೆಂಬ ಮುಂದಿನ ಮೆಟ್ಟಲು ನಿಶ್ಚಿತವಾಯಿತು. ಸೇಡು ಇದು ಧ್ಯೇಯವಾಗಿರದೆ, ಪ್ರಾಯಶ್ಚಿತ್ತವೆಂಬ ಎರಡನೇ ಧ್ಯೇಯವೇ ಇಷ್ಟಕರವಾಗಿ ತೋರಹತ್ತಿತು. ಅದಕ್ಕೂ ಮುಂದಿನ ಮೆಟ್ಟಲವೆಂದರೆ, ಅಪರಾಧಿಯ ಮನಸ್ಸನ್ನು ಕೇವಲ ಶಿಕ್ಷೆಯ ಅಂಜಿಕೆಯಿಂದಲ್ಲ; ಆದರೆ ಮೂಲತಃ ಸ್ವೇಚ್ಛೆಯಿಂದ ಅಪರಾಧದಿಂದ ಪರಾವೃತ್ತ ಮಾಡಬೇಕು. ಯಾವ ಪರಿಸ್ಥಿತಿಯಲ್ಲಿ ಸುಶೀಲ ಮನಸ್ಸು ಕೂಡ ಅಪರಾಧವನ್ನು ಮಾಡುವದು ನಿರ್ವಾಹವಿಲ್ಲದಾಗುವದೋ, ಆ ಪರಿಸ್ಥಿತಿಯು ಕಟ್ಟಾಗಬೇಕು. ಶಿಕ್ಷಣ, ಸತ್ಸಂಗ, ಮನೋವಿಕಾಸ ಇತ್ಯಾದಿಗಳನು ಸುದ್ದಾಗಿಸಿ ... ಮನ

ಸ್ಸನ್ನೇ ಸಮಾಜಶೀಲ ಹಾಗು ಸುಸಂಸ್ಕೃತಗಳಾಗ ಮಾಡಬೇಕು. ಅವರಲ್ಲಿ ಯ ಮನುಷ್ಯತ್ವದ ಪ್ರಗತಿಯಾಗುವಂತೆ ಮಾಡಬೇಕು; ಅವರಲ್ಲಿ ಮನುಷ್ಯತ್ವವಷ್ಟೇ ಪ್ರಗತಿಹೊಂದಬೇಕು. ಇದು ಅಪರಾಧಿಗಳನ್ನು ನಡೆಯಿಸಿಕೊಳ್ಳುವ ಮೂರನೇ ಉದ್ದಿಷ್ಟವಾಗಿರಬೇಕು.

ಒಟ್ಟಿನಲ್ಲಿ ನೋಡುತ್ತಿರಲಿಕ್ಕೆ ಅಂಡಮಾನದೊಳಗಿನ ಅಪರಾಧಿಗಳನ್ನೆಲ್ಲ ನಡೆಯಿಸಿಕೊಳ್ಳುವ ಧೋರಣವು ಮೂವತ್ತು-ನಾಲ್ವತ್ತು ವರ್ಷಗಳ ಮುಂಚೆ ನಿರ್ಧರಿಸಲಾಗಿತ್ತು. ಅದರಲ್ಲಿ ವಿಶೇಷ ಸುಧಾರಣೆಯಾಗಿರದಿದ್ದರೂ ಮೇಲೆ ಹೇಳಿದ ಮೂರು ಬಗೆಯ ಬಹುಮಟ್ಟಿಗಿನ ಶಾಸ್ತ್ರೀಯ ಉದ್ದಿಷ್ಟಗಳ ಒಂದು ಅಶಾಸ್ತ್ರೀಯುದ್ದೇ ಏಕಾಗಲೊಲ್ಲದು; ಆದರೆ ಒಂದು ಸಹೇತುಕ ಮಿಶ್ರಣ ಮಾಡಲಾಗಿತ್ತೆಂಬದು ಮೇಲೆ ವರ್ಣಿಸಿದ ಕರಿನೀರಲ್ಲಿಯ ದಂಡಿತರ ಆ ಕಾಲದ ವರ್ಗಗಳ ಮೇಲಿಂದ, ಬಡತಿಯ ಕ್ರಮದಿಂದ, ಸುಧಾರಣೇಯು ಮತ್ತು ಅಸುಧಾರಣೇಯುವಾದಂತಹ ಪರೀಕ್ಷೆಯೆಂದು ಪ್ರತಿಯೊಬ್ಬನನ್ನು ಪಾತ್ರಾಪಾತ್ರತೆಗಳಿಗನುರೂಪವಾಗಿ ಕಠಿಣ ಅಥವಾ ಸಾಮಾನ್ಯ ಮತ್ತು ವಿಭಿನ್ನವಾಗಿ ನಡೆಯಿಸಿಕೊಳ್ಳುವ ಧೋರಣದ ಮೂಲಕ ತಿಳಿದು ಬಂದೀತು.

ಯಾವ ಬಂದಿಗಳ ಶೀಲವು ಹತ್ತು-ಹನ್ನೆರಡು ವರ್ಷಗಳ ಕಠಿಣ ಶಿಕ್ಷೆಯಿಂದ, ಸಕ್ತ ಕೆಲಸದಿಂದ ಹಾಗು ಕೃತಕರ್ಮದ ಯಥೇಷ್ಟ ಪ್ರಾಯಶ್ಚಿತ್ತವನ್ನು ಭೋಗಿಸುವದರಿಂದ ಸುಧಾರಿಸುವದೋ, ಅವರಿಗೆ 'ದಾಖಲೆ' ಕೊಟ್ಟು ಅಂಡಮಾನದೊಳಗಿನ ಅಂಡಮಾನದಲ್ಲೇ ಸ್ವತಂತ್ರವಾಗಿರುವ ಅಪ್ಪಣೆ ದೊರಕಿದ ಬಳಿಕ ಅವರವರ ಊರನ್ನು ಬೇರೆ ಬೇರೆಯಾಗಿ ಸ್ಥಾಪಿಸುವದಕ್ಕೂ, ಆ ಸುಧಾರಿಸಿದವರ ಊರಲ್ಲಿ ಒಳ್ಳೇ ನಡತೆಯ ಹನ್ನೆರಡು ವರ್ಷ ಇನ್ನು ಪೂರೈಸದಿದ್ದ ದಂಡಿತರನ್ನು ಬೇಕು ಬೇಕಾದಾಗ ಹೋಗಿಬರಲಿಕ್ಕೆ ಅಧಿಕಾರಿಗಳು ಅಸ್ಪದ ಕೊಡದಿರುವದಕ್ಕೂ ಇದೇ ಕಟಾಕ್ಷವಿದ್ದಿತು. ಹೀಗೆ ಅವರನ್ನು ಬೇರೆ ಬೇರೆಯಾಗಿ ಇರಿಸುವದರಿಂದ, ಆ ಸುಧಾರಿಸಿದವರು ಈ ಸುಧಾರಿಸದಿರುವ ಚಂಡ ಪ್ರಕೃತಿಯ ದಂಡಿತರ ಉಪದ್ರವದಿಂದ ಸಂರಕ್ಷಣವಾಗಬೇಕು; ಮತ್ತು ಆ ಕುಸಂಗತಿಯಿಂದ ಆ ದಾಖಲೆಗಾರರ ಅಥವಾ ಅವರಿಂದ ಅಲ್ಲಿಯೇ ಹುಟ್ಟಿದ ಹೊಸ ಪೀಳಿಗೆಯ ಅಧಃಪಾತವಾಗಬಾರದು.

ಕಂಟಕನಿಗಾದರೂ ಆ ಕರಿನೀರಿಗೆ ಹೋಗಿ ಸುಮಾರು ಐದೇ ವರ್ಷಗಳಾಗಿದ್ದದರಿಂದ ಆತನಿನ್ನೂ ದಂಡಿತರ ವರ್ಗದಲ್ಲಿಯೇ ಎಣಿಸಲ್ಪಡುತ್ತಿದ್ದನು. ಆತನು ಆ ಕಕ್ಷ-ಕಾರಾಗೃಹದಲ್ಲಿ ಸ್ವಲ್ಪ ದಿನ ಸಕ್ತಹಸ್ತಶ್ರಮ ಮಾಡಿದ ನಂತರ ಅವನಿಗೆ ಬರೆಯುವ ಕೆಲಸವು ದೊರೆಯಿತು. ಅಲ್ಲಿ ಆತನು ಒಳ್ಳೇ ನಡತೆ

ಯನ್ನು ತೋರಿದ್ದರಿಂದ, ಆರು ತಿಂಗಳ ನಂತರ ಆತನನ್ನು ಕಾರಾಗೃಹದ ಹೊರಗ ಬಿಟ್ಟರು. ಹೊರಗಿನ ಪ್ರದೇಶಗಳಲ್ಲಾದರೂ ಲೇಖನ ಕೆಲಸದ ಮೇಲೆಯೇ ಕಳಿಸಲಾಯಿತು. ಆತನು ತನ್ನ ಇಂಗ್ಲಿಷ ಓದುಬರೆಹಗಳನ್ನು ಹೆಚ್ಚಿಸಿದನು. ಕೆಲಸವನ್ನೂ ಚೆನ್ನಾಗಿ ಮಾಡಿದನು. ಆತನ ವರ್ಚಸ್ಸು ಅಧಿಕಾರಿಗಳಲ್ಲಿಯೂ ಹೆಚ್ಚಿತು. ಅಂಡಮಾನದೊಳಗಿನ ಕಠಿಣ ಮತ್ತು ಕಷ್ಟದಾಯಕ ಕೆಲಸಗಳಲ್ಲಿ ಅತ್ಯಂತ ಕಠಿಣತರವಾದ ಯಾವ ಅಡವೀ ಕಡಿಯುವ ಕೆಲಸವಿದ್ದಿತೋ, ಆದರ ಮೇಲೆ ಈಗ ಆತನು ಗಣತಿ ಹಾಗು ಮೇಲ್ವಿಚಾರಣೆ ಮಾಡುವ 'ಬಂದಿಬಾಬು' (Convict-clerk) ಎಂದು ನಿಯಮಿಸಲ್ಪಟ್ಟಿದ್ದನು; ಮತ್ತು ಅವನ ಕೈಕೆಳಗೆ ನೂರು ಸಶ್ರಮ ದಂಡಿತರ ಒಂದು ಪಥಕವು ಘನದಟ್ಟವಾದ ಅಡವಿಯನ್ನು ಕಡಿಯುವ ಕೆಲಸಕ್ಕೆ ಕಳಿಸಲಾಗುತ್ತಿತ್ತು. ಆದರೂ ಕೂಡ ಆತನು ಕರಿನೀರಿಗೆ ಹೋಗಿ ಐದೇ ವರ್ಷಗಳಾದ್ದರಿಂದ, ಅವನು ಅಲ್ಲಿಯ ನಿಯಮದಂತೆ ಬಂದಿಗಳಲ್ಲಿಯೇ ಗಣಿಸಲ್ಪಡುತ್ತಿದ್ದನು; ಅಂತೆಯೇ ಆ ದಾಖಲೆಗಾರರ ವಸತಿಗೆ ಬೇಕಾದಾಗ ಹೋಗಿ ಬರಲಿಕ್ಕೆ ಆತನಿಗೆ ಅನುಜ್ಞೆಯಿರಲಿಲ್ಲ. ಆ ಅಡವಿ ಕಡಿಯಲಿಕ್ಕೆ ಹೋಗಿ ಬರುವ ಕಾಲದಲ್ಲಿ ಅಪ್ಪಾಜಿಯ ಮನೆಯ ಜನರ ಗುರ್ತು ಅವನಿಗೆ ಯೋಗಾಯೋಗದಿಂದಾಗಿ, ವಿಶೇಷ ಯಾವ ಪರಿಚಯವುಂಟಾಗಿದ್ದಿತೋ, ಅದಾದರೂ ಅಂತಸ್ಥವಾಗಿಯೇ ಇದ್ದಿತು. ಅಂತೆಯೇ ಇಂದಾದರೂ ಆತನು ಆ ವಸತಿಗೆ ಅಲ್ಲಿಯ ಚೌಕಿದಾರನ ಸಲಿಗೆಯ ಮೂಲಕ ಎಂದಿನಂತೆ ಕಳವಿನಿಂದಲೇ ಅಪ್ಪಾಜಿಯ ಮನೆಯವರ ಭೆಟ್ಟಿಗೆ ಹೋಗಿರಲು, ಆ ಭೆಟ್ಟಿಯನ್ನು ಚೌಕಿಯೊಳಗಿನ ಸಂಜೆಯ ಮುಂದಿನ ರಹದಾರಿಯು ಕಟ್ಟಾಗುವ ಮೊದಲೇ ಮುಗಿಸಿ, ಅಪ್ಪಾಜಿಯ ಅಪ್ಪಣೆ ಪಡೆದು, ಹಾಗೆ ಆ ದಿನ್ನೆಯಮೇಲೆ ಅಡಗುತ್ತ ಕುಗುತ್ತ ಬಂದು, ಕೊನೆಗೆ ದಂಡಿತರು ಬೇಕಾದಾಗ ಅಡ್ಡಾಡಬಹುದಾದ ಪ್ರದೇಶಕ್ಕೆ ತಲುಪಿ, ತನ್ನ ಅಡವಿ ಕಡಿಯುವ ಬಂದಿಗಳ ಚಾಳಿನ ನಿಶ್ಚಿತ ಮಾರ್ಗಕ್ಕೆ ಹತ್ತಿದೊಡನೆಯೇ ಆತನ ಜೀವಕ್ಕೆ ಹಾಯ ಎನಿಸಿದಂತಾಯಿತು.

ಕಂಟಕನು ನಿರ್ಧಾಸ್ತವಾಗಿ ಮಾರ್ಗಕ್ಕೆ ಹತ್ತಿದ ಬಳಿಕ ಅನುಸೂಯೆಯಿಂದ ಮಾಲತಿಯ ವಿಷಯವಾಗಿ ಬಹು ದಿನಗಳ ನಂತರ ಆತನಿಗೆ ಯಾವ ಸಂಗತಿಯು ತಿಳಿದಿದ್ದಿತೋ, ಆ ಬಗ್ಗೆ ಆತನ ಮನಸ್ಸಿನ ಚಕ್ರವು ಚಲಿಸಲಾರಂಭಿಸಿತು. ಆಗ ಕಳೆದ ಐದು ವರ್ಷಗಳೊಳಗಿನ ಸಂಪೂರ್ಣ ಇತಿಹಾಸವು ಆತನ ಕಣ್ಣೆದುರಿಗೆ ನಿಂತಿತು. ಅವೆರಡೂ ವಿಷಯಗಳೊಡನೆ ಆ ದಿನ ಅಪ್ಪಾಜಿಯು ಐವತ್ತೇಳರ ಸ್ವಾತಂತ್ರ್ಯಯುದ್ಧದಲ್ಲಿ ಭಾಗವಹಿಸಿದ ಯಾವ ಸಂಗತಿ

ಯನ್ನು ಅವನಿಗೆ ಹೇಳಿದ್ದನೋ ಮತ್ತು ಅದನ್ನು ಕೇಳಿಕೊಂಡದ್ದರಿಂದ ಆ ಕುಟುಂಬದ ಬಗ್ಗೆ ಅವನಿಗೆ ಯಾವ ಒಂದು ರಾಷ್ಟ್ರೀಯ ಆದರವೆನಿಸಹತ್ತಿತ್ತೋ ಅದರ ವಿಚಾರವೂ ಚಲಿಸಹತ್ತಿತು. ಆದರ ಅನುಷಂಗದಿಂದ ಆ ಕುಟುಂಬದೊಡನೆ ಆ ಕಂಟಕನ ಪರಿಚಯವು ಹೇಗಾಯಿತು, ಹೇಗೆ ಹೆಚ್ಚಹತ್ತಿತು? ಈ ಚರಿತ್ರವೂ ಆತನ ಆ ವಿಚಾರಚಕ್ರದಲ್ಲಿ ಸುತ್ತಿಕಟ್ಟಿಕೊಳ್ಳುತ್ತಿತ್ತು; ಮತ್ತು ಎಲ್ಲಕ್ಕೂ ಮಹತ್ವದ ಚಿಂತೆಯೆಂದರೆ, 'ಮುಂದೆ ಏನು ಮಾಡಬೇಕು?' ಆ ಭವಿಷ್ಯತ್ಕಾಲದಲ್ಲಿ ಆಗಬೇಕಾಗಿದ್ದ ಘಟನೆಗಳು ಇದುವರೆಗೆ ಆಗಿಹೋಗಿದ್ದ ಘಟನೆಗಳ ಸ್ಮೃತಿಗಳನ್ನು ಮತ್ತೆ ಮತ್ತೆ ಹಿಂದೂಡುತ್ತ 'ನನ್ನ ನಿರ್ಣಯವನ್ನು ಮೊದಲು ಮಾಡಿರಿ!' ಎಂದು ಬಜಾಯಿಸುತ್ತ, ಆತನೆದುರಿಗೆ ದೂತ್ತೆಂದು ಬಂದು ನಿಲ್ಲುತ್ತಿದ್ದವು.

ಇವೆಲ್ಲ ವಿಚಾರಗಳು ಯಾವ ವಿಷಯದ ಮೇಲೂ ಕ್ರಮದಿಂದ ಆತನ ಮನಸ್ಸಿನಲ್ಲಿ ಬರುತ್ತಿರಲಿಲ್ಲ; ಆದರೆ ಆಗಾಗ್ಗೆ ಹಿಂದೆ ಮುಂದೆ, ಇದರಲ್ಲಿ ಅದು, ಅದರಲ್ಲಿ ಇದು, ಹೀಗೆ ತೊಡಕಿನಿಂದಲೇ ನಡೆಯುತ್ತಿದ್ದವು. ಒಂದಣವರೆ ಎರಡು ವ್ಯಕ್ತಿಗಳ ಆ ದಾರಿಯನ್ನು ಬೇಗ ಬೇಗನೆ ನಡೆಯುತ್ತಿದ್ದರೂ ಕಂಟಕನು ಆ ವಿಚಾರಗಳ ತೊಡಕಿನಲ್ಲಿ ತೀರ ಗುಂಗಾಗಿ ಹೋಗಿದ್ದನು. ಆ ವಿಚಾರಗಳ ತೊಡಕನ್ನು ಬಿಂಗಡಿಸಿ ವಿಷಯ-ವಿಷಯಗಳ ಕ್ರಮ ಹಚ್ಚಿದರೆ, ಮಾಲತಿಯ ಪ್ರಕರಣದ ಹೊಂದಿಕೆಯನ್ನು ಸಾಧಾರಣವಾಗಿ ಹೀಗೆ ಮಾಡಬಹುತ್ತಿತ್ತು:

ಅಪ್ಪಾಜಿಯ ಕುಟುಂಬದೊಡನೆ ಕೆಲ ತಿಂಗಳ ಹಿಂದೆ ಪರಿಚಯವಾದ ನಂತರ ಅಪ್ಪಾಜಿಯ ಸೊಸೆಯಾದ ಅನುಸೂಯಾಬಾಯಿಯು ಅಲ್ಲಿಯ ಸ್ತ್ರೀ ಬಂದಿಗೃಹದೊಳಗೆ ಒಬ್ಬ ದಾಖಲೆಗಾರ ಸ್ತ್ರೀ ಜಮಾದಾರಳಾಗಿರುವಳು. ಕರಿನೀರಿಗೆ ಬಂದಂದಿನಿಂದ ಅಂಡಮಾನದ ಸ್ತ್ರೀ ಬಂದಿಗೃಹದೊಳಗೆ ಮಾಲತಿಯು ಬಂದಿರುವಳೋ ಇಲ್ಲವೋ ಅಥವಾ ಅವಳಿಗೆ ಜೀವಾವಧಿಯ ಶಿಕ್ಷೆಯಾದ ಬಳಿಕ ಅವಳನ್ನು ಹಿಂದುಸ್ಥಾನದಲ್ಲೇ ಯಾವುದೊಂದು ಕಾರಾಗೃಹದಲ್ಲಿ ಪ್ರತಿಬಂಧಿಸಿಟ್ಟಿರುವರೋ ಈ ಬಗ್ಗೆ ಆತನು ಒಳ್ಳೇ ಸೂಕ್ಷ್ಮವಾಗಿ ಶೋಧ ನಡೆಸಿದ್ದನು; ಆದರೆ ಸ್ತ್ರೀಯರ ಜೇಲಿನೊಳಗಿನ ಸಕ್ತ ಪಹರೆಯ ಮೂಲಕ ಮತ್ತು ಅಲ್ಲಿ ಬಂದಿಪುರುಷರ ಪ್ರವೇಶವು ಅಥವಾ ಸಂಬಂಧವು ಕೂಡ ಉಂಟಾಗಬಾರದೆಂದು ಕಟ್ಟುನಿಟ್ಟಿನ ವ್ಯವಸ್ಥೆಯಿರಿಸಿದ್ದರಿಂದ, ಕಂಟಕನಿಗೆ ಆ ಸಂಗತಿಯ ಬಗ್ಗೆ ಯಾವ ಎಳೆಯೂ ದೊರೆತಿರಲಿಲ್ಲ. ಯಾವ ಅಲ್ಪ ಮಾಹಿತಿಯು ಅವನಿಗೆ ದೊರೆತಿದ್ದಿತೋ, ಕಂಟಕಿ ಎಂಬ ಹೆಸರಿನ ಯಾವ ಸ್ತ್ರೀಯೂ

ಹಿಂದುಸ್ತಾನದಿಂದ ಅಲ್ಲಿಗೆ ಬಂದಿಲ್ಲವೆಂಬುದೇ ಆಗಿತ್ತು. ಅನುಸೂಯೆಗೆ ಐದಾರುತಿಂಗಳ ಮುಂಚೆ ಆತನು ಅದನ್ನು ಯಾವಾಗ ಕೇಳಿದನೋ, ಆಗಲೂ ಕೂಡ ಆಕೆಯು ಆ ಬಂದಿಗೃಹಕ್ಕೆ ಬಂದಿರಲಿಲ್ಲವೆಂಬುದೇ ಖಂಡಿತವಾಗಿ ತಿಳಿದಿದ್ದಿತು. ಆದರಿಂದ ಮಾಲತಿಗೆ ಜೀವಾವಧಿಯ ಶಿಕ್ಷೆಯಾದ ಬಳಿಕ ಆಕೆಯ ಗತಿಯೇನಾಯಿತೆಂಬ ಚಿಂತೆಯು ಆತನನ್ನು ಒಂದೇಸವನೆ ಕೊರಗಹಚ್ಚಿತ್ತು. ಅವಳ ನೆನಪಾದ ಕೂಡಲೆ ಆತನಿಗೆ ಕೂಳು ಕೂಡ ಸೇರುತ್ತಿದ್ದಿಲ್ಲ. ಮೊದಲು ಆಕೆ ಆತನಿಗೆ ಪ್ರತ್ಯಕ್ಷ ಭೆಟ್ಟಿಯಾಗುತ್ತಿದ್ದಾಗ ಕೂಡ ಆಕೆಯ ಸ್ಪರ್ಶದ ಸಲುವಾಗಿ ಆತನು ಎಷ್ಟು ರೋಮಾಂಚಿತನಾಗುತ್ತಿರಲಿಲ್ಲವೋ, ಅಷ್ಟು ಆ ಸ್ಪರ್ಶದ ಕೇವಲ ಸ್ಮೃತಿಯಿಂದಲೇ ಆತನು ಈಗ ರೋಮಾಂಚಿತನಾಗುತ್ತಿದ್ದನು. ಅನ್ನವು ದೊರೆಯುತ್ತಿರುವಾಗಿನಿಗಿಂತ ಅದು ದೊರಕದಿದ್ದಾಗ ಅದರ ಸ್ಮೃತಿಯಿಂದಲೇ ಅದು ನೂರಾರು ಪಟ್ಟು ಹೆಚ್ಚು ಸವಿ ಹತ್ತುತ್ತದೆ! ಇದಲ್ಲದೆ ಇತ್ತೀಚೆಗೆ ಆತನ ಮನಸ್ಸಿನಲ್ಲಿ ಮಾಲತಿಯ ಅಂದಿನ ಆ ಸ್ಪರ್ಶದ ನೆನಪು ಉಂಟಾಗಲು, ಮೊದಲಿನಂತೆ ಬರಿಯ ಸ್ನೇಹದ ಭಾವನೆಯೇ ಜಾಗೃತಗೊಳ್ಳುತ್ತಿರದೆ, ಉಪಭೋಗದ ಭಾವನೆಯೂ ಉದ್ದೀಪ್ತವಾಗುತ್ತಿತ್ತು. ಆಕೆಯು ಪ್ರತ್ಯಕ್ಷ ನನ್ನ ಬಳಿಯಲ್ಲಿರುವಾಗ ನಾನು ಆಕೆಯನ್ನು ಆಲಿಂಗಿಸಲಿಕ್ಕೇಕೆ ಮನಸ್ಸು ಮಾಡುತ್ತಿರಲಿಲ್ಲ; ಅದೇಕೆ ಆಲಿಂಗಿಸಲಿಲ್ಲವೆಂಬದರ ಬಗ್ಗೆಯೇ ಆತನಿಗೆ ಈಗ ಮತ್ತೆ ಮತ್ತೆ ಕೆಡಕೆನಿಸುತ್ತಿತ್ತು. ಕೊನೆಯ ರಾತ್ರಿಯಲ್ಲಿ ಆಕೆಯನ್ನು ಪೀಡಿಸುತ್ತಿದ್ದ ಆ ಗುಂಡನನ್ನು ಕೊಲೆಗೈದ್ದ ಬಳಿಕ ಯಾವಾಗ ಆ ಭಯಂಕರ ಪರಿಣಾಮದಿಂದ ಪಾರಾಗುವ ಸಲುವಾಗಿ ಆ ಕಿಶನನು ಆ ಮಾಲತಿಯೊಡನೆ ಆ ಗುಡಿಯೊಳಗೆ ಆ ಕಾರ್ಗತ್ತಲೆಯಲ್ಲಿ ಹೋಗಿ ಅಡಗಿಕೊಂಡಿದ್ದನೋ, ಆ ರಾತ್ರಿಯಲ್ಲಂತೂ ಆಕೆ ಭಯದಿಂದ ನಡುಗುತ್ತ ನಿದ್ದೆಯಿಂದೆಚ್ಚತ್ತಳು; ತಾನಾಗಿ ಹೋಗಿ ಆತನ ಕೊರಳಿಗೆ ತೆಕ್ಕೆ ಬಿದ್ದು, 'ನನ್ನನ್ನು ಮಗ್ಗಲಲ್ಲಿಟ್ಟುಕೊಂಡು ಮಲಗು' ಎಂದು ಹೇಳಿ, ತಾನಾಗಿ ಹೋಗಿ ಆತನಿಗೆ ಹೊಂದಿ ಮಲಗಿಕೊಂಡಳು. ಆ ಕಾಲದ ಪ್ರತಿಯೊಂದು ಚಲನವಲನದ ನೆನಪು ಇತ್ತೀಚೆಗೆ ಆತನಿಗೆ ಹಗಲೂರಾತ್ರಿಯಲ್ಲಿ ಏಕಾಂತದಲ್ಲಿದ್ದಾಗ ತಪ್ಪದೇ ಆಗುತ್ತಿತ್ತು. ಅಂದು ಅವಳು ಆತನನ್ನು ಎದೆಗೆವಚಿಕೊಂಡು ಮಲಗಿದಾಗ, ಮಾಲತಿಯ ಕೂದಲುಗಳು ಆತನ ಗಲ್ಲಗಳ ಮೇಲೆ ಹೇಗೆ ಅಲೆದಾಡುತ್ತಿದ್ದವೋ, ಕೇವಲ ಅದರಂತೆಯೇ ಆ ಕೂದಲುಗಳು ತನ್ನ ಗಲ್ಲ ಹಾಗು ಎದೆಯ ಮೇಲೆ ಈಗಲೂ ಅಲ್ಲಾಡುತ್ತಿರುವಂತೆ ಆತನಿಗೆ ಮತ್ತೆ ಮತ್ತೆ ಭಾಸವಾಗುತ್ತಿತ್ತು. ಆಗ ಆತನ ಎಲ್ಲ ಅಂತಃಕರಣವು ಕಾಮುಕಂಪಿತವಾಗಿ ಥರಗುಟ್ಟುತ್ತಿತ್ತು; ಪಶ್ಚಾತ್ತಾಪದಿಂದ

ತಳಮಳಿಸುತ್ತಿತ್ತು; ಮತ್ತು ಅದೊಂದೇ ರಾತ್ರಿಯಲ್ಲಾದರೂ ನಾನು ಬರಿಯ ಸಂಯಮನಕ್ಕೆ ಹಾಗು ಹೇಡಿ ಸಂಕೋಚಕ್ಕೆ ಸುಮ್ಮ ಸುಮ್ಮನೆ ಅದೇಕೆ ಬಲಿಯಾದೆನು? ಅಮೃತದ ಪಾತ್ರೆಯನ್ನು ಕೇವಲ ತುಟಿಗೆ ಹಿಡಿದಿರಲು, ಕುಡಿಯುವುದನ್ನಷ್ಟೇ ಮರೆತುಬಿಟ್ಟೆನಲ್ಲ! ಅವಳ ಸಂಗಸುಖಕ್ಕೆ ಇಡೀ ಜನ್ಮದಲ್ಲಿ ಅಂತರಿಸಿದೆನಲ್ಲ!

ಪ್ರೇಮಿಕ ವ್ಯಕ್ತಿಯು ಸಮಕ್ಷವೂ ಸನ್ನಿಧವೂ ಇದ್ದಿತೆಂದರೆ, ತೀರ ಆಲಿಂಗನದಲ್ಲಿ ಕೂಡ ಅದರ ಇಚ್ಛಾನಿಚ್ಛೆಯು ಬಾಬು ಅದರಲ್ಲಿ ಅನುರಕ್ತವಾಗಿದ್ದ ಪ್ರಣಯಿಯ ಮನಸೋಕ್ತ ಇಚ್ಛೆಯನ್ನೇ ಎಷ್ಟಾದರೂ ಅವಲಂಬಿಸಿರುತ್ತದೆ; ಆದರೆ ಯಾವಾಗ ಆ ಪ್ರೇಮಿಕ ವ್ಯಕ್ತಿಯು ಕೇವಲ ಸ್ಮೃತಿಯೊಡನೆಯೂ ಮತ್ತು ತನ್ನಲ್ಲಿ ಅನುರಕ್ತಳಾದ ಪ್ರಣಯಿಯ ಕಲ್ಪನೆಯ ಲಹರಿಗಳಲ್ಲೂ ವಿಹರಿಸತೊಡಗಿರುತ್ತಾನೋ, ಆ ಕಾಲಕ್ಕೆ ಆತನ ಮನಸ್ಸಿನ ಉಲ್ಲಾಸವು ಹೆಚ್ಚಾಗಿ ಪ್ರಕಟವಾಗುತ್ತದೆ. ತನ್ನ ಮನಸ್ಸಿನಂತೆಯೇ ಎಲ್ಲವೂ ಆಗಿರುತ್ತದೆಂದು ತನ್ನ ಮನಸ್ಸಿನ ತಿಳುವಳಿಕೆಯನ್ನು ಮಾಡಲಿಕ್ಕೆ ಆತನಿಗೆ ಏನೂ ಆತಂಕವುಳಿದಿರುವುದಿಲ್ಲ. ಆತನ ಅತೃಪ್ತ ಹಾಗು ಅವ್ಯಕ್ತ ವಾಸನೆಯು ಎಲ್ಲ ಸಂಕೋಚವನ್ನು ತೊರೆದು ತನ್ನ ಇಚ್ಛೆಯನ್ನು ಪೂರ್ತಿಗೊಳಿಸಿಕೊಳ್ಳಲು ಶಕ್ತವಾಗುತ್ತದೆ. ಆ ಪ್ರೇಮಿಕ ವ್ಯಕ್ತಿಯು ಸಮಕ್ಷ, ಸನ್ನಿಧ ಇರುವಾಗ ಯಾವ ಹೃದ್ಗತವನ್ನು ಹೇಳಲಿಕ್ಕೆ ಮನಸ್ಸು ನಾಚಿಕೊಳ್ಳುವದೋ, ಅದನ್ನು ಆ ವ್ಯಕ್ತಿಯ ಸ್ಮೃತಿಮೂರ್ತಿಗೆ ಮನಬಿಚ್ಚಿ ಹೇಳಬರುತದೆ. ತನ್ನ ಲಹರಿಯಂತೆ ಅದರ ಲಹರಿಯನ್ನು ತನಗೆ ಬೇಕಾದಾಗ ಹಾಗೆ ಮಾಡಿಕೊಳ್ಳಬರುತ್ತದೆ

ಕಂಟಕನಿಗೆ ಆತನ ಆ ಏಕಾಂತ ತಳಮಳದಲ್ಲಿ ಹಾಗೆಯೇ ಆಗುತ್ತಿತ್ತು. ಮಾಲತಿಯು ಆತನ ಸಾನ್ನಿಧ್ಯದಲ್ಲಿ ಸಮಕ್ಷ ಇದ್ದಾಗ ಆಕೆಯ ವಿಷಯದ ಕಾಮುಕ ಭಾವನೆಗಳು ಆತನ ಅಸಂಜ್ಞ ಮನಸ್ಸಿನಲ್ಲಿ ಏನು ಹುಟ್ಟಹತ್ತಿದ್ದವೋ ಹತ್ತಿದ್ದವು; ಆದರೆ ಅವು ಆಗ ಆತನ ಸಂಜ್ಞಮನಸ್ಸಿಗೆ ಕೂಡ ಮನಬಿಚ್ಚಿ ತನ್ನ ಹೃದ್ಗತವನ್ನು ತಿಳಿಸಲಿಕ್ಕೆ ನಾಚುತ್ತಿದ್ದವು; ಆದರೆ ಈಗ ಆ ವಿರಹದೊಳಗಿನ ಅಶ್ರುಗಳ ಹನಿಗಳಿಂದ ನೆನೆನೆನೆದು ಮೊಳಕೆಯೊಡೆದು, ಎಲೆಗಳಾಗಿ, ಆತನ ಸಂಜ್ಞಮನಸ್ಸಿನ ಭೂಮಿಕೆಯಲ್ಲೂ ಅವು ಸುಶೋಭಿತಗಳಾಗಿದ್ದವು! ಮುಂಚೆ ಮೊಟ್ಟಮೊದಲು ಅವಳ ಕಲ್ಯಾಣಕ್ಕಾಗಿಯೂ, ತನ್ನ ಕರ್ತವ್ಯಕ್ಕಾಗಿಯೂ, ಅವಳನ್ನು ಸಂಕಟದೊಳಗಿಂದ ಪಾರುಮಾಡಿ ಸುಖಿಸುವುದಕ್ಕಾಗಿಯೂ ಆತನು ಸ್ವಂತದ ಜೀವವನ್ನು ಸಂಕಟಕ್ಕೀಡುಮಾಡಿದ್ದನು; ಆದರೆ ಈಗಲಂತೂ ಆಕೆಯ ಕಲ್ಯಾಣಕ್ಕಾಗಿಯೂ, ಆಕೆಯ ಸಂಗದ

ಸ್ವರ್ಗೀಯ ಸುಖಕ್ಕಾಗಿಯೂ ಆತನು ತಳಮಳಿಸಹತ್ತಿದ್ದನು. ಅವಳನ್ನು ಸಂಕಟದಿಂದ ಮುಕ್ತ ಮಾಡುವ ಕೆಲಸದಲ್ಲಿ ಆತನು ಸ್ವಂತದ ಜೀವವನ್ನು ಮತ್ತೊಮ್ಮೆ ಸಂಕಟಕ್ಕೊಳಪಡಿಸಲು ಹಿಂದೆಗೆಯದಾದನು.

ಮತ್ತು ಇಂದು ಅನುಸೂಯೆಯು ಅವನಿಗೆ ತಿಳಿಸಿದ ಸಂಗತಿಯಂತೆ ನೋಡಲು, ಮಾಲತಿಯು ಆ ಸ್ತ್ರೀ ಬಂದಿಗೃಹದಲ್ಲಿಯೂ ಜೀವದ ಮೇಲಿನ ಸಂಕಟದಲ್ಲಿಯೇ ಇದ್ದಳು. ಅವಳನ್ನು ಬಿಡಿಸುವುದೆಂದರೆ, ಕಂಟಕನಿಗಾದರೂ ತನ್ನ ಜೀವವನ್ನು ಹಿಂದಿನಂತೆ ಒಂದು ಭಯಂಕರವಾದ ಕುತ್ತಿನಲ್ಲಿ ನೂಕ ಬೇಕಾಗುತ್ತಿತ್ತು! ಈ ಸಾರೆಯ ಆಕೆಯ ಜೀವದ ಮೇಲಿನ ಸಂಕಟವು ಬೇರೆ ಯಾರಾದರೂ ತಂದದ್ದಾಗಿರದೆ, ಅವಳು ತಾನಾಗಿಯೇ ಅದನ್ನು ತನ್ನ ಜೀವದ ಮೇಲೆ ತಂದುಕೊಳ್ಳುವವಳಿದ್ದಳು ಆಕೆ ಸ್ವಂತವೇ ಅನುಸೂಯೆಯ ಮುಖಾಂತರ ಅಂಥ ಅತ್ಯಂತ ಕಳಕಳಿಯ ನಿರೂಪವನ್ನು ಹೇಳಿ ಕಳಿಸಿದ್ದಳು!

ಅನುಸೂಯೆಯನ್ನು ಮಾಲತಿಯ ಪತ್ತೆ ಹಚ್ಚುವುದಕ್ಕೆಂದು ಕಂಟಕನು ಐದಾರು ತಿಂಗಳ ಹಿಂದೆಯೇ ನಿಯೋಜಿಸಿದ್ದನು; ಆದರೆ ಆ ಸ್ತ್ರೀಯರ ಬಂದಿ ಗೃಹದಲ್ಲಿ ಕಂಟಕಿ ಎಂಬ ಹೆಸರಿನ ಜೀವಾವಧಿ ಕರಿನೀರಿನ ಶಿಕ್ಷೆಯಾದ ಯಾವ ಸ್ತ್ರೀಯೂ ಅದುವರೆಗೆ ಅಲ್ಲಿಗೆ ಬಂದೇ ಇರಲಿಲ್ಲವೆಂದು ಆಗ ಆಕೆಗೆ ತಿಳಿಯಿತು; ಆದರೂ ಕೂಡ ಆಕೆಯ ಮನೆಗೆ-ಆಕೆಯ ಮಕ್ಕಳಾದ ಮೋಹನ-ಉಷೆ ಇವ ರಿಗೆ-ಕಲಿಸಲಿಕ್ಕೆಂದು ಕಂಟಕ ಬಾಬುವು ಆಗಾಗ್ಗೆ ಹೋಗಿಯೇ ಹೋಗುತ್ತಿ ದ್ದನು. ಅನುಸೂಯೆಯನ್ನು ತನ್ನ ಅಕ್ಕನೆಂದು ತಿಳಿದು, ಆಕೆಗೆ ದೀವಳಿಗೆಯ ಉಡುಗರೆಯನ್ನೂ ಬೇರೆ ಹಬ್ಬ-ತಿಥಿಗಳಲ್ಲಿ ಏನಾದರೂ ಕಾಣಿಕೆಯನ್ನೂ ಆತನು ಕೊಡುತ್ತಿದ್ದನು. ಆತನ ಆ ಸುಶೀಲ ಮತ್ತು ಲೋಭದ ಸ್ವಭಾವ ದಿಂದ, ಆತನ ಸುವಿದ್ಯ ಯೋಗ್ಯತೆಯ ಮೂಲಕ, ನಾನಾ ವಿಷಯದೊಳಗಿನ ಸಾರ್ವಜನಿಕ ಹಿತಾಹಿತದ ಆತನ ಕಳಕಳಿಯ ಮೂಲಕ ಪ್ರೌಢ ಪ್ರಾಜ್ಞನಾದ ಅಪ್ಪಾಜಿಗೆ ಆತನು ಹೆಚ್ಚಾಗಿ ಸೇರಹತ್ತಿದ್ದನು. ಆತನ ಆ ಪರಿಚಯವು ಹೀಗೆ ಹೆಚ್ಚುತ್ತ ಹೋಗಲು, ಆತನ ಕಂಟಕಿಯ ಶೋಧದ ಕೆಲಸವನ್ನು ಮನಃ ಪೂರ್ವಕವಾಗಿ ಮಾಡಬೇಕೆಂದು ಅನುಸೂಯೆಯು ನಿರ್ಧರಿಸಿಕೊಂಡಿದ್ದಳು. ಕಂಟಕನು ಆ ದಿನ ಅಪ್ಪಾಜಿಯ ಮನೆಗೆ ಹೋಗುವದಕ್ಕಿಂತ ಮೊದಲು ಎಂಟು ದಿನ ಕಂಟಕಿಯು ಅಂಡಮಾನದ ಆ ಸ್ತ್ರೀ ಬಂದಿಗೃಹಕ್ಕೆ ಬಂದಿರುವಳೆಂಬದು ಅನುಸೂಯಾಬಾಯಿಗೆ ತಿಳಿದಿತ್ತು. ಅದನ್ನು ಅವಳು ಕಂಟಕನಿಗೆ ಇಷ್ಟರಲ್ಲಿ ತಿಳಿಸಿದ್ದಳು. ಅಷ್ಟರಲ್ಲಿ ಅಂದು ಕಂಟಕಿಯನ್ನು ಪ್ರತ್ಯಕ್ಷ ಕಂಡು ಅವಳ ಬಾಯಿಂದಲೇ ಅವಳ ಸಂಗತಿಯನ್ನು ತಿಳಕೊಳ್ಳುವ ಸಂಧಿಯೂ ಅವಳಿಗೆ ಲಭಿ

ಸಿತು. ಬಂದಿಗೃಹದೊಳಗಿನ ಅಂಥ ಕಳ್ಳ ಭೆಟ್ಟಿಯಲ್ಲಿ ಅವಸರದಿಂದ ಎಷ್ಟು ಕೇಳಿಕೊಳ್ಳಲಿಕ್ಕೆ ಶಕ್ಯವಾಯಿತೋ ಅವಳು ಅಷ್ಟು ಕೇಳಿಕೊಂಡಿದ್ದಳು. ಆಗ ಕಂಟಕಿಯಾದರೂ ಮೊದಲು ಹಿಂದುಸ್ಥಾನದಲ್ಲಿ ತಾವು ಪೋಲೀಸರ ಕೈಗೆ ಸಿಕ್ಕುಬೀಳುವಾಗ ಯಾವ ಧೋರಣದಂತೆ ನಡೆಯಬೇಕೆಂದು ನಿರ್ಧರಿಸಿಕೊಂಡಿದ್ದರೋ, ತದನುರೋಧವಾಗಿ ತನ್ನ ಮೊದಲಿನ 'ಮಾಲತಿ' ಎಂಬ ಹೆಸರನ್ನೂ ಅದಕ್ಕೆ ಸಂಬಂಧಿಸಿದ ಪೂರ್ವವೃತ್ತವಾವುದನ್ನೂ ಬಹಿರಂಗಪಡಿಸದೆ, ತಾನು ಕಂಟಕನ ಭಗನಿಯೆಂದೂ ತನ್ನನ್ನು ಅಪಹರಿಸಿದ ಒಬ್ಬಾನೊಬ್ಬ ದುಷ್ಟನ ಕೊಲೆ ಮಾಡಿದ ಸಾಹಸಕ್ಕಾಗಿ ಕಂಟಕನಿಗೂ ತನಗೂ ಜೀವಾವಧಿ ಕರಿ ನೀರಿನ ಶಿಕ್ಷೆಯಾಯಿತು, ಮುಂತಾಗಿ ತನ್ನ ಪೂರ್ವವೃತ್ತವನ್ನೂ ಅರುಹಿದಳು. ಆ ಶಿಕ್ಷೆಯಾದ ನಂತರ ತನ್ನನ್ನು ಕಂಟಕನಿಂದ ವಿಂಗಡಿಸಿ, ಹಿಂದುಸ್ಥಾನದೊಳಗಿನ ಬೇರೊಂದು ಬಂದಿಗೃಹವಲ್ಲಿ ಪ್ರತಿಬಂಧಿಸಿಟ್ಟರು; ಮತ್ತು ಅಲ್ಲಿಯೇ ತಾನು ಕಳೆದ ಐದು ವರ್ಷಗಳ ವರೆಗೆ ಕೊರಗುತ್ತ ಅಳುತ್ತ ಕಾಲಹರಣ ಮಾಡಿದೆನು. ಕಂಟಕನ ಗತಿಯೇನಾಯಿತೆಂಬ ಬಗ್ಗೆ ತನಗೆ ಎಷ್ಟೋ ದಿನಗಳ ವರೆಗೆ ಏನೂ ತಿಳಿಯಲಿಲ್ಲ; ಆದರೆ ಆತನು ಕರಿನೀರಿಗಾಗಿ ಅಂಡಮಾನಕ್ಕೆ ಕಳಿಸಲ್ಪಟ್ಟನು, ಎಂಬ ಸುದ್ದಿಯು ಬಂದೀ ಜನಗಳ ಬಾಯಿಂದ ಆ ಮೇಲೆ ತಿಳಿಯಿತು. ಅಂದಿನಿಂದ ಆ ಹಿಂದುಸ್ಥಾನದೊಳಗಿನ ಜೇಲಿನಲ್ಲಿ ಅತ್ಯಂತ ಕಷ್ಟದಲ್ಲಿ ದಿನಗಳೆಯುವುದಕ್ಕಿಂತ, ತನ್ನನ್ನು ಅಂಡಮಾನದೊಳಗಿನ ಸ್ತ್ರೀ ಬಂದಿಗೃಹಕ್ಕೆ ಕಳಿಸಿಬಿಡಬೇಕೆಂದು ತಾನು ಸರಕಾರಕ್ಕೆ ದುಂಬಾಲಬಿದ್ದು ಹೇಳಹತ್ತಿದೆನು; ಕಡೆಗೆ ಅದರಂತೆ ತನ್ನನ್ನು ಮೊನ್ನಿನ ಚಲಾನದೊಡನೆ ಈ ಕರಿನೀರಿಗೆ ಕಳಿಸಿರುತ್ತಾರೆ! ಎಂಬ ತನ್ನ ವೃತ್ತಾಂತವನ್ನು ಅನುಸೂಯೆಗೆ ಸಂಕ್ಷಿಪ್ತವಾಗಿ ತಿಳಿಸಿದಳು

ಬಳಿಕ ಅಂದಿನ ಭೆಟ್ಟಿಯಲ್ಲಿ ಕಂಟಕಿಯು ಅನುಸೂಯೆಯನ್ನು ಕುರಿತು: "ಜಮಾದಾರಳೇ, ನನ್ನ ವಯಸ್ಸು ಇನ್ನೂ ಇಪ್ಪತ್ತು ಮೀರಿಲ್ಲ; ಆದರೆ ಲೋಕದೊಳಗಿನ ಅತ್ಯಂತ ಅಸಹ್ಯ ಯಾತನೆಗಳ ಸುರಿಮಳೆಯ ಅನುಭವವು ನೂರು ವರ್ಷಗಟ್ಲೆ ಜೀವಿಸುವವರಿಗೂ ಬಹುಶಃ ಬರಲಿಕ್ಕಿಲ್ಲವೊ, ಅದು ನನ್ನ ಪಾಲಿಗೆ ಈಗಾಗಲೆ ಬಂದು ಹೋಗಿದೆ. ಅಷ್ಟು ಛಲನೆ, ಅಷ್ಟು ವಿಡಂಬನೆ, ಅಷ್ಟು ಪೀಡೆ, ಅಷ್ಟು ದುಃಖಗಳನ್ನು ನಾನು ಈಗಾಗಲೆ ಭೋಗಿಸಿರುತ್ತೇನೆ; ಮತ್ತು ಅಕ್ಕಾ, ವಿಶೇಷವೇನಂದರೆ, ನಾನು ದೇವರಾಣೆ ಮಾಡಿ ಹೇಳುತ್ತೇನೆ, ನನ್ನ ಸ್ವಂತದ್ದಾದಂಥ ಯಾವ ಒಂದು ಕ್ಷುಲ್ಲಕ ದೋಷದ ಹೊರತು, ಈ ಬಗೆಯ ನನ್ನ ಅನನ್ವಿತ ಛಲನಕ್ಕೆ ಬೇರೆ ಯಾವ ಅಪರಾಧವೂ ನನ್ನಿಂದ ಘಟಿಸಿರುವ

ದಿಲ್ಲ! ಮತ್ತು ನನ್ನಲ್ಲಿಯ ಆ ಕ್ಷುಲ್ಲಕ ದೋಷವೇನಂದರೆ, ಈ ಸುರೂಪವು! ನಾನು ಎಲ್ಲಿಗೆ ಹೋಗುವೆನೋ ಅಲ್ಲಿ ನನಗಿದು ಕಾಡುತ್ತದೆ! ಈ ಸುರೂಪದ ಸಲುವಾಗಿ ನಾನು ನನ್ನ ಹಡೆದಪ್ಪನ ಮನೆಯಿಂದ ಸೆರೆಮನೆಯ ಸೋಬತಿಯಾದೆನು. ಈ ಸುರೂಪಕ್ಕಾಗಿಯೇ ಸೆರೆಮನೆಯಲ್ಲಿ ನಾನು ಯಾವನ ಕೈಸೇರಿದೆನೋ, ಆತನು ನನ್ನನ್ನು ವಿಡಂಬನೆಗೊಳಿಸಿದನು. ಯಾರ ಕೈಗೆ ದೊರಕಲಿಲ್ಲವೋ ಅದೇ ಕಾರಣದಿಂದಲೇ ಅವರು ನನ್ನನ್ನು ಬಗೆ ಬಗೆಯಿಂದ ಪೀಡಿಸಿದರು. ಅವ್ವಾ, ನನಗೆ ಇನ್ನು ಈ ಜೀವನವೇ ಸಾಕಾಗಿದೆ. ಹಿಂದುಸ್ಥಾನದ ಬಂದಿಶಾಲೆಯಲ್ಲೇ ನಾನೊಮ್ಮೆ ವಿಷಕುಡಿಯುವ ಪ್ರಯತ್ನಮಾಡಿದ್ದೆನು; ಆದರೆ ಅದು ವಿಫಲವಾಗಿ, ತದ್ವಿರುದ್ಧ ನನಗೆ ಆರು ತಿಂಗಳವರೆಗೆ 'ಹಾತಕಡಿ' ಹಾಗು 'ಕೊಠಡಿ ಬಂದಿ'ಯ ಶಿಕ್ಷೆಯಾಗಿತ್ತು. ಪೀಡೆಯೊಳಗಿಂದ ಪಾರಾಗುವ ಪ್ರಯತ್ನಪಟ್ಟ ಅಪರಾಧಕ್ಕೆಂದು ಹೆಚ್ಚು ಪೀಡೆಯಾಗಹತ್ತಿತು! ಕಡೆಗೆ ಒಂದೇ ಆಶಾತಂತುವು ಉಳಿದಿದ್ದಿತು. ಅದಕ್ಕೇ ಹೇಗಾದರೂ ಜೋತುಬಿದ್ದುಕೊಂಡು, ನನ್ನ ಜೀವವು ಸಾವಿನ ಸಂಕಟವನೊಳಗೆ ಒಮ್ಮೆಲೆ ಹಾರಿಕೊಳ್ಳುವ ಅರಿಷ್ಟವನ್ನು ತಾತ್ಪೂರ್ತಿಕವಾಗಿ ತೊಲಗಿತು. ಆ ಆಶಾತಂತುವೆಂದರೆ, ಜೀವಾವಧಿ ಕರಿನೀರಿನ ಶಿಕ್ಷೆಯನ್ನು ಹೇಳುವಾಗ ನ್ಯಾಯಾಧೀಶನು ತೋರಿಸಿದ್ದ ಒಂದು ಆಶ್ವಾಸಿಕ ಸಂಭವವು! ಆಗ ಅವರು ಹೇಳಿದ್ದರೇನಂದರೆ, 'ಕರಿನೀರಿಗೆ ಹೋದಮೇಲೆ ಕೆಲವು ವರ್ಷಗಳ ಮೇಲೆ ನಿನ್ನನ್ನು ಕ್ವಚಿತ್ತಾಗಿ ಪ್ರತಿಬಂಧವಿರಹಿತ ಮಾಡುವರು; ಮತ್ತು ಆ ಬಳಿಕ ಆ ಪ್ರದೇಶದಲ್ಲೇ ಏಕಾಗಲೊಲ್ಲದು, ನಿನಗೆ ನಿನ್ನ ಮೆಚ್ಚಿನ ಸಹಚರನೊಡನೆ ಮನುತೆಯ ಹಾಗು ಕೌಟುಂಬಿಕ ಸುಖವನ್ನು ಉಪಭೋಗಿಸ ದೊರೆತೀತು!' ಆ ನ್ಯಾಯಾಧೀಶನ ಆ ನುಡಿಗಳು ಅಮೃತದ ತುಷಾರಗಳಂತೆ ನನ್ನ ಮನಸ್ಸಿನೊಳಗಿನ ಕೋಮಲವಾದಂತಹ ಸ್ತ್ರೀಲಾಲಸೆಯನ್ನು ಮತ್ತೆ ಮತ್ತೆ ಮೊಳಕೆಯೊಡೆಸುತ್ತಿವೆ!

"ಇಷ್ಟರಲ್ಲಿ ತಿಳಿಯಿತೇನಂದರೆ, ಕಂಟಕನು ಅಂಡಮಾನದಲ್ಲೇ ಇರುವನೆಂದು! ಆತ್ಮಘಾತಕ್ಕಿಂತ ಮೊದಲು ಒಮ್ಮೆಯಾದರೂ ಆತನನ್ನು ಕಾಣಬೇಕೆಂಬ ಆತುರದಿಂದ ನಾನು ಬಗೆಬಗೆಯ ಪ್ರಯತ್ನಪಟ್ಟು ಈ ಕರಿನೀರಿಗೆ ಬಂದು ಬಿದ್ದಿರುತ್ತೇನೆ; ಆದರೆ ಇಲ್ಲಿಗ ಬಂದು ನೋಡುತ್ತೇನೆ, ಈ ಹೊಲಸು ವಾತಾವರಣದಲ್ಲಿಯೇ ನಾನು ಇನ್ನೂ ಕೆಲ ವರ್ಷಗಳನ್ನು ಕಳೆಯಬೇಕಾಗುವದು! ಛೀ-ಛೀ! ಅಕ್ಕಾ, ನಾನು ಇನ್ನು ಇಲ್ಲಿ ಒಂದು ದಿನ ಕೂಡ ಹಾಗೆ ಕೊಳೆಯುತ್ತ ಬೀಳಲಾರೆನು. ಈ ದೇಹದ ಬಗ್ಗೆ ನನಗೆ ಅತ್ಯಂತ ತಿರಸ್ಕಾರವೂ ಹೇಯವೂ ಉಂಟಾಗಿದೆ. ನೀವು ಕಂಟಕನ ಸ್ಮೃತಿಯನ್ನಷ್ಟೇ ತಂದಿ

ರುತ್ತೀರೆಂದು ನಾನು ನಿಮ್ಮನ್ನು ಮತ್ತೊಮ್ಮೆ ನಂಬುತ್ತೇನೆ. ಇದುವರೆಗೆ ನನ್ನನ್ನು ಹಲವು ಸಾರೆ ಬೇರೆ ಬೇರೆ ಜನರು ಹಲವು ಬಗೆಯಿಂದ ಮೋಸಪಡಿಸಿರುವ ಕಾರಣ, ನೀವು ನನ್ನನ್ನು ಮೋಸಗೊಳಿಸಲಿಕ್ಕಿಲ್ಲವೆಂದು ನಾನೇನೂ ಹೇಳಲಾರೆನು! ಈ ಬಗ್ಗೆ ಸಿಟ್ಟಾಗಬೇಡಿರಿ. ನಾನು ನಿಮ್ಮನ್ನು ಮೋಸಗಾರರೆಂದು ಅನ್ನುವದಿಲ್ಲ; ನಾನು ನನ್ನ ದೈವಕ್ಕಾಗಿ ಹಾಗೆ ಅಂದುಕೊಳ್ಳುತ್ತೇನೆ. ಆದರೂ ಕೂಡ ನಾನು ನನ್ನ ಗೋಣನ್ನು ನಿಮ್ಮ ತೊಡೆಯಮೇಲಿರಿಸಿರುತ್ತೇನೆ. ಕೊಯ್ಯುವುದಾದರೆ ಕೊಯ್ಯಿರಿ! ನಾನು ನಿಮ್ಮನ್ನು ಹಡೆದವ್ವನೆಂದು ತಿಳಿಯುತ್ತೇನೆ ಇಲ್ಲದಿದ್ದರೆ ಕಂಟಕಬಾಬುಗಳ ಹೆಸರಿನಿಂದ ನಾನು ಹೇಳುತ್ತಿರುವ ಹೃದ್ಗತವನ್ನು ನೀವು ವಿಶ್ವಾಸಘಾತದಿಂದ ಸರಕಾರೀ ಅಧಿಕಾರಿಗಳಿಗೆ ಹೇಳಿದರೆ, ನನ್ನ ಮೇಲೆ ಹೊಸ ಸಂಕಟವೇ ಕಳಚಿಕೊಂಡೀತು ನಾನು ಆ ಅಂಜಿಕೆಯನ್ನು ಧರಿಸಬೇಡವಷ್ಟೆ?

"ಅದಿರಲಿ. ಇನ್ನು ನೀವು ಕಂಟಕರಿಗೆ ತಿಳಿಸಬೇಕೇನೆಂದರೆ, ಇನ್ನು ಮೂರು-ನಾಲ್ಕು ತಿಂಗಳುಗಳಲ್ಲೇ ಅವರು ನನ್ನ ಬಿಡುಗಡೆ ಮಾಡುತ್ತಿದ್ದರೆ ಮಾಡಲಿ, ನಾನು ಅದುವರೆಗೆ ಬದುಕಿರುತ್ತೇನೆ. ನಾನು ಈಗ ಅತ್ಯಂತ ಕಠೋರ, ಅತ್ಯಂತ ದಿಟ್ಟ, ಅತ್ಯಂತ ನೀಚ ಹೃದಯಳಾಗಿರುತ್ತೇನೆ. ದುಷ್ಟರೊಳಗಿನ ದುಷ್ಟರ ಸಂಗತಿಯ ಮದ್ಯವನ್ನು ಬಲಪೂರ್ವಕವಾಗಿ ಕುಡಿದು ಕುಡಿದು ಅತ್ಯಂತ ದುಷ್ಟಳಾಗಿರುವದರಿಂದ, ನನ್ನ ಬಿಡುಗಡೆಗಾಗಿ ಬೇಕಾದ ಸಾಹಸ, ಕಪಟ, ಕ್ರೌರ್ಯ ಮಾಡಲಿಕ್ಕೂ ಇನ್ನು ನಾನು ಹಿಂದೆಗೆಯಲಾರೆನು; ಆದರೆ ಈ ನಾಲ್ಕಾರು ತಿಂಗಳಲ್ಲಿ ಈ ಬಂದಿಗೃಹದಿಂದಲೇ ಅಲ್ಲ, ಈ ಹೊಲಸು ದುರ್ದೆಸೆಯೊಳಗಿಂದ ನನ್ನ ಬಿಡುಗಡೆಯಾಗದಂತಿದ್ದರೆ ನಾನು ಆತ್ಮಘಾತದ ಪ್ರಯತ್ನಗಳನ್ನು ಆತ್ಮಘಾತವು ಸಾಧಿಸುವವರೆಗೆ ಬಿಟ್ಟೂ ಬಿಡದೆ ಮಾಡಹತ್ತುವೆನು! ಈ ಕಾರಾಗೃಹದ ನಿಯಮದಂತೆ ನಾನು ಇನ್ನು ಹತ್ತೆಂಟು ವರ್ಷಗಳ ವರೆಗೆ ಇಲ್ಲಿ ಖಂಡಿತವಾಗಿಯೂ ಜೀವಿಸಿರಲಿಕ್ಕಿಲ್ಲ. ಅಕ್ಕಾ, ಅವ್ವಾ, ನೀವು ಈ ನನ್ನ ಬೇತನ್ನು ಕಂಟಕನಿಗಷ್ಟೇ ತಿಳಿಸುವದು; ಬೇರೆ ಯಾರಿಗೂ ತಿಳಿಸಬಾರದ; ಈ ಎರಡೇ ಉಪಕಾರಗಳನ್ನು ಮಾಡುವ ದಯೆಯನ್ನು ನೀವು ನನಗೆ ಮಾಡಬಹುದೋ? ತಡೆಯಿರಿ ಇನ್ನೊಂದು ಮಹತ್ವದ ನುಡಿಯನ್ನು ಕೇಳಿಕೊಳ್ಳಿರಿ. ಕಂಟಕ ಬಾಬುಗಳಿಗೆ ನನ್ನ ಬಿನ್ನಹವೇನಂದರೆ, ಅವರು ಈಗ ಸುಖವಾಗಿ ಜೀವಿಸುತ್ತಿದ್ದರೆ, ಈ ನನ್ನ ನಿರೂಪದಂತೆ ಅವರು ಆದಾವ ಕೃತ್ಯವನ್ನೂ ಮಾಡಬಾರದು; ತಮ್ಮ ಜೀವವನ್ನು ನನಗಾಗಿ ಪುನಃ ಸಂಕಟಕ್ಕೊಳಪಡಿಸಲಾಗದು; ಆದರೆ ನನ್ನ ಬಿಡುಗಡೆ ಮಾಡಿರೆಂಬ ನನ್ನ ಮೊದಲನೇ ಬಿನ್ನಹವು ಈ ನನ್ನ ಎರಡನೇ ಬಿನ್ನ

ಹಕ್ಕೆ ತೀರ ವಿರುದ್ಧವಾಗಿರುವದಲ್ಲವೆ? ಬೇಡ-ಬೇಡ. ಅವ್ವಾ, ನಾನು ತಪ್ಪಿದೆನು. ನನ್ನ ಮೊದಲಿನ ಬಿನ್ನಹವನ್ನು ನೀವು ಅವರಿಗೆ ಹೇಳಬಾರದು. ನಾನು ಇಲ್ಲಿ ಸಮಾಧಾನದಿಂದಿರುತ್ತೇನೆ; ಮತ್ತು ನೀವು ಸುಖರೂಪವಾಗಿರುವದನ್ನು ಕೇಳಿ ಸಂತೋಷಿಸುತ್ತೇನೆ, ಎಂಬದಿಷ್ಟನ್ನೇ ಅವರಿಗೆ ತಿಳಿಸಿರಿ! ನಾನು ಇದುವರೆಗೆ ಮಾತಾಡಿದ್ದನ್ನು ಆಡಿಲ್ಲವೆಂದೇ ತಿಳಿಯುವುದವ್ವಾ. ಅದನ್ನೆಲ್ಲ ತಿಳಿಸಿದರೆ, ನಿಮಗೆ ನನ್ನ ಆಣೆಯಿದೆ. ಇಲ್ಲದಿದ್ದರೆ ನನ್ನ ಬಿಡುಗಡೆಗಾಗಿ ಕಂಟಕಬಾಬು ಗಳೇನಾದರೂ ಹೊಲ್ಲದ ಪ್ರಯತ್ನಕ್ಕೆ ತೊಡಗ್ಯಾರು? ಮತ್ತೆ ಯಾವುದೊಂದು ಅನಪೇಕ್ಷಿತ ಪ್ರಸಂಗವೇ ಅವರಿಗುಂಟಾದೀತು. ಏನು? ನೀವಿನ್ನು ಈ ಭೆಟ್ಟಿ ಯನ್ನು ಮುಗಿಸಲೇಬೇಕೇ? ಒಳ್ಳೇದು. ನಾನಿನ್ನು ಹೋಗುತ್ತೇನೆ; ಆದರೆ ಅಕ್ಕಾ, ಕೈ ಮುಗಿಯುತ್ತೇನೆ; ನೀವು ಮತ್ತೆ ನನಗೆ ಯಾವಾಗಾದರೂ ಭೆಟ್ಟಿ ಯಾಗಬಹುದಲ್ಲವೆ? ಯಾರು? ಯಾರಾದರೂ ಬರುತ್ತಿರುವರೇ? ನಾನು ಇಲ್ಲಿಂದ ಹೊರಟೇಬಿಟ್ಟೆನು ನೋಡಿರಿ!"

ಅನುಸೂಯಾ ಜಮಾದಾರಳು ಕಂಟಕಿಯ ಭೆಟ್ಟಿಯೊಳಗಿನ ಯಾವ ವಿಸಂಗತಗಳಾದ ಅನೇಕ ವಾಕ್ಯಗಳನ್ನು ಕಂಟಕನಿಗೆ ಹೇಳಿದ್ದಳೋ, ಅವುಗಳ ಸುಸಂಗತ ಕ್ರಮವನ್ನು ಕಂಟಕನು ತನ್ನ ಮನಸ್ಸಿನಲ್ಲಿ ಹೀಗೆ ಮಾಡಿಕೊಂಡನು. ಮಾಲತಿಯ ಆ ನಿರೂಪವನ್ನು, ಆತನು ತನ್ನ ಮಾನಸ್ಸಿನಲ್ಲಿಯೇ ಮತ್ತೆಮತ್ತೆ ಉಚ್ಚರಿಸಿ, ಮಾಲತಿಯು ಮಾಡಿರಬಹುದಾಗಿದ್ದ, ಆದರೆ ತನಗೆ ಸರಿದೋ ರಿದ್ದ ಹಾವಭಾವಗಳನ್ನು ಆತನು ಆ ಗುಂಗಿನಲ್ಲಿಯೇ ಮಾಡಿಕೊಳ್ಳುತ್ತಿದ್ದರೂ, ಅದರಿಂದ ಅವನ ದಾರಿ ಕ್ರಮಿಸಲಿಕ್ಕೆ ಆತಂಕವುಂಟಾಗಲಿಲ್ಲ. ಆತನು ಲಗುಬಗೆ ಯಿಂದ ಆ ಮಾರ್ಗ ಹಿಡಿದು ನಡೆದಿದ್ದನು

ಅಷ್ಟರಲ್ಲಿ ಆತನಿಗೆ 'ಮಾಲತಿಯು ಬಂದಿಗೃಹದೊಳಗೆ ಯಾವ ಕೆಲಸ ದಲ್ಲಿರುತ್ತಾಳೆ? ಅವಳ ದೇಹಸ್ಥಿತಿಯು ಹೇಗಿದೆ? ಎಂದು ತಾನು ಕೇಳಿದ ಪ್ರಶ್ನೆ ಗಳಿಗೆ ಅನುಸೂಯಾಬಾಯಿಯು ಹೇಳಿದ ಅವಳ ದುರ್ದೆಸೆಯು ನೆನಪಾ ಯಿತು! ಬಂದಿಗೃಹದೊಳಗಿನ ಅಡುಗೆ ಮನೆಯ ಕೆಲಸದಲ್ಲಿ ಆಕೆಯನ್ನು ನಿಯಮಿಸಿದ್ದರು. ಅಲ್ಲಿಯ ಅವಳ ಚಿತ್ರವು ಆತನ ಕಣ್ಣೆದುರಿಗೆ ನಿಂತಿತು. ಸೊರಗಿ ಸಾಯಲಾದ, ಮೊಣಕಾಲವರೆಗೆ ಉರುಟಾದ ಕೊಲಸು ಅರಿವೆಯನ್ನು ಟ್ಟಿದ್ದ, ಉರುಟು ಹಾಗು ಅಂದಗೇಡಾದ ಬಂದಿಗೃಹದ ಛಾಪಿನ ಒಂದು ಕುಪ್ಪಸ ತೊಟ್ಟಿದ್ದ, ವಾರಕ್ಕೊಂದು ಸವಟು ದೊರೆತ ಎಣ್ಣೆಯನ್ನು ಭಿಕ್ಷುಕಿಯಂತೆ ಹೇಗಾದರೂ ತಲೆತುಂಬ ಹಚ್ಚಿಕೊಂಡು, ಯಾವುಗಳನ್ನು ನೋಡಲಿಕ್ಕೆ ಕೂಡ ಅವಕಾಶವಿಲ್ಲವೋ ಅಂಥ ತೊಡಕಾದ, ಬೆವರಿನಿಂದ

ಹೊಲಸಿಟ್ಟ ಕೂದಲುಗಳುಳ್ಳ, ಹಾಗು ಹೊಲಸು ನಾರುವ, ಕಠಿಣ ಹೃದಯದ ಶ್ವಪಚರಾದ ನೂರಾರು ಸ್ತ್ರೀ ಬಂದಿಗಳ ನಿರ್ಲಜ್ಜ ಸಹವಾಸದಲ್ಲಿ ಹೇನು-ಶೀರು ಗಳಿಂದ ತುಂಬಿದ್ದ ತನ್ನ ಕೂದಲುಗಳನ್ನು ಹೇಗಾದರೂ ಗಂಟು ಕಟ್ಟಿಕೊಂಡಿದ್ದ, ಮೈಯಲ್ಲಿ ಸಣ್ಣ ಜ್ವರವು ತಪ್ಪದೆ ಬರುತ್ತಿದ್ದ ಮತ್ತು ಅದೇ ಸ್ಥಿತಿಯಲ್ಲಿ ಒಂದು ತಗಡಿನ ಕಾವ ಚಪ್ಪರದಲ್ಲಿ ಸುಣ್ಣದ ಬಟ್ಟಿಯಂತಹ ಅಸಹ್ಯ ಕಾವಿನಲ್ಲಿ ದೊಡ್ಡ ದೊಡ್ಡ ಕಬ್ಬಿಣದ ಪಾತ್ರೆಗಳಲ್ಲಿ ಅನ್ನ, ಗಂಜಿ, ಪಲ್ಲೆಗಳ ರಾಶಿ ಗಳನ್ನು ಬೆಯ್ಯಿಸುತ್ತಿದ್ದ, ಮೊಣಕಾಲುಮಟ ಹಿಟ್ಟನ್ನು ಕುಟ್ಟಿ ಕುಟ್ಟಿ ಅವುಗಳ ಎರಡೆರಡು ನೂರು ರೊಟ್ಟಿಗಳನ್ನು ತಟ್ಟುತ್ತಿದ್ದ, ಹಗಲೆಲ್ಲ ಆ ಅನ್ನದ ಅವಶೇಷಗಳಿಂದ ಮೈಯೆಲ್ಲ ಮುಳುಗಿದ್ದ ಇಂಥ ಮಾಲತಿಯ ವೇಷವು ಆತನ ಕಣ್ಣೆದುರಿಗೆ ಬಂದು ನಿಂತಿತು. ಅದೇ ದಿನ ಅಲ್ಲಿಯ ಅಡಿಗೆಯ ಮನೆಯೊಳಗಿನ ವಾರ್ಡರ ಬಾಯಿಯು ತನಗೆ ನಾಲ್ಕಾರು ಸೇರು ಹಿಟ್ಟು ಕೊಡೆಂದು ಕೇಳಿ ರಲು, ಮೇಲಧಿಕಾರಿಗಳ ಚೀಟಿ ತರದ ಹೊರತು ಕೊಡಲಾರೆನೆಂದು ಮಾಲತಿಯು ಅಂದದ್ದಕ್ಕೆ, ಬೇರೆ ಏನೋ ಒಂದು ನೆವ ಹೊರಿಸಿ ತೀರ ಗಲಿಚ್ಛ ಹಾಗು ನಾಚಿಕೆಗೆಟ್ಟ ಬೈಗಳನ್ನು ಮಾಲತಿಗೆ ಬೈದಿದ್ದಳು. ಮಾಲತಿಯೂ ಆಕೆಗೆ ತಿರುಗಿ ಬೈದಿದ್ದಳು. ಆಕೆಯಾದರೂ ಈಗ ಜೇಲಿನಲ್ಲಿ ಎಷ್ಟೋ ಹೊಸ ಹೊಸ ಅಭದ್ರ ಬೈಗಳುಗಳನ್ನು ಕಲಿತಿದ್ದಳು. ಆ ಕೂಡಲೆ ಇಬ್ಬರು-ಮೂವರು ದುಷ್ಟ ಸ್ತ್ರೀವಾರ್ಡರರು ಅವಳನ್ನು ಹಿಡಿದು, ಅವಳ ಕೆನ್ನೆಯ ಮೇಲೆ ನಾಲ್ಕೆಂಟು ತಪರಾಕೆಗಳನ್ನು ಕೊಟ್ಟಿದ್ದರು! ಅಷ್ಟರಲ್ಲಿ ಅನುಸೂಯಾ ಜಮಾದಾರಳು ಅಲ್ಲಿಗೆ ಬಂದಳೆಂದು ಮಾಲತಿಯು ನಿರ್ದೋಷಿಯೆಂದಾದರೂ ಉಳಿದಳು! ಇಲ್ಲದಿದ್ದರೆ ಅಪರಾಧವಿಲ್ಲದೆ ಹೊಡೆತ ತಿಂದದ್ದಲ್ಲದೆ, ಉದ್ಧಟತನಕ್ಕಾಗಿ ಅವರು ಅವಳನ್ನೇ ಅಧಿಕಾರಿಗಳೆದುರಿಗೆ ಎಳೆದೊಯ್ಯುತ್ತಿದ್ದರು; ಶಿಕ್ಷೆಕೊಡಿಸುತ್ತಿದ್ದರು!

ಕಂಟಕನ ಮನಸ್ಸಿನ ಒಲವಿನ ಮೂಲಕ, ಆ ರಕ್ಕಸಿಯರು ಫಡಫಡೆಂದು ಕೆನ್ನೆಯ ಮೇಲೆ ಹೊಡೆದದ್ದರಿಂದ ಗಟ್ಟಿಗಟ್ಟಿಯಾಗಿ ಅಳುತ್ತಿದ್ದ, ಸಂತಾಪದಿಂದ ನಡುಗುತ್ತಿದ್ದ, ನಿರುಪಾಯದಿಂದ ಕುದಿಯುತ್ತಿದ್ದ ಮಾಲತಿಯು ತೀರ ದಾರಿಕಟ್ಟಿ ನಿಲ್ಲುವಂತೆ ತನ್ನೆದುರಿಗೆ ನಿಂತುಕೊಂಡಂತೆ ಆತನಿಗೆ ಭಾಸವಾಗಲು, ಕರುಣಿಸಿ ಬಂದ, ಕಳವಳಗೊಂಡ ಆ ಕಂಟಕನ ಕಣ್ಣೊಳಗಿಂದ ಟಪ್ಪ ಟಪ್ಪ ಎಂದು ಕಣ್ಣೀರು ಸುರಿಯುತ್ತಿದ್ದರೂ, ಆತನ ದೃಷ್ಟಿಯು ಬಾಷ್ಪಧೂಸರವಾಗಿದ್ದರೂ ಆತನ ಕಾಲುಗಳು ನೆಟ್ಟಗೆ ಆ ದಾರಿ ಹಿಡಿದೇ ಲಗುಬಗೆಯಿಂದ ನಡೆದಿದ್ದವು.

ಇದೆಲ್ಲ ಕರುಣ ವೃತ್ತಾಂತದ ದುಃಖಿತ ನೆನಪಿನಿಂದ ಮಲಿನವಾಗಿದ್ದ

ಆತನ ಚಿತ್ತದಲ್ಲಿ, ನೀರು ಸುರಿಯುತ್ತಿದ್ದ ಆತನ ಆ ಮಂಜು ಮಂಜಾದ ದೃಷ್ಟಿಯ ಎದುರಿಗೆ ಮುಂದಿನ ಬೇತು ಏನೆಂಬದು ನಿಶ್ಚಿತವಾಗಲೇ ಇಲ್ಲ. ಮುಂದಿನ ನಿಶ್ಚಯವು ಮಾತ್ರ ನಿರ್ಧರವಾಗಿತ್ತು. ಏನೇ ಆದರೂ, ಇನ್ನು ಮಾಲತಿಯನ್ನು ಹಾಗು ತನ್ನನ್ನು ಈ ಕಾರಾಗೃಹಗಳೊಳಗಿಂದ ಬಿಡುಗಡೆ ಮಾಡಿಕೊಳ್ಳುವದೇ. ಅವಳ ಆತ್ಮಘಾತವನ್ನು ತಪ್ಪಿಸುವದೇ. ಆಯುಷ್ಯದೊಳಗಿನ ಎರಡು ದಿನಗಳನ್ನೇ ಏಕಾಗಲೊಲ್ಲದು, ಅವೇ ಎರಡು ದಿನಗಳು ಆ ಸಾಹಸಕ್ಕಾಗಿ ಕೊನೆಯವೆಂದು ನಿರ್ಧರವಾದರೂ, ಸಾಯುವ ಮೊದಲು ಎರಡೇ ದಿನವಾಗಲೊಲ್ಲದೇಕೆ, ಆದರೆ ಮಾಲತಿಯನ್ನು ಗಾಢವಾಗಿ ಆಲಿಂಗಿಸುವದನ್ನು, ಪ್ರೀತಿಯ ಗಾಢವಾದ ಗುಂಗಿನೊಳಗಿನ ಸ್ವರ್ಗಸುಖವನ್ನು ಉಪಭೋಗಿಸುವದನ್ನು ಬಿಡುವಂತಿಲ್ಲ! ಅವಳನ್ನು ಸುಖಿಯನ್ನಾಗ ಮಾಡುವದು; ಮತ್ತು ಸ್ವತಃ ತಾನೂ ಸುಖಿಯಾಗುವದು!!

ಇಷ್ಟರಲ್ಲಿ ವಿಚಾರದ ಇಂಥ ಅಸಂಗತ ಅಲ್ಲೋಲ-ಕಲ್ಲೋಲದಲ್ಲಿ ನೋಡಲಿಕ್ಕೆ ತೀರ ಕ್ಷುದ್ರವಾಗಿ ತೋರುವ ಅಡಚಣಿಯು ಅಕಸ್ಮಾತ್ತಾಗಿ ಉಂಟಾಗಿ, ದೊಡ್ಡ ದೊಡ್ಡ ಅತಿರಥಿ-ಮಹಾರಥಿಗಳ ಓಟವನ್ನು ಕೂಡ ಹೇಗೆ ಒಮ್ಮೆಲೆ ತಡೆಗಟ್ಟುವದೋ, ತೀರ ಸಣ್ಣ ಒಂದಗುಲದಷ್ಟು ಚೇಳು ಒಬ್ಬಾನೊಬ್ಬ ಮಹಾರಥಿ ವೀರನನ್ನು ಕೂಡ ಹೇಗೆ ಒಮ್ಮೆಲೆ ನೆರಳಹಚ್ಚುವದೋ ಅಂಥ ಒಂದು ಶಂಕೆಯು ಕಂಟಕನ ಆ ಸಗ್ಗ ಸುಖಕ್ಕೆ ಒಮ್ಮೆಲೆ ಅಡ್ಡಗಟ್ಟಿತು! 'ಗಾಢಾಲಿಂಗನದಿಂದ ಅವಳನ್ನು ಸುಖಿಯನ್ನಾಗ ಮಾಡುವದು; ಎರಡೇ ದಿನವಾದರೂ ಆಕೆಯ ಸಂಗತಿಯ ಸ್ವರ್ಗಸುಖವನ್ನುಪಭೋಗಿಸುವದು.' ಈ ಬೇತಿನಲ್ಲಿ ಆತನ ಮನಸ್ಸು ರಮಮಾಣವಾಯಿತೋ ಇಲ್ಲವೋ ಅಷ್ಟರಲ್ಲಿ ಮನಸ್ಸಿನ ಮನಸ್ಸಿನಲ್ಲಿಯೇ ಆತನನ್ನಾರೋ ತಿರಸ್ಕರಿಸಿ, ಹಾಗು 'ಎಲವೋ, ಆಕೆಯೆಷ್ಟು ರೂಪವತಿಯು? ಮತ್ತು ನೀನು! ನೀನದೆಷ್ಟು ಕುರೂಪಿಯು!! ಅವಳ ಸಂಗಮವು ನಿನಗೆ ಸಗ್ಗವೆನಿಸೀತು; ಆದರೆ ಅವಳಿಗೆ?'' ಎಂದಂತಾಗಲು, ಆತನು ಒಮ್ಮೆಲೆ ವಿರಸಗೊಂಡನು. ಕಿಶನನು ಕ್ಷಣಕಾಲ ಸುಂದನಾದನು! ತನ್ನ ಸುರೂಪವೇ ಮಾಲತಿಗೆ ಶಾಪವೆನಿಸಿದ್ದಿತು ತನ್ನ ಕುರೂಪವೇ ಕಿಶನನಿಗೆ ಶಾಪವೆನಿಸಿತು. ಆ ಚಮತ್ಕಾರದ ವಿಚಾರದೊಡನೆ ಅವನದವನಿಗೇ ನಗುವು ಬಂದಿತು. ಮನಸ್ಸು ಖಿನ್ನವಾಯಿತು. ಖಿನ್ನತೆಯಲ್ಲೇ ನಕ್ಕಿತು; ಆದರೆ ಆತನ ಗತಿಯು ಮಾತ್ರ ಕುಗ್ಗಲಿಲ್ಲ ಸ್ವಯಂಚಲ (Automatic) ಯಂತ್ರದಂತೆ ಆತನ ಕಾಲುಗಳು ಒಂದೇಸವನೆ ಹೆಜ್ಜೆಯಿಕ್ಕುತ್ತ, ಮುಂದೆ ಮುಂದೆ ನಡೆದಿದ್ದವು. ತಾನು ಸರಕಾರೀ ಚಾಳದೊಳಗಿನ ತನ್ನ ಸ್ಥಳಕ್ಕೆ ನಿಯಮಿತ ವೇಳೆಗೆ

ತಲುಪಬೇಕೆಂಬುದನ್ನು ಆತನ ಮನಸ್ಸು ಒಂದು ವೇಳೆ ಮರೆತಿದ್ದರೂ, ಆತನ ಕಾಲೊಳಗಿನ ಜ್ಞಾನತಂತುಗಳೇನೂ ಆ ಸ್ಮೃತಿಯನ್ನು ಮರೆತಿರಲಿಲ್ಲ!

ರೋಷಗೊಂಡ ಆತನ ಮನಸ್ಸು ಅನಿಷ್ಟದೊಳಗಿಂದಲೂ ಯಾವುದನ್ನು ಸ್ವೀಕರಿಸಬಹುದಾಗಿತ್ತೋ ಆ ಇಷ್ಟ ತಾತ್ಪರ್ಯವನ್ನು ತೆಗೆದು, "ಆದರೂ ಅಡ್ಡಿಯೇನು? ಆಕೆಯು ನನ್ನಂತಹ ಕುರೂಪಿಯ ಮೇಲೆ ಅನುರಾಗದಿಂದ ಅನುರಕ್ತಳಾಗಿರದಿದ್ದರೂ, ನನ್ನ ಸ್ನೇಹಕ್ಕಾದರೂ ಆಕೆ ಮೂಗು ಮುರಿಯಲಾರಳು! ರೂಪಕ್ಕಿಂತ ಶೀಲದ ಆಕರ್ಷಣವು ಹೆಚ್ಚು ರುಚಿಯೆನಿಸುವಷ್ಟು ಆಕೆ ಸ್ವಂತವೇ ಸುರೂಪಿಯೂ ಸುಶೀಲಳೂ ಇದ್ದೇ ಇರುವಳು! ಅವಳ ಸಂಗ ಸುಖವಲ್ಲದಿದ್ದರೂ, ನೆರವಿನ ಸುಖವಾದರೂ ನನಗೆ ದುಷ್ಪ್ರಾಪ್ಯವಾಗಲಿಕ್ಕಿಲ್ಲ! ಅದನ್ನಾದರೂ ಅವಳಾಗಿಯೇ ಇಚ್ಛಿಸುತಿರುವಳೆಂಬದಕ್ಕೆ ಸಂಶಯವಿಲ್ಲ"

ಈ ವಿಚಿತ್ರ ಭಾವಭಾವನೆಗಳ ಕಲ್ಲೋಲದಲ್ಲಿ ಆತನ ಮನಸ್ಸು ಸುತ್ತು ಗಟ್ಟಿಕೊಂಡಿರುವಷ್ಟರಲ್ಲಿಯೇ ಆತನ ಕಣ್ಣುಗಳು ಯಾವನೊಬ್ಬ ಪಹರೆಯವನು ಅಲ್ಲಾಡಿಸಿ ಎಚ್ಚರಿಸುವಂತೆ, ಆತನ ಮನಸ್ಸನ್ನು ಎಚ್ಚರಿಸಿದವು. 'ಎಚ್ಚರ! ಅದೋ ನೋಡು, ಬಂದಿಗಳ ಚಾಳು ಕಾಣಹತ್ತಿದೆ. ಏನು ಮಾಡಬೇಕೆಂಬದನ್ನು ನಿರ್ಧರಿಸುವಷ್ಟರಲ್ಲಿಯೇ ದಾರಿ ತೀರಿ ಹೋಯಿತು ಮುಂದೇನು ಮಾಡಬೇಕೆಂಬದರ ಗತಿಯೇನು?'

ಹಾಗೆ ಹೇಳಬೇಕಾದರೆ, "ಇಡೀ ಜನ್ಮವನ್ನು ಈ ಕರಿನೀರಿನ ಬಂದಿಗಳ ಈ ಹೊಲಸು ವಾತಾವರಣದಲ್ಲಿ ಕೊಳೆಯುತ್ತ ಬೀಳುವಂತಿಲ್ಲ ಸಂಧಿ ದೊರೆತ ಕೂಡಲೆ ಪ್ರತಿಬಂಧದ ಬೇಡಿಗಳನ್ನು ಕಡಿದು ಚೆಲ್ಲಿ ಜಾರಿ ಹೋಗುವದು" ಎಂಬ ನಿಶ್ಚಿಯವನ್ನು ಕಿಶನನು ಇಂದೇ ಮಾಡಿದ್ದನೆಂತಲ್ಲ; ಕರಿನೀರಿಗೆ ಹೊರಟಾಗಲೆ ಅವನು ಆ ನಿರ್ಧರ ಮಾಡಿದ್ದನು ರಫೀ ಉದ್ದೀನನಂತಹ ಅಘೋರ ಪುರುಷನಿಗೆ ತನ್ನ ಕಡು ಹಗೆತನವನ್ನು ತೋರಗೊಡದೆ, ಅದೇ ಉದ್ದೇಶದಿಂದಲೇ ಕಿಶನನು ಆತನನ್ನು ತನ್ನವನನ್ನಾಗಿ ಮಾಡಿಕೊಂಡಿದ್ದನು ಈ ಕರಿನೀರಲ್ಲಿಯೂ ಕಳೆದ ಐದು ವರ್ಷಗಳಲ್ಲಿ ಆತನೊಡನೆ ಆ ಬಗ್ಗೆ ಸಂಧಿ ದೊರೆತಾಗೆಲ್ಲ ಹಲವು ಸಾರೆ ಗುಪ್ತವಾಗಿ ಆಲೋಚಿಸಿದ್ದನು; ಮತ್ತು ಆ ಚರ್ಚೆಯ ಅನುರೋಧದಿಂದಲೇ ಆತನು ತನ್ನನ್ನು ಯಾವ ಅಡವಿ ಕಡಿಯುವ ಕೆಲಸಕ್ಕೇ ನೇಮಿಸಿಕೊಂಡಿದ್ದನೋ, ಆದಾದರೂ ಅದಕ್ಕೇ; ಇಷ್ಟೇ ಅಲ್ಲ, ಆ ಅಡವೀ ಕಡಿಯುವ ನೂರು-ನೂರಿಪ್ಪತ್ತೈದು ಬಂದಿಗಳಿಗೆ ಆತನು ಮುಖ್ಯಸ್ಥನೆಂದು 'ಬಂದಿಬಾಬು'ವಾದ ಕೂಡಲೆ, ಹಸ್ತ ಪರಹಸ್ತಗಳಿಂದ ಪ್ರಯತ್ನಿಸಿ, ಯುಕ್ತಿಯಿಂದ ರಫೀ ಉದ್ದೀನನನ್ನೂ ಆ ಕೆಲಸದಲ್ಲಿ ತನ್ನ ಕೈಕೆಳಗೆ ನೇಮಿಸಿಕೊಂಡಿ

ದ್ದನು; ಆದರೆ ಆತನಿಗೆ ಮಾಲತಿಯು ಯಾವ ಪತ್ತೆಯೂ ಹತ್ತದ್ದರಿಂದ, ಆ ಸಾಹಸದ ಬಗ್ಗೆ ಆತನಿನ್ನೂ ಪಕ್ಕಾ ನಿಶ್ಚಯ ಮಾಡಿರಲಿಲ್ಲ. ಅದನ್ನು ಇಂದು ಆತನ ಮನಸ್ಸು ಯೋಚಿಸಹತ್ತಿತು. ಆದಾದರೂ ಅಂದು ಮಾಲತಿಯ ಆ ನಿರ್ವಾಣದ ನಿರೂಪ ಕೇಳಿ, ಆಕೆಯ ದುರ್ದೆಸೆಯ ಹಾಗು ಆತ್ಮಹತ್ಯೆಯ ಬೇತಿನ ಅತ್ಯಂತ ಚಿಂತಾಜನಕ ಸಂಗತಿಯನ್ನು ಆಲಿಸಿದ್ದರಿಂದಲೇ ಯೋಚಿಸಬೇಕಾಗಿತ್ತು.

ಕರಿನೀರೊಳಗಿನ ಜೀವಾವಧಿ ಶಿಕ್ಷೆಯ ಬೇಡಿಗಳನ್ನು ಕಡಿದೊಗೆಯುವ ಸಾಹಸವು ಸಾಮಾನ್ಯವಾದುದಲ್ಲ. ಬರಿಯ ಬಾಯಿ ಮಾತಲ್ಲ. ಕತ್ತನ್ನು ಕತ್ತರಿಸಿ ಕೈಯಲ್ಲಿ ಹಿಡಿದುಕೊಂಡೇ ಆ ಕೆಲಸಕ್ಕೆ ಯಾರು ಮುಂದಾಗುವರೋ, ಅವರ ಕೆಲಸವೇ ಅದು! ಅದನ್ನೆಲ್ಲ ಕಿಶನನು ಅರಿತಿದ್ದನು. ಆ ಅಂಜಿಕೆಯು ಆತನಿಗೆ ಚೆನ್ನಾಗಿದ್ದಿತೆಂದೇ ಅವನು ಇದುವರೆಗೆ ಆ ಬಗ್ಗೆ ಬರಿಯ ಒಣ ಬೇತುಗಳನ್ನೇ ನಡಿಸಿದ್ದನು; ಆದರೂ ಮೆಲ್ಲ ಮೆಲ್ಲನೆ ಆ ಮಾರ್ಗ ಹಿಡಿಯ ಹತ್ತಿದ್ದನು; ಆದರೂ ಕವಡಿಗಳನ್ನು ಬರಿಯ ಕೈಯಲ್ಲೇ ಖುಳುಖುಳು ಎಂದೆನಿಸುತ್ತ ಕೂಡ್ರುವ, ಆದರೆ ಚೆಲ್ಲಲಿಕ್ಕೆ ಅಂಜುವ ಜೂಜುಗಾರನಂತೆ ನಿರ್ಬಂಧ ಮರ್ಯಾದೆಯ ಹೊರಗೆ ಹಾಗೆ ಯಾವ ಹೆಜ್ಜೆಯನ್ನು ಇಡಲಿಕ್ಕೂ ಆತನು ಅನುಮಾನಪಡುತ್ತಿದ್ದನು; ಇಂದು ಮಾತ್ರ ಆ ಹೆಜ್ಜೆ ಇಡುವ ಧೈರ್ಯವನ್ನು ಮಾಡಿಯೇ ಮಾಡುವದೆಂಬ ನಿಶ್ಚಯಕ್ಕೆ ಬಂದಿದ್ದನು. ಆ ಸಾಹಸವು ಎಷ್ಟೇ ಜೀವದ ಮೇಲಿನದಿದ್ದರೂ, ಮತ್ತೆ ದಿನಗಳೆಯಲಿಕ್ಕೆ ಆತನು ಪ್ರಯತ್ನಪಡದೆ, ಇಂದು ಅದು ತೀರ ತ್ವರ್ಯ (Urgent) ಕೆಲಸವಾಗಿ ಕಂಡಿತ್ತು; ಮತ್ತು ಅದರ ಆ ಅವಸರದ ಚರ್ಚೆಯನ್ನು ಇನ್ನು ರಫೀಉದ್ದೀನನೊಡನೆ ಮಾಡಬೇಕೆಂದು ಆತನು ಅಂದು ನಿರ್ಧರಿಸಿಕೊಂಡನು.

ಆದರೆ ಮಾಲತಿಯ ವಿಷಯದ ಸಂಗತಿ? ಅದನ್ನು ಆ ದುರ್ಜನನಾದ ರಫೀಉದ್ದೀನನಿಗೆ ತಿಳಿಸಬೇಕೋ ಬಾರದೋ? ಛೇ! ಅದರಲ್ಲಿಯ ಒಂದು ಅಕ್ಕರವನ್ನು ಕೂಡ ಸದ್ಯಕ್ಕೆ ರಫೀಉದ್ದೀನನಿಗೆ ತಿಳಿಸಕೂಡದೆಂದು ಕಿಶನನು ಕೂಡಲೆ ನಿಶ್ಚಯಿಸಿಕೊಂಡನು. ರಫೀಉದ್ದೀನನಿಗೆ ತಮ್ಮೊಡನೆ ಮಾಲತಿಯನ್ನೂ ಬಿಡುಗಡೆ ಮಾಡಬೇಕಾಗಿದೆಯೆಂಬದನ್ನು ಕೂಡ ತಿಳಿಸಬಾರದೆಂದು ನಿರ್ಧರಿಸಿದನು.

ಮನಸ್ಸಿನಲ್ಲಿಯೇ ಉಚ್ಚರಿಸಿದ ಆ ಹೆಸರಿನೊಡನೆಯೇ ಆತನು ತನ್ನ ನಾಲಿಗೆಯನ್ನು ಒಮ್ಮೆಲೆ ಕಡಿದನು. ಆಗಿನಿಂದ ಆತನು ತನ್ನ ಮನಸ್ಸಿನ ಮನಸ್ಸಿನೊಳಗೆ ಮಾಲತಿಯ ಸಂಬಂಧದ ನೆನವುಗಳನ್ನು ತೆಗೆಯುತ್ತಿರುವಾಗ,

ಮಾಲತಿ ಎಂಬುದಾದ ಆವಳ ಪ್ರೇಮುಲ ಹೆಸರನ್ನೇ ಆತನು ಯೋಜಿಸುತ್ತಿದ್ದನು ಕಂಟಕಿ ಎಂಬ ಹೆಸರನ್ನು ಯೋಜಿಸುವಾಗ, ಆತನ ಮನಸ್ಸಿನೊಳಗಿನ ಆ ಮಾಲತಿ ಎಂಬ ಹೆಸರಿನಿಂದಲೇ ಯಾವವು ನೊದಲಿನಿಂದಲೂ ಸಂಭವಿಸಿದಂಥ ಸಂಬದ್ಧವಾದಂಥ ಪ್ರೇಮುಲ ಭಾವಗಳು ಏನು ಮಾಡಿದರೂ ಚೆನ್ನಾಗಿ ನೆನಪಾಗುತ್ತಿರಲಿಲ್ಲ! ಆದರಿಂದಲೇ ಆತನು ಮನಸ್ಸಿನ ಮನಸಿನಲ್ಲಿಯೇ ಮಾತಾಡುತ್ತಿರುವ ವರೆಗೆ ಆವಳನ್ನು ಮಾಲತಿಯೆಂದೇ ಅನ್ನುತ್ತಿದ್ದನು; ಆದರೆ ಮನಸ್ಸಿನಲ್ಲಿ ಸಂಪೂರ್ಣವಾಗಿ ತುಂಬಿಕೊಂಡಿದ್ದ ಆ ಹೆಸರು ತುಟಿಯ ಮೇಲೆ ಚೆಲ್ಲಿದ್ದರೆ? ಆದರಿಂದ ತನ್ನ ಹಾಗು ಆಕೆಯ ಸಂಬಂಧದ ಬಚ್ಚಿಟ್ಟ ಅಜ್ಞಾತವಾಸದೊಳಗಿನ ಎಲ್ಲ ಗೌಪ್ಯವು ಅಲ್ಲಿ ಸ್ಫೋಟಗೊಳ್ಳುವದು. ಆದುವರೆಗಿನ ರಫೀಉದ್ದೀನನ ಹಳೇ ವೈರವು ಚೇತನಗೊಳ್ಳುವದು. ಆವಳ ತಾಯಿಯ ತನ್ನ ಮೊದಲಿನ ಖಟ್ಲೆಯ ಎಲ್ಲ ಸಂಬಂಧವೂ ಬಹಿರಂಗವಾಗುವದು! ಇಲ್ಲದ ಸಂಕಟಗಳು ದೂತ್ತೆಂದು ಬಂದು ಮುಂದೆ ನಿಲ್ಲುವುವು! ಅದರಿಂದ ಹಾಗೆ ಮತ್ತೆ ಮರವಾಗಬಾರದೆಂದು ಆತನು ತನ್ನಷ್ಟಕ್ಕೆ ತಾನೇ ಗುಣಗುಟ್ಟುತ್ತ, ತೀರ ಪಾಠಮಾಡುತ್ತಲೆ 'ನಾನು ಕಂಟಕನು-ಕಂಟಕನು ಆವಳು ಮಾಲತಿಯು ಅಲ್ಲಲ್ಲ; ಅವಳು ಕಂಟಕಿಯು-ಕಂಟಕಿಯು! ಕಂಟಕಿಯು. ಕಂಟಕಿಯು ನನ್ನ ಭಗಿನಿಯು' ಎಂದೆನ್ನುತ್ತಲೆ ಹೊರಟನು.

ಹೀಗೆ ಆತನು ವಿಚಾರಗ್ರಸ್ತನಾಗಿ ಹೋಗಿ ಆ ಚಾಳಿಗೆ ತಲುಪುವಷ್ಟರಲ್ಲಿಯೇ ಬಂದಿಗಳು ರಾತ್ರಿಯಲ್ಲಿ ತಮ್ಮ ತಮ್ಮ ಚಾಳಿಗೆ ಹಿಂದಿರುಗುವ ಮೊದಲನೇ ಗಂಟೆಯಾಯಿತು. ಆ ಗಂಟೆಯ ಘಣ ಘಣ ಶಬ್ದವನ್ನು ಕೇಳುತ್ತಲೇ, 'ಬಂದೆನಪ್ಪಾ ಒಮ್ಮೆ ನಿಯಮಿತವಾಗಿ' ಎಂದೆಂದು ಕಂಟಕನು ನಿಟ್ಟುಸಿರುಗರೆದನು; ಹಾಗು ಒಮ್ಮೆಲೆ ಬಾಗಿಲ ಮುಂದೆಯೇ ಬಿದ್ದಿದ್ದ ಒಂದು ಪೆಟ್ಟಿಗೆಯ ಮೇಲೆ ಕಾಲು ಮೇಲೆ ಕಾಲಿರಿಸಿಕೊಂಡು ಕುಳಿತನು

ಅಲ್ಪಾವಕಾಶದಲ್ಲಿ ಎಲ್ಲ ದಂಡಿತರ ಊಟ-ಪಾಟಗಳೆಲ್ಲ ಮುಗಿಯಲು, ಕಂಟಕಬಾಬುವು ಚಾಳಿನ ಮುಂದೆ ದೂರದಲ್ಲಿರುವ ಬೈಲುಜಾಗದಲ್ಲಿ ಅಡ್ಡಾಡಹತ್ತಿದನು. ರಾತ್ರಿ ಮಲಗುವ ಗಂಟೆಯಾಗುವವರೆಗೆ ಬಂದಿಗಳು ರಾತ್ರಿಯ ಭೋಜನೋತ್ತರದಲ್ಲಿ ಅಡ್ಡಾಡುವ ಸ್ಥಳ ಹಾಗು ವೇಳೆಯದು. ಕಂಟಕನಂತೂ ಅಲ್ಲಿಯ ಮುಖ್ಯ ಬಂದಿಬಾಬುವು! ಆತನು ತುಸಹೊತ್ತು ಒಬ್ಬನೇ ಅಡ್ಡಾಡಿದ ಬಳಿಕ ಅಕ್ಕಪಕ್ಕದಲ್ಲಿ ದೂರದ ವರೆಗೆ ಕಾಣಬಹುದಾನಂತಹ ಒಂದು ಎತ್ತರವಾದ ಸ್ಥಳದಲ್ಲಿ ಕುಳಿತು, "ಉದ್ದೀನ! ರಫೀಉದ್ದೀನ!" ಎಂದು ಕೂಗಿದನು.

"ಜೀ! ಜೀ! ಕಂಟಕಬಾಬು? ಆತಾಹೂಂ ಆತಾಹೂಂ!" ಹೀಗೆ ತೀರ

ಆತುರದಿಂದ ಹೇಳುತ್ತ, ಕಂಟಕಬಾಬುವಿನ ದನಿ ಕೇಳಬರುತ್ತದಾವಾಗೋ, ತಾನು ಅವರ ಬಳಿಗೆ ಹೋಗಿ ಅವರ ಆಜ್ಞೆ ಪರಿಪಾಲಿಸುತ್ತೇನಾವಾಗೋ ಎಂದು ನಿರೀಕ್ಷಿಸುತ್ತಿದ್ದ ರಫೀ ಉದ್ದೀನನು ಧಾವಿಸುತ್ತಲೇ ಅಲ್ಲಿಗೆ ಬಂದು ಅವ ನೆದುರಿಗೆ ನಿಂತುಕೊಂಡನು.

ಇತ್ತೀಚೆಗೆ ರಫೀ ಉದ್ದೀನನು ಹೇಗೆಯೋ ಕಂಟಕ ಬಾಬುವಿನ ತೀರ ಆಜ್ಞಾಧಾರಕನಾಗಿಬಿಟ್ಟಿದ್ದನು! ಯಾಕಂದರೆ ಯಾವ ದಿವಸ ರಫೀ ಉದ್ದೀನ ನಿಗೆ ಆ ಭಯಂಕರ ಫಟಕೆಯ ಶಿಕ್ಷೆಯಾಗಿತ್ತೋ ಮತ್ತು ಆತನು ಜ್ವರದಿಂದ ಪೀಡಿತನಾಗಿ ಬೇನೆ ಬಿದ್ದಿದ್ದನೋ, ಅದೇ ಕಾಲಕ್ಕೆ ಬಂದಿಶಾಲೆಯೊಳಗಿನ ರುಗ್ಣಾ ಲಯದಲ್ಲಿ ಡಾಕ್ಟರರ ಕೈಕೆಳಗೆ ಉಮೇದ್ವಾರ ಮಿಶ್ರಕರಲ್ಲಿ (Apprentice Compounder) ಕಂಟಕನು ನಿಯಮಿಸಲ್ಪಟ್ಟಿದ್ದನು. ರಫೀ ಉದ್ದೀನನು ಆ ರುಗ್ಣಾಲಯದಲ್ಲಿ ಆ ಬೇನೆಯಿಂದ ಎಷ್ಟೋ ದಿನಗಳ ವರೆಗೆ ಹಾಸಿಗೆ ಹಿಡಿದು ಬಿದ್ದಾಗ, ಆತನ ಆ ಅಸಹಾಯ್ಯ ಸ್ಥಿತಿಯಲ್ಲಿ ಕಂಟಕನು ಅವನಿಗೆ ಎಷ್ಟೋ ಸಹಾಯ್ಯ ಮಾಡಿದ್ದನು. ಔಷಧೋಪಚಾರ, ಬಂದವಾನರ ಬಂದಿ ವಾನರಲ್ಲಿಯೇ ಹೆಚ್ಚು ಅನುಕೂಲತೆ, ಸಕ್ಕರೆಯ ಚೀಟು, ತಂಬಾಕದ ಹುಡಿ ಯನ್ನು ಕೂಡ ಅಧಿಕಾರಿಗಳ ಕಣ್ಣು ತಪ್ಪಿಸಿ ಆತನಿಗೆ ಪೂರೈಸಿದ್ದನು. ರಫೀ ಉದ್ದೀನನನ್ನು ಮರಳಿ ಕೋಲೂ ಕೆಲಸಕ್ಕೆ ಕಳಿಸುವ ದಿನವನ್ನು ಶಕ್ಯವಾದಷ್ಟು ಮುಂದೂಡಬೇಕೆಂದು 'ಸಕ್ತ ಕೆಲಸಕ್ಕೆ ಇನ್ನೂ ಅಯೋಗ್ಯ' ಎಂಬ ಅಭಿ ಪ್ರಾಯವನ್ನು ಡಾಕ್ಟರರನ್ನು ಪ್ರಸನ್ನೀಕರಿಸಿಕೊಂಡು ಅವರ ಮೂಲಕ ಜೇಲರನಿಗೆ ಹೇಳಿಸುತ್ತಿದ್ದನು. ಈಗ ರಫೀ ಉದ್ದೀನನಲ್ಲಿ ನಾಣ್ಯಗಳು ಸಿಲ್ಕು ಇರದ್ದರಿಂದ, ಫಟಕೆಯು ಪೆಟ್ಟಿನಿಂದ ಇತ್ತೀಚೆಗೆ ಆತನಿಗೆ ಬಹು ಅಂಜಿಕೆ ಯೆನಿಸಹತ್ತಿದ್ದರಿಂದ ಆತನು ಈಗ ತನಗೆ ಕೊಟ್ಟ ಶ್ರಮದ ಸಕ್ತ ಕೆಲಸ ವನ್ನು ಚೆನ್ನಾಗಿ ಮಾಡಹತ್ತಿದ್ದನು. ಕಂಟಕನು ಹೇಗೆ ಹೇಗೆ ಬಡತಿಹೊಂದ ಹತ್ತಿದನೋ, ಅದರಂತೆ ರಫೀ ಉದ್ದೀನನು ಆತನಿಗೆ ಹೆಚ್ಚೆಚ್ಚು ಅಂಕಿತನಾಗಿ ನಡೆಯತೊಡಗಿದನು ಆತನ ಮನವೊಲಿಸಿಕೊಳ್ಳಲಿಕ್ಕೆ ಪ್ರಯತ್ನಿಸಹತ್ತಿದನು. ತನಗೂ ಆತನಿಗೂ ಏನೂ ಸಂಬಂಧವಿಲ್ಲೆಂಬದನ್ನು ಕಂಟಕನು ತೋರಿಕೆ ಯಲ್ಲಿ ತೋರಿ, ಅಧಿಕಾರಿಗಳಿಗೆ ಸಂಶಯವುಂಟಾಗಬಾರದ ಹಾಗೆ ನಡೆಯು ತ್ತಿದ್ದನು. ರಫೀ ಉದ್ದೀನನಾದರೂ ಹಾಗೆಯೇ ಆಚರಿಸಬೇಕೆಂದು ಅವ ರೀರ್ವರಲ್ಲಿ ಗೊತ್ತಾಗಿದ್ದಿತು; ಆದರೆ ರಫೀಉದ್ದೀನನಿಗೆ ಕಂಟಕನೇ ಎಲ್ಲ ಅಂತಸ್ಥ ಸಹಾಯ್ಯ ಮಾಡುತ್ತಿದ್ದನು. ಅಂತೆಯೇ ಆಗ ರಫೀ ಉದ್ದೀನನಿಗೆ ಯಾವ ತೊಂದರೆಯೂ ಆಗದೆ, ಆತನು ನಿವಾಂತವಾಗಿ ದಿನಗಳೆಯಹತ್ತಿ

ದ್ದನು; ಮತ್ತು ಕಡೆಗೆ ಮೂರು ವರ್ಷಗಳೊಳಗೇ ಆತನನ್ನು ಆ ಕಕ್ಷಗಾರಾಗೃಹದ ಹೊರಗೆ ಬಿಟ್ಟು, ಹೊರಗಿನ ಚಾಳುಗಳಲ್ಲಿರಿಸಿ, ಅಲ್ಲಿಯ ಕೆಲಸಕ್ಕೆ ಕಳಿಸಿದ್ದರು. ಆ ಮೇಲೆ ಕಂಟಕನ ಬಡತಿಯು ಇನ್ನಿಷ್ಟಾಗಿ, ಆತನು ಅಡವಿ ಕಡೆಯುವವರ ಮುಖ್ಯ ಬಂದಿಬಾಬುವಾದೊಡನೆಯೇ ಅವನು ಒಳಯುಕ್ತಿಯಿಂದಲೇ ರಫೀ ಉದ್ದೀನನನ್ನೂ ಆ ತನ್ನ ಕೈಕೆಳಗಿನ ತಂಡದಲ್ಲಿ ಸೇರ್ಪಡೆ ಮಾಡಿಕೊಂಡನು. ರಫೀ ಉದ್ದೀನನ ದೇಹಯಷ್ಟಿಯು ಬಲವಾಗಿದ್ದಿತಾದ್ದರಿಂದ, ಆ ಅಡವಿ ಕಡೆಯಲಿಕ್ಕೆ ಬೇಕಾಗುವ ಟೊಣಪರಲ್ಲಿ ಆತನಿಗೆ ಇಂಬು ದೊರೆಯಿತು. ಕಂಟಕನ ಸಹಾಯವಿರದಿದ್ದರೆ, ತನ್ನ ಕಷ್ಟಗಳಿಗೆ ಪರಿಮಿತಿ ಉಳಿಯುತ್ತಿರಲಿಲ್ಲವೆಂಬುದು ಇತ್ತೀಚೆಗೆ ರಫೀ ಉದ್ದೀನನಿಗೆ ಸಂಪೂರ್ಣ ತಿಳಿದಿತ್ತು. ಆದರಿಂದ ಕರಿನೀರಿಗೆ ಬಂದ ಕೂಡಲೆ ಕಂಟಕನನ್ನು ಜೇಲಿನ ಅಧಿಕಾರಿಗಳು ಚೆನ್ನಾಗಿ ನಡೆಸಿಕೊಳ್ಳುತಿದ್ದರೆಂಬ ಬಗ್ಗೆ ರಫೀ ಉದ್ದೀನನ ದುಷ್ಟ ಹೃದಯಕ್ಕೆ ಯಾವ ವೈಷಮ್ಯವೆನಿಸಿದ್ದಿತೋ, ಅದೆಲ್ಲ ಅಳಿದು ಹೋಗಿ, ತದ್ವಿರುದ್ಧವಾಗಿ ಈಗ ಆತನು ಯಾವಾಗಲೂ 'ಕಂಟಕ ಬಾಬುಗಳ ಬಡತಿಯು ಮಿತಿಮೀರಿ ಆಗಲಿ' ಎಂದು ಪ್ರಾರ್ಥನೆ-ದುವಾ-ಮಾಡಹತ್ತಿದ್ದನು; ಆದರೆ ಹಾಗೆ ಮಾಡುವಾಗ ಆತನಲ್ಲಿಯ ದುಷ್ಟತನವು ಸಂಪೂರ್ಣವಾಗಿ ಅಳಿದು ಹೋಗಿದ್ದಿತೆಂತಲ್ಲ; ಆದರೆ ದುಷ್ಟರದೇ-ಖಲನೆಗಾರರದೇ ಒಂದು ವಿಶಿಷ್ಟ ಗುಣವು ಬಹುತರವಾಗಿ ತೋರಿಬರುವುದೇನಂದರೆ, ಯಾವನ ಕೈಯಲ್ಲಿ ಅವರ ಹಿತಾಹಿತಗಳು ಅಗತಿಕವಾಗಿ ಸೇರಿರುತ್ತವೆಯೋ, ಅದುವರೆಗಂತೂ ಅವರು ಅವನ ಪಾದಗಳಿಗೆ ತೀರ ಮನಃಪೂರ್ವಕವಾಗಿಯೇ ನಮಿಸುತ್ತಿರುತ್ತಾರೆ.

ರಫೀಉದ್ದೀನನು ಹುಟ್ಟಾ ಆತತಾಯಿಯು! ಪರಮ ನೀಚನು! ಭಯಂಕರ ಉಪದ್ವ್ಯಾಪಿಯು! ಒಳ್ಳೇ ಕೆಲಸಕ್ಕೆ ತೊಡಗಿದ್ದರೆ, ಆತನ ಅವೇ ಗುಣಗಳಿಗೆ ಧೈರ್ಯ, ಪರಾಕ್ರಮ ಮುಂತಾದ ಸುವಿಶೇಷಣಗಳನ್ನು ಹಚ್ಚಬರುತ್ತಿತ್ತು! ಆತನು ಆತತಾಯಿ ಬೇಟೆಯ ನಾಯಿಯಂತಿದ್ದನು ಆತನನ್ನು ಯಾರು ಸಾಕಿರುವರೋ, ಯಾರ ಕೈಯಲ್ಲಿ ಆತನ ಹಿತಾಹಿತಗಳೋ, ಆತನು ಛೂ ಬಿಟ್ಟ ಕೂಡಲೆ ಎದುರಿಗೆ ಕಂಡವರನ್ನು ಹರಿದು ತಿನ್ನುವಂಥವನು!

ಈಗ ಆ ರಫೀಉದ್ದೀನನು ಕಂಟಕನು ಸಾಕಿದ ನಾಯಿಯಂತಾಗಿದ್ದನು. ಅಂತೆಯೇ ಕಂಟಕಬಾಬುವು 'ಕುರೆ, ಕುರೆ' ಎಂದು ಕರೆಯುತ್ತಲೆ, ಆತನ ಬಳಿಗೆ ಹಾರುತ್ತ ಜಿಗಿಯುತ್ತ ಬಂದು, ಜೊಲ್ಲು ಸುರಿಸುತ್ತ ನಿಂತುಕೊಳ್ಳುವಂತೆ ನಿಂತುಕೊಂಡನು.

ರಫೀಉದ್ದೀನನು ಬಂದ ಕೂಡಲೆ 'ಕೂಡ್ರು' ಎಂದು ಆತನಿಗೆ ಕಂಟ

ಕನು ತಿಳಿಸಿದನು; ಮತ್ತು ಹತ್ತಿರ ಯಾರೂ ಇಲ್ಲೆಂಬದನ್ನು ದೂರದ ವರೆಗೆ ನಿರೀಕ್ಷಿಸಿ ನೋಡಿ, ಕಂಟಕನು ಆತನೊಡನೆ ಮೆಲ್ಲಮೆಲ್ಲನೆ ಮಾತನಾಡಹತ್ತಿದನು:—

"ಉದ್ದಿನ! ಕರಿನೀರಿಗೆ ಹೊರಟ ದಿನವೇ ಆ ಉಗೆಹಡಗದಲ್ಲಿ ಕುಳಿತಾಗ 'ಈ ಕರಿನೀರಿನಿಂದ ಓಡಿ ಹೋಗುವದೇ' ಎಂಬ ಬಗ್ಗೆ ನನ್ನ ನಿನ್ನಲ್ಲಿ ಪ್ರಮಾಣಗಳಾಗಿದ್ದವಲ್ಲವೆ? ಅದರಂತೆ ಇನ್ನು ನೀನು ಅದನ್ನು ದಿಟವಾಗಿ ಮಾಡಿ ತೋರುವೆಯಾ? ಇನ್ನು ಬರಿಯ ಚರ್ಚೆ ಬೇಕಾಗಿಲ್ಲ! ಇಂದೇ, ಇಂದಿನಿಂದಲೇ ಕತ್ತನ್ನು ಕೈಯಲ್ಲಿರಿಸಿಕೊಂಡು ಆ ಉದ್ಯೋಗಕ್ಕೆ ತೊಡಗಬೇಕಾಗಿದೆ. ನೀನು ಸಿದ್ಧನಿರುವೆಯಾ?"

"ಒಂಟಿಗಾಲಿನಿಂದ. ನಾನು ನಿಮ್ಮ ಜೀವಕ್ಕೆ ಜೀವ ಕೊಟ್ಟೇನು, ಹಿಂದೆಗೆಯಲಿಕ್ಕಿಲ್ಲ; ಆದರೆ ಓಡಿ ಹೋಗುವ ಬೇತನ್ನು ಮಾತ್ರ ತೀರ ಸಿದ್ಧತೆಯಿಂದ ರಚಿಸಿರಬೇಕು. ಆ ಕೆಲಸವು ಬಹು ದುರ್ಘಟವಾದದ್ದಿದೆ. ಸಾಧಿಸದಿದ್ದರೆ-"

"ಜೀವದಿಂದಿರುವವರೆಗೂ ಅಸಾಧ್ಯವಾಗದಂತಹ ಬೇತೇ ಬೇಕು! ಅಂಥ ಬೇತು ಮಾಡಿದರೇ ನೀನು ನಿಜವಾದ ರಫೀಉದ್ದೀನನು! ಈ ಕರಿನೀರೊಳಗಿಂದ ಓಡಿ ಹೋಗಿದ್ದ ನಿಪುಣ ಪಾಪಿಯು!"

ಈ ವಾಕ್ಯಗಳು ಆತನ ಸ್ತುತಿ-ಸ್ತೋತ್ರಗಳೇ ಆಗಿದ್ದವು. ಅವುಗಳನ್ನು ಕೇಳಿ ರಫೀಉದ್ದೀನನು ಎದೆ ಸೆಟೆಸಿಕೊಂಡು "ಕಂಟಕಬಾಬು, ಆ ವಿಷಯದ ಚರ್ಚೆಯನ್ನು ನಾನು ನಿಮ್ಮೊಡನೆ ಈಗಾಗಲೇ ಹಲವು ಸಾರೆ ಮಾಡಿರುತ್ತೇನೆ. ನಾನು ನನ್ನ ಮನಸ್ಸಿನಲ್ಲೂ ನನ್ನದೊಂದು ಬೇತನ್ನು ಯೋಜಿಸಿರುತ್ತೇನೆ. ಆದರೆ ಅದು ಬಹು ಭಯಂಕರ...."

"ಮೊದಲು ಹೇಳು, ಅದಾವುದೆಂಬವನ್ನು? ಆ ಮೇಲೆ ಅದರಲ್ಲಿಯ 'ಭಯಂಕರ'ತ್ವವನ್ನು ನೋಡೋಣವಂತೆ"

ರಫೀಉದ್ದೀನನು ಖೇಕರಿಸಿದನು; ಕೆಮ್ಮಿದನು; ಸುತ್ತಲೂ ಯಾರಾದರೂ ಇರುವರೋ ಇಲ್ಲವೋ? ಹಾಗು ಬರುತ್ತಿರುವರೋ ಹೇಗೋ? ಎಂಬದನ್ನು ನೋಡಿದನು; ಮತ್ತೊಮ್ಮೆ ದಿಟ್ಟಿಸಿ ನೋಡಿದನು; ಹಾಗು ಬರಿಯ ಹೇಳು-ಕೇಳುವಾಗಲೇ ದೇಹವನ್ನು ಕಂಪಿಸುವಂತಹ ಆ ತನ್ನ ಭಯಂಕರ ಬೇತನ್ನು ತನ್ನ ತುಟಿಯನ್ನು ಕಂಟಕಬಾಬುವಿನ ಕಿವಿಗೆ ಆನಿಸಿ, ಮೆಲ್ಲಮೆಲ್ಲನೆ ಹೇಳಹತ್ತಿದನು.

೧೫ನೇ ಪ್ರಕರಣ.

ಎಂಟು-ಹತ್ತು ದಿನಗಳಾಗಿದ್ದವು. ವೃದ್ಧ ಅಪ್ಪಾಜಿಯು ಆ ತನ್ನ ದಾಖಲೆಗಾರರ ಹಳ್ಳಿಯಲ್ಲಿ ಹಾಸಿಗೆ ಹಿಡಿದು ಬಿದ್ದುಕೊಂಡಿದ್ದನು. ಐವತ್ತೇಳರ ಸ್ವಾತಂತ್ರ್ಯಸಂಗ್ರಾಮದಲ್ಲಿ ಸೇನಾಪತಿ ತಾತ್ಯಾಟೋಪೆ ಇವರ ಪಕ್ಷ ವಹಿಸಿ ಕಾದುತ್ತಿರುವಾಗ ಗುಂಡು ತಾಕಿ ಗಾಯಗೊಂಡಿದ್ದ ಅಪ್ಪಾಜಿಯ ಆ ಮೊಣಕಾಲಲ್ಲಿ ತೀವ್ರ ವೇದನೆಗಳಾಗುತ್ತಿದ್ದವು. ಇಡೀ ಜನ್ಮದಲ್ಲಿ ಕರಿನೀರ ಬಂದಿವಾಸದೊಳಗೆ ಕಠಿಣತರ ಹಾಗು ಸಕ್ತವಾಗಿ ಮಾಡಹತ್ತಿದ್ದ ಪರಿಶ್ರಮಗಳ ಮೂಲಕ ಜರ್ಜರಿತವಾಗಿದ್ದ ಆತನ ದೇಹ ಯಷ್ಟಿಯು ಈಗ ತೀರ ಕಂಗೆಟ್ಟು ಹೋಗಿ, ಎಪ್ಪತ್ತಕ್ಕೆ ಮೀರಿದ್ದ ಆತನ ವಯಸ್ಸಿನ ಮಾನದಿಂದ ತೀರ ದಣಿದಿತ್ತು. ಇತ್ತೀಚೆಗೆ ಆತನ ಹೃದಯದಲ್ಲೂ ಆಗಾಗ್ಗೆ ಅಸಹ್ಯವಾದ ವೇದನೆಗಳೇಳುತ್ತಿದ್ದವು. ಆ ಬೇನೆಯ ಮೂಲಕ ಅಂಗಳದ ಬೈಲಲ್ಲಿ ಯಾವಾಗಲೂ ಬಿದ್ದಿರುತ್ತಿದ್ದ ಅವನ ಮಂಚವೂ ಬೈಠಕವೂ ಈ ವಾರದಲ್ಲಿ ಅಲ್ಲಿರದೆ, ಅವರ ಗುಡಿಸಲಲ್ಲಿಯೇ ಒತ್ತಟ್ಟಿಗಿಡಲ್ಪಟ್ಟದ್ದಿತು. ಈ ಬೇನೆಯಲ್ಲಿ ತನ್ನ ದೇಹವಿಸರ್ಜನವು ನೋಡು ನೋಡುತ್ತಿರಲಿಕ್ಕೆ, ಮಾತು ಮಾತಾಡುತ್ತಿರಲಿಕ್ಕೆ ಯಾವಾಗ ಆದೀತೆಂಬ ಭರವಸೆಯು ಅವನಿಗಿರದ್ದರಿಂದ, ಒಮ್ಮೆ ಕಂಟಕನು ತನ್ನನ್ನು ಕಂಡು ಹೋಗಬೇಕೆಂದು ಅವನು ಆತನಿಗೆ ತ್ವರ್ಯದ ನಿರೂಪವನ್ನು ಕಳಿಸಿದ್ದನು. ಇಂದು ರವಿವಾರ; ಆದರಿಂದ ಕಂಟಕಬಾಬುವು ಈ ದಿವಸ ಹೇಗಾದರೂ ಮಾಡಿ ಬರದಿರಲಿಕ್ಕಿಲ್ಲವೆಂಬ ಭರವಸೆಯಿಂದ ಅಪ್ಪಾಜಿಯು ಆ ತನ್ನ ಗುಡಿಸಿಲಿನಲ್ಲಿಯೇ ಹಾಸಿಗೆಯ ಮೇಲೆ ನರಳುತ್ತ ಬಿದ್ದುಕೊಂಡಿದ್ದರೂ, ಕಿಟಕಿಯೊಳಗಿಂದ ಆಗಾಗ್ಗೆ ಹೊರಗೆ ಇಣಕಿ ನೋಡುತ್ತಿದ್ದನು; ಮತ್ತು ಆ ದಿನ್ನೆಯ ಮೇಲಿಂದ ಇಳಿಯುವ ಕಂಟಕನು ಯಾವಾಗ ಕಣ್ಣಿಗೆ ಕಾಣುವನೋ ಎಂಬದರ ಕಡೆಗೆ ಆತನ ದೃಷ್ಟಿಯಿದ್ದಿತು.

ಆತನ ಮನೆಯ ಮುಂದಿನ ಅಂಗಳದಲ್ಲಿ ಐವತ್ತು-ಅರವತ್ತು ಹಸೀ ಟೆಂಗಿನಕಾಯಿಗಳನ್ನು ಹೋಳಿಕೆಮಾಡಿ ಒಣಗಲಿಟ್ಟಿದ್ದರು ಅಂಡಮಾನದಲ್ಲಿ ಹಸೀ ಟೆಂಗಿನ ಕಾಯಿಗಳನ್ನು ಹಾಗೆ ಹೆಚ್ಚಿ, ಅವುಗಳ ಹೋಳಿಕೆ ಮಾಡಿ ಇಲ್ಲವೆ ದುಂಡನ್ನ ಬಟ್ಟಲು ಮಾಡಿ ಒಣಗಿಸಿ ಮಾರುವ ಉದ್ಯೋಗವು ದಾಖಲೆಗಾರ ಜನರ ಉಪಜೀವಿಕೆಯದೊಂದು ಸಾಧನವಿರುತ್ತದೆ ಅವುಗಳ ಎಣ್ಣೆಯನ್ನೂ ತೆಗೆಯುತ್ತಾರೆ. ಅಲ್ಲಿ ಸಾವಿರಾರು ಟೆಂಗಿನ ಮರಗಳು ಸರಕಾರದಿಂದಲೂ ಖಾಸಗಿಯಾಗಿಯೂ ಬೆಳೆಸಲ್ಪಟ್ಟಿವೆ. ಅಪ್ಪಾಜಿಯದಾದರೂ ಅದೊಂದು ಖಾಸಗೀ ವ್ಯವಸಾಯವಾಗಿತ್ತು. ಆ ಅಂಗಳದ ತುಂಬ ಒಣಗ ಹಾಕಿದ್ದ

ಟೆಂಗಿನ ಹೋಳಿಕೆಗಳ ಮೇಲೆ ಹಕ್ಕಿಗಳ ಹಿಂಡಿಗೆ ಹಿಂಡೇ ಬಂದು ಕೂಡ್ರು ತ್ತಿತ್ತು. ಬೆದರಿಸಿದರೆ ಹಾರಬೇಕು; ಎಡಬಲದ ಗಿಡಗಳ ಮೇಲೆ ಕುಳಿತು ಕಿಲಿ ಬಿಲಿ ಮಾಡುತ್ತಿರಬೇಕು. ಮತ್ತೆ ಸಂಧಿ ದೊರಕುತ್ತಲೆ, ಆ ಟೆಂಗಿನ ಹೋಳಿಕೆ ಗಳ ಮೇಲೆ ಮುಕ್ಕರಿಬಿದ್ದು ತಿನ್ನಬೇಕು; ಎತ್ತಿಕೊಂಡೊಯ್ಯಬೇಕು. ಇಂಥ ಸುಲಿಗೆಯ ಕೆಲಸದಲ್ಲಿ ಆ ಅಂಡಮಾನದೊಳಗಿನ ಪಕ್ಷಿಗಳು ಒಳ್ಳೇ ನಿಪುಣ ವಾಗಿವೆ

ಅಲ್ಲಿಯ ಅಡವಿಯಲ್ಲೂ ತೋಟಗಳಲ್ಲೂ ಬೇರೆ ಬೇರೆ ಬಣ್ಣದ ಅಂಥ ಹಲವು ಪಕ್ಷಿಗಳ ಹಿಂಡುಗಳು ಬೇಕಾದಷ್ಟಿರುತ್ತವೆ ಅವುಗಳಲ್ಲಿಯು ಗಿಳಿ, ಮೈನಾ, ನೀಲಿ ಮತ್ತು ಬಿಳೀ ಸತೇಜ ಬಣ್ಣದ ಉದ್ದ ಹಾಗು ಬಲಿಷ್ಠವಾದ ಚುಂಚುಗಳಿದ್ದ ಮೀನು ಹಿಡಿಯುವಲ್ಲಿ ನಿಪುಣವಾದ ರಾಘವಪಕ್ಷಿ, ಮಂಜುಲ ವಾದ ದಯಾಲಪಕ್ಷಿ ಮತ್ತು ವಿಶೇಷವಾಗಿ ಬುಲಬುಲ ಮುಂತಾದ ವಿಶೇಷ ಜಾತಿಯ ಹಕ್ಕಿಗಳನ್ನು ಪ್ರಥಮದಲ್ಲಿ ವಸಾಹತು ಸ್ಥಾಪಿಸುವಾಗ ಹಿಂದು ಸ್ತಾನದೊಳಗಿಂದಲೇ ಸರಕಾರದವರು ಅಲ್ಲಿಗೆ ಒಯ್ದರೆನ್ನುವರು; ಆದರೆ ಅವುಗಳ ಭರಭರಾಟಿಯಾಗಲಿಕ್ಕೆ ಆ ಅಡವಿಯೂ ಅಲ್ಲಿಯ ಆ ಭೂಮಿಯೂ ಮೂಲತಃ ಅನುಕೂಲವಿದ್ದಿರಬೇಕೆಂದು ಅವುಗಳ ಅಲ್ಲಿಯ ಇಂದಿನ ಸಂಖ್ಯೆ ಹಾಗು ಸೊಬಗನ್ನು ನೋಡಿದರೆ ಕಂಡುಬಾರದಿರದು ಕಾಗಿ, ಗುಬ್ಬಿಗಳದಂತೂ ಅಲ್ಲಿ ಹಾವಳಿಯೇ ಆಗಿ ಹೋಗಿದೆ! ಅಂಡಮಾನದೊಳಗಿನ ಬುಲಬುಲ ಪಕ್ಷಿಯಂತೂ ಒಳ್ಳೇ ಸುಂದರವು! ಆ ಹಕ್ಕಿಯು ಗುಬ್ಬಿಗಿಂತ ತುಸ ದೊಡ್ಡದು, ತಲೆಯ ಮೇಲೊಂದು ಪುಟ್ಟ ತುರಾಯಿ, ಕಣ್ಣುಗಳ ಬದಿಯಲ್ಲಿ ತುದಿಗೆ ಒಂದಿಷ್ಟು ಕೆಂಪು, ಚಿಕ್ಕದಾದ ಯಾವಾಗಲೂ ಸಿಗರಿನಿಂತಿರುವ ಒಂದು ಬಾಲ, ಯಾವುದೊಂದು ಚಿತ್ರದಂತೆ ಗೆರೆಗಟ್ಟಿದ್ದ ಆಕೃತಿ, ಟುಣು ಟುಣುಎಂದು ಯಾವಾಗಲೂ ಹಾರುತ್ತಿರುವಂಥದು; ಹಾಗು ಭುರ್ರೆಂದು ಹಾರಿಹೋಗುವ ಅದರ ಚಪಲತೆಯನ್ನಂತೂ ಹೇಳಲಾಸಲ್ಲ! ಮತ್ತು ಅದರ ಶಬ್ದವು ಮಂಜುಲ, ಸವಿ ಹಾಗು ಸಂಕ್ಷಿಪ್ತವಿರುವದರಿಂದ ಕಾಮಿನಿಯರ ಕೈಯೊಳ ಗಿನ ಕಂಕಣಗಳ ದನಿಯೋ ಎಂಬಂತೆ ತೋರುವದು! ಇಂಥ ಆ ಅಂಡ ಮಾನದ ಬುಲಬುಲ ಪಕ್ಷಿಗಳ ತಂಡಗಳು ಅಲ್ಲಿ ಒಣಗ ಹಾಕಿದ್ದ ಟೆಂಗಿನ ಹೋಳಿಕೆಗಳ ಮೇಲೆ ನುಗ್ಗುತ್ತ, ಆ ಅಂಡಮಾನದ ಪ್ರತಿಯೊಂದು ಮನೆಯ ಅಂಗಳದಲ್ಲಿ ಕಿಲಿಬಿಲಿಗುಟ್ಟುತ್ತಿರುತ್ತವೆ.

ಅಪ್ಪಾಜಿಯ ಅಂಗಳದಲ್ಲಿ ಒಣಗಹಾಕಿದ್ದ ಆ ಹಸಿಕಾಯಿಗಳ ಹೋಳಿಕೆ ಗಳ ಮೇಲೂ ಆ ಬುಲಬುಲ ಪಕ್ಷಿಗಳ ಹಿಂಡು ಆಗಾಗ್ಗೆ ಬಂದು ನುಗ್ಗಿ

ತ್ತಿದ್ದವು; ಮತ್ತು ಆ ಹಕ್ಕಿಗಳನ್ನು ಬೆದರಿಸಿ ಆ ಖೊಬ್ಬರಿಯ ಮೇಲೆ ಪಹರೆ ಮಾಡುವ ಕೆಲಸವನ್ನು ಅಪ್ಪಾಜಿಯು ಆ ಎರಡು ಸಾಕಿದ ಬುಲಬುಲ ಪಕ್ಷಿಗಳಾದ ಮೋಹನ ಹಾಗು ಉಷೆ ಇವರು ಮಾಡುತ್ತಿದ್ದರು.

ಕಾಗಿ, ಗುಬ್ಬಿ, ಮೈನಾ ಮೊದಲಾದ ಇತರ ಹಕ್ಕಿಗಳನ್ನು ಬೆದರಿಸಿ ಹಾರಿಸುವ ಕೆಲಸವನ್ನು ಉಷೆ-ಮೋಹನರು ಒಳ್ಳೇ ಚೆನ್ನಾಗಿ ಮಾಡುತ್ತಿರದಿದ್ದರೂ, ಬುಲಬುಲ ಪಕ್ಷಿಗಳ ಹಿಂಡು ಅಂಗಳಕ್ಕೆ ಬಂದ ಕೂಡಲೆ ಮಾತ್ರ ಅವುಗಳ ಸೊಬಗು ನಿರೀಕ್ಷಿಸುತ್ತಿರುವ ಅವರ ಅನಿವಾರ ಇಚ್ಛೆಯು ಹೆಚ್ಚಾಗಿ ಒಡೆದು ಕಾಣಿಸುತ್ತಿತ್ತು. ಬುಲಬುಲ ಪಕ್ಷಿಗಳ ಆ ಯಾವಾಗಲೂ ನೆಟ್ಟಗೆ ಸಿಗರಿ ನಿಂತಿರುವ ಸೊಬಗಿನ ಬಾಲದ ಕೆಳಗೆ ಗುಲಾಬೀ ಬಣ್ಣದ ಮೆತ್ತನ್ನ ಪುಚ್ಛಗಳದೊಂದು ಚಿಕ್ಕ ಸುಂದರವಾದ ಹೂವಿರುತ್ತದೆ ಆ ಹಕ್ಕಿಗಳ ಗುಂಪು ಆ ಸವಿ ಸವಿ ಖೊಬ್ಬರಿಯ ಬಟ್ಟಲಗಳನ್ನು ಚುಚ್ಚಿ ಚುಚ್ಚಿ ರುಚಿ ಹೀರುವಲ್ಲಿ ಗುಂಗಾದವೆಂದರೆ, ಅವು ಆನಂದದಿಂದ ಸಿಗರಿಸಿದ್ದ ಆ ಬಾಲದ ಕೆಳಗಡೆಯ ಆ ಬಣ್ಣಬಣ್ಣಗಳ ಪುಚ್ಛಗಳ ವರ್ತಲಗಳಿಂದ ಗುಲಾಬಿಯ ಚಿಕ್ಕ ಪುಟ್ಟ ಹೂಗಳ ಮಳೆಯೇ ಸುರಿದಿರುವಂತೆ ಆ ಅಂಗಳವು ಶೋಭಿಸುತ್ತಿತ್ತು ಮೋಹನ-ಉಷೆಯರಿಗೆ ಅದು ಬಲು ಮೋಜಾಗಿ ತೋರುತ್ತಿತ್ತು.

ಅಪ್ಪಾಜಿಯಾದರೂ ಬುಲಬುಲುಗಳ ಆ ಮೋಜನ್ನು ನೋಡುತ್ತಿರುವಾಗ ಅಸಾವಧತನದಿಂದ ಆತನು ತನ್ನ ಆ ಎರಡನೇ ಕಾಲನ್ನು ಒಮ್ಮೆಲೆ ಚಾಚಿದನು. ಕೂಡಲೆ ಅದರೊಳಗಿಂದ ತಟ್ಟನೆ ವೇದನೆಯೆದ್ದಿತು. 'ಅವ್ವಾ-ಅವ್ವಾ-ಅವ್ವವ್ವಾ!' ಎಂದು ಅಪ್ಪಾಜಿಯು ಅಂದವನೇ ನೆರಳಹತ್ತಿದನು.

'ಉಷಾ, ಏ ಉಷಾ, ಅಪ್ಪಾಜಿಯು ನೆರಳುತ್ತಿದ್ದಾರೆ.' ಎಂದು ಮೋಹನನು ಅನ್ನಲು, ಅವರಿಬ್ಬರೂ ಅಂಗಳವೊಳಗಿಂದ ಧಾವಿಸುತ್ತ ಬಂದು,

"ಕ್ಯಾ ಹುಆ ಅಪ್ಪಾಜೀ?" ಎಂದು ಕಕ್ಕಾವಿಕ್ಕಿಯಾದ ಮೋರೆಯ ಉಷೆಯು ಹಿಂದೀಭಾಷೆಯಲ್ಲಿ ಕೇಳಿದಳು; ಯಾಕಂದರೆ, ಆ ಹುಡುಗರಿಗೆ ಮರಾಠೀಭಾಷೆಯಂತೆ ಅಥವಾ ಅದಕ್ಕಿಂತ ತುಸ ಚೆನ್ನಾಗಿಯೇ ಹಿಂದೀಭಾಷೆ ಬರುತ್ತಿತ್ತು. ನಮ್ಮ ವಾಚಕರಿಗೆಂದು ನಾವು ಅವರ ಭಾಷಣವನ್ನೆಲ್ಲ ಕನ್ನಡದಲ್ಲಿಯೇ ಕೊಡಬೇಕಾಗುವದು. ಅಂಡಮಾನದಲ್ಲಿ ವಾಸಿಸಿರುವ ಮರಾಠೀ, ಬಂಗಾಲೀ, ಮದ್ರಾಸೀ, ಪಂಜಾಬೀ, ಕರ್ನಾಟಕೀ ಮೊದಲಾದ ಎಲ್ಲ ಭಾಷೆಯ ತಾಯಿ-ತಂದೆಗಳ ಹೊಟ್ಟೆಯಲ್ಲಿ ಅಲ್ಲಿ ಹುಟ್ಟಿದ್ದ ಹುಡುಗರೆಲ್ಲ ಹಿಂದೀಭಾಷೆಯಲ್ಲೇ ಮಾತನಾಡ ಹತ್ತುತ್ತಾರೆ. ಅದೇ ಅಲ್ಲಿಯ ಹುಡುಗರ ಮಾತೃಭಾಷೆಯಾಗಿರುತ್ತದೆ. ತಮ್ಮ ತಮ್ಮ ಪ್ರಾಂತದ ಭಾಷೆಗಳೆಂದು ಯಾವುವನ್ನು

ತಾಯಿ-ತಂದೆಗಳು ಅಕ್ಕರದಿಂದ ತಮ್ಮ ಹುಡುಗರಿಗೆ ಕಲಿಸುವರೋ, ಅಷ್ಟೇ ಹುಡುಗರಿಗೆ ಅದು ಬರುತ್ತಿರುತ್ತದೆ

“ನಮ್ಮ ಅಪ್ಪಾಜಿಗೆ ಅದೆಲ್ಲಿ ವೇದನೆಯೆದ್ದಿತಪ್ಪಾ? ಇಲ್ಲಿಯೋ? ನಾನು ಹಿಚುಕಲ್ಯಾ? ನಾನು ಹಿಚುಕಿದರೆ ಈಗ ಗುಣವಾಗುವದು ನೋಡಿರಿ.” ಎಂದು ಉಷೆಯು ಒತ್ತಾಯಪಡಿಸಿದಳು. ಮೋಹನನು ದುಂಬಾಲುಬಿದ್ದು ಹೇಳಿದನು. ಅಪ್ಪಾಜಿಯು ಸಮ್ಮತಿಯನ್ನೀಯುತ್ತಲೆ ಮೋಹನನು ಆತನ ತೊಡೆಯನ್ನು ಹಿಚುಕಹತ್ತಿದನು. ನೋವಾದ ಕಾಲಿನ ಪಾದವನ್ನು ಉಷೆಯು ಒತ್ತಹತ್ತಿದಳು. ಅಪ್ಪಾಜಿಯು ಕಿಟಕಿಯೊಳಗಿಂದ ಹೊರಗಿನ ದಿನ್ನೆಯ ಕಡೆಗೆ ನೋಡಹತ್ತಿದನು. ಕಂಟಕನ ದಾರಿ ನೋಡಿ ನೋಡಿ ಆತನಿಗೆ ಏನು ಹೇಳಬೇಕಾಗಿದ್ದಿತೋ ಆ ವಿಚಾರದಲ್ಲಿ ಅವನು ಗುಂಗಾದನು

ಎರಡು ನಿಮಿಷ-ನಾಲ್ಕು-ಐದು ನಿಮಿಷಗಳವರೆಗೆ ಉಷೆಯು ತನ್ನ ಎಳೆ ಎಳೆ ಕೈಗಳಿಂದ ತನ್ನ ಶಕ್ತಿಮೀರಿ ಭಾರ ಹಾಕಿ ಹಾಕಿ ಕಾಲನ್ನೊತ್ತುತ್ತಿದ್ದಳು; ಆದರೆ ಅಪ್ಪಾಜಿಯ ಲಕ್ಷ್ಯವು ವಿಚಾರದಲ್ಲಿ ಗುಂಗಾಗಿತ್ತು! ಅದರಿಂದ ಅವನು ‘ಸಾಕು’ ಎಂದು ಹೇಳಲಿಕ್ಕೆ ಮರೆತನು ಉಷೆಯ ಕೈಗಳು ನೋಯಹತ್ತಿದವು. ‘ಸಾಕವ್ವಾ ತಂಗೀ!’ ಎಂದು ಕೌತುಕದಿಂದ ಅಪ್ಪಾಜಿಯು ಅನ್ನಬೇಕು; ಬಳಿಕ ತಾನು ಆ ಕೆಲಸವನ್ನು ಪೂರೈಸಿದ ಸಮಾಧಾನದಿಂದ ಒತ್ತುವದನ್ನು ಬಿಟ್ಟು ಬಿಡಬೇಕು, ಎಂದು ಆಕೆಯ ಉಮೇದಿದ್ದಿತು. ‘ದಣಿದೆ’ನೆಂದು ತಾನಾಗಿ ಹೇಳಿ ಒತ್ತುವದನ್ನು ಬಿಟ್ಟರೆ, ಮೋಹನನ ನಗು! ಆಗ ಆಕೆಯ ಜೀವದ ಸುತ್ತು ಬಂದಿತು. ಮತ್ತೆ ಒತ್ತುವುದೂ ಜೀವದ ಸುತ್ತು ಬಂತು. ದಣಿದಣಿದಂತೆ ಅವಳು ರೋಷಗೊಂಡಳು. ರೋಷಗೊಂಡ ಬಳಿಕ ರೇಗಿದಳು; ಮತ್ತು ಕಡೆಗೆ ಅಪ್ಪಾಜಿಯ ಪಾದಗಳ ಮೇಲೆಯೇ ಆ ಸಿಟ್ಟು ಹಾಯಿಸಿಕೊಳ್ಳುತ್ತ, ಅವಳು ಒಂದೆರಡು ಸಾರೆ ಅಲ್ಲಿ ಚೆನ್ನಾಗಿ ತಟ್ಟಿದ ಬಳಿಕ ಅಳಹತ್ತಿದಳು.

“ನನ್ನ ಕೈ ನೋವಾಗಿ ಕಳಚಿ ಬಿದ್ದರೂ ನೀವೇನೂ ಸಾಕೆನ್ನುವದಿಲ್ಲ” ಎಂದು ಅವಳು ಅಳುತ್ತಳುತ್ತಲೆ ಅಂದಳು

ಆ ತಟ್ಟಿದ ಪೆಟ್ಟಿನಿಂದಲೂ ಅಳುವಿನಿಂದಲೂ ಗುಂಗಿನೊಳಗಿಂದ ಸ್ಮೃತಿಗೊಂಡ ಅಪ್ಪಾಜಿಯು ನಕ್ಕು, ಕೌತುಕದಿಂದ ಉಷೆಯ ಮೈಮೇಲೆ ಕೈಯಾಡಿಸುತ್ತ ರಮಿಸಹತ್ತಿದನು:

“ಸುಮ್ಮನಾಗು. ಉಷಾ! ನಿನ್ನ ಕೈಗಳು ನೋಯಹತ್ತಿದರೂ, ನೀನು ನನ್ನ ಕಾಲು ಒತ್ತುತ್ತಲೆ ಅದೇಕೆ ಕುಳಿತೆ? ನಿನ್ನ ಒತ್ತುವಿಕೆಯಿಂದ ನನ

ಗೊಳ್ಳೇ ಸುಖವೆನಿಸಹತ್ತಿದ್ದದರಿಂದ ನನ್ನಿಂದ ಸಾಕೆನ್ನುವುದಾಗಲಿಲ್ಲವಪ್ಪಾ! ಈ ನಮ್ಮ ಉಷೆಯ ಪುಟ್ಟ ಕೈಗಳಲ್ಲಿ ಏನೋ ಜಾದುವಿರುವಂತೆ ತೋರುತ್ತದೆ. ವೈದ್ಯರ ಔಷಧದಿಂದ ಇದುವರೆಗೂ ಗುಣವಾಗದಿದ್ದ ನನ್ನ ವೇದನೆಗಳು, ನಮ್ಮವ್ವನು ಒಂದಿಷ್ಟು ಹಿಚುಕ ಹತ್ತುತ್ತಲೆ ಒಮ್ಮೆಲೆ ಸಂಪೂರ್ಣ ಗುಣವಾಗಿ ಹೋದವು!"

"ಅಪ್ಪಾಜಿ, ಅದು ನೋಡಿರಿ-ಅಲ್ಲಿ ನೋಡಿರಿ! ಕಂಟಕಬಾಬುಗಳು ದಿನ್ನೆಯಿಂದಿಳಿಯುತ್ತಿರುವುದನ್ನು" ಎಂದು ಮೋಹನನು ನಡುವೇ ಹೇಳ ಹತ್ತಿದನು.

ಕೂಡಲೆ ಅಪ್ಪಾಜಿಯು ಚೆನ್ನಾಗಿ ಎದ್ದು ಕುಳಿತನು. ಆ ಎರಡೂ ಹುಡುಗರು ದುಡು ದುಡು ಎಂದು ಓಡಹತ್ತಿದವು ಕಂಟಕಬಾಬುಗಳನ್ನು ಯಾರು ಮೊದಲು ಮುಟ್ಟುವೆವೋ, ಎಂದು ಅವರಲ್ಲಿ ಅಹಮಹಮಿಕೆಯುಂ-ಟಾಗಿ, ಅದೊಂದು ಆಟವೇ ಅವರಿಗಾಯಿತು

ಕಂಟಕನು ಒಳಗೆ ಬಂದ ಬಳಿಕ ಆತನನ್ನು ಏಕಾಂತದಲ್ಲಿ ಕೂಡ್ರಿಸಿ ಕೊಂಡು "ಕಂಟಕಬಾಬು, ಈ ವೇದನೆಗಳು ನಡುನಡುವೆ ಏಳಹತ್ತಿದಂದಿನಿಂದ ಇನ್ನು ನನ್ನ ನಿರ್ಯಾಣವು ಸಮೀಪಿಸಿತೆಂದು ನಾನು ತಿಳಿದಿರುತ್ತೇನೆ, ಆದರೆ ಅದರಲ್ಲಿ ದುಃಖವೇನೂ ಇಲ್ಲ. ನಮ್ಮಂತಹರ ಮರಣವೆಂದರವೊಂದು ಬಿಡುಗಡೆಯೇ! ಆದರೆ ಸಾಯುವ ಮೊದಲು ನಿಮ್ಮನ್ನೊಮ್ಮೆ ಕಾಣಬೇಕೆಂದೆನಿಸಿತ್ತು. ಎಷ್ಟೋ ತಿಂಗಳುಗಳಿಂದ ನೀವು ನಿಮ್ಮ ಸುರಕ್ಷಿತತೆಯನ್ನು ಸಂಕಟಕ್ಕೀಡು ಮಾಡಿಯೇ ಇಲ್ಲಿಗೆ ಬರುತ್ತಿರುವಿರಿ; ನನ್ನ ಕುಟುಂಬದವರಿಗೆ ಹಸ್ತ-ಪರಹಸ್ತಗಳಿಂದ ಶಕ್ಯವಾದಷ್ಟು ಸಹಾಯ ಮಾಡುತ್ತಿರುತ್ತೀರಿ; ಮಮತೆ ಮಾಡುತ್ತೀರಿ. ಅದರಿಂದ ನಮಗೂ ನಿಮ್ಮ ಲೋಭವೆನಿಸುವದು. ಇದಕ್ಕಾಗಿ ನಾವೆಲ್ಲರೂ ನಿಮಗೆ ತುಂಬಾ ಆಭಾರಿಯಾಗಿರುತ್ತೇವೆ"

"ಆದರೆ ನೀವು ನನ್ನ ಆಭಾರ ಮನ್ನಿಸುವಂತೆ ನಾನೇನೂ ಮಾಡಿರುವುದಿಲ್ಲವಲ್ಲ! ತದ್ವಿರುದ್ಧವಾಗಿ ಅಪ್ಪಾಜೀ, ನಿಮ್ಮ ಉಪಕಾರಗಳನ್ನು ನಾನೆಂದೂ ತೀರಿಸಲಾರದವನಾಗಿದ್ದೇನೆ. ಈ ಭಯಂಕರ ಸೆರೆಮನೆಯಲ್ಲಿ ಸೇರಿದಂದಿನಿಂದ ಮಮತೆಯ ಜನರ ಬಗ್ಗೆ ನನ್ನ ಹೃದಯದಲ್ಲಿ ಒಳ್ಳೇ ಹಸಿವೆಯು ಹುಟ್ಟಿತ್ತು ನಿಮ್ಮ ಕುಟುಂಬದವರಿಂದ ನನಗೆ ಆ ಮಮತೆಯು ಲಭಿಸಿತು. ತಂದೆಯ ಸಮಾನರಾದ ನೀವು, ಹಿರಿಯಕ್ಕನಂತೆ ಅನುಸೂಯಾಬಾಯಿಯು, ಹೊಟ್ಟೆಯ ಮಕ್ಕಳಂತೆ ಈ ಹುಡುಗರು ಹೀಗೆ ನಿಮ್ಮೆಲ್ಲರ ಪ್ರೇಮಲ ಸಹವಾಸ ದಲ್ಲಿ ನನ ಯಾವ ಕೆಲ ಕಾಲವು ಗತಿಸಿತೋ, ಅಷ್ಟೇ ಬದುಕಿರಬೇಕೆಂದು

ನನಗೆ ತೋರಿದ ಶೋಭನೀಯ ಕಾಲವು! ದುಷ್ಕೃತಿ, ದುರ್ಗುಣ ಮತ್ತು ದುರಾಚಾರ ಇವುಗಳಿಂದ ಆವರಿಸಲ್ಪಟ್ಟ ಆ ಬಂದಿಗೃಹದ ಉತ್ತಪ್ತ ವಾತಾವರಣದೊಳಗಿಂದ ಈ ನಿಮ್ಮ ಕೌಟುಂಬಿಕ ಮಮತೆಯ ಶೀತಲ ಛಾಯೆಯಲ್ಲೂ, ಹುಡುಗರ ಪ್ರೇಮದ ನಗುವಿನ ಬೆಳದಿಂಗಳಲ್ಲೂ ಕ್ಷಣಕಾಲವೇ ಬರಲು, ನರಕವಾಸದೊಳಗೆ ನಾನು ನಂದನವನದ ಕನಸು ಕಂಡಂತಾಗುತ್ತದೆ!''

''ಕಂಟಕಬಾಬು. ಹಾಗಾದರೆ ನನ್ನದಾದರೂ ನಿಮಗೆ ಇದೇ ಬಿನ್ನಹವಿದೆ. ನನ್ನ ತರುವಾಯ ನನ್ನ ಈ ಹುಡುಗರಿಗೆ ನೀವೇ ನನ್ನಂತಾಗಬೇಕು. ಇವುಗಳು ನಿಮ್ಮವೇ ಎಂದು ತಿಳಿದು, ಇದೇ ಮನೆಯನ್ನು ನಿಮ್ಮದನ್ನಾಗಿ ಮಾಡಬೇಕು. ನಿಮ್ಮಂತಹ ಸುಬುದ್ಧ, ಸುಶಿಕ್ಷಿತ ಹಾಗು ಸುಶೀಲ ಮನುಷ್ಯರು ಈ ಪಾಪಿಗಳ ವಸತಿಯಲ್ಲಿ ದುರ್ಮಿಳರು. ಇದಕ್ಕಾಗಿಯೇ ನಾನು ನನ್ನೀ ಕುಟುಂಬವನ್ನು ಇಂದು ನಿಮ್ಮ ಉಡಿಯಲ್ಲಿ ಹಾಕುತ್ತೇನೆ ನೀವು ಇದನ್ನು ಉಡಿಯಲ್ಲಿರಿಸಿಕೊಂಡರೆ, ನಾನು ಸುಖದಿಂದ ಸಾಯುವೆನು!''

''ಯಾವನೊಬ್ಬ ಹುತಾತ್ಮನ ಬಗ್ಗೆ ಎಷ್ಟು ಆದರವು ನನಗೆನಿಸುವುದೋ, ಅದಕ್ಕಿಂತಲೂ ಉತ್ಕಟವಾದ ಆದರವು ನಿಮ್ಮ ಬಗ್ಗೆ ನನಗೆನಿಸುತ್ತದೆ. ಯಶಸ್ವಿಗಳಾದ ಸ್ವಾತಂತ್ರ್ಯವೀರರಿಗಿಂತ, ನಿಮ್ಮಂತಹ ಯಾವ ಸ್ವಾತಂತ್ರ್ಯ ಸೈನಿಕರ ದೈವದಲ್ಲಿ ಯಶವು ಬರೆದಿರದೆ, ಧ್ಯೇಯಕ್ಕಾಗಿ ಕೇವಲ ಛಲನವೇ ಛಲನ, ಯಾತನೆಗಳೇ ಯಾತನೆಗಳು ಬರೆಯಲ್ಪಟ್ಟಿರುವವೋ ಅವರ ಬಗ್ಗೆಯೇ ನನಗೆ ಹೆಚ್ಚು ಗೌರವವೆನಿಸುತ್ತದೆ! ನಿಮಗೆ ಕೊಂಚವಾದರೂ ಸುಖದಿಂದ ಮರಣವೊದಗಬೇಕೆಂದು ನೀವು ಹೇಳಿದ ಯಾವ ಕೃತ್ಯವನ್ನಾದರೂ ಶಕ್ಯವಿದ್ದರೆ ನಾನು ಮಾಡಿಯೇ ಮಾಡುತ್ತಿದ್ದೆನು; ಆದರೆ ಸ್ವತಃ ನಾನೇ ಈಗ ಸತಿ ಹೋಗಲಿಕ್ಕೆ ಅಗ್ನಿಗೆ ಪ್ರದಕ್ಷಿಣೆ ಮಾಡಿ ನಿಂತವರಂತೆ ನಿಂತುಕೊಂಡಿರುತ್ತೇನೆ! ಈ ಕರಿನೀರಿನ ಭೀಷಣಗಳಾದ ಕಾಲಪಾಶಗಳನ್ನು ಹರಿದು ಚೆಲ್ಲಿ, ಇಲ್ಲಿಂದ ಜಾರಿಹೋಗುವ ಜೀವದ ಮೇಲಿನ ಆಟವನ್ನು ಇನ್ನು ನಾನು ಆಡತಕ್ಕವನು! ಅದರಲ್ಲಿ ಸಾಯುವೆನೋ-ಬದುಕುವೆನೋ ಅದಾರು ಹೇಳಬೇಕು?"

''ನಾನು ಹೇಳುತ್ತೇನೆ, ಆ ಆಟದಲ್ಲಿ ಮರಣವೇ ನಿಶ್ಚಿತವಾದದ್ದು! ಯಶದ ಸಂಭವವು ತೀರ ವಿರಳ! ಅಪವಾದ ಮಾತ್ರವು. ಇದುವರೆಗೆ ಆ ಸಾಹಸಕ್ಕಾಗಿ ನೂರಾರು ಜನರು ಕೊಲ್ಲಲ್ಪಟ್ಟರು; ಹಲವರು ಸಮುದ್ರದಲ್ಲಿ ಮುಳುಗಿ ಸತ್ತರು! ಕಳೆದ ಐವತ್ತು ವರ್ಷಗಳಲ್ಲಿ ಐವತ್ತು ಜನರು ಸಹ ಈ ಕರಿನೀರೊಳಗಿಂದ ಓಡಿ ಹೋಗಿ ಸ್ವದೇಶಕ್ಕೆ ತಲುಪಿ, ಅಲ್ಲಿ ಸುಖವಾಗಿ ಬಾಳಹತ್ತಿದ್ದು ನನಗೆ ಸ್ಮರಿಸುವದಿಲ್ಲ.''

"ಆದರೂ ಕೂಡ ಆ ಐವತ್ತರಲ್ಲಿ ಐವತ್ತೊಂದರವನು ನಾನಾಗತಕ್ಕವನು; ಇಲ್ಲವೆ ಮೃತ್ಯುವಿನ ದಾರಿಯನ್ನಾದರೂ ಹಿಡಿಯುವವನು! ಅಪ್ಪಾಜೀ, ಈ ಕರಿನೀರೊಳಗಿನ ದರಿದ್ರ, ದುರಾಚಾರಿ ಮತ್ತು ಅಸಹ್ಯ ನಡತೆಯ ಕ್ಷುದ್ರ ಜಗತ್ತಿನಲ್ಲಿ ಹೀಗೆ ಇಡೀ ಜನ್ಮವನ್ನು ಕಳೆಯುವುದರಲ್ಲಾದರೂ ಅರ್ಥವೇನಿದೆ? ವ್ಯಕ್ತಿಯ ವಿಕಾಸವಿಲ್ಲ, ಭಾವನೆಗಳ ಭರಾರಿಯಿಲ್ಲ, ಮನುಷ್ಯತ್ವಕ್ಕೆ ಮರ್ಯಾದೆಯಿಲ್ಲ. ಅಂದ ಬಳಿಕ ಯಾವ ಉಚ್ಚ ಮತ್ತು ಭವ್ಯ ಧ್ಯೇಯಕ್ಕೆಂದು, ಪರೋಪಕಾರ್ಯಕ್ಕಾಗಿ ದೇಹ ಸವಿಸಲಿಕ್ಕೆಂದು, ಇಲ್ಲವೆ ಪಾವಕವಾದ ಪುಣ್ಯವು ಉಡಿಯಲ್ಲಿ ಬಿದ್ದೀತೆಂದು ಇಲ್ಲಿ ಇರಬೇಕು? ಇಲ್ಲಿ ಸ್ವಾರ್ಥವಿಲ್ಲ, ಪರಮಾರ್ಥವಿಲ್ಲ!"

"ತಡೆಯಿರಿ. ಈ ನಿಮ್ಮ ಕಡೆಯ ಆಕ್ಷೇಪದ ಬಗ್ಗೆಯಾದರೂ ನಿಮಗೊಂದು ಹೊಸ ದೃಷ್ಟಿ ಹುಟ್ಟಿಸುವ ಇಚ್ಛೆಯಿದೆ. ಪರೋಪಕಾರದ ಯಾವದೊಂದು ರಾಷ್ಟ್ರೀಯ ಮತ್ತು ಉದಾರ ಕರ್ತವ್ಯಕ್ಕೆ ಒಂದು ವೇಳೆ ನಿಮ್ಮ ಆಯುಷ್ಯವನ್ನು ಸಾಧ್ಯವೆಂದು ಮುಂದರಿಸುವ ಆವಶ್ಯಕತೆಯು ನಿಮ್ಮ ಚಿತ್ತಕ್ಕೆ ಅನಿಸಿದ್ದರೆ, ಅದು ನಿಮ್ಮ ನಡವಳಿಯ ವಿಕಾಸವೇ ಅಲ್ಲ! ಆದರೆ ಈ ಅಂಡಮಾನದಲ್ಲಿ ಪ್ರೇಮದ, ಸುಖದ, ಭೋಗದ ಹೆಚ್ಚೇನು, ಲಗ್ನದ ಹಸಿವೆ ಕೂಡ ಶಾಂತವಾಗುವದು. ಎಷ್ಟೇ ದುರ್ಘಟವಿದ್ದರೂ ಪರೋಪಕಾರದ ಹಸಿವೆ ಇಲ್ಲವೆ ರಾಷ್ಟ್ರೀಯ ಸೇವೆಯ ಹಸಿವೆಯು ಯಾರಿಗಾದರೂ ಆಗಿದ್ದರೆ, ಅಂಥವರಿಗೆ ಮಾತ್ರ ಹಸಿದ ಹೊಟ್ಟೆಯಿಂದಿರಬೇಕಾದ ಪ್ರಸಂಗವು ಇಲ್ಲಿ ಎಂದಿಗೂ ಪ್ರಾಪ್ತವಾಗಲಾರದು! ಪತಿತರನ್ನು ಉದ್ಧರಿಸುವ, ಸುಧಾರಿಸುವ ಕಾರ್ಯವು ಯಾವಾಗಲೂ ರಾಷ್ಟ್ರೀಯ ಇಲ್ಲವೆ ಸಾಮಾಜಿಕ ಸೇವೆಯ ಒಂದು ಮಹತ್ವದ್ದೇ ಉಪಾಯವಿದ್ದೀತು; ಮತ್ತು ಅಂಡಮಾನವಂತೂ ಹೇಳಿ ಕೇಳಿಯೇ ಅಪರಾಧಗಳ ಮತ್ತು ಉದ್ದಂಡರ, ಪಾಪಿಗಳ ಹಾಗು ಪತಿತರ ವಸಾಹತು; ಅರ್ಥಾತ್ ಪರೋಪಕಾರದ ಆರಿಸಿಟ್ಟ ಕಾರ್ಯ ಕ್ಷೇತ್ರವು!"

"ಅದನ್ನೆಲ್ಲ ನಾನು ತಿಳಿದಿರುತ್ತೇನೆ; ಮತ್ತು ಒಂದು ವೇಳೆ ನಾನು ಈ ಜೀವಾವಧಿಯ ಪೇಚಿನೊಳಗಿಂದ ಮುಕ್ತನಾಗಿ, ಮತ್ತು ಈ ಕರಿನೀರೊಳಗಿಂದ ಪಾರಾಗಿ ಸ್ವದೇಶಕ್ಕೆ ತಲುಪಿದರೆ ಹಾಗು ಅಲ್ಲಿ ಬೇರೆ ಹೆಸರಿನಿಂದ ಸ್ವತಂತ್ರವಾಗಿ ರಾಷ್ಟ್ರಸೇವೆ ಮಾಡಹತ್ತಿದರೆ, ಹಿಂದೀ ಬಂದಿಗಳನ್ನು ಈ ಕರಿನೀರ ಮೇಲೆ ಕಳಿಸುವ ಈ ಕ್ರೂರ ಪದ್ಧತಿಯನ್ನು ನಿಲ್ಲಿಸಿಬಿಟ್ಟು, ಈ ಭಯಂಕರ ವಸಾಹತನ್ನು ಸಂಪೂರ್ಣವಾಗಿ ಮುಚ್ಚಿಬಿಡುವ ಚಲನವಲನವನ್ನು ಶಕ್ಯವಾದಷ್ಟು ತೀವ್ರವಾಗಿಯೂ ಸಂತತವಾಗಿಯೂ ಮಾಡದಿರಲಾರೆನು. ಹಿಂದುಸ್ಥಾನದೊಳಗೂ ಕೆಲ ಮುಂದಾಳುಗಳ ಲಕ್ಷ್ಯವು ಈ ಪ್ರಶ್ನೆಯ ಕಡೆಗೆ ವೇಧಿ

ಸಿರುತ್ತದೆ. ಈ ಅಂಡಮಾನದ ಬಂದಿಗಳ ವಸಾಹತನ್ನು ಸಂಪೂರ್ಣವಾಗಿ ಮುಚ್ಚಿಬಿಡಬೇಕು; ಮತ್ತು ಈ ಪಾಪ ಭೂಮಿಯೊಳಗಿನ ಈ ಎಲ್ಲ ಅಮಾನುಷ ಛಲನಕ್ಕೆ ಒಮ್ಮೆಲೆ ಕಾಲ್ಗುದ್ದಿ ಕಟ್ಟಬೇಕು, ಎಂಬ ಪ್ರಯತ್ನಗಳು ಅಲ್ಲಿ ನಡೆದಿರುತ್ತವೆ.''

''ಆದರೆ ಆ ಪ್ರಯತ್ನಗಳು ತೀರ ಅಡ್ಡದಾರಿಯಿಂದ ಮಾಡಹತ್ತಿರುತ್ತವೆ. ಕಂಟಕಬಾಬು, ಇತ್ತ ನೋಡಿರಿ. ಪ್ರತಿಯೊಂದು ದೇಶದಲ್ಲೂ ಅತ್ಯಂತ ಉದ್ದಂಡ ಹಾಗು ಸಮಾಜಕ್ಕೆ ಸರ್ವತೋಪರಿ ಉಪದ್ರವಿಯಾದಂತಹ ಕಳ್ಳರು, ದರವಡೆಖೋರರು, ಕೊಲೆಗಡಕರು ಮುಂತಾದವರದೊಂದು ವರ್ಗವಿದ್ದೇ ಇರುವದು. ಅಂಥ ಸಮಾಜ ಶತ್ರುವಾದ ಯಾವ ವರ್ಗವು ಹಿಂದುಸ್ತಾನದಲ್ಲಿದ್ದಿತೋ, ಅದಕ್ಕೆ ನೀತಿ ಮತ್ತು ನಿರ್ಬಂಧಗಳ ಮರ್ಯಾದೆಗಳನ್ನುಲ್ಲಂಘಿಸಲಿಕ್ಕೆ ಅಶಕ್ಯ ಮಾಡಿ ಬಿಡುವ ಸಲುವಾಗಿ ಶಕ್ತಿಯಿಂದಲೂ ಒತ್ತಾಯದಿಂದಲೂ ನಿಗ್ರಹ ಮಾಡಲೇಬೇಕು. ಗಲ್ಲು, ಜೀವಾವಧಿ ಶಿಕ್ಷೆ, ಫಟಕೆ ಇವುಗಳಂತಹ ಶಾರೀರಿಕ ಶಿಕ್ಷೆಗಳ ಉಗ್ರದಂಡಣದ ಹೊರತು ಆ ಉದ್ದಂಡರಿಗೆ ಎಂದೂ ಯಾವುದೂ ಅಂಜಿಕೆಯೆನಿಸುವುದಿಲ್ಲ. ಆ ಅಂಜಿಕೆ ಹಾಗು ಆ ಕಠಿಣ ಶಿಸ್ತು ಇವುಗಳ ಪೇಚಿನಲ್ಲಿ ಅವರು ಸಿಕ್ಕು ತೊಳಲಹತ್ತಿದಾಗಲೇ ನಿರ್ಬಂಧಶೀಲರೂ ಸಮಾಜಶೀಲರೂ ಆದ ನಾಗರಿಕರಿಗೆ ಅವರಿಂದ ಉಪದ್ರವವಾಗಲಿಕ್ಕಿಲ್ಲ. ಆಗಲೆ ಸಮಾಜದಲ್ಲಿ ಶಾಂತತೆಯೂ ಸುವ್ಯವಸ್ಥೆಯೂ ನೆಲಸಲಿಕ್ಕೆ ಶಕ್ಯವಾಗುವದು. ಅದರಿಂದ ಸಹಸ್ರಾವಧಿಗಳಾದ ಅಂಥ ದಂಡಿತರನ್ನು ಈ ಕರಿನೀರಂತಹ ವಸಾಹತಿಯಲ್ಲಿ ಕೂಡಿಡುವದೇ ರಾಷ್ಟ್ರಕ್ಕೆ ಹಿತವಾಗುತ್ತದೆ. ಹಾಗೆ ಮಾಡದಿದ್ದರೆ ಅವರನ್ನೆಲ್ಲಿ ಇಡಬೇಕು?''

''ದೇಶದೊಳಗೆ ಬಂದಿಗೃಹಗಳು ಇಲ್ಲವೇ ಇಲ್ಲವೇನು? ಅಲ್ಲಿ ಆ ಜೀವಾವಧಿ ಶಿಕ್ಷಿತರನ್ನು ಸಾಯುವವರೆಗೂ ಕೂಡಿಡಿರಿ. ಈ ಕರಿನೀರಂತಹ ಪಾಪ ಭೂಮಿಯಲ್ಲೂ ಅತ್ಯಂತ ಪೀಡನದ ಪರಿಶ್ರಮದಲ್ಲೂ ಅವರನ್ನು ಜೀವಂತವಾಗಿ ಹುಗಿದಿಡುವದು ನಿರ್ದಯತನವೆಂಬದಂತೂ ಕಂಡೇ ಕಾಣುವದು; ಆದರೆ ಇದರಲ್ಲಿ ಆ ಯಾವರಾಷ್ಟ್ರೀಯಹಿತವೂ ಸಾಂಪ್ರತದಲ್ಲಿ ವಿಶೇಷವಾಗಿ ಸಾಧಿಸುವದೆಂದೂ ಇಲ್ಲ. ನಮ್ಮ ನಿಮ್ಮಗಳಿಗೆ ಈ ನರಕ ಭೂಮಿಯಲ್ಲಿ ಯಾವ ಯಾತನೆ ಹಾಗು ಯಾವ ಜೀವನವು ಅಸಹ್ಯವೆನಿಸುವುದೋ, ಅದರಂತೆಯೇ ನಮ್ಮೊಡನಿರುವ ಈ ಎಲ್ಲ ಜೀವಾವಧಿ ದಂಡಿತರಿಗೂ ಅನಿಸುತ್ತಿರಲಿಕ್ಕಿಲ್ಲವೇನು? ಯಾವ ದಯೆಯ ಅಪೇಕ್ಷೆಯನ್ನು ನಾವು ಮಾಡುವೆವೋ, ಅವರು ಅತ್ಯಾಚಾರಿಗಳಾಗಿದ್ದರೂ ಅವರಾದರೂ ಅದನ್ನೇ ಕೋರುತ್ತಿರುತ್ತಾರೆ.''

“ಕಂಟಕಬಾಬು, ಬರಿಯ ಹೊಲ್ಲದ ದಯೆಯ ಪ್ರಶ್ನೆಯೇ ಆಗಿದ್ದರೆ, ದಂಡಣೆಯನ್ನು ಮಾಡದೆ ಹಾಗೇ ಬಿಟ್ಟುಬಿಡುವುದೇ ನಿಜವಾದ ದಯೆಯೆನಿಸೀತು! ನಿಮಗೂ ನನಗೂ ದೇಶದೊಳಗಿನ ಬಂದಿಗೃಹದಲ್ಲಿರುವುದಾದರೂ ಸೇರುವುದೇನು? ಜೀವಾವಧಿ ಶಿಕ್ಷೆಯಂತೂ ಇರಲಿ, ಒಂದು ದಿನದ ಮಟ್ಟಿಗಾದರೂ ಬಂದಿಗೃಹದಲ್ಲಿ ಸೆರೆ ಬಿದ್ದಿರಲಿಕ್ಕೆ ಆದಾರು ಸಿದ್ಧರಾದಾರು? ಹಾಗಾದರೇನು, ಹೊಲ್ಲದ ದಯೆಯ ಸಲುವಾಗಿ ಸಮಾಜಕ್ಕೆ ಭಯಂಕರ ಉಪದ್ರವ ಕೊಡುತ್ತಲೇ ತಮ್ಮ ಉಪಜೀವಿಕೆ ಮತ್ತು ಮೋಜುಗಳನ್ನು ಸಾಗಿಸುವ ಉಗ್ರ ಪ್ರವೃತ್ತಿಯ ಅಪರಾಧಿಗಳನ್ನು ಸುಮ್ಮನೆ ಬಿಟ್ಟುಬಿಡಬೇಕೆ? ಮತ್ತು ಆ ಹಿಂಸ್ರ, ಕೊಲೆಗಡಕ, ಅತತಾಯಿ ಹಾಗು ಉಪದ್ರವಿಗಳಾದಂಥ ಸ್ವಲ್ಪ ನರಶ್ವಾಪದಗಳ ದಯೆಯ ಸಲುವಾಗಿ ಬಂದಿಗೃಹಗಳನ್ನೆಲ್ಲ ಬರಿದಾಗಿ ಮಾಡಿ, ಯಾವ ಲಕ್ಷಾವಧಿ ಸಚ್ಛೀಲ, ಪಾಪಭೀರು ಮತ್ತು ನಿರ್ಬಂಧಶೀಲರಾದ ಜನರನ್ನು ಅವರ ಉಪದ್ರವದ ದವಡೆಯಲ್ಲಿ ನೀವು ನೂಕಿದರೆ, ಅವರ ದಯೆಯು ನಿಮಗೆ ಅನಿಸಬಾರದೇನು? ನಾಲ್ಕು ಜನ ಅತ್ಯಾಚಾರಿಗಳ ಮೇಲೆ ದಯೆ ತೋರುವದಕ್ಕೆಂದು ನಿರಪರಾಧಿಗಳಾದ ಲಕ್ಷಾವಧಿ ಜನ ಸಮಾಜದ ಮೇಲೆ ಆ ಅತ್ಯಾಚಾರಗಳನ್ನಾಗಗೊಡುವ ಈ ನಿರ್ದಯತೆಯು ಲಕ್ಷ ಪಾಲು ಕ್ರೌರ್ಯದ್ದಾಗಿಲ್ಲವೆ? ಆದರಿಂದ ದಯೆಯ ದೃಷ್ಟಿಯಿಂದಲೂ ಕೂಡ ಲಕ್ಷಾವಧಿ ನಿರಪರಾಧಿಗಳನ್ನು ಉಪದ್ರವದಿಂದ ಸಂರಕ್ಷಿಸಲಿಕ್ಕೆಂದು, ಅಪರಿಹಾರ್ಯವಾಗಿ ಒಂದು ವೇಳೆ ಆ ನಾಲ್ಕು ಜನ ಉಪದ್ರವಿಗಳಾದ ಅತ್ಯಾಚಾರಿಗಳನ್ನು ನಿರ್ದಯತೆಯಿಂದ ನಿಗ್ರಹಿಸಬೇಕಾದರೆ, ಆ ಅಲ್ಪ ನಿರ್ದಯತೆಯೇ ಒಟ್ಟಿನಲ್ಲಿ ಮಹನೀಯ ದಯೆಯಾದೀತು! ಅಪರಾಧ ವಿಜ್ಞಾನದ ಇಲ್ಲವೆ ದಂಡವಿಜ್ಞಾನದ ಮೂಲಭೂತ ತತ್ವವೂ ಸಮರ್ಥನವೂ ಇದೇ ಆಗಿದೆ!”

“ಇದರಲ್ಲಿ ಶಂಕೆಯಿಲ್ಲ; ಆದರೆ ದೇಶದ ಬಂದಿಗೃಹಗಳಲ್ಲಿಯೇ....”

“ಅದನ್ನೇ ಹೇಳುವೆನು ಕೇಳಿರಿ. ಕಂಟಕಬಾಬು, ದೇಶದೊಳಗಿನ ಬಂದಿಶಾಲೆಗಳಲ್ಲಿ ಜೀವಾವಧಿ ಶಿಕ್ಷಿತರನ್ನು ಸಾಯುವವರೆಗೆ ಕೂಡಿಟ್ಟರೇ ಅವರನ್ನು ಹೆಚ್ಚು ನಿರ್ದಯತೆಯಿಂದ ನಡೆಸಿಕೊಂಡಂತಾಗುವುದಿಲ್ಲವೆ? ಅವರು ನಾಲ್ಕು ಗೋಡೆಗಳ ಮಧ್ಯದಲ್ಲಿ ಕೊಳೆಯುತ್ತ ಆಯುಷ್ಯ ಕಳೆಯಬೇಕಾದೀತು. ಅಷ್ಟು ಮಂದಿ ಸ್ತ್ರೀ-ಪುರುಷರ ಪ್ರೇಮದ, ಬಿಡುವಿನ, ಸಂತತಿಯ ಮುಂತಾದ ಹಸಿವೆಗಳನ್ನು ಸಾಯಿಸಿ, ಮಾನಸಿಕ ಹಸಿವೆಯಿಂದ ತಳಮಳಿಸುತ್ತ ಅವರನ್ನು ಕೊಲ್ಲಬೇಕಾದೀತು. ಇದು ಮಾನಸಿಕ ಅತ್ಯಾಚಾರವಲ್ಲೇನು? ಒಂದು ವೇಳೆ ಅವರನ್ನು ಕರಿನೀರಂತಹ ಯಾವುದೊಂದು ಸ್ವತಂತ್ರ ವಸಾಹತಿನಲ್ಲಿಟ್ಟು, ಅವರ

ಉದ್ದಂಡಪ್ರವೃತ್ತಿಯನ್ನು ಕುಗ್ಗಿಸಿ ಅವರಲ್ಲಿ ಮನುಷ್ಯತ್ವವನ್ನುಂಟು ಮಾಡುವದಕ್ಕೆ ತಕ್ಕಷ್ಟು ಕಠೋರ ನಿರ್ಬಂಧದಲ್ಲಿ ದುಡಿಸಿಕೊಂಡು. ಇದ್ದದ್ದರಲ್ಲಿಯೇ ಯಾವ ಸ್ವತಂತ್ರತೆಯನ್ನು ಅವರಿಗೆ ಕೊಡಬಹುದೋ ಅಷ್ಟು ಕೊಟ್ಟರೆ, ಅವರಿಗೆ ಕೌಟುಂಬಿಕ ಮತ್ತು ವ್ಯಕ್ತಿಕವಾದಂಥ ಹೆಚ್ಚು ಸುಖವನ್ನು ಕೊಟ್ಟಂತಾದೀತು; ಹಾಗು ದೇಶದೊಳಗಿನ ಸಚ್ಛೀಲ ಸಮಾಜಕ್ಕೆ ಆ ದಂಡಿತರಿಗೆ ಭೋಗಿಸಗೊಟ್ಟ ಸ್ವಾತಂತ್ರ್ಯತೆಯಿಂದ ಲೇಶಮಾತ್ರವೂ ಉಪದ್ರವವಾಗುವ ಸಂಭವವು ಉಳಿಯುವದಿಲ್ಲ. ಈ ಕರಿನೀರಲ್ಲೂ ಇಂದಿಗೆ ಆ ಸಾವಿರಾರು ಮಂದಿ ಉದ್ದಂಡರೂ ಉಗ್ರರೂ ಆದ ಜನರು ಎಷ್ಟು ನಿರಾತಂಕವಾಗಿ ಅಡ್ಡಾಡುತ್ತಿರುವರೆಂಬದನ್ನು ನೋಡಿರಿ. ಅವರು ಸ್ವಂತದ ರುಚಿಯ ಮೇರೆಗೆ ತಿನ್ನುಣ್ಣಲು ಶಕ್ತರಾಗಿರುತ್ತಾರೆ. ಮನೆ-ಮಠ ಹೊಲ-ಗದ್ದೆಗಳನ್ನು ನಿರ್ಮಿಸಿಕೊಳ್ಳಲು ಶಕ್ತರಾಗುತ್ತಾರೆ. ಅವರ ಪ್ರೇಮುಲ. ಹಿರಿದಿನ, ಕಾಮುಕ ಭಾವನೆಗಳು ಸಾಯುವವರೆಗೆ ಆತಂಕಕ್ಕೊಳಪಡದೆ, ಅವರಿಗೆ ವಿವಾಹ ಸೌಖ್ಯಭೋಗಿಸಲಿಕ್ಕೆ ಲಭಿಸುತ್ತದೆ. ಹಿಂದಿನದೊಂದು ಅಪರಾಧದ ಸಲುವಾಗಿ ಅವರ ಇಡೀ ಜನ್ಮದ ಸತ್ಯಾನಾಶವಾಗದೆ, ಸುಧಾರಿಸಬಹುದಾದ ಹಾಗು ಸಂಯಮನಶೀಲ ಜೀವನವನ್ನು ಸ್ಥಾಪಿಸುವ ಸಂಧಿಯು ಮತ್ತೆ ದೊರೆಯುಹತ್ತುತ್ತದೆ.''

''ಹಿಂದುಸ್ತಾನದ ಒಳದೇಶಗಳಲ್ಲಿಯೇ ಯಾವುದೊಂದು ಕಾರಾಗೃಹದ ನಾಲ್ಕು ಗೋಡೆಗಳ ಮಧ್ಯದಲ್ಲಿ ಅವರನ್ನು ಜೀವಂತವಾಗಿ ಗೋರಿಗೊಳಿಸುವಂತೆ ಕೂಡಿಡುವದೇ ದಯೆಯೋ ಅಥವಾ ಕರಿನೀರಂತಹ ವಸಾಹತುಗಳಲ್ಲೇ ಕಠೋರ ನಿರ್ಬಂಧದ ಇರುಕಿನಲ್ಲಿ ಮನುಷ್ಯರನ್ನಾಗಿ ಮಾಡಿ, ಮಾನವ ಜೀವನದ ಆನಂದವನ್ನು ಕೆಲಮಟ್ಟಿಗಾದರೂ ಉಪಭೋಗಿಸಗೊಡುವದೇ ನಿಜವಾದ ದಯೆಯೋ? ಕರಿನೀರಿಗೆ ಬಂದ ಮೇಲೆ ಯಾರು ಸುಧಾರಿಸುವರೋ, ಅವರು ದಾಖಲೆಗಾರರಾಗಿ ತಮ್ಮ ಮಕ್ಕಳು-ಮರಿಗಳಿಂದ ತುಂಬಿದ ಮನೆಗಳಲ್ಲಿ ಪುನರ್ಜನ್ಮವಾದವರಂತೆ ಸುಖದಿಂದ ಜೀವಿಸುತ್ತಿರುವ ನೂರಾರು ಜೀವಾವಧಿ ದಂಡಿತರು ಈಗ ಈ ಅಂಡಮಾನದಲ್ಲಿರುವರು. ಅವರನ್ನು 'ಹಿಂದುಸ್ತಾನದೊಳಗಿನ ಕಾರಾಗೃಹಗಳಲ್ಲಿ ನಿಮ್ಮನ್ನು ಸಾಯುವವರೆಗೂ ಕೂಡಿಟ್ಟಿದ್ದರೆ ವಿಹಿತವಾಗುತ್ತಿತ್ತೇ?' ಎಂದು ಕೇಳಿರಿ; ಅಂದರೆ ಅವರು ಆ ಭಯಂಕರ ಕಲ್ಪನೆಗೆ ಎಷ್ಟು ಅಂಜುವರೆಂಬದೂ, 'ನಮ್ಮನ್ನು ಕರಿನೀರಿಗೆ ಕಳಿಸಿದ್ದೇ ವಿಹಿತವಾಯಿತೆ'ಂದು ಹೇಗೆ ಹೇಳುವರೆಂಬದೂ ಗೊತ್ತಾದೀತು?"

''ಅದು ತೀರ ಸತ್ಯವಿದೆ ಜೀವಾವಧಿ ಶಿಕ್ಷೆ ಇಲ್ಲವೆ ಹತ್ತು ಹನ್ನೆರಡು ವರ್ಷದ ದೀರ್ಘ ಅವಧಿಯ ಶಿಕ್ಷೆಯಾದವರನ್ನು ಹಿಂದೀ ಕಾರಾಗೃಹದೊಳಗೆ

ಕೂಡಿಡುವುದಕ್ಕಿಂತ ಕರಿನೀರಿನಂತಹ ವಸಾಹತುಗಳಲ್ಲೇ ಹೀಗೆ ಮೆಲ್ಲಮೆಲ್ಲನೆ ಸ್ವತಂತ್ರವಾಗಿರಗೊಡುವುದು ಹೆಚ್ಚು ದಯೆಯಾಗಿರುತ್ತದೆ ಉದ್ದಂಡರನ್ನೂ ಪತಿತರನ್ನೂ ಸುಧಾರಿಸುವ ದೃಷ್ಟಿಯಿಂದಲೂ ವಿಹಿತವಾಗಿದೆ; ಹಾಗು ರಾಷ್ಟ್ರದೊಳಗಿನ ಸಚ್ಛೀಲ ನಾಗರಿಕರಿಗೆ ಇವರ ಉಪದ್ರವಗಳಿಂದ ಸಂರಕ್ಷಣವಾಗಿ, ಆ ದಂಡಿತರಿಗೆ ಸ್ವಂತವೇ ನಿರ್ಬಂಧಶೀಲ ಹಾಗು ಸಂಯುತ ಜೀವನ ಸಾಗಿಸುವ ಹೊಸದೊಂದು ಸಂಧಿ ಕೊಡುವ ದೃಷ್ಟಿಯಿಂದಲೂ ಬಂದಿಗಳ ಇಂಥ ಸ್ವತಂತ್ರ ವಸಾಹತುಗಳೇ ಹೆಚ್ಚು ಉಪಯುಕ್ತಗಳಾಗುವಂತಿವೆ''

"ಆದರೆ ಅದರಲ್ಲಿಯೂ ಈ ಅಂಡಮಾನದ ವಸಾಹತಂತೂ ರಾಷ್ಟ್ರೀಯ ಹಿತದ ದೃಷ್ಟಿಯಿಂದ ಅತ್ಯಂತ ಮಹತ್ವದ್ದೆಂಬ ಬಗ್ಗೆ ಇನ್ನೂ ಒಂದು ವಿಶೇಷ ಕಾರಣವಿದೆ ಅದೇನೆಂದರೆ, ಈ ಮಹತ್ವದ ದ್ವೀಪವು ರೋಗಿಷ್ಟ, ಹಾಳು ಹಾಗು ಮನುಷ್ಯವಸತಿಗೆ ಪ್ರತಿಕೂಲವಾಗಿಬಿಟ್ಟಿತ್ತು; ಮತ್ತು ಅದನ್ನು ವಸಾಹತು ಮಾಡುವ ಸಲುವಾಗಿಯೇ ಹಿಂದುಸ್ತಾನದೊಳಗಿನ ಯಾವ ಪ್ರಾಂತವಾದರೂ ಸಾವಿರಾರು ಜನರನ್ನೂ ಕೋಟಿಗಟ್ಟಿ ಹಣವನ್ನೂ ಹೇತುಪುರಸ್ಸರವಾಗಿ ಬೇಕಂತ ಎಂದೂ ಖರ್ಚುಮಾಡುತ್ತಿರಲಿಲ್ಲ. ಇಂಥ ಈ ಅಂಡಮಾನದ ಮಹತ್ವದ ದ್ವೀಪವು ಕರಿನೀರಿಗೆ ಕೇವಲ ಸಾಯಲಿಕ್ಕೆಂದೇ ಕಳಿಸಲ್ಪಟ್ಟ ಈ ಪತಿತರ ಕಠೋರ ಪರಿಶ್ರಮಗಳಿಂದ ಇಂದು ಹೀಗೆ ಫಲ-ಪುಷ್ಪಗಳಿಂದ ತುಂಬಿದ್ದು, ಧಾನ್ಯಗಳಿಂದ ಸಮೃದ್ಧವಾಗಿದ್ದು, ಉಪಯುಕ್ತವೂ, ಬೆಳೆಯುಳ್ಳದ್ದೂ, ಮನುಷ್ಯರ ವಸತಿಯಿಂದ ತುಂಬಿ ತುಳುಕುವಂತಹದೂ ಆಗಿದೆ. ವಸಾಹತುಗಳನ್ನು ಗೆದ್ದುಕೊಳ್ಳುವ ಸಲುವಾಗಿ ರಾಷ್ಟ್ರಗಳು ಯುದ್ಧಗಳನ್ನು ಮಾಡಬೇಕಾಗುತ್ತದೆ; ಪರಾಕ್ರಮವನ್ನು ತೋರಿಸಬೇಕಾಗುತ್ತದೆ; ಆದರೆ ನಮ್ಮ ರಾಷ್ಟ್ರಕ್ಕೆ ಇದೊಂದು ಹೊಸ ವಸಾಹತನ್ನು ಕೇವಲ ತಮ್ಮ ಪರಿಶ್ರಮಗಳಿಂದಲೇ ಸಂಪಾದಿಸಿ ಈ ಪತಿತ ಮತ್ತು ಪರಿತ್ಯಕ್ತ ಬಂದಿವರ್ಗದವರು ಪುಕ್ಕಟೆಯಾಗಿ ಅರ್ಪಿಸಿರುವದು ಒಂದರ್ಥದಿಂದ ನಿಜವಲ್ಲವೇ? ಈ ಎಲ್ಲ ದಂಡಿತರು ಹಿಂದುಸ್ತಾನದ ಸೆರೆಮನೆಗಳಲ್ಲೇ ಸಾಯುವವರೆಗೂ ಕೂಡಿಡಲ್ಪಟ್ಟಿದ್ದರೆ, ಇವರ ಪರಿಶ್ರಮಗಳ, ಸಾಹಸದ, ಬುದ್ಧಿಯ ಇಷ್ಟು ಉಪಯೋಗವೂ ಇಷ್ಟು ಲಾಭವೂ ನಮ್ಮ ರಾಷ್ಟ್ರಕ್ಕೆ ಎಂದಿಗೂ ಮಾಡಿಕೊಳ್ಳಲಾಗುತ್ತಿರಲಿಲ್ಲ! ಈ ದಂಡಿತ ವರ್ಗದಲ್ಲಿ ನೂರಾರು ಜನರು ಹುಟ್ಟಾ ಅತ್ಯಂತ ಸಾಹಸಿಗಳೂ, ಚಪಲರೂ, ಕರ್ತೃತ್ವವಂತರೂ, ಕಾಟಕರೂ ಆಗಿರುತ್ತಾರೆಂಬದನ್ನು ನಿಮಗೆ ಹೇಳಬೇಕಾಗಿಲ್ಲ"

"ಅದರಲ್ಲೇನು ಸಂದೇಹ! ಸಮಾಜಕ್ಕೆ ಉಪದ್ರವವೀಯುವ ದುಷ್ಟ ಕೆಲಸದಲ್ಲಿ ಅವರ ಆ ಪ್ರವೃತ್ತಿಯ ದುರುಪಯೋಗವಾಗಿರದಿದ್ದರೆ, ಅದೇ

ಅವರ ಧೈರ್ಯ-ಕಾಟಕತನ-ಕ್ರೌರ್ಯಗಳು ವೀರರಿಗುಚಿತವಾಗುತ್ತಿದ್ದವು. ಇಂಥ ಉದ್ದಂಡ ಅಪರಾಧಿಗಳನ್ನು ದಂಡಿನಲ್ಲಿ ಸೇರಿಸಿ, ದಂಡಾಳಿನ ಸ್ಥಿತಿಯಲ್ಲಿ ಅವರ ಆ ಉದ್ದಂಡತೆಯನ್ನು ದುಡಿಸಿಕೊಂಡು, ಎಷ್ಟೋ ಸೇನಾನಿಗಳು ದೊಡ್ಡ ದೊಡ್ಡ ವಿಜಯಗಳನ್ನು ಪಡೆದಿರುತ್ತಾರೆ; ಎಷ್ಟೋ ರಾಷ್ಟ್ರಗಳು ತಮ್ಮ ಸ್ವಾತಂತ್ರ್ಯ ಸಂಗ್ರಾಮದೊಳಗಿನ ಕಾಳಗಗಳನ್ನು ಕಾದಿರುತ್ತಾರೆ! ಹೆಚ್ಚೇನು, ಪೆಂಡಾರಿಗಳ ಅಮೀರಖಾನ ಪ್ರಭೃತಿ ಕೇವಲ ದರವಡೆಖೋರ ಅನುಯಾಯಿಗಳ ಮುಂದಾಳುಗಳು 'ಟೋಕ'ದಂತಹ ಸಂಸ್ಥಾನಗಳನ್ನು ಸ್ಥಾಪಿಸಿಬಿಟ್ಟಿರುವುದಿಲ್ಲವೆ?''

''ಸ್ಥಾಪಿಸಿರುತ್ತಾರೆ. ಕಂಟಕಬಾಬು, ಅದರಿಂದ ರಾಷ್ಟ್ರದಲ್ಲಿರುವಾಗ ಉಪದ್ರವಿಗಳೆಂದು ಗೊತ್ತಾದ ಈ ದಂಡಿತರ ಆ ಎಲ್ಲ ಗುಣಗಳನ್ನೂ ಅವಗುಣಗಳನ್ನೂ ಕಠಿಣ ನಿರ್ಬಂಧದಲ್ಲಿ, ಸಕ್ತಿಯಿಂದ ಹಾಗು ಬೆದರಿಕೆಯಿಂದ ದುಡಿಸಿಕೊಳ್ಳುವುದಕ್ಕೆಂದು ಇಂಥ ಯಾವುದೊಂದು ಕರಿನೀರ ಮೇಲೆ ಕಳಿಸುವದೇ ಇಷ್ಟವು ಯಾವ ಪರಿಶ್ರಮಗಳನ್ನು ಅವರು ತಾವಾಗಿ ರಾಷ್ಟ್ರದ ಸಲುವಾಗಿ ಮಾಡುತ್ತಿರುವದಿಲ್ಲವೋ, ಅವುಗಳನ್ನು ಅವರಿಂದ ಇಲ್ಲಿ ಕಠೋರ ಸಕ್ತಿಯಿಂದ ಮಾಡಿಸಿಕೊಳ್ಳಲಿಕ್ಕೆ ಬರುತ್ತದೆ; ಹಾಗು ಅವರ ಜೀವನದ ರಾಷ್ಟ್ರೀಯ ಧನ, ಸಂಪತ್ತು ಮತ್ತು ಶಕ್ತಿಗಳನ್ನು ಹೆಚ್ಚಿಸುವ ಸಲುವಾಗಿ ಉಪಯೋಗಿಸಲಿಕ್ಕೆ ಬರುತ್ತದೆ ಅದರಿಂದ ಈ ಅಂಡಮಾನದ ಬಂದಿಗಳ ವಸಾಹತು ರಾಷ್ಟ್ರೀಯ ಹಿತದ ದೃಷ್ಟಿಯಿಂದ ಅತ್ಯಂತ ಉಪಯುಕ್ತವಾಗಿದೆ ಅದರಲ್ಲಿ ಯಾವ ಸುಧಾರಣೆ ಬೇಕೋ, ಅವುಗಳನ್ನು ಮಾಡಿರಿ; ಆದರೆ ಅದೂರ ದರ್ಶಿತ್ವದಿಂದಲೂ ಅಪಾತ್ರದ ದಯೆಯಿಂದಲೂ ಈ ವಸಾಹತನ್ನು ಯಾವಾಗಲೂ ಮುಚ್ಚಬಾರದು; ಮತ್ತು ಇಂಥ ಕರಿನೀರ ವಸಾಹತುಗಳಿಗೆ ಕಳಿಸದೆ, ಆ ಸಹಸ್ರಗಟ್ಲೆ ದಂಡಿತರನ್ನು ಹಿಂದುಸ್ತಾನ ಬಂದಿಗೃಹಗಳಲ್ಲೇ, ಸ್ತ್ರೀ-ಪುರುಷರನ್ನು ಬೇರೆ ಬೇರೆ ಕೋಣೆಗಳ ಪಂಜರದಲ್ಲೇ, ಸಾಯುವವರೆಗೂ ಕೂಡಿಡಹತ್ತಿದರೆ, ಅವರ ತಾರುಣ್ಯವನ್ನು ಮಣ್ಣುಗೂಡಿಸುವ ಆ ನಿರ್ದಯದ ಕೂಡಿಡೋಣವು ಅವರಿಗೆ ಅತ್ಯಂತ ಅಸಹ್ಯವಾಗಿ, ಅದರಿಂದ ರಾಷ್ಟ್ರಕ್ಕಾದರೂ ಎಷ್ಟೋ ಹಾನಿಯಾದೀತು? ಯಾಕೆಂದರೆ ಅದರಿಂದ ಆ ಸಹಸ್ರಾವಧಿ ಸ್ತ್ರೀ-ಪುರುಷರ ಸಂತತಿಗೂ ರಾಷ್ಟ್ರವು ಎರವಾಗಬೇಕಾಗುವದು! ರಾಷ್ಟ್ರದ ಸಂಖ್ಯಾಬಲವು ಕಡಿಮೆಯಾದೀತು ಅದಕ್ಕಿಂತ ಕರಿನೀರಂತಹ ಸ್ವತಂತ್ರವೂ ನೂತನವೂ ಆದ ವಸಾಹತುಗಳಿಗೆ ಆ ದಂಡಿತ ಸ್ತ್ರೀ-ಪುರುಷರನ್ನು ವಿವಾಹಿತ ಕಳಿಸಿ, ಜೀವನವನ್ನುಪಭೋಗಿಸುವ ಸಂಧಿಯನ್ನಿತ್ತರೆ, ಪ್ರೇಮದ ಹಾಗು ವಾತ್ಸಲ್ಯದ

ಕೋಮಲ ಭಾವನೆಗಳೂ ಅವರ ಸ್ವಂತದ ಮನುಷ್ಯತ್ವವೂ ವಿಕಸಿತಗೊಂಡಾವು; ಮತ್ತು ಅವರ ಸಂತತಿಯೂ ಆ ವಸಾಹತಿಯನ್ನು ಭರಭರಾಟಿಗೆ ತಂದು, ನಮ್ಮ ರಾಷ್ಟ್ರಕ್ಕೊಂದು ಹೊಸ ಪ್ರದೇಶವನ್ನು ಗೆದ್ದು ಸೇರಿಸುವಂತೆ ದೊರಕಿಸಿ ಕೊಟ್ಟೀತು! ಒಂದು ಪ್ರದೇಶವಷ್ಟೇ ಅಲ್ಲ; ಆದರೆ ಅಂಡಮಾನದಲ್ಲಿ ನಮ್ಮ ಹಿಂದು ಸಂಸ್ಕೃತಿಯ ಒಂದು ಹೊಸ ಜಾನಪದವೂ ಭರಭರಾಟಿಗೆ ಬರುತ್ತಿರುವುದನ್ನು ಈಗಲೆ ಕಾಣಬಹುದು''

"ಆದರೆ ಅಪ್ಪಾಜೀ, ಪಾಪಿ, ಅಪರಾಧಿ ಹಾಗು ದುಷ್ಟ ಹೀಗೆ ಯಾವ ದಂಡಿತರಿರುವರೋ, ಅವರ ಸಂತತಿಗಳಲ್ಲೂ ಅಯಾ ಅತ್ಯಾಚಾರ ಇಲ್ಲವೆ ದುರಾಚಾರದ ದುರ್ಗುಣಗಳು ತೋರುತ್ತವೆಂದು ಅನುವಂಶ ವಿಜ್ಞಾನವು ಹೇಳುತ್ತದಂತೆ. ಆ ಬಗ್ಗೆ ನಿಮ್ಮ ಮತವೇನು?"

"ಅದೊಂದು ಹುರುಳಿಲ್ಲದ ತರ್ಕವಾಗಿದೆಯೇ ಹೊರತು ಮತ್ತೇನೂ ಇಲ್ಲ. ವೈಯಕ್ತಿಕ ಇಲ್ಲವೆ ಕೌಟುಂಬಿಕ ದೃಷ್ಟಿಯಿಂದ ಇದು ಇಷ್ಟು ದಿಟ-ಸಟಯಿರುವದೆಂಬ ಬಗ್ಗೆ ನಾನು ಮಾತಾಡುವದಿಲ್ಲ; ಆದರೆ ವಸಾಹತಿಯ ಯಾವ ಪ್ರಶ್ನೆಯು ಸದ್ಯಕ್ಕಿದೆಯೋ, ಆ ಬಗ್ಗೆ ಹಾಗೆ ಸಿದ್ಧಾಂತಪ್ರತಿಪಾದಿಸುವದೆಂದರೆ, ತೀರ ಹುರುಳಿಲ್ಲದ ತರ್ಕವೇ ಸರಿ! ಅಗೋ, ಆ ಆಸ್ಟ್ರೇಲಿಯವನ್ನು ನೋಡಿರಿ. ಕಾನಡಾ ನೋಡಿರಿ ಅಮೇರಿಕದೊಳಗಿನ ವಸಾಹತುಗಳನ್ನು ನೋಡಿರಿ. ಇಂಗ್ಲಂಡದೊಳಗಿನ ಅತ್ಯಂತ ನೃಶಂಸ ಮತ್ತು ದುರಾಚಾರಿಗಳಾದ ದಂಡಿತರನ್ನು ಮತ್ತು ಜೀವಾವಧಿ ಶಿಕ್ಷಿತರನ್ನು ಹಡಗು ಹಡಗುಗಳಲ್ಲಿ ತುಂಬಿ, ಆ ದೇಶಗಳು ಆಗ ಹಾಳು ಇದ್ದದರಿಂದ ಅಲ್ಲಿಗೆ ಒಯ್ದು ಬಿಡುತ್ತಿದ್ದರು. ಅದೊಂದು ಇಂಗ್ಲಂಡದ ಕರಿನೀರೇ ಆಗಿತ್ತು; ಆದರೆ ಇಂದಿಗೆ ಅವೇ ದಂಡಿತರ ವಂಶಜರ ಒಂದೊಂದು ಸ್ವತಂತ್ರ ರಾಷ್ಟ್ರವಾಗಿ ಬಿಟ್ಟವೆ! ದೊಡ್ಡ ದೊಡ್ಡ ವೀರರು, ಮುತ್ಸದ್ದಿಗಳು, ವಿಧಿಮಂಡಲ ಸಭಾಸದರು, ನಿರ್ಬಂಧ ಪಂಡಿತರು ಇವರೆಲ್ಲ ಅವರಲ್ಲಿಯೇ ಹುಟ್ಟಿದರು ಅಲ್ಲಿಯ ಇಂದಿನ ಪ್ರತಿಷ್ಠಿತರೊಳಗಿನ ಎಷ್ಟೋ ಜನರ ಮುತ್ತಜ್ಜಂದಿರು ಕಳ್ಳರು, ದರವಡೆಖೋರರು, ಆತತಾಯಿಗಳು, ಪಾಪಾಚಾರಿಗಳು ಆದ ದಂಡಿತರೇ ಆಗಿದ್ದರು. ಈ ನಮ್ಮ ಅಂಡಮಾನವನ್ನೇ ನೋಡಿರಿ. ಇಲ್ಲಿಯ ತರುಣ ಪೀಳಿಗೆಯನ್ನು-ಸ್ತ್ರೀಯರು ಅಥವಾ ಪುರುಷರು, ಹುಡುಗರು ಅಥವಾ ಹುಡುಗಿಯರನ್ನು-ಹಿಂದುಸ್ಥಾನದೊಳಗಿನ ಯಾವುದೊಂದು ಪಟ್ಟಣದಲ್ಲೊಯ್ದು ಬಿಟ್ಟರೂ, ರೂಪ, ಲಕ್ಷಣ, ಶೀಲ, ಬುದ್ಧಿ, ಚಪಲತೆ ಇತ್ಯಾದಿ ಸದ್ಗುಣಗಳ ಒರೆಯಲ್ಲಿ ಇವರನ್ನು ವಿಂಗಡಿಸಿ ತೋರಿಸಲಿಕ್ಕಾದೀತೇ? ಇವರು ಅಲ್ಲಿಯವರಿಗೆ ಯಾವ ಬಗೆಯಿಂದಲೂ ಸೋಲಲಿಕ್ಕಿಲ್ಲ.

“ಈ ನನ್ನ ಕುಟುಂಬದ ಉದಾಹರಣೆಯನ್ನೇ ನೋಡಿರಿ. ನನ್ನ ಹೆಂಡತಿಯು ಒಬ್ಬ ರಜಪುತ ಸ್ತ್ರೀಯು. ಹಿಂದುಸ್ತಾನದಲ್ಲಿ ಚಿಕ್ಕವಯಸ್ಸಿನಲ್ಲೇ ಅವಳ ಲಗ್ನವಾಗಿತ್ತು. ಆ ಲಗ್ನದ ಆಕೆಯ ಗಂಡನಿಗೆ ಇಬ್ಬರು ಹೆಂಡಂದಿರಿದ್ದರು. ಆ ಸವತಿಯರಲ್ಲಿ ಭಯಂಕರ ದ್ವೇಷ ಹುಟ್ಟಿತು. ಆಗ ಗಂಡನು ಇವಳನ್ನೇ ಹೊಡೆಯ ಬಡಿಯ ಹತ್ತಿದನು. ಇವಳ ಒಬ್ಬ ದುಷ್ಟ ನೆರೆಮನೆಯವನು ಇವಳಿಗೆ ಹೇಳಿಕೊಟ್ಟನೇನಂದರೆ, ‘ನಾನು ಮಂತ್ರಿಸಿ ಕೊಟ್ಟ ಪುಡಿಯನ್ನು ನಿನ್ನ ಸವತಿಗೆ ಅನ್ನದಲ್ಲಿ ಬೆರೆಸಿ ಕೊಟ್ಟರೆ, ನೀನು ಅವಳ ಕಾಟದಿಂದ ಮುಕ್ತಳಾಗುವೆ!’ ಕೂಡಲೆ ಇವಳು ತನ್ನ ಬಂಗಾರದ ಮಣಿಗಳ ಮಾಲೆಯನ್ನು ಆತನಿಗೆ ಕೊಟ್ಟು ಆ ಮಂತ್ರಪೂತ ಪುಡಿಯನ್ನು ಪಡೆದು ಅನ್ನದೊಳಗೆ ಬೆರೆಸಿ ಸವತಿಗೆ ಉಣಿಸಿದಳು. ಆ ಪುಡಿಯೆಂದರೆ, ವಿಷವು! ಆ ಸವತಿಯು ಕೂಡಲೆ ಸತ್ತಳು; ಮತ್ತು ಈ ಸುಮಾರು ಹದಿನೆಂಟು ವರ್ಷದ ಹುಡುಗಿಗೆ ಆ ಭಯಂಕರ ಅಪರಾಧಕ್ಕಾಗಿ ಜೀವಾವಧಿ ಕರಿನೀರಿನ ಶಿಕ್ಷೆಯು ವಿಧಿಸಲ್ಪಟ್ಟಿತು; ಆದರೆ ಆ ಶಿಕ್ಷೆಯ ಶ್ರವಣದಿಂದಲೇ ಅಂಥ ಯಾವ ದುಷ್ಕೃತ್ಯವನ್ನು ಇನ್ನೆಂದೂ ಮಾಡಬಾರದೆಂದು ಅವಳ ಮನಸ್ಸಿನಲ್ಲಿ ಯಾವ ಒಂದು ಅಂಜಿಕೆಯು ನೆಲಿಸಿತೋ, ಅದರಿಂದ ಅವಳ ಸ್ವಭಾವವು ಮುಂದೆ ಅತ್ಯಂತ ಸರಲವೂ ನಿರ್ಬಂಧಶೀಲವೂ ಆಗಿಬಿಟ್ಟಿತು. ಬಂದಿಗೃಹದ ಮೂಕ ಕಠೋರ ಕಲ್ಲುಗೋಡೆಗಳೇ ಕೆಲ ಜನರಿಗೆ ಯಾವುದೊಂದು ನೀತಿಗ್ರಂಥಕ್ಕಿಂತಲೂ ಹೆಚ್ಚು ಪರಿಣಾಮಕರವಾದ ಸಂಯಮನವನ್ನು ಕಲಿಸಲು ಶಕ್ತವಾಗುತ್ತವೆ! ಕರಿನೀರೊಳಗಿನ ಜೀವಾವಧಿಯಲ್ಲಿ ಆ ರಜಪುತ ತರುಣಿಯ ವರ್ತನವು ಅತ್ಯಂತ ವಿನಯಶೀಲವಿದ್ದದರಿಂದ, ನನಗೆ ಲಗ್ನವಾಗುವ ಅನುಜ್ಞೆ ದೊರೆತೊಡನೆ, ನಾನು ಅವಳೊಡನೆಯೇ ವಿವಾಹವಾದೆನು. ಹತ್ತೆಂಟುವರ್ಷಗಳ ವರೆಗೆ ಅವಳು ಗೃಹಿಣಿಯ ಕರ್ತವ್ಯವನ್ನು ನಿರಾಪವಾದವಾಗಿ ಪಾಲಿಸಿದಳು; ಸುಖದಿಂದ ಸಂಸಾರ ಮಾಡಿದಳು. ಮುಂದೆ ಆಕೆಯು ಗತಿಸಿದಳು. ಆಕೆಯ ಹೊಟ್ಟೆಯಲ್ಲಿ ನನಗೆ ಹುಟ್ಟಿದ್ದ ಒಬ್ಬೊಂಟಿಗನಾದ ಮಗನೂ ಸಚ್ಛೀಲನಾದನು. ಅವನ ಹೆಂಡತಿಯೇ ಈ ಅನುಸೂಯೆಯು; ನನ್ನ ಸೊಸೆಯು. ಇವಳಾದರೂ ಒಬ್ಬ ಬಂಗಾಲೀ ಕಾಯಸ್ಥನ ಮಗಳು ಬಾಲವಿಧವೆಯಾಗಿದ್ದಳು. ಅವಳ ಮೈದುನನೇ ಅವಳೊಡನೆ ಅನೈತಿಕ ಸಂಬಂಧವಿಟ್ಟದ್ದರಿಂದ, ಕೊನೆಗೆ ಅವಳು ಗರ್ಭವತಿಯಾದಳು. ಆಗ ಅತ್ಯಂತ ಉಗ್ರ ಔಷಧ ಕೊಡಿಸಿ ಅವಳಿಂದ ಭ್ರೂಣಹತ್ಯೆಯ ಭಯಂಕರ ಪಾಪ ಮಾಡಿಸಿದನು; ಆದರೆ ಸಮಾಜ ಭಯದಿಂದ ಅವಳು ಯಾವ ಪಾಪ ಮಾಡಿದ್ದಳೋ, ಅದೇ ಬೈಲಿಗೆ ಬಿದ್ದು

ಅವಳಿಗೆ ಸಮಾಜದಂಡವನ್ನು ಭೋಗಿಸಬೇಕಾಯಿತು. ಅವಳ ಮೈದುನನು ದೇಶತ್ಯಾಗ ಮಾಡಿ ಕಾಣದಾದ್ದರಿಂದ, ಅವಳಿಗೇ ಜೀವಾವಧಿ ಕರಿನೀರಾಯಿತು; ಆದರೆ ಆಕೆಯ ಸ್ವಭಾವದಲ್ಲಿ ರಾಕ್ಷಸತನದ ನಿಕಟವಾದ ಛಾಪು ಬಿದ್ದಿದೆ ಯೇನು? ಅವಳು ಕರಿನೀರೊಳಗೆ ನಿಯಮಿತ ಶಿಕ್ಷೆಯನ್ನು ಭೋಗಿಸಿದ ಬಳಿಕ ಎಂದಿಗೆ ನನ್ನ ಮಗನ ಕೂಡ ಲಗ್ನವಾದಳೋ, ಅಂದಿನಿಂದ ಇಷ್ಟು ಪ್ರೇಮಲ ಸಚ್ಛೀಲ ಹಾಗು ಕಷ್ಟಾಳುತನದಿಂದ ನಮ್ಮ ಮನೆಯಲ್ಲಿ ವ್ಯವಹರಿಸುತ್ತ ಬಂದಿರುವಳು. ಇಂಥ ಸೊಸೆಯು ನಮ್ಮ ದೇಶದಲ್ಲಿ ಕೂಡ ನೂರರಲ್ಲೊಬ್ಬ ಳಾದರೂ ಸಿಗುವದು ದುರ್ಲಭವು! ಮುಂದೆ ನನ್ನ ಮಗನು ಹಡಗಿನ ಕೆಲಸ ದಲ್ಲಿ ಪ್ರಸಿದ್ಧಿಗೆ ಬಂದನು. ದುರ್ದೈವದಿಂದ ಎರಡು ವರ್ಷಗಳ ಮುಂಚೆ ಅಪಘಾತದಲ್ಲಿ ಸಮುದ್ರದ ಪಾಲಾದನು! ಆದರೂ ಕೂಡ ಆತನ ಹಿಂದೆ ಉಳಿ ದಿರುವ ಈ ಇಬ್ಬರು ಹುಡುಗರದಷ್ಟೇ ಅಲ್ಲ; ಆದರೆ ನನ್ನನ್ನೂ ಅವಳು ಹೇಗೆ ಸಂರಕ್ಷಿಸುತ್ತಿರುತ್ತಾಳೆಂಬದು ನಿಮಗೆ ಕಂಡೇ ಕಾಣುವದು. ಸ್ವಂತವೇ ಅಡುಗೆ, ನೀರು, ಮನೆಗೆಲಸಗಳನ್ನು ಮಾಡುತ್ತ, ದಾರಿದ್ರ್ಯದಲ್ಲೂ ಎಷ್ಟು ಸಮಾಧಾನ ದಿಂದ ನಡೆಯುತ್ತಿರುವಳೆಂಬದನ್ನು ನಿಮಗೆ ಬೇರೆ ಹೇಳಬೇಕೇ? ಈ ನನ್ನ ಚಿಕ್ಕ ಮೊಮ್ಮಕ್ಕಳನ್ನು, ಅವಳ ಈ ಇಬ್ಬರು ಹುಡುಗರನ್ನು ಆ ನನ್ನ ಸೊಸೆಯಾದ ಅನುಸೂಯೆಯು ಹೆಚ್ಚಾಗಿ ಪ್ರೀತಿಸುತ್ತಿರುವುದರಿಂದ, ಅವಳ ಗಿಂತ ಬೇರೆ ಯಾವ ತಾಯಿಯು ಹೆಚ್ಚು ವತ್ಸಲಳಿದ್ದಾಳು? ಲೋಕದೊಳಗಿನ ಎಲ್ಲ ದೇಶಗಳಲ್ಲಿ ತೀರ ಸಭ್ಯವೂ ಕುಲೀನವೂ ಆದ ಸಮಾಜದಲ್ಲಿ ಕೂಡ ಕುಮಾರಿಕೆಯರ ಅಲ್ಲಡ ವಯಸ್ಸಿನಲ್ಲಿ ಭ್ರೂಣಹತ್ಯೆಯು ಭಯಂಕರ ದುಷ್ಕೃ ತ್ಯಗಳು ಸಮಾಜದ ಅತ್ಯುಗ್ರ ಭಯಕ್ಕೀಸುಗ ಆಗುತ್ತವೆಂಬದು ನಮಗೆಲ್ಲ ರಿಗೂ ಅನುಭವವಿದ್ದೇ ಇದೆ; ಆದರೆ ಎಷ್ಟೋ ಮಂದಿ ಹುಡುಗಿಯರ ಆ ಕೃತ್ಯವು ಮುಚ್ಚುಮರೆಯಾಗಲು, ಅವರು ಬೇರೆ ಎಲ್ಲ ಕುಮಾರಿಕೆಯರಿಗಳಂ ತೆಯೇ ಕುಲೀನರೂ ಸುಶೀಲರೂ ಎಂದು ಗಣಿಸಲ್ಪಡುತ್ತಾರೆ; ಪ್ರೇಮಲ ಪತ್ನಿ ಯರೂ ಅತ್ಯಂತ ವತ್ಸಲದ ಮಾತೆಯರೂ ಆಗಲು ಶಕ್ತರಾಗುತ್ತಾರೆ. ಇದಕ್ಕೆ ಪ್ರಾಮುಖ್ಯವಾದ ನಮ್ಮ ಪೌರಾಣಿಕ ಉದಾಹರಣವೆಂದರೆ, ಕುಂತೀದೇವಿಯು!"

"ಅದಕ್ಕೆ ಕಾರಣವಿಷ್ಟೇ, ದುಷ್ಕೃತ್ಯದ ಚಟವೇ ಬಿದ್ದ ನರಾಧಮರು ಹೇಗಿರುತ್ತಾರೋ, ಅದರಂತೆಯೇ ದುಷ್ಕೃತ್ಯದ ಬಗ್ಗೆ ಅತ್ಯಂತ ತಿರಸ್ಕಾರ ವೆನಿಸುತ್ತಿದ್ದರೂ ಕೇವಲ ಅಸಹ್ಯವಾದ ಪೀಡೆಯ ಭಯದಿಂದಲೇ ಯಾವ ಆ ಕ್ಷಣಿಕ ಮೈಸೊಕ್ಕಿನ ಲಹರಿಯಲ್ಲಿ ಅಂಥದೊಂದು ದುಷ್ಕೃತ್ಯವು ಯಾರಿಂದ ಘಟಿಸಿಬಿಡುತ್ತದೋ, ಅಂಥ ಅಪರಾಧಿಗಳೂ ಇರುತ್ತಾರೆ. ದಂಡಿತರ ವರ್ಗ

ದಲ್ಲಿ ಆ ಮೊದಲಿನ ರಾಕ್ಷಸೀ ಪ್ರವೃತ್ತಿಯ ಅಪರಾಧಿಗಳನ್ನು ಕಠೋರ ದಂಡನದ ಭಯದಿಂದ ಹಾದಿಗೆ ತರಲಿಕ್ಕಾಗುತ್ತದೆ. ಈ ಎರಡನೇ ಬಗೆಯ ಪಾಪಭೀರು ಪ್ರವೃತ್ತಿಯ ಅಪರಾಧಿಗಳನ್ನು ಸಹಾನುಭೂತಿಯ ಅಭಯ ದಾನದಿಂದ ಸುಧಾರಿಸಲಾಗುತ್ತದೆ; ಆದ್ದರಿಂದ ದಂಡಿತನೆಂದ ಕೂಡಲೆ ಆತನು ಮನುಷ್ಯನೇ ಅಲ್ಲ; ಇಷ್ಟೇ ಆಗಿರದೆ, ಆತನ ಸಂತತಿಯೂ ಪರಂಪರೆಯಿಂದ ಪಾಪಪ್ರವಣವೇ ಆಗಿರತಕ್ಕದ್ದೆಂದು ತಿಳಿಯುವುದೆಂದರೆ, ಮೊದಲೇ ಒಂದು ತಿರುಳಿಲ್ಲದ ತರ್ಕಕ್ಕೆ ಬಲಿಯಾದಂತಾಗುವದು! ಮತ್ತು ಅದರ ಮೇಲೆ ಆ ಆಧಾರದಿಂದ ದಂಡಿತರ ವಸಾಹತಿನೊಳಗಿನ ಪೀಳಿಗೆಯು ಹುಟ್ಟಾ ಮನುಷ್ಯತ್ವವಿಲ್ಲದ್ದೆಂಬ ತಿಳುವಳಿಕೆಯು ಉಂಟಾಗುವದು. ಆ ತಿಳುವಳಿಕೆಯು ಎಷ್ಟು ತಳಬುಡವಿಲ್ಲದ ನಿರಾಧಾರವಾದದ್ದಾಗಿದೆಯೋ, ಅಷ್ಟೇ ಅತ್ಯಾಚಾರದ್ದೂ ಆಗಿದೆ!''

''ನಿಃಸಂಶಯ! ನಿಃಸಂಶಯ! ಮತ್ತು ಅಪ್ಪಾಜೀ, ಆ ಹುರುಳಿಲ್ಲದ ತರ್ಕವನ್ನು ಅಂಡಮಾನದೊಳಗಿನ ತರುಣ ಪೀಳಿಗೆಯು ಹೇಗೆ ಸುಳ್ಳು ಕೆಡವಿದೆಯೋ, ಅದರಂತೆಯೇ ಇನ್ನೊಂದು ವಿಶೇಷವಾಗಿ, ನಮ್ಮ ಹಿಂದುಗಳ ದೃಢ ತರ್ಕಟತನವನ್ನೂ ಸುಳ್ಳು ಕೆಡಹಿದೆ. ಹಿಂದು ಸಮಾಜದೊಳಗಿನ ಎಲ್ಲ ಜಾತಿಗಳು ಈಗ ಬಹುಮಟ್ಟಿಗೆ ಒಂದೇ ಪಾತಳಿಗೆ ಬಂದಿದ್ದರೂ 'ಅವುಗಳಲ್ಲಿ ಸ್ಪರ್ಶದ ಮುಟ್ಟು, ರೊಟ್ಟಿಯ ಮುಟ್ಟು, ಲಗ್ನದ ಮುಟ್ಟು ಮುಂತಾದ ಯಾವ ಕಂದಕಗಳು ಮುಂಚಿನ ಸಹಸ್ರಾವಧಿ ವರ್ಷಗಳ ಪರಿಸ್ಥಿತಿಯಲ್ಲಿ ಹಿತಕರವೆಂದು ಆಗಿಯಲ್ಪಟ್ಟಿದ್ದವೋ ಅವುಗಳನ್ನೀಗಲೂ ಹಾಗೆಯೇ ಇಡುವದು ಹಿತಕರವಿದೆ; ಒಂದು ವೇಳೆ ಆ ಕಂದಕಗಳನ್ನು ಹೂಗಿದರೆ ಮತ್ತು ಜಾತಿ-ಜಾತಿಗಳಲ್ಲಿ ರೋಟಿ-ಬೇಟಿ ವ್ಯವಹಾರಗಳನ್ನು ಮುಂದರಿಸಿದರೆ, ಆ ಸಂಕರದಿಂದ ದೊಡ್ಡ ಅನರ್ಥಾವಹವೇ ಆದ ಹೊರತು ಉಳಿಯಲಿಕ್ಕಿಲ್ಲ; ಸಂಸ್ಕೃತಿಯು ನಿಕೃಷ್ಟವೂ ಪ್ರಜೆಯು ಅಧರ್ಮವೂ ಆದೀತು' ಎಂದು ಯಾವ ಒಂದು ಧಾರ್ಮಿಕ ಛಾಪಿನ ಭೀತಿಯು ನಮ್ಮ ದೇಶದೊಳಗಿನ ಹಿಂದು ಸಮಾಜವನ್ನು ಆವರಿಸಿಕೊಂಡು ಬಿಟ್ಟಿದೆಯೋ, ಅದು ಎಷ್ಟು ಭ್ರಾಂತಿಕವಾಗಿದೆಯೆಂಬುದನ್ನು ಈ ಅಂಡಮಾನದೊಳಗಿನ ಈ ನವೋದಿತ ಹಿಂದುಜಾನಪದವು ಪ್ರತ್ಯಕ್ಷವಾಗಿ ತೋರಿಸಿಕೊಟ್ಟಿದೆ! ಅಂಡಮಾನದಲ್ಲಿ ಕಳೆದ ಐವತ್ತು ವರ್ಷ ಎಲ್ಲ ಹಿಂದು ಜಾತಿಗಳೂ, ಎಲ್ಲ ಪ್ರಾಂತಿಕ ವರ್ಗಗಳೂ ಒಂದುಗೂಡಿ ಒಟ್ಟಾಗಿ ಬೆಳೆದಿರುತ್ತವೆ. ದೊಡ್ಡ ಪ್ರಮಾಣದಿಂದ ಅಸ್ಪೃಶ್ಯತೆಯ ಬೇಡಿಯು ಕಳಚಿಹೋಗಿದೆ. ಅನ್ನ-ನೀರುಗಳನ್ನು ಪರಸ್ಪರರು ಸ್ವೀಕರಿಸಬಾರದೆಂಬದು ಸ್ಪರ್ಶವರ್ಗದಲ್ಲಾದರೂ ನೆನಪು ಕೂಡ

ಉಳಿದಿಲ್ಲ. ಬಂಗಾಲೀ, ಪಂಜಾಬೀ, ಮದ್ರಾಸೀ, ಮರಾಠೀ, ಕರ್ನಾಟಕೀ; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಯಾರು ಯಾರೆಂಬ ವಿಚಾರಗಳು ಕೂಡ ಮಾಯವಾಗಿ ಹೋಗಿವೆ. ಕೇವಲ ಸ್ಪೃಶ್ಯಹಿಂದುಗಳೆಲ್ಲರಂತೂ ಒತ್ತಟ್ಟಿಗೆ ಉಣ್ಣುವರು; ಮತ್ತು ಅಸ್ಪೃಶ್ಯರಾದರೂ ಹಾಗೆಯೇ. ಈಗ ಮಿಶ್ರವಿವಾಹಗಳು ಭೇದಭಾವವಿಲ್ಲದೆ ನಡೆದಿರಲು, 'ಬೇಟೀ ಬಂದಿ'ಯು ನಿರ್ಮೂಲವಾಗಿ ಜಾತಿಯ ಹೆಸರೇ ಅವಶೇಷವಾಗಿಲ್ಲ! ನಿಮ್ಮ ಕುಟುಂಬವನ್ನೇ ನೋಡಿರಿ. ನೀವು ಮಹಾರಾಷ್ಟ್ರೀಯ ಬ್ರಾಹ್ಮಣರು; ನಿಮ್ಮ ಹೆಂಡತಿ ಕ್ಷತ್ರಿಯ ಕನ್ಯೆಯು ಇಂಥ ನಿಮ್ಮ ಉಭಯತರ ಉದರದಲ್ಲಿ ಜನಿಸಿದ ನಿಮ್ಮ ಮಗನು ಬಂಗಾಲೀ ಕಾಯಸ್ಥರ ಮಗಳೊಡನೆ ಲಗ್ನವಾದನು! ಇನ್ನು ಈ ನಿಮ್ಮ ಮೊಮ್ಮಕ್ಕಳದು ಹಿಂದುವೆಂಬುದೊಂದೇ ಜಾತಿಯು! ಅದಿರಲಿ. ಈ ಸಮ್ಮಿಶ್ರ ರಕ್ತಬೀಜದ ಈ ಮೊಮ್ಮಕ್ಕಳಾವರೂ-ಈ ಉಷೆ-ಮೋಹನರು-ಎಷ್ಟು ಚಪಲರು, ಸುರೂಪಿಗಳು, ಸುಶೀಲರು ಆಗಿರುವರು? ಮೈಸೂರು, ಮುಂಬಯಿ, ಕಲ್ಕತ್ತೆ, ಲಾಹೋರಗಳಲ್ಲಿಯ ಯಾವ ಶಾಲೆಗಳೊಳಗಿನ ಹುಡುಗರಲ್ಲೊಯ್ದು ಬಿಟ್ಟರೂ, ಇವರು ಮೊದಲಿನ ಐದು ನಂಬರುಗಳಲ್ಲಿಯೇ ಮಿನುಗತಕ್ಕವರು! ಜಾತಿ-ಗೋತ್ರಗಳನ್ನು ಬಿಟ್ಟು ಸಮ್ಮಿಶ್ರ ವಿವಾಹ ಮಾಡಿದರೆ, ಸಂತತಿಯು ನಿಕೃಷ್ಟವೇ ಆಗುವದೆಂಬ ಭೀತಿಯು ಖೊಟ್ಟಿಯಿದೆ, ಎಂಬದು ಅಂಡಮಾನದೊಳಗಿನ ಹಿಂದುಜಾನಪದವು ಸಪ್ರಯೋಗದಿಂದ ಸಿದ್ಧಮಾಡಿ ತೋರಿಸಿರುತ್ತದೆ."

"ಭಾಷೆಯ ದೃಷ್ಟಿಯಿಂದಲೂ ಅಂಡಮಾನವು ಮತ್ತೊಂದು ಅಭಿನಂದನೀಯವಾದ ಯಶಸ್ವೀ ಪ್ರಯೋಗವನ್ನು ಮಾಡಿ ತೋರಿಸಿರುತ್ತದೆ! ಇಲ್ಲಿಯ ಎಲ್ಲ ಹಿಂದೂ ಜಾನಪದದ ಭಾಷೆಯು ಹಿಂದಿಯೊಂದೇ ಆಗಿದೆ. ಇಲ್ಲಿಯ ತರುಣ ಪೀಳಿಗೆಯ ಮಾತೃಭಾಷೆಯೇ ಹಿಂದೀ!"

"ಆದರೆ ಅಪ್ಪಾಜಿ, ಸರಕಾರೀ ಧೋರಣದ್ದೊಂದುಮಾತ್ರ ಬಹು ದೊಡ್ಡ ತಪ್ಪಾಗಿರುತ್ತದೆ. ಅದಾವುದೆಂದರೆ, ಹಿಂದೀ ಬಾಲ-ಬಾಲಿಕೆಯರಿಗೂ ಎಲ್ಲ ಶಿಕ್ಷಣವು ಉರ್ದು ಲಿಪಿಯಲ್ಲೇ ಒತ್ತಾಯದಿಂದ ಕೊಡಲಾಗುತ್ತದೆ. ಈ ಬಗ್ಗೆ ಚಲನವಲನವನ್ನೆಬ್ಬಿಸಿ, ನಾಗರಿ ಲಿಪಿಯೇ ಅಂಡಮಾನದೊಳಗಿನ ಬರಿಯ ಹಿಂದುಗಳ ಜಾನಪದದ್ದಾದರೂ ಏಕಮೇವ ಲಿಪಿಯನ್ನಾಗ ಮಾಡಬೇಕು. ಸರಕಾರೀ ಬರೆಹ ಹಾಗು ಶಾಲಾ ಶಿಕ್ಷಣ ಇವುಗಳನ್ನು ಉರ್ದುದಲ್ಲಿಯೇ ನಡೆಯಿಸುವ ಸರಕಾರೀ ಧೋರಣದ ಹಟವು ನಿಂದ್ಯವಾಗಿದೆ. ಅಂಡಮಾನದಲ್ಲಿ ಇಂಥ ಹಲವು ಸುಧಾರಣೆ ಮಾಡುವದೂ, ಇಲ್ಲಿಯ ಹೊಸ ಸ್ವತಂತ್ರ ಪೀಳಿಗೆಗೆ ತಮ್ಮ ಗುಣಗಳ ವಿಕಸನಕ್ಕೆ ಅನುಕೂಲವಾದ ಪರಿಸ್ಥಿ

ಯನ್ನು ಲಭಿಸಿಕೊಡುವುದೂ ಈ ಎರಡೂ ಕಾರ್ಯ ಸಾಧಿಸುವದಕ್ಕಾಗಿ ಕೆಲ ಜನ ತ್ಯಾಗೀ ಪುರುಷರು ಇದೇ ವಸಾಹತಿಯ ಉತ್ಕರ್ಷದ ಪ್ರಶ್ನೆಗೆ ಟೊಂಕ ಕಟ್ಟುವದು ಅವಶ್ಯವಾಗಿದೆ,''

"ಹಾಂ, ಕಂಟಕಬಾಬು, ಇಲ್ಲಿಯೇ ಈ ನಮ್ಮ ಚರ್ಚೆಯ ಎಳೆಯು ನಮ್ಮ ಈ ಸಂಭಾಷಣದ ಪ್ರಾರಂಭದ ನನ್ನ ವಿಧೇಯಕ್ಕೆ ತೊಡಕಿಕೊಂಡಿದೆ! ಈ ಅಂಡಮಾನದ ವಸಾಹತಿಯಲ್ಲಿ ನಿರ್ಮಾಣವಾದ ಯಾವ ಇದೊಂದು ಹೊಸ ಜಾನಪದವಿದೆಯೋ, ಇದು ನಮ್ಮ ಹಿಂದುಗಳ ಸಾಂಸ್ಕೃತಿಕ ಸಾಮ್ರಾಜ್ಯದಲ್ಲಿ ಒಂದು ಹೊಸ ಪ್ರದೇಶವನ್ನು ಗೆದ್ದುಕೊಂಡು ಸೇರಿಸಿದಂತೆ ಮಹತ್ವದ್ದಾಗಿದೆಯೆಂಬದು ನಿಮಗೆಮಾನ್ಯವಾಗಿದ್ದರೆ, ಈ ಹೊಸ ವಸಾಹತಿಗಳ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗು ಸಾಂಸ್ಕೃತಿಕ ಉತ್ಕರ್ಷ ಮಾಡತಕ್ಕ ಕಾರ್ಯವನ್ನು ತಮ್ಮ ಜೀವನದ ಧ್ಯೇಯವೆಂದು ಗೊತ್ತು ಮಾಡುವುದೇನು ರಾಷ್ಟ್ರಸೇವೆಯಲ್ಲವೇ? ಒಬ್ಬಾನೊಬ್ಬ ನನ್ನ ನಿಮ್ಮಂತಹ ಬಂದಿವಾಸಗ್ರಸ್ತನ ಆಯುಷ್ಯದ ಮಹತ್ವಾಕಾಂಕ್ಷೆಯಾಗಲಿಕ್ಕೆ ಆ ಧ್ಯೇಯವೇನು ಸಾಕಷ್ಟು ಮಹನೀಯವಲ್ಲವೆ? ಅಂದಮೇಲೆ ನೀವು ಅದನ್ನೇ ನಿಮ್ಮ ಜೀವನದ ಇತಿಕರ್ತವ್ಯವೆಂದೇಕೆ ತಿಳಿಯುವದಿಲ್ಲ? ಕಂಟಕಬಾಬು, ಇನ್ನು ಐದು ವರ್ಷಗಳಿಗೆ ನೀವು 'ದಾಖಲೆ' ಪಡೆದು ಸ್ವಲ್ಪ ಸ್ವತಂತ್ರರಾದೀರಿ ಈ ವಸಾಹತಿಯಲ್ಲಿ ಶಾಲೆ, ದೇವಾಲಯ, ಸಂಸ್ಥೆ, ಸಂಘಟನ ಇವುಗಳ ಕೊರತೆಯು ಇದೆ ಅದನ್ನು ನೀವು ದೊರೆಕಿಸಿಕೊಳ್ಳಿರಿ ನಮ್ಮಲ್ಲಿಯ ಈ ಕಿಶನಶೇಟರ ಉದಾಹರಣೆ ನೋಡಿರಿ. ಅವರಾದರೂ ಜೀವಾವಧಿಯ ಶಿಕ್ಷೆಗಾಗಿ ಕೈಕಾಲುಗಳಲ್ಲಿ ಬೇಡಿಗಳನ್ನು ಧರಿಸಿಕೊಂಡೇ ಇಲ್ಲಿಗೆ ಬಂದವರು! ಆದರೆ 'ದಾಖಲೆ' ಪಡೆದು, ನಂತರ ಟೆಂಗಿನ ದೊಡ್ಡ ದೊಡ್ಡ ತೋಟಗಳನ್ನು ಮಾಡಿ, ಚಹದ ತೋಟಗಳನ್ನು ಬೆಳೆಸಿ ಲಕ್ಷಾಧೀಶರಾದರು; ಮತ್ತು ಅವರು ನನ್ನ ಸಲಹೆಯ ಮೇರೆಗೆ ಸಹಸ್ರಾವಧಿ ರೂಪಾಯಿಗಳನ್ನು ಈ ಅಂಡಮಾನದಲ್ಲಿ ಹುಟ್ಟಿದ ಸ್ವತಂತ್ರ ಹಿಂದೂ ತರುಣರನ್ನು ಹೊಟ್ಟೆಯ ಉದ್ಯೋಗಕ್ಕೆ ಹಚ್ಚುವ ಕೆಲಸದಲ್ಲಿ, ಶಾಲೆಯ ಕಟ್ಟಡಗಳನ್ನು ಕಟ್ಟಿಸಿಕೊಡಲಿಕ್ಕೆ, ಅಖಿಲ ಹಿಂದುಗಳದೊಂದು ದೇವಾಲಯ ಸ್ಥಾಪಿಸಲಿಕ್ಕೆ, ಶಿಷ್ಯವೃತ್ತಿ ಕೊಡಲಿಕ್ಕೆ, ಧರ್ಮಾರ್ಥ ಔಷಧಾಲಯ ನಡೆಯಿಸಲಿಕ್ಕೆ ದಾನ ಮಾಡಿರುತ್ತಾರೆ! ಪಂಡಿತರು, ಪುರಾಣಿಕರು, ಚಿಕಿತ್ಸಕರು, ಮುಂದಾಳುಗಳು ಮುಂತಾದವರದು ಇಲ್ಲಿ ಹೆಚ್ಚಾಗಿ ಕೊರತೆಯಿದೆ. ಅದನ್ನು ನೀವು ನೀಗಿಸಿರಿ. ಈ ವಸಾಹತು ಹಿಂದುಸ್ತಾನದ, ಹಿಂದು ಸಾಮ್ರಾಜ್ಯದ ಒಂದು ಬಲಿಷ್ಠವಾದ ಸಾಮುದ್ರಿಕ ದುರ್ಗವೆಂದು ಜೀವಾವಧಿ

ಶಿಕ್ಷೆಯು ನೀವೆಲ್ಲರೂ ಸೇರಿ ಮಾಡಿಬಿಡಿರಿ! ಈ ಕಾರ್ಯಕ್ಕಾಗಿ ಸಹಸ್ರಾವಧಿ ಜೀವನಗಳು ಸವೆದರೂ, ನಶಿಸಿದರೂ ವ್ಯರ್ಥವಾಯಿತೆಂದು ಹೇಳಲಿಕ್ಕಾಗದು!!

"ಅಪ್ಪಾಜೀ, ನೀವನ್ನುವುದೇ ನಿಜ. ಸಾಮುದ್ರಿಕ ದುರ್ಗದ ಬಗ್ಗೆಯೇ ಅಂದರೆ, ನಾನು ಅಂಡಮಾನದಲ್ಲಿಳಿದ ಕೂಡಲೆ ಈ ದ್ವೀಪದೊಳಗಿನ ಆ ಸಾಮುದ್ರಿಕ ಮಹತ್ವವು ಆಗಲೆ ನನ್ನ ಲಕ್ಷ್ಯದಲ್ಲಿ ಬಂದಿತ್ತರೀ‌ಽ! ಕೋಟೆ-ಕೊತ್ತಳಗಳಿಂದ, ಶಸ್ತ್ರಾಸ್ತ್ರ ಸಾಮುಗ್ರಿಗಳಿಂದ ಸುಸಜ್ಜವೂ, ಯಾವುದೊಂದು ಉಕ್ಕಿನ ಕವಚದಂತೆ ದುರ್ಭೇದ್ಯವೂ ಆದ ಈ ಅಂಡಮಾನ ದ್ವೀಪದ್ದೇ ಒಂದು ಪ್ರಚಂಡ ಜಲದುರ್ಗವನ್ನು ಮಾಡಿಬಿಟ್ಟರೆ, ಹಿಂದುಸ್ತಾನದ ಪೂರ್ವ ಸಮುದ್ರದೊಳಗೆ ಶತ್ರುಗಳ ನೌಬಲದ ದಾರಿಯಲ್ಲಿ ಇದೊಂದು ಪ್ರಾಣ ಹೀರುವ ಸುರಂಗವೇ ಆಗಿಬಿಟ್ಟೀತು. ಈ ಸಶಸ್ತ್ರವೂ ಕೋಟೆ-ಕೊತ್ತಳಗಳಿಂದ ಯುಕ್ತವೂ ಆದ ದ್ವೀಪವೆಂದರೆ, ನಮ್ಮ ಪೂರ್ವಸಮುದ್ರದ ಅಗಸೆಯ ಮೇಲಿರಿಸಿದ ಒಂದು ಮಹಾಕಾಲೀ ತೋಫೇ ಸರಿ!"

"ಯುರೋಪದ ವೃತ್ತಗಳಿಂದ ನಾವು ಈಗ ಮನುಷ್ಯನಿಗೆ ವಿಮಾನದ ವಿದ್ಯೆಯು ಹಸ್ತಗತವಾಯಿತೆಂದೇ ತಿಳಿಯುತ್ತೇವೆ. ಇಂದಿಗೆ ಯುದ್ಧದ ವಿಮಾನಗಳು ತೀರ ವಿರಲವಾಗಿದ್ದರೂ, ಇಪ್ಪತ್ತು-ಇಪ್ಪತ್ತೈದು ವರ್ಷಗಳಿಗೆ ದೊಡ್ಡದೊಡ್ಡ ಯುದ್ಧದ ವಿಮಾನಗಳ ಹಾಗು ಪ್ರಯಾಣಿಕರ ವಿಮಾನಗಳ ತಂಡಕ್ಕೆ ತಂಡಗಳೇ ಆಕಾಶದಲ್ಲಿ ವಿಹರಿಸತೊಡಗುವವೆಂಬದಕ್ಕೇನೂ ಸಂದೇಹವಿಲ್ಲ. ಅದರಿಂದ ಮುಂದೆ ಈ ಅಂಡಮಾನ ದ್ವೀಪವೆಂದರೆ, ಹಿಂದುಸ್ತಾನದ ಪೂರ್ವ ಸಮುದ್ರದ ಮೇಲೆ ಪಹರೆ ಮಾಡುವದೊಂದು ಯುದ್ಧದ ವಿಮಾನಗಳ ಶಿಬಿರವೇ ಆಗದಿರದು! ಆ ಮೇಲೆ ಸಾಂಸ್ಕೃತಿಕ, ಸಾಮುದ್ರಿಕ ಮತ್ತು ವೈಮಾನಿಕ ದೃಷ್ಟಿಯಿಂದ ಹೀಗೆ ವಿಶೇಷ ಮಹತ್ವದ್ದಾಗಿರುವ ಈ ವಸಾಹತನ್ನು ನಿರ್ಮಿಸುವ, ಇರಿಸುವ ಹಾಗು ಬೆಳಿಸುವ ಕೆಲಸದಲ್ಲಿ ಯಾವ ಸಹಸ್ರಾವಧಿ ದುರ್ದೈವೀ ಹಿಂದೀ ದಂಡಿತರ ಯಾತನೆ, ಕಷ್ಟ, ರಕ್ತ ಹಾಗು ಜೀವಿತ ಇವು ಇಂದಿಗೆ ಐವತ್ತುವರ್ಷಗಳಿಂದ ಖರ್ಚಾಗುತ್ತಿದ್ದುದು ರಾಷ್ಟ್ರಕಾರ್ಯಕ್ಕಾಗಿಯೇ ಆಯಿತು; ಪಾಪಿಗಳ ರಕ್ತವೂ ಪುಣ್ಯಕ್ಕಾಗಿಯೇ ಹರಿಸಲ್ಪಟ್ಟಿತು ಎಂದೆನ್ನಬೇಕಾಗುವದು! ಇನ್ನು ಮುಂದೆಯೂ ಯಾರಿಗೆ ಇಲ್ಲಿಯೇ ಇರುವದು ಅವಶ್ಯವೂ, ಆ ಜೀವಾವಧಿ ದಂಡಿತರು ತಮ್ಮ ಜೀವನವನ್ನು ಅದಕ್ಕಾಗಿಯೇ ವೆಚ್ಚ ಮಾಡಬೇಕು. ಇದೇ ಅವರ ಅಪರಿಹಾರ್ಯವಾದ ಧರ್ಮವಾಗಿದೆ!"

"ಇದೆಲ್ಲ ನನಗೂ ಸಮ್ಮತವು. ಅಪರಿಹಾರ್ಯವಾದರೆ, ಬೇರೆ ಮಾರ್ಗವು ಅಶಕ್ಯತರವು. ಜೀವಾವಧಿ ಶಿಕ್ಷಿತರು ತಮ್ಮ ಜೀವನದ ಸಾರ್ಥಕತೆಯನ್ನು

ಈ ವಸಾಹತಿಯ ಲೋಕಸೇವೆಯಲ್ಲಿಯೋ ಮಾಡಿಕೊಳ್ಳಬೇಕು; ಆದರೆ ನನ್ನ ಮಟ್ಟಿಗಾದರೂ ಎರಡನೇ ಮಾರ್ಗವೇ ನನಗೆ ಶಕ್ಯವಿದೆ. ನಾನಂತೂ ಕರಿನೀರಿನಿಂದ ಓಡಿಹೋಗುವ ಯಶ ದೊರಕಿಸಿಕೊಳ್ಳತಕ್ಕವನೇ ಎಂದು ನನಗೆ ನಿಶ್ಚಿತವಾಗಿ ತೋರುತ್ತದೆ. ನನ್ನ ಕಾರಣಗಳನ್ನು ನಾನು ನಿಮಗೆ ಈ ಮೊದಲಿನ ಭೆಟ್ಟಿಯ ಕಾಲಕ್ಕೆ ತಿಳಿಸಿರುತ್ತೇನೆ. ಅದರಲ್ಲೂ ಈ ನನ್ನ ಭಗಿನಿಯು ಐದು ವರ್ಷವಂತೂ ಬಿಡಿರಿ; ಆದರೆ ಇನ್ನು ಐದು ತಿಂಗಳು ಕೂಡ ಬಂದಿವಾಸದಲ್ಲಿ ಜೀವದಿಂದಿರಲಿಕ್ಕೆ ಇಚ್ಛಿಸುವದಿಲ್ಲ. ಹುಚ್ಚಿನವೇ ಅನ್ನಿರಿ; ಆದರೆ ಆಕೆಯು ಆ ಆತ್ಮಘಾತದ ಹುಚ್ಚು ಲಹರಿಗೆ ತುತ್ತಾಗಿರುತ್ತಾಳೆ. ಒಂದುವೇಳೆ ನನಗೆ ಯಶ ದೊರೆತರೆ, ನಾನು ಸ್ವದೇಶಕ್ಕೆ ಈ ವರ್ಷ ಮುಗಿಯುವಷ್ಟರಲ್ಲಿ ತಲುಪಿದರೆ ಮತ್ತು ನನಗೆ ಅಲ್ಲಿ ನನ್ನ ಆಯುಷ್ಯವನ್ನು ಇಲ್ಲಿಯ ಈ ಧ್ಯೇಯಕ್ಕಿಂತಲೂ ಮಹನೀಯವಾದ ಧ್ಯೇಯಕ್ಕೆ ತೊಡಗಿಸಲು ದೊರೆತರೆ, ನನ್ನ ಗುಣಗಳ, ಶಕ್ತಿಯ ಮತ್ತು ಜೀವನದ ವಿಕಾಸವು ಇಲ್ಲಿ ಎಂದಿಗೂ ಆಗಲಾರದಷ್ಟು ಆಗಿ, ಅದು ಸದ್ವ್ಯಯವಾಗಲು ಶಕ್ಯವಾನರೆ, ಆ ಮೇಲಾದರೂ ನನ್ನ ಈ ಸಾಹಸವು ತಪ್ಪಾದದ್ದೆಂತಾಗಲಾರದಷ್ಟೆ?''

''ಇಲ್ಲ. ಇಷ್ಟೇ ಅಲ್ಲ. ನಿಮಗೆ ಯಶ ದೊರೆಯಲೆಂದು ನಾನು ದೇವರನ್ನು ಕುರಿತು ಪ್ರಾರ್ಥಿಸುತ್ತೇನೆ; ಆದರೂ ನಿಮ್ಮ ಆ 'ಒಂದುವೇಳೆ ಆದರೆ' ಎಂಬದು ಮಹಾ ದುರ್ಘಟವೇ ಆಗಿದೆ ಇರಲಿ. ನೀವು ಮಾಡಿದ ಯೋಜನೆಯು ಅಪೂರ್ಣವಾಗಿತ್ತು. ನಿಶ್ಚಿತ ಸಂಧಿಯು ಯಾವಾಗ? ಅದನ್ನು ನೀವು ಹೇಗೆ ಸಾಧಿಸತಕ್ಕವರು, ಇದನ್ನೆಲ್ಲ ನಿರ್ಧರಿಸಿರುವಿರೇನು?''

''ಇಲ್ಲ; ಆದರೆ ಅನುಸೂಯಾಬಾಯಿಯು ಕಂಟಕಿಗೆ ನಾನು ತಿಳಿಸಿರುವಲ್ಲಿ ಕೆಲಸವನ್ನು ಹಚ್ಚಿಕೊಟ್ಟಿರುತ್ತಾರೆ. ಸ್ತ್ರೀ ಬಂದಿಗೃಹದ ಹೊರಗಡೆಗೆ ವಿವಾಹೇಚ್ಛು ಸ್ತ್ರೀ-ಪುರುಷ ದಂಡಿತರು ಪರಸ್ಪರರ ಪರಿಚಯ ಮಾಡಿಕೊಳ್ಳುವ, ಇದ್ದದ್ದರಲ್ಲಿಯೇ ಯಾವ ಬಿಡುವಿನ ಸ್ಥಳವಿದೆಯೋ ಅಲ್ಲಿಯ ಕಸ ಗೂಡಿಸುವ ಕೆಲಸವನ್ನು ಅವಳಿಗೆ ಹಚ್ಚಿರಲು, ಕಂಟಕಿಯು ನಿಶ್ಚಿತ ವೇಳೆಗೆ ಬಂದಿಗೃಹದಿಂದ ಹೊರಬಿದ್ದು ಅಲ್ಲಿಗೆ ಬರ-ಹೋಗುವಳು ಅಲ್ಲಿ ನನಗೂ ಆಕೆಗೂ ದೃಷ್ಟಾದೃಷ್ಟಿ ಕೂಡ ಆಯಿತು. ಬಹುಶಃ ಭೆಟ್ಟಿಯೂ ಆದೀತು. ಆ ಮೇಲೆ ಏನೆಂಬದನ್ನು ನಿರ್ಧರಿಸಬೇಕೆನ್ನುತ್ತೇನೆ; ಆದರೂ ಕೂಡ ಯೋಗ್ಯ ಸಂಧಿ ಸಾಧಿಸುವವರೆಗೆ ಸುಮ್ಮನೆ ಅವಸರಪಡಲಿಕ್ಕಿಲ್ಲ. ಒಳ್ಳೇದು. ಇಂದು ಅನುಸೂಯಾಬಾಯಿಯು ನೆರೆಹಳ್ಳಿಗೆ ಹೋಗಿರುವರೆಂಬದು ಮೋಹನನಿಂದ ತಿಳಿಯಿತು. ಅಂದಬಳಿಕ ಅವರ ಭೆಟ್ಟಿಯು............''

"ಈಗೇನೂ ಆಗಲಿಕ್ಕಿಲ್ಲೆಂಬದು ನಿಜವೇ! ಬಹುಶಃ ನಾಳೆಂಯೇ ಬಂದಾಳವಳು. ನೀವು ಹೊರಡುವ ವೇಳೆಯು ಆಗಲಿಲ್ಲವೇ? ನಿಮ್ಮ ಈ ಕಟ್ಟಿನ ಬಗ್ಗೆ ನಿಮಗೆ ಇನ್ನೂ ಹಲವು ಬಗೆಯಿಂದ ಕೇಳಬೇಕೆಂದೆನಿಸುತ್ತದೆ; ಆದರೆ ಸಮಯವೆಲ್ಲಿದೆ? ಮತ್ತು ಅಂಥ ಚರ್ಚೆಯು ಸುರಕ್ಷಿತವೂ ಆಗಿರುವುದಿಲ್ಲ. ಇನ್ನು ನೀವು ಇಲ್ಲಿಗೆ ಬರ-ಹೋಗುವದು ನಿಮಗೂ ನಮಗೂ ಕೂಡಿಯೇ ಸುರಕ್ಷಿತದ್ದಲ್ಲ"

"ಅಪ್ಪಾಜಿ, ಅಹುದು!" ಎಂದು ಕಂಟಕನು ಅಂದನು; ಆದರೆ ಯಾವ ವಿಚಾರವನ್ನು ಆತನು ಹೇಳಬೇಕೆಂದಿದ್ದನೋ, ಅದರಿಂದಲೇ ಆತನ ಕುತ್ತಿಗೆ ಬಿಗಿದು ಬಂದಿತು. ದನಿಯು ಕುಗ್ಗಿತು. ಅದರಿಂದ ಅವನು ಮತ್ತೆ "ಅಪ್ಪಾಜೀ, ಈ ಬೇನೆಗಾಗಿ ನೀವೂ, ಈ ಸಾಹಸಕ್ಕಾಗಿ ನಾನೂ ಮೃತ್ಯುವಿನ ದವಡೆಯಲ್ಲಿ ಯಾವಾಗ ಸಿಗುವೆವೋ, ಎಂಬ ಬಗ್ಗೆ ಇನ್ನು ಒಂದು ಕ್ಷಣದ ಭರವಸೆಯೂ ಇರುವುದಿಲ್ಲ; ಆದರೆ ಅಪ್ಪಾಜೀ, ಒಂದುವೇಳೆ ನಾನು ಈ ಕರಿನೀರ ನೆಲಮನೆಯಿಂದ ಹೊರಬೀಳುವವೇ ಶಕ್ಯವಾದರೆ, ಜೀವನದ ನಿರ್ಮುಕ್ತವಾಯುವನ್ನು ಮತ್ತೆ ಶ್ವಾಸೋಚ್ಛ್ವಾಸ ಮಾಡಲು ಶಕ್ತನಾದರೆ, ನನಗೆ ಸ್ವದೇಶದಲ್ಲಿ ನಿರ್ಭಯತೆಯಿಂದ ಜೀವಿಸ ದೊರೆತರೆ, ಸ್ವದೇಶದಲ್ಲಿ ಹಾಗೆ ಇರಲಿಕ್ಕೆ ಬಾರದಿದ್ದರೆ ಯುರೋಪ-ಅಮೇರಿಕೆಗಳಂತಹ ಯಾವುದೊಂದು ವಿದೇಶದಲ್ಲಿ ಎಲ್ಲಿದ್ದರೂ ಅಲ್ಲಿಂದ ಈ ನಿಮ್ಮ ಮೊಮ್ಮಕ್ಕಳ ಚಿಂತೆಯನ್ನು ನನ್ನ ಹೊಟ್ಟೆಯ ಮಕ್ಕಳ ಹಾಗೆಯೇ ಮಾಡೇನು! ಅನುಸೂಯಾಬಾಯಿಯು-ಬಂದಿವಾಸದೊಳಗಿನ ಆ ನನ್ನ ಅಕ್ಕನು-ನನ್ನಂಥ ದುರ್ದೈವಿಗೆ, ಸಂಕಟಗ್ರಸ್ತನಿಗೆ, ದರಿದ್ರನಿಗೆ, ಭ್ರಾತೃದ್ವಿತೀಯೆಯಲ್ಲಿ ಯಾವಳು ನನ್ನನ್ನು ಆರುತಿ ಮಾಡಿ ಆಶೀರ್ವದಿಸಿದಳೋ, ಅವಳಿಗೆ ನನ್ನ ಪಾಲಿಗೆ ಎಂದಾದರೂ ಸುದೈವದ ಭ್ರಾತೃದ್ವಿತೀಯೆಯು ಪ್ರಾಪ್ತವಾದರೆ ನನ್ನ ಪ್ರೇಮದ ಹಾಗು ಸಹಾಯ್ಯದ ವಿಶೇಷವಾದ ಪಾರಿತೋಷಕವನ್ನು ನನ್ನ ಖಾಸ ಅಕ್ಕನಿಗಿಂತಲೂ ಹೆಚ್ಚಾಗಿ ಕೊಡದ ಹೊರತು ನಾನೆಂದಿಗೂ ಬಿಡುವವನಲ್ಲ. ಇನ್ನು ಹೊರಡುವೆನು; ಈಗ ನಾನು ಹೊರಡಲೇಬೇಕು."

ಕಂಟಕನು ಎದ್ದನು; ಏಳು-ಏಳುತ್ತಲೆ ಆತನು ಅಪ್ಪಾಜಿಗೆ ನಮಿಸಿದನು; ಹಾಗು ಅವರ ಕಡೆಗೆ ಕೆಲಹೊತ್ತು ಸುಮ್ಮನೆ ನೋಡುತ್ತ ನಿಂತನು; ಹೊರಡುವ ಸಲುವಾಗಿ ತಿರುಗಿದನು ಸಹ; ಆದರೆ ಮತ್ತೆ ಹೊರಳಿ ನಿಂತು 'ಅಪ್ಪಾಜಿ, ಈ ಲೋಡಿಗೆ ಆತು ತುಸ ಸಾವರಿಸಿಕೊಂಡು ಕೂಡ್ರುವಿರೇನು? ಕಾಲುಗಳನ್ನು ತುಸ ಮುಂದಕ್ಕೆ ಚಾಚಿರಿ; ಇಲ್ಲ, ಇಲ್ಲ, ಚಾಚಲೇಬೇಕು."

ರುಗ್ಣಶಯ್ಯೆಯಲ್ಲಿ ಜರ್ಜರಿತನಾಗಿ ಬಿದ್ದುಕೊಂಡಿದ್ದ ಆ ವೃದ್ಧ ವೀರ

ನ್ನು ಹಾಗೆ ಕೂಡ್ರಿಸಿ ಕಂಟಕನು ಆತನ ಚರಣಗಳನ್ನು ತನ್ನ ಕೈಯಿಂದಲೇ
ಳ್ಳೇ ವ್ಯವಸ್ಥಿತವಾಗಿ ಹೊದಿಕೆಯ ಹೊರಗೆ ಇರಿಸಿದನು; ಮತ್ತು ಅವುಗಳ
ಮೇಲೆ ತನ್ನ ಶಿರವನ್ನಿರಿಸಿ. ಅವನಿಗೆ ಸಾಷ್ಟಾಂಗ ನಮಸ್ಕರಿಸಿದನು!

"ಅಪ್ಪಾಜೀ, ಈ ಅಂಡಮಾನದ ವಸಾಹತು ಹಿಂದೂ ರಾಷ್ಟ್ರಕ್ಕೆ ಎಷ್ಟು
ಉಪಯುಕ್ತವಾಗಿದೆಯೆಂಬದನ್ನು ನೀವು ಆಗಲೆ ಹೇಳುತ್ತಿದ್ದಿರಲ್ಲವೆ? ಈ ದ್ವೀ
ಪವು ವೈಮಾನಿಕ ಮತ್ತು ಸಾಮುದ್ರಿಕ ಠಾಣ್ಯವಾಗಲಿಕ್ಕೆ ಒಳ್ಳೇ ಮಹತ್ವ
ದ್ದಾಗಿದೆ. ಇಲ್ಲಿಯೊಂದು ಹೊಸ ಹಿಂದು ಜಾನಪದವು ನಿರ್ಮಾಣವಾಗುತ್ತ
ಲಿದೆ. ಟೆಂಗಿನ ದೊಡ್ಡ ದೊಡ್ಡ ತೋಟಗಳು, ಚಹದ ತೋಟಗಳು, ರಬ್ಬ
ರದ ತೋಟಗಳು, ಪ್ರಚಂಡ ವೃಕ್ಷಗಳುಳ್ಳ ವಿಸ್ತೀರ್ಣವಾದ ಅಡವಿಯೊಳಗಿನ
ನಾನಾ ಬಗೆಯ ಮುಟ್ಟುಗಳಾಗುವ ಕಟ್ಟಿಗೆಯ ಅಗಣಿತ ಪ್ರಾಪ್ತಿ ಇದೆಲ್ಲ
ರಾಷ್ಟ್ರೀಯ ಸಂಪತ್ತು ಮಹತ್ವದ್ದಾಗಿದೆ. ಆದರೂ ಈ ಪ್ರಕಾರದ ಸಂಪತ್ತು
ಬೇರೆ ವಸಾಹತುಗಳಲ್ಲೂ ನಮ್ಮ ಹಿಂದು ರಾಷ್ಟ್ರಕ್ಕೆ ಲಭಿಸೀತು; ಆದರೆ ಯಾವ
ಸಂಪತ್ತು ಬೇರೆ ಯಾವ ವಸಾಹತಿಯಲ್ಲೂ ಲಭಿಸಲಾರದೋ, ಅಂಥ ಯಾವ
ಒಂದು ಸಂಪತ್ತು ಈ ಅಂಡಮಾನದಲ್ಲೇನೇ ಸಂಗ್ರಹಿಸಲ್ಪಟ್ಟಿದೆಯೋ ಮತ್ತು
ಈ ಭೂಮಿಯಲ್ಲೇ ಇಟ್ಟ ಆ ಯಾವ ಅಮೂಲ್ಯ ಠೇವಿನಸಲುವಾಗಿ ಬೇರೆ
ಯಾವ ವಸಾಹತುಗಳಿಗಿಂತಲೂ ಈ ಅಂಡಮಾನದ ಭೂಮಿಯೇ ನಮ್ಮ
ಹಿಂದು ರಾಷ್ಟ್ರಕ್ಕೆ ಹೆಚ್ಚು ಅಭಿಲಾಷಣೀಯವಾಗುವದಿದೆಯೋ, ಒಂದು ಕ್ಷೇತ್ರ
ದಂತೆ ಭಾಸವಾಗುವದಿದೆಯೋ, ಈ ಭೂಮಿಯೊಳಗಿನ ಆ ರಾಷ್ಟ್ರೀಯ ಸಂ-
ಪತ್ತು, ಈ ಭೂಮಿಯೊಳಗಿನ ಆ ನಮ್ಮ ಅನರ್ಘ್ಯ ಠೇವು ಎಂದರೆ, ನಿಮ್ಮ
ಹದಿನೆಂಟುನೂರಾ ಐವತ್ತೇಳನೇ ಇಸವಿಯ ಸಹಸ್ರಾವಧಿ ರಾಷ್ಟ್ರವೀರರಿಂದ ಈ
ಭೂಮಿಯಲ್ಲಿ ಹರಡಿದ್ದ ಬೂದಿಯೇ ಅಹುದು! ಹಿಂದುಸ್ಥಾನವು ಅಂಡಮಾನ
ವೆಂದು ಉಚ್ಚರಿಸಿದಾಗಲೇ ಎಲ್ಲಕ್ಕೂ ಮೊದಲಾಗುವ ಸ್ಮೃತಿಯೇ ಅದು!"

"ಆದರೆ-ಆದರೆ ಹೀಗೆನ್ನುವ ನೀನೇ ಮೊದಲನೇ ಹಿಂದುವು ಕಳೆದ
೫೦ ವರ್ಷಗಳಲ್ಲಿ ನನಗೆಭೇಟಿಯಾದವನು!" ಎಂದಂದು ಉದಾಸದ ನಿಟ್ಟುಸಿರು
ಗರೆಯುತ್ತ ಅಪ್ಪಾಜಿಯು:—"ಇಂಥ ನೆನಪು ತಕ್ಕೊಂಡು ಮಾಡುವುದೇನು?
ಎಲೋ, ಹಿಂದುಪದಪಾತಶಾಹಿಯ ಸಂತಾಜಿ, ಧನಾಜಿ, ಬಾಜಿ, ಚಿಮಣಾಜಿ,
ಭಾವು, ವಿಶ್ವಾಸ, ಮಲ್ಹಾರ, ಮಹದಾಜಿ ಪ್ರಭೃತಿ ಶತಾವಧಿ ವಿಜಯಿಸೇನಾನಿ
ಗಳ ಭಾಗ್ಯವಲ್ಲದಿದ್ದರೂ, ನಿರಾಶೆಯಲ್ಲೂ ಅಪಜಯದಲ್ಲೂ ನಿಜವಾದ ಪರೀಕ್ಷೆ
ಯಲ್ಲಿ ಉತ್ತೀರ್ಣವಾಗುವಂಥ ರಣಚಾಪಲ್ಯ, ಜಿಗುಟುತನ, ಶೌರ್ಯ, ಧೈರ್ಯ,
ಕಾರಸ್ಥಾನ, ಸಮಯ ಸಾಫಲ್ಯತೆ ಮತ್ತು ರಾಷ್ಟ್ರಭಕ್ತಿ ಇತ್ಯಾದಿ ಗುಣಗಳಿಂದ

ಇಂಗ್ಲಿಷರಂತಹ ಶತ್ರುಗಳಿಗೂ ಅತ್ಯಂತ ಜಡವಾಗಿದ್ದ ಆ ನಮ್ಮ ಹಿಂದುಪದ ಪಾತಶಾಹಿಯ ಶೀರ ಕೊನೆಯ ರಣಧುರಂಧರ ಸೇನಾಪತಿಯೆಂದರೆ, ತಾತ್ಯಾ ಟೋಪೇ! ಅವರು ಸ್ವರಾಜ್ಯಕ್ಕಾಗಿಯೂ ಸ್ವಾತಂತ್ರ್ಯಕ್ಕಾಗಿಯೂ ಎಲ್ಲಿ ಗಲ್ಲಿ ಗೇರಿಸಲ್ಪಟ್ಟರೋ, ಆ ಸ್ಥಳದಲ್ಲಿ ಅವರ ಸ್ಮೃತಿಯ ಒಂದು ಶಿಲೆಯನ್ನು ಕೂಡ ಯಾವ ಈ ಕೃತಘ್ನ ಪೀಳಿಗೆಯು ಇದುವರೆಗೂ ನಿಲ್ಲಿಸಿರುವದಿಲ್ಲವೋ, ಅವರಿಗೆ ಅಂಡಮಾನದಲ್ಲಿ ವಿಕೃತರಾಗಿ ಬೂದಿಯಾದಂಥ ನಮ್ಮ ಸೈನಿಕರ ನೆನಪೆಂತಾಗ ಬೇಕು? ಕಂಟಕಾ, ಯಾವ ದಿವಸ ಐವತ್ತೇಳರ ಅಸಿಲತೆಯು ಮುರಿ ಯಿತೋ, ಅಂದೇ ಹಿಂದುಸ್ತಾನದ ಆಶೆಯು ನಿರಾಶಾಮಯವಾಯಿತು!"

"ಇಲ್ಲ; ಅಪ್ಪಾಜಿ, ಹಾಗಾಗಿಲ್ಲ. ಇಂದಿಗೆ ಹಿಂದು ಜಾತಿಯು ಅಚೇತನ ವಾಗಿ ಬಿದ್ದುಕೊಂಡಿದ್ದರೂ, ಅದು ಮೂರ್ಛಾವಸ್ಥೆಯಾಗಿದೆ; ಮೃತ್ಯುವಲ್ಲ! ಇತಿಹಾಸವಂತೂ ಪ್ರತಿಜ್ಞಾಪೂರ್ವಕವಾಗಿ ಹೇಳುತ್ತಿರುವದೇನಂದರೆ, ಇಂಥ ಎಷ್ಟೋ ಸಲದ ಮೂರ್ಛೆಗಳ ತರುವಾಯ ಮತ್ತೆ ಎಚ್ಚತ್ತು ಎದ್ದೇಳುವಂಥ ಉಜ್ಜೀವಕ ಶಕ್ತಿಯು ಈ ಹಿಂದು ಜಾತಿಯಲ್ಲಿ ದೃಢಮೂಲಗೊಂಡಿದೆ ಯೆಂಬದು ಖಂಡಿತವು! ದಶಮುಖನಾದ ರಾವಣನು ಹೋದನು! ಶತಮುಖ ಗಳುಳ್ಳ ರಾವಣನೂ ಗತಿಸಿದನು!! ಅಪ್ಪಾಜೀ, ಈಗಿನ ದಿನಗಳೂ ಕಳೆಯು ಲಿಕ್ಕಿಲ್ಲೆಂದು ಅದಾರು ಅನ್ನುವರು? ಹೊಸ ಹೊಸ ವಿಕ್ರಮಾದಿತ್ಯರು ಅವ ತರಿಸಲಾರರೆಂದು ಹೇಗೆನ್ನಬೇಕು? ಕಿಂಬಹುನಾ, ಈ ನಿಮ್ಮಗಳ ಬೂದಿಯೇ ಅವರ ಅವತಾರಗಳಿಗೆ ಗೊಬ್ಬರವಾಗಿದೆ; ಜಾಮಿನಾಗಿದೆ."

"ತಥಾಸ್ತು!! ಎಂದಾದರೂ ಅಂಥ ಭಾಗ್ಯದ ದಿನವು ಮತ್ತೆ ನಿಜವಾ ಗಿಯೂ ಉದಯಿಸಿದರೆ, ಈ ಅಂಡಮಾನದಲ್ಲಿ ಹರಡಿದ್ದ ಈ ನಮ್ಮ ಬೂದಿಯು............"

"ಸಂಕಲಿತವಾಗ ಮಾಡಿ, ಅದರ ಮೇಲೆ ಈ ಕೃತಘ್ನ ಹಿಂದುರಾಷ್ಟ್ರವು ಒಂದು ಉತ್ತುಂಗವಾದ ಸ್ಮೃತಿಸ್ತೂಪವನ್ನು ನಿಲ್ಲಿಸೀತು! ಮತ್ತು ಈ ಪೂರ್ವ ಸಮುದ್ರದೊಳಗಿಂದ ಹೋಗುವ ಬರುವ ಪ್ರತಿಯೊಂದು ರಾಷ್ಟ್ರೀಯ ರಣ ನೌಕೆಯು ಆ ಸ್ಮೃತಿಸ್ತೂಪಕ್ಕೆ ತೋಫಿನ ರಣವಂದನೆಯನ್ನು ಮಾಡದ ಹೊರತು ಮುಂದೆ ಹೆಜ್ಜೆ ಇಕ್ಕಲಾರದು!!"

ಕಂಟಕನ ಈ ವಾಕ್ಯದೊಡನೆ ಈ ವೃದ್ಧವೀರನ ಮೈಮೇಲೆ ರೋಮಾಂ- ಚಗಳೆದ್ದವು; ಆತನ ಜರ್ಜರಿತವಾದ ದೇಹಯಷ್ಟಿಯು ಸತೇಜವಾಯಿತು; ಆತನ ಕಣ್ಣೆದುರಿಗೆ ಯಾವುದೊಂದು ಉತ್ತುಂಗ ಸ್ಮೃತಿಸ್ತೂಪವೇ ನಿಂತು ಕೊಂಡು ಕಾಣಹತ್ತಿದ ಹಾಗೆ, ಸುದೂರ ಆಕಾಶದಲ್ಲಿ ನೆಟ್ಟ ಆತನ ಅನಿಮೇಷ

ದೃಷ್ಟಿಯಿಂದ ಭಾಸವಾಯಿತು! ಒಂದೆರಡು ಕ್ಷಣಗಳಲ್ಲಿ ಆ ಬಿರಿನೋಟವನ್ನು ಆಕಾಶದಿಂದ ಕಂಟಕನ ಕಡೆಗೆ ಹೊರಳಿಸುತ್ತ, ಆ ವೃದ್ಧನು ಸಂಕಲ್ಪಸ್ವರ ದಿಂದ:—

"ಕಂಟಕ, ಐವತ್ತೇಳರ ಕ್ರಾಂತಿಯುದ್ಧದ ನಂತರ ಸಹಾನುಭೂತಿಯು ಮತ್ತು ನಮ್ಮ ರಾಷ್ಟ್ರದ ಪುನರುತ್ಥಾನದ ಸುಭವ್ಯ ಆಶೆಯು ನೆನಪು ಕೊಡು ವಂಥ ಈ ನುಡಿಗಳು ನಾಲ್ವತ್ತು ವರ್ಷಗಳ ಮೇಲೆ ಇಂದೇ ನನ್ನ ಕಿವಿಗೆ ಮತ್ತೆ ಬಿದ್ದಿವೆ! ಇದು ನೋಡು, ನನ್ನ ಹೃದಯದಲ್ಲಿ ತೀರ ಆಳವಾಗಿ ಮುಚ್ಚಿಟ್ಟ ಮೊದಲಿನ ಆಕಾಂಕ್ಷೆಗಳ ಊರ್ಮಿಯು ಯಾವುದೊಂದು ಬಿರುಗಾಳಿಯಂತೆ ನನ್ನ ರಕ್ತದ ಪ್ರತಿಯೊಂದು ಹನಿಯಲ್ಲೂ ಹೇಗೆ ಪುಟಿಯಹತ್ತಿದೆ? ಕಂಟಕಾ, ಇನ್ನು ನಾನು ಈ ಅನುಕೂಲ ಭಾವನೆಗಳ, ಈ ಅಲ್ಲೋಲ ಕಲ್ಲೋಲಗಳ ತೀವ್ರ ಗತಿಯನ್ನು ಸಹಿಸಲಾರೆನು."

ಇಷ್ಟರಲ್ಲಿ ಚೌಕಿಯ ರಹದಾರಿ ಕಟ್ಟಾಗುವ ಗಂಟೆಯು ದೂರದಲ್ಲಾಗು ತ್ತಿರುವದು ಕೇಳಿಸಹತ್ತಿತು. "ಗಂಟೆಯೆ?" ಎಂದಂದು ವೃದ್ಧವೀರನು ಚಮ ಕಿತನಾಗಿ "ಹೋಗು; ಕಂಟಕಾ, ಹೊರಟು ಹೋಗು. ಇಲ್ಲದಿದ್ದರೆ ಸಿಕ್ಕು ಬಿದ್ದೀ!" ಎಂದೆನ್ನಲು, ಕಂಟಕನು ಲಗುಬಗನೆ ಎದ್ದು, ಅಡಗುತ್ತ ಕುಗುತ್ತ ಆ ದಿನ್ನೆಯನ್ನು ಓಡುತ್ತಲೆ ಹತ್ತಿದನು.

ಮುಂದೆ ಒಂದೆರಡು ದಿನಗಳಲ್ಲೇ ಹದಿನೆಂಟುನೂರಾ ಐವತ್ತೇಳರ ಕ್ರಾಂತಿಯುದ್ಧದಲ್ಲಿ ಭಾಗವಹಿಸಿದ್ದಕ್ಕಾಗಿ ಜೀವಾವಧಿ ಕರಿನೀರಿಗೆಂದು ಕಳಿ ಸಲ್ಪಟ್ಟಿದ್ದ ಆ ಸಹಸ್ರಾವಧಿ ಹಿಂದು ಸೈನಿಕರೊಳಗಿನ ಆ ಕೊನೆಯ ವೀರ ವೃದ್ಧನಾದ ಅಪ್ಪಾಜಿಯ ಅಂತವೂ ಆಗಿ ಹೋಯಿತು!

ಅಂದು ಆತನ ಆ ಹಾಳು ಗುಡಸಿಲಿನಲ್ಲಿ ಆತನ ಸ್ಮರಣವನ್ನೀಯುತ್ತಿರು ವಂಥ ಆತನ ಮೊಮ್ಮಕ್ಕಳಾದ ಮೋಹನ ಉಷೆಯರಷ್ಟೇ ಉಳಿದಿದ್ದರು.

———

### ೧೬ನೇ ಪ್ರಕರಣ.

ಅಂಡಮಾನದ ಅಡವಿಯಲ್ಲಿ ಮನೆಯ ಮುಟ್ಟಿಗೆ ಉಪಯುಕ್ತವಾದಂಥ ಕಟ್ಟಿಗೆಯು ಬಹು ಚೆನ್ನಾದ್ದೂ ತಾಳಿಕೆಯುಳ್ಳದ್ದೂ ಹಾಗು ಸುಂದರವಾದಂತ ಹದೂ ದೊರೆಯುತ್ತಿರುವದರಿಂದ, ಆ ಕಟ್ಟಿಗೆಗೆ ಯುರೋಪ ದೇಶದ ಪೇಟೆ ಗಳಿಂದಲೂ ಬೇಡಿಕೆಯಿರುತ್ತದೆ. ಇಂದು ಕಂಟಕನು ಅಡವೀ ಕಡಿಯುವ ವಿಭಾಗದಲ್ಲಿ ಕೆಲಸಮಾಡುತ್ತಿದ್ದನು. ಯುರೋಪದೊಳಗಿನ ಹೊಸ ಬೇಡಿಕೆ ಯನ್ನು ಪೂರೈಸುವ ಸಲುವಾಗಿ ಅರಣ್ಯಾಧಿಕಾರಿಯು ಅಡವೀ ಕಡಿಯುವ

ತಂಡಕ್ಕೆ ಆಜ್ಞೆಯಿತ್ತಿದ್ದನೇನಂದರೆ, "ಆ ಪೂರೈಕೆ ಪೂರೈಸುವ ಸಲುವಾಗಿ ಬೇಕಾಗುವ ಕಟ್ಟಿಗೆಯನ್ನು ಇದುವರೆಗೆ ಅಲ್ಲಿ ಕಡಿದ ಅಡವಿಯ ಮುಂದಿನ ಪ್ರದೇಶದಲ್ಲೇ ಕಡಿಯಹತ್ತಬೇಕು; ಮತ್ತು ಇದುವರೆಗೆ ಪ್ರವೇಶ ಕೂಡ ಆಗ ದಿದ್ದ ಘನದಟ್ಟ ಅರಣ್ಯದಲ್ಲಿ ನೊಟ್ಟ ಮೊದಲು ಅಡ್ಡಾಡಲಿಕ್ಕೆ ಶಕ್ಯವಾಗುವಂ ತಹ ದಾರಿ ಮಾಡುವದು. ಬಳಿಕ ದೊಡ್ಡ ದೊಡ್ಡ ಮರಗಳ ಮೇಲಿನ ದಟ್ಟವಾದ ಬಳ್ಳಿಗಳ ಜಾಳಿಗೆಗಳನ್ನೂ ಸಣ್ಣಪುಟ್ಟ ಗಿಡಗಂಟೆಗಳನ್ನೂ ಕತ್ತರಿಸಿ ಬಿಟ್ಟು, ಮನೆಗೆಲಸಗಳಿಗೆ ಉಪಯುಕ್ತವಾಗಬಹುದಾದಂಥ ಮರಗಳ ಮೇಲೆ ಡಾಂ- ಬರದಿಂದ ಕ್ರಮಾಂಕಗಳನ್ನು ಹಾಕಬೇಕು ಆ ಮೇಲೆ ದೊಡ್ಡ ದೊಡ್ಡ ಗರ ಗಸ ಹಾಗು ಬೇರೆ ಆಯುಧಗಳನ್ನು ತಕ್ಕೊಂಡಂಥ ಇನ್ನೂರು-ಇನ್ನೂರು ಬಂದಿಗಳ ತಂಡಗಳಿಂದ ಆ ಪ್ರತಿಯೊಂದು ವೃಕ್ಷವನ್ನು ಕಡಿದು, ಕೊಯ್ದು, ಕೆತ್ತಿ ಅವುಗಳ ನಾಟಾಗಳ ರಾಶಿ ರಾಶಿಗಳನ್ನು ಮಾಡಿ ಒಟ್ಟುವ ಅತ್ಯಂತ ಸಕ್ತಿಯ ಹಾಗು ಕಠಿಣ ಶ್ರಮವನ್ನು ಕೈಕೊಳ್ಳಬೇಕು."

ಈ ತ್ವರ್ಯದ ಆಜ್ಞೆಯಮೇರೆಗೆ ತನ್ನ ಕೈ ಕೆಳಗಿನ ತಂಡವನ್ನು ಆ ಕೆಲಸಕ್ಕಾಗಿ ಸಜ್ಜುಗೊಳಿಸುವ ಕೆಲಸದಲ್ಲಿ ಕಂಟಕನು ಮಗ್ನನಾಗಿದ್ದನು. ಅದುವರೆಗೆ ಕಡಿಯದಿದ್ದ ಹಾಗು ತೀರ ದೂರದ ಆ ಭಾಗದಲ್ಲಿ ಕಾಲಿಡುವದು ಅಂಡಮಾನದಲ್ಲಿ ಎದೆಗಾರಿಕೆಯ ಕೆಲಸವೆಂದು ತಿಳಿಯಲ್ಪಡುತ್ತಿತ್ತು. ಇಂಗ್ಲಿ ಷರ ಪ್ರವೇಶವು ಆ ಘನದಟ್ಟವಾದ ಅರಣ್ಯದ ಅಂತರಂಗದಲ್ಲಿ ಎಂತೆಂತಾಗ ಹತ್ತಿತ್ತೋ, ಅಂತಂತೆಯೇ ಅಲ್ಲಿಯ ಮೂಲ ನಿವಾಸಿಗಳ ಹಾಗು ಕ್ರೂರ ತಂಡದವರ ಹಗೆತನವು ಹೆಚ್ಚುತ್ತ ನಡೆದಿತ್ತು; ಯಾಕಂದರೆ, ಅವರಿಗೆ ಆಯಾ ಮಾನದಿಂದ ಹಿಂದೆ ಹಿಂದಕ್ಕೆ ಸರಿಯಬೇಕಾಗುತ್ತಿತ್ತು. ಆದ ರಿಂದ ಅವರ ಕಾಡು ರಾಜ್ಯವು ಸಂಪುಷ್ಟಕ್ಕೆ ಬರಹತ್ತಿತ್ತು. ಆದಕಾರಣ ಇಂಗ್ಲಿಷರು ಅಂಥ ಘನ ದಟ್ಟವಾದ ಕಾಡಿನಲ್ಲಿ ಇನ್ನಿಷ್ಟು ಮುಂದರಿಯಹತ್ತಿದ ರೆಂದರೆ, ಆ ಭಾಗದಲ್ಲಿ ಆ ಕಾಡು ಹಾಗು ಹಿಂಸ್ರಕ ತಂಡಗಳಲ್ಲಿಯ ಯಾವು ದೊಂದು ತಂಡವು ವಾಸಿಸುತ್ತಿದ್ದರೆ, ಅದು ಇಂಗ್ಲಿಷರ ಆ ಅಡವೀಕಡಿಯುವ ಬಂದಿಗಳ ತಂಡದ ಮೇಲೆ ಯಾವಾಗ ಸಾಗಿ ಬಂದೀತು; ಹಾಗು ಇವರ ಹೆಣ ಗಳನ್ನು ಯಾವಾಗ ಕೆಡವೀತು, ಎಂಬ ಬಗ್ಗೆ ನಿಯಮವೇ ಇರಲಿಲ್ಲ. ಈ ಕಾಡು ಹಾಗು ಹಿಂಸ್ರಕ ತಂಡಗಳಲ್ಲಿ ಹಲವು ಒಳಜಾತಿಗಳೂ ಒಳಭೇದಗಳೂ ಇದ್ದರೂ, ಅವರಲ್ಲಿಯ ಅತ್ಯಂತ ಕಾಡು ಹಾಗು ಹಿಂಸ್ರಕವಾದ ಯಾವ ಜಾತಿ ಯಿದೆಯೋ ಅದರ ಹೆಸರು ಜಾವರಾ ಎಂದಿರುವುದರಿಂದ, ದಂಡಿತರ ಮಾತು- ಕಥೆಗಳಲ್ಲಿ ಆ ಎಲ್ಲ ಕಾಡು ತಂಡದವರಿಗೂ ಆ ಜಾವರಾ ಎಂಬ ಒಂದೇ ಹೆಸರು

ಹೆಚ್ಚಲಾಗುವದು. ಅಂಥ ಹೊಸ ಘನದಟ್ಟ ಕಾಡಿನಲ್ಲಿ ಮೊಟ್ಟಮೊದಲು ಸೇರುವಾಗ, ಆ ಜಾವರಾ ಜನರು ಯಾವಾಗಲೂ ಅಡವಿ ಕಾಯುತ್ತಿರುತ್ತಾರೆಂತಲ್ಲ; ಆದರೆ ಅವರು ಯಾವಾಗ ಬಂದಾರೆಂಬ ಬಗ್ಗೆ ನಿಯಮವಿರಲಿಲ್ಲ. ಆದರಿಂದ ಕಂಟಕನು ತನ್ನ ತಂಡದಲ್ಲಿ ನಿತ್ಯದ ಅಂಥಿಂಥ ದಂಡಿತರನ್ನು ಸೇರಿಸಿಕೊಳ್ಳದೆ, ಕಾಟಕರೂ, ಅಡವೀ ಕಡಿಯುವ ಕೆಲಸದಲ್ಲಿ ಗಟ್ಟಿಗರೂ ಆದಂಥವರನ್ನೇ ಆರಿಸಿ ಸೇರಿಸಿಕೊಂಡನು. ಅವರಲ್ಲಿ ರಫೀಉದ್ದೀನನೂ ಇದ್ದನು. ಅವನು ಮಾಡಹತ್ತಿದರೆ ಇಂಥ ಕಠಿಣ ಕೆಲಸಗಳನ್ನು ಎಗ್ಗಿಲ್ಲದೆ ಮಾಡುವನು. ಅಡವೀ ಕಡಿಯುವ ಕೆಲಸದಲ್ಲಂತೂ ಆತನು ಮುಂಚಿನ ಕರಿನೀರ ಸರತಿಯಲ್ಲೂ ಒಳ್ಳೇ ನಿಷ್ಣಾತನಾಗಿದ್ದದರಿಂದ, ಆತನು ಓಡಿಹೋಗಿದ್ದ ದಂಡಿತನಾಗಿದ್ದರೂ ಅಡವಿಯೊಳಗಿನ ಕಟ್ಟಿಗೆ ಕಡಿಯುವ ಪ್ರಾಪ್ತಿಯನ್ನು ಹೆಚ್ಚಿಸುವ ಸಲುವಾಗಿ ಆತನ ಬಂದಿವಾಸದ ಜವಾಬುದಾರಿಯನ್ನು ಹೊತ್ತು ಆ ತಂಡದ ಮುಖ್ಯ ಜಮಾದಾರನು ಆತನನ್ನು ಬೇಕಂತ ಬೇಡಿಕೊಂಡಿದ್ದನು.

ಆ ಮುಖ್ಯ ಜಮಾದಾರನು ರಫೀ ಉದ್ದೀನನಿಗೆ ಮನುಷ್ಯನೆಂದು ಅನ್ನುತ್ತಿರಲಿಲ್ಲ. ರಫೀ ಉದ್ದೀನನಿಗೆ ಆತನು 'ಅಡವೀ ಕಡಿಯುವ ಯಂತ್ರ!' ಎಂದೆನ್ನುತ್ತಿದ್ದನು. ಇತ್ತೀಚೆಗೆ ತನ್ನ ಸ್ವಂತದ ಬೇತು ಸಾಧಿಸಿಕೊಳ್ಳುವದಕ್ಕೆಂದು ರಫೀ ಉದ್ದೀನನೂ ತನ್ನ ಮೇಲಿನ ಅಧಿಕಾರಿಗಳ ಕೃಪೆ ಸಂಪಾದಿಸುವ ವಿಷಯದಲ್ಲಿ ದಂಗಾಗಿರುತ್ತಿದ್ದನು. ಆದರಿಂದ ಅಂದಿನ ಆ ಎದೆಗಾರಿಕೆಯ ಕೆಲಸಕ್ಕೆ ಮುಂದಾಗಲಿಕ್ಕೆ ಆತನು ಒಂಟೆಗಾಲಿನಿಂದಲೇ ಸಿದ್ಧನಾಗಿದ್ದನು.

ಕಳೆದ ಎರಡು ಮೂರು ದಿನಗಳಲ್ಲಿ ಕರಿನೀರಿನಿಂದ ಓಡಿ ಹೋಗುವ ಬಗ್ಗೆ ರಫೀ ಉದ್ದೀನನು ಕಂಟಕನೊಡನೆ ಹೆಚ್ಚಾಗಿ ಚರ್ಚಿಸಿದ್ದನು; ಆದರೆ ಅವರಲ್ಲಿ ಪಕ್ಕಾ ಬೇತು ಆಗಲೊಲ್ಲದು ಇಷ್ಟರಲ್ಲಿ ಈ ತ್ವರ್ಯದ ಸರಕಾರೀ ಕೆಲಸವು ಬಂತು. ಕೊನೆಯ ಸಂಧಿಯು ಹಸ್ತಗತವಾಗುವವರೆಗೆ ಮತ್ತು ಅದು ಕರಗತವಾಗಬೇಕೆಂದೇ ಕಂಟಕ ಮತ್ತು ರಫೀ ಉದ್ದೀನ ಇವರಿಬ್ಬರೂ ಸರಕಾರೀ ಕೆಲಸದಲ್ಲಿ ಸತ್ತು ಕೆಟ್ಟು ದುಡಿದು, ಅಧಿಕಾರಿಗಳ ನಂಬಿಗೆ ಮತ್ತು ಶಿಫಾರಸು ದೊರಕಿಸಲಿಕ್ಕೆ ಕೊಂಚವೂ ಹಿಂದೆಗೆಯುತ್ತಿರಲಿಲ್ಲ. ಅದೇ ಧೋರಣದಂತೆ ಆ ಅಡವೀ ಕಡಿಯುವ ಕೆಲಸಕ್ಕಾಗಿ ಘನದಟ್ಟ ಹಾಗು ಭಯಂಕರ ಕಾಡೊಳಗಿನ ಮುಂಚೆ ಯಾರೂ ಪ್ರವೇಶಿಸದಿದ್ದ ವಿಭಾಗದಲ್ಲಿ ಪ್ರವೇಶಿಸಲಿಕ್ಕೂ ಮತ್ತು ಜಾವರಾ ಜನರ ಪ್ರಾಣ ಹೀರುವ ದಾಳಿಗಳಿಗೆ ಎದುರಾಗುವ ಎದೆಗಾರಿಕೆಗೂ ಎಲ್ಲಕ್ಕೂ ಮುಂದಿನ ತಂಡದಲ್ಲಿ ಇವರೀರ್ವರೂ ಇಂದು ಸೇರಿಕೊಂಡಿದ್ದರು. ಅವರ ಲಕ್ಷ್ಯವೆಲ್ಲ ಇಂದು ಅದೇ ಕೆಲಸದಲ್ಲೇ ವೇಧಿಸಿಬಿಟ್ಟಿತು.

ಕೋಳಿ ಕೂಗುವ ಮುನ್ನವೇ ಜಾಳಿನೊಳಗಿನ ಗಂಟೆಯಾಯಿತು. ಅರ್ಧ ತಾಸಿನೊಳಗೆ ನೂರಿನ್ನೂರು ಮಂದಿ ದಂಡಿತರು ಪಟಾಂಗಣದಲ್ಲಿ ಬಂದು ಸಾಲು ಸಾಲಾಗಿ ನಿಂತುಕೊಂಡರು. ಪ್ರತಿಯೊಬ್ಬನ ಒಂದೊಂದು ಕಾಲೊಳಗೆ ಸರಪಳಿಯ ಬೇಡಿಯು ಟೊಂಕದಿಂದ ಹಿಮ್ಮಡದ ವರೆಗೆ ಬಿಗಿದಿತ್ತು. ಇನ್ನೊಂದು ಕಾಲು ಖಾಲಿಯಾಗಿತ್ತು. 'ಏಕ-ದೋ-ತೀನ' ಹೀಗೆ ಗಣತಿಯಾಗಿ, ಆ ಇನ್ನೂರರ ತಂಡವು ಒತ್ತಟ್ಟಿಗೆ ಸರಿಸಲಾಯಿತು.

ಅದು ಇದ್ದದ್ದರಲ್ಲಿಯೇ ಆರಿಸಿದ ತಂಡವಾಗಿತ್ತು! ಮತ್ತು ಇಂದು ಕಟ್ಟಿಗೆ ಪೂರೈಸುವದು ಅವಶ್ಯವಿದ್ದುದರಿಂದ, ಆ ತಂಡದ ಮೇಲೆ ಯಾವ ವಿಶಿಷ್ಟ ಜಮಾದಾರರನ್ನು ನಿಯಮಿಸಿದ್ದರೋ, ಅವರೆಲ್ಲರೂ 'ದಂಡಾವಾಲಾ' ಜಮಾದಾರರಾಗಿದ್ದರು! ಕಾಟಕ ಮತ್ತು ವೈಗಳ್ಳ, ಸರಳ ಹಾಗು ಸೊಕ್ಕಿನ ಹೀಗೆ ಎರಡೂ ಬಗೆಯ ದಂಡಿತರ ಕಡೆಯಿಂದ ಯಾವ ಜಮಾದಾರನು ಅಸಿಮಿಸಿಯಿಲ್ಲದೆ ಕೆಲಸ ಮಾಡಿಸಿಕೊಳ್ಳುವನೋ, ಎಲ್ಲರಿಂದಲೂ ಯಾವನು ಅಕ್ಷರಶಃ 'ಹೊಡೆದು' ಕೆಲಸ ತಕ್ಕೊಳ್ಳುವನೋ, ಅಂಥ ತೀಕ್ಷ್ಣ ಜಮಾದಾರರಿಗೆ ಬಂದಿಜನರು 'ದಂಡಾವಾಲಾ' ಎಂದೆನ್ನುತ್ತಾರೆ. 'ಆಗೇ ಕಾಮ, ಪೀಛೇ ರಾಮ' ಇದು ಆ ಪ್ರಕಾರದ ಜಮಾದಾರರ ಬಿರುದಾಗಿರುತ್ತದೆ; ಅಂದರೆ ಕೆಲಸವನ್ನು ಕಟ್ಟುನಿಟ್ಟಿನಿಂದ ಮಾಡಿಸಿಕೊಳ್ಳುವಾಗ ದಯೆ-ಮಾಯೆಗಳ ಧಾರ್ಮಿಕ ಪ್ರಶ್ನೆಯೇ ಅವರೆದುರಿಗಿರುವುದಿಲ್ಲ. ಎಲ್ಲವೂ ಭಿಡೆ-ಮುರುವತ್ತಿಲ್ಲದ ವ್ಯವಹಾರವು. ಉದ್ದಂಡ-ನಿಗರಗಟ್ಟಿ ದಂಡಿತರು ಕೂಡ ಇಂಥ ಜಮಾದಾರರ ಬಳಿಯಲ್ಲಿ ಮೆತ್ತಗಾಗಿ ಹೋಗುತ್ತಿದ್ದರು. ಆ 'ದಂಡಾವಾಲಾ' ವರ್ಗದ ಜಮಾದಾರರು ಸ್ವಂತವೇ ಯಾರಾದರೂ ನಿಗರಗಟ್ಟಿ ದರವಡೆಖೋರರು ಅಥವಾ ಉದ್ದಂಡ ಜನರೊಳಗಿನ ಪೂರ್ವಾಶ್ರಮದ ದಂಡಿತರಿದ್ದು, ಬಂದಿಗಳಲ್ಲಿಯ ಬಡತಿ ಹೊಂದಿ ಈಗ ದುಯ್ಯಮ ಅಧಿಕಾರಿಗಳಾಗಿರುತ್ತಾರೆ.

ಒಂದೊಂದು ಕಾಲಲ್ಲಿ ಟೊಂಕದಿಂದ ಹಿಂಬಡದ ವರೆಗೆ ಸರಪಳಿ ಬಿಗಿಯಲ್ಪಟ್ಟಿದ್ದ ಆ ಇನ್ನೂರು ಬಂದಿಜನಗಳು ಆ ನಸುಕಿನಲ್ಲಿ ಆ ಪಟಾಂಗಣದೊಳಗೆ ಹಾಗೆ ಗಣತಿಯಾಗಿ ಎದ್ದು ನಿಂತರು. ದಂಡಾವಾಲಾ ಜಮಾದಾರನು ಬಂದ ಕೂಡಲೆ 'ಬೈಠ್ಯೊ' ಎಂಬ ಆಜ್ಞೆಯಾಯಿತು. ಸರಪಳಿಗಳ ಖಳಖಳಾಟವು ಒಮ್ಮೆಲೆ ಆಗಿ, ಬಂದಿಗಳೆಲ್ಲ ಸಾಲು ಹಿಡಿದುಕೊಂಡು ನೆಲಕ್ಕೆ ಕುಳಿತುಬಿಟ್ಟರು. ಕೂಡಲೆ ಅವರ ಬಟ್ಟಲುಗಳಲ್ಲಿ ಗಂಜಿಯು ಸುರುವಲಾಯಿತು. ನಿಶ್ಚಿತ ಅವಧಿಯು ಮುಗಿದ ಕೂಡಲೆ 'ಉಠ್ಯೊ'ದ ಗರ್ಜನೆಯಾಯಿತು. ಗಂಜಿಯನ್ನು ಎಲ್ಲರೂ ಕುಡಿದರೋ, ಅಥವಾ ಕೆಲವರಿನ್ನೂ ಕುಡಿಯುತ್ತಿರುವರೋ? ಇದನ್ನು

ವುದನ್ನೂ ವಿಚಾರ ಮಾಡದಂತೆ. ಎಲ್ಲರೂ ಒಮ್ಮೆಲೆ ಎದ್ದೇಳಲೇ ಬೇಕಾಯಿತು. ಆ ಕೂಡಲೆ ಆ ಎರಡು ನೂರು ಜನರ ತಂಡವು ಎರಡು ಸಾಲಾಗಿ ಅಡವಿಯ ದಾರಿ ಹಿಡಿಯಿತು. ಕೈಯೊಳಗಿನ ಬೆತ್ತದ ಜುಳಿಕೆಗಳನ್ನು ತಿರುವುತ್ತಿರುವ ವಾರ್ಡರರು, ದಂಡಕಗಳನ್ನು ಅಲ್ಲಾಡಿಸುತ್ತಿರುವ ಹವಾಲದಾರರೂ, ಜಮಾದಾರರೂ ಆ ಸಾಲುಗಳ ಎರಡೂ ಬದಿಗಳಲ್ಲಿ ಹತ್ತು ಹತ್ತು ಜನ ಬಂದಿಗಳ ಅಂತರದಿಂದ ಸಾಗಿದ್ದರು. ಅಡವಿಯೊಳಗಿನ ಕಟ್ಟಿಗೆ ಕಡಿಯುವ ಕೆಲಸವು ಎಲ್ಲ ಕೆಲಸಗಳಿಗಿಂತಲೂ ಜೀವದ ಮೇಲಿನದು. ಒಮ್ಮೊಮ್ಮೆ ಒಬ್ಬಾನೊಬ್ಬ ಸಾಹಸಿಯಾದ ದಂಡಿತನು ಅಡವಿಯಲ್ಲಿ ಮಾಯವಾಗಿ, ಓಡಿ ಹೋಗಲಿಕ್ಕೂ ತಪ್ಪುತ್ತಿದ್ದಿಲ್ಲ. ಆದಕ್ಕಾಗಿ ಒಬ್ಬೊಬ್ಬ ಬಂದೂಕ ಧರಿಸಿದ ಸಿಪಾಯಿಯು ಆ ತಂಡಗಳ ಜೊತೆಗೆ ಹಗಲೆಲ್ಲ ಇರುತ್ತಿದ್ದನು. ಅವರಲ್ಲಿಯ ಯಾವನೊಬ್ಬನು ಓಡಿಯೇ ಹೋಗಹತ್ತಿದರೆ, ಅವನ ಮೇಲೆ ಆ ಶಿಪಾಯಿಯು ಯಾವ ವಿಚಾರವನ್ನೂ ಮಾಡದೆ ಒಮ್ಮೆಲೆ ಗುಂಡೇ ಹಾಕಬೇಕಾಗುತ್ತಿತ್ತು. ಅದರಲ್ಲಿಯೂ ಇಂದಂತೂ ಅಡವಿಯ ತೀರ ನಿಬಿಡವೂ ಹಿಂಸ್ರ ಜಾನವರಗಳ ಅಂಜಿಕೆಯು ಹೆಜ್ಜೆಹೆಜ್ಜೆಗೂ ಇದ್ದಂಥ ವಿಭಾಗಕ್ಕೇ ಹೋಗಬೇಕಾಗಿತ್ತು. ಆದರಿಂದ ಆ ತಂಡದೊಡನೆ ಅಂದು ಮೂವರು ಬಂದೂಕು ಧಾರಿಗಳಾದ ಸೈನಿಕರು ಅವರೆಲ್ಲರ ಹಿಂದುಗಡೆಯಲ್ಲಿ ಅವರ ಬೆನ್ನಗಾವಲು ಮಾಡುತ್ತಲೂ, ನಡುನಡುವೆ ಅವರೆಲ್ಲರಿಗೆ 'ಚಲ್ಯೊ! ಜಲದೀ ಚಲ್ಯೊ! ಔರ ಜಲದೀ!' ಎಂದು ಕೂಗಿ ಕೂಗಿ ಮುಂದೂಡುತ್ತಲೂ ಬರುತ್ತಿದ್ದರು.

ಮಳೆಯು ಒಂದೇಸವನೆ ಸುರಿಯುತ್ತಿತ್ತು! ಅಂಡಮಾನದೊಳಗಿನ ಅಡವಿಗಳಲ್ಲಿ ವರ್ಷದೊಳಗಿನ ಹತ್ತುತಿಂಗಳಾದರೂ ಒಂದೇಸವನೆ ಮಳೆ ಬೀಳುತ್ತಿರುತ್ತದೆ ದಂಡಿತ ಜನರ ಬಳಿಯಲ್ಲಿ ಬಟ್ಟೆಗಳ ಒಂದೊಂದೇ ಜೊತೆಯಿರುತ್ತದೆ. ಚಡ್ಡಿ ಮತ್ತು ಕುಡತಿ. ಅವುಗಳಾದರೂ ತಿರುಗಿ ಚಾಳಿಗೆ ಬಂದ ಬಳಿಕ ಒಣಗಿದವು ಹಾಕಿಕೊಳ್ಳಲಿಕ್ಕೆ ದೊರೆಯಬೇಕೆಂದು, ಅವರು ಅವುಗಳನ್ನು ಚಾಳಿನಲ್ಲಿಟ್ಟೇ ಅಡವಿ ಕಡಿಯಲಿಕ್ಕೆ ಹೊರಡುತ್ತಿದ್ದರು. ಒಂದು ಲಂಗುಟವಷ್ಟೇ ಅವರ ಮೈಮೇಲಿರುತ್ತಿತ್ತು. ಮೈಯೆಲ್ಲ ಹಗಲೆಲ್ಲ ತೊಯ್ದು ತೊಯ್ದು ನೆನೆದು ಹೋಗುತ್ತಿತ್ತು!

ಅಡವಿಗೆ ತಲುಪುತ್ತಲೆ ಆ ತಂಡದಲ್ಲಿ ಸಣ್ಣ ಸಣ್ಣ ತಂಡಗಳನ್ನಾಗಿ ಮಾಡಿ ಕಟ್ಟಿಗೆ ಕಡಿಯುವದು, ಒಡೆಯುವದು, ಕೊರೆಯುವದು, ಕೆತ್ತುವದು ಮುಂತಾದ ಕೆಲಸಗಳಿಗೆ ಪ್ರಾರಂಭವಾಯಿತು. ಅರ್ಧ ಮೈಲು ಉದ್ದಾದ ಕಾಡಿನ ಪ್ರದೇಶದಲ್ಲಿ ಎಲ್ಲ ಕಡೆಯಲ್ಲೂ ಕೂಗು ಹಾಗು ಕೆಲಸಗಳು ಏಕೋ

ಪ್ರಕಾರವಾಗಿ ಸಾಗಿದವು. ನಿನ್ನಿನ ದಿವಸ ಕರಗಸದಿಂದ ಕೊರೆದಿದ್ದ ಹರಿ-ಟೊಂಗೆಗಳ ಉಳಿದ ಭಾಗವನ್ನು ಈ ದಿನ ಕೊರೆಯಲಾಗಿ, ಅವು 'ಕಡ-ಕಡಲ್' ಎಂದು ಮುರಿದು ಕೆಳಗೆ ಬೀಳಹತ್ತಿದಾಗ 'ಭಾಗೋ! ಬಚಾವೋ' ಎಂಬ ಕೂಗು ಏಳುತ್ತಿತ್ತು. ದೊಡ್ಡ ದೊಡ್ಡ ಮುಂಡಿಗೆಗಳನ್ನು ಹತ್ತೆಂಟು ಜನರ ತಲೆಯ ಮೇಲೆ ಹೇರಿ ವಖಾರಿನ ಕಡೆಗೆ ಗುಂಪುಗೂಡಿಸಲಿಕ್ಕೆ ಒಯ್ಯಹತ್ತಿದ್ದರು. ನಡುವೇ ಯಾವನಾದರೂ ಗಿಡದ ಮೇಲಿಂದ ಕಾಲು ಜಾರಿ ಬೀಳುತ್ತಿದ್ದನು. ಕೆಲವರಿಗೆ ವಿಷಾರಿ ಜಂತುಗಳು ದಂಶ ಮಾಡಿದ ಕೂಡಲೆ, ಅಲ್ಲಿ ಹೋಳೀಹುಣ್ಣಿವೆಗೇ ಪ್ರಾರಂಭವಾಗುತ್ತಿತ್ತು! ವಾರ್ಡರರು ದಂಡಿತರಿಗೆ, ಜಮಾದಾರರು ವಾರ್ಡರ-ಹವಾಲದಾರರಿಗೆ ಒಂದೇ ಸವನೆ ಬೈಯ್ಯುತ್ತಿದ್ದರು! ಯಾವನೊಬ್ಬನು ಒಂದಿಷ್ಟು ಬಿದ್ದರೆ, ದಣಿದರೆ, ನಿಂತುಕೊಂಡರೆ, ಬೆತ್ತದ ಜುಳಿಕೆಯು ಅವನ ಮೈಮೇಲೆ 'ಸಪ್ಪ-ಸಪ್ಪ' ಎಂದು ಸಪ್ಪಳ ಮಾಡಹತ್ತುತ್ತಿತ್ತು! ನಡುವೇ ಯಾವನೊಬ್ಬ ಸೊಕ್ಕಿನ ಹಾಗು ಮೈಗಳ್ಳ ದಂಡಿತನು ಮೊಂಡನಾಗಿ ನಿಂತರೆ, ಇಲ್ಲವೆ ನಿತ್ಯದ ರೂಢಿಯಂತೆ ಕೆಲಸ ಮಾಡುವವನನ್ನು ಬಿಟ್ಟು ಬೈದಾಡಹತ್ತಿದರೆ, ಇಬ್ಬರು-ಮೂವರು ವಾರ್ಡರರನ್ನು ಅವನ ಮೇಲೆ ಬಿಟ್ಟು, ದಂಡುಕಗಳಿಂದ ಅವನನ್ನು ಚೆನ್ನಾಗಿ ಜಜ್ಜಿಬಿಡುತ್ತಿದ್ದರು; ಯಾಕಂದರೆ ಇಂದು ನಿತ್ಯದ ಹೇಗಾದರೂ ಕೆಲಸ ಸಾಗಿಸುವ ಜಮಾದಾರನ ಅಧಿಕಾರವು-ರಾಜ್ಯವು-ಅಲ್ಲೀಲಿಲ್ಲ 'ಭಯ್ಯಾ, ಆಜ ತೋ ದಂಡಾವಾಲಾ ಜಮಾದಾರಕಾ ರಾಜ್ಯ ಹೈ!'

ಮಧ್ಯಾಹ್ನ ಹನ್ನೆರಡು ಗಂಟೆಗೆ ಗರಸದ ಹಾಗು ಕೊಡಲಿಯ ಕೆಲಸ ಮಾಡಿ ಮಾಡಿ ಆ ದಂಡಿತರ ಎಲುವುಗಳು ಲಿಕಿಲಿಕಿಯಾದವು! ಹನ್ನೆರಡು ಹೊಡೆಯಿತೆಂಬದಾದರೂ ಗಂಟೆಯಾಯಿತೆಂದೇ ಅವರಿಗೆ ತಿಳಿಯಿತು; ಯಾಕಂದರೆ, ಬೆಳಗ್ಗೆ ಹೇಗೋ ಹಾಗೆಯೇ ಮಧ್ಯಾಹ್ನದಲ್ಲೂ ಆ ಅಡವಿಯ ದಟ್ಟ ಗಿಡ ಗುಂಪಿನಲ್ಲಿ ಯಾವಾಗಲೂ ಮೋಡಗವಿದ ಹಾಗು ಸಂತತವಾಗಿ ಸುರಿಯುತ್ತಿರುವ ಮಳೆಯಲ್ಲಿ ಸ್ವಚ್ಛವಾದ ಬೆಳಕು ಕೂಡ ಬಿದ್ದಿರುವದಿಲ್ಲ. ಗಂಟೆಯಾದ ಕೂಡಲೆ ಎಲ್ಲ ಟೋಳಿಗಳು ಓಡುತ್ತೋಡುತ್ತಲೆ ವಖಾರಿನೆದುರಿಗೆ ಬಂದವು; ಮತ್ತೆ 'ಏಕ-ದೋ-ತೀನ' ಹೀಗೆ ಇನ್ನೂರು ಜನರ ಗಣತಿಯಾಯಿತು; ಅಂದರೆ, ಅವರ ಸಂಖ್ಯೆಯು ಬೆಳಗ್ಗೆ ಚಾಳಿನೊಳಗಿಂದ ಹೊರಡುವಾಗ ಎಷ್ಟಿದ್ದಿತೋ ಅಷ್ಟೇ ಆಯಿತು; ಆದರೆ ಆ ಜನರ ಸ್ಥಿತಿಯು ಮಾತ್ರ ಬದಲಾಗಿತ್ತು! ಕೆಲವರಿಗೆ ವಿಷಾರಿ ಮುಳ್ಳುಗಳು ಕಾಲಲ್ಲಿ ಉದ್ದವಾಗಿ ನೆಟ್ಟಿದ್ದರಿಂದ ಕುಂಟುತ್ತಿದ್ದರು. ಕೆಲವರು ಕಟ್ಟಿಗೆಯ ಕೆಳಗೆ ಸಿಕ್ಕುಬಿದ್ದದ್ದರಿಂದ ಇಲ್ಲವೆ

ವಾರ್ಡರ-ಜಮಾದಾರರ ಹೊಡೆತದಿಂದ ರಕ್ತಮಂಜುಗಟ್ಟುವ ಹಾಗೆ ಗಾಯ ಗೊಂಡಿದ್ದರು. ಬಹುತರರು ಜವುಳಿನೊಳಗಿನ ಕೆಸರನ್ನು ತಮ್ಮ ಮೈತುಂಬ ಬಡಿದಿದ್ದರು. ಅದು ಮಳೆಯ ಹೊಡೆತದಿಂದ ತೊಳೆದು ಹೋಗುತ್ತಲೆ, ಮತ್ತೆ ಅದನ್ನು ಮೈಗೆ ಬಡಿಯುವರು; ಏಕೆಂದರೆ, ಆ ಅಡವಿಯಲ್ಲಿ ಸಂಗ್ರಹಿತವಾದ ಎಲೆ-ಹುಲ್ಲುಗಳ ಸೊಡರಿನಲ್ಲಿ ಯಾವ ಜಿಗಳಿಗಳು ತುಂಬಿಕೊಂಡಿದ್ದವೋ, ಅವು ಕೆಳಗಿನಿಂದ ಮೈಮೇಲೆ ಏರುತ್ತಿದ್ದವು; ಮತ್ತು ಮೇಲಿನಿಂದ ಲಕ್ಷಾವಧಿ ಸೊಳ್ಳೆ, ಕುರುಡ ನೊಣ ಮುಂತಾದ ವಿಷಾರಿ ಪ್ರಾಣಿಗಳು ಮೈಗೆ ಕಚ್ಚಿ, ಒಂದೇಸವನೆ ಬೆಂಕಿಹಚ್ಚಿಬಿಡುತ್ತಿದ್ದವು. ಒಂದರ ಮೇಲೊಂದರಂತೆ ಅರ್ಲಿನ ಪುಟಗಳನ್ನು ಆ ದಂಡಿತರು ತಮ್ಮ ಮೈಗಳಿಗೆ ತೊಡೆದುಕೊಂಡಿದ್ದರೂ ಜಿಗಳಿಗಳು ಎಲ್ಲಿ ಹತ್ತಿ ಕೊಂಡಿದ್ದವೋ ಅಲ್ಲಿಂದ ಕಿತ್ತುಕಿತ್ತುತ್ತಿರುವಾಗಲೆ ಸಾಕು ಸಾಕಾಗುತ್ತಿತ್ತು. ಅವುಗಳು ಅಂಟಿಕೊಂಡ ಭಾಗದ ತೊಗಲಿನ ದಂಶದೊಳಗಿಂದ ರಕ್ತದ ಜಿನುಗು ಸೆಲೆಗಳು ಹೊರಟು, ಆ ಕೆಸರು ಬಡಿದಿದ್ದ ಅವರ ಮೈಮೇಲೆ ಉದ್ದುದ್ದನ್ನ ಕೆಂಪು ಕೂದಲುಗಳಂತೆ ಅಲ್ಲಲ್ಲಿ ಕಾಣುತ್ತಿದ್ದವು! ತುರಿಸಿಕೊಳ್ಳಬೇಕೆಂದು ಅನಿಸಬೇಕು; ಆದರೆ ತುರಿಸಿಕೊಳ್ಳಲಿಕ್ಕೆ ಸಮಯ ದೊರೆಯುತ್ತಿದ್ದಿಲ್ಲ! ಒಂದೇ ಸವನೆ ದಾಹವಾಗುತ್ತಿದ್ದರೂ ಊಬಿಕೊಳ್ಳಲಿಕ್ಕೆ ಕೂಡ ಅವಕಾಶವಿರಲಿಲ್ಲ! ಸತಾಯಿಸಿ, ದಣಿದು, ದಮ್ಮು ಹತ್ತಿದಂಥ ಆ ಕೆಸರಿನಿಂದಲೂ ರಕ್ತದಿಂದಲೂ ಮುಳುಗಿದ್ದ ಬಂದಿ ಜನರು ಆ ಕಾಲಕ್ಕೆ ಸ್ವಂತಕ್ಕೆ ಎಷ್ಟು ದಯಾರ್ಹರೂ, ಅನ್ಯಾಯದಿಂದ ಪೀಡಿತರೂ ಎಂದು ತಿಳಿಯುತ್ತಿರಬಹುದು? ಅವರನ್ನು ಸಕ್ರ ಕಷ್ಟದ ಗಾಣದಲ್ಲಿ ಹೀಗೆ ಹಿಂಡುತ್ತಿರುವ ಆ ದಂಡಪದ್ಧತಿಗೂ ಆ ದಂಡಾವಾಲಾ ಜಮಾದಾರರಿಗೂ ಅವರು ಎಷ್ಟು ದುಷ್ಟರೆಂದು ತಿಳಿಯುತ್ತಿರಬಹುದು? ಎಷ್ಟು ಶಾಪಳಿಸುತ್ತಿದ್ದರು! ಆದರೆ ಆ ದಂಡಕ್ಕೆ ಅವರು ಅದೇಕೆ ಬಲಿಯಾದರು? ಎರಡನೆಯವರಿಗೆ ಮಾಡಿದ ಯಾವ ಯಾವ ಪೀಡೆಗಳ ಪ್ರಾಯಶ್ಚಿತ್ತವನ್ನು ಅವರು ಆಗ ಭೋಗಿಸುತ್ತಿದ್ದರು? ಅದರ ಪಶ್ಚಾತ್ತಾಪವೆಂದರೆ, ನೂರಕ್ಕೆ ಒಬ್ಬಿ ಬ್ಬರ ಮನಸ್ಸಿಗಾದರೂ ಆಗಿತ್ತೋ ಇಲ್ಲವೋ ಅದಾರು ಹೇಳಬೇಕು? ಇಷ್ಟೇ ಅಲ್ಲ, ಅವರಲ್ಲಿಯ ಬಹುತರಿಗೆ ಆ ದಂಡಾವಾಲಾನ ಜಮಾದಾರಿಕೆಯು ದೊರೆ ತಿದ್ದರೆ, ಅದನ್ನು ಅವರು ಒಲ್ಲೆನೆನ್ನುತ್ತಿರಲಿಲ್ಲ. ಎಷ್ಟೋ ಜನರಂತೂ ಸಮಾಯಿೂ ದಂಡವಾಲಾ ಜಮಾದಾರರೇ ಆಗುತ್ತಿದ್ದರು.

ಹನ್ನೆರಡು ಗಂಟೆಯಾಗುತ್ತಲೆ ಊಟ ಬರತಕ್ಕದ್ದು. ಹಸಿವೆಯಿಂದ ಕಂಗಾಲಾದ ಆ ಎಲ್ಲ ದಂಡಿತರು ಗಿಡ-ಮರಗಳ ಕೆಳಗೆ ಶಕ್ಯವಾದಷ್ಟು ಮಳೆಯು ಹನಿ ಬೀಳದಿದ್ದಲ್ಲಿ ಕುಳಿತುಕೊಂಡರು. ಪಿಸಿಬಿಸಿಯಾದ ಗೋದೀ ರೊಟ್ಟಿಗಳ

ರಾಶಿಯು ಬಂದು ಬೀಳುತ್ತಲೆ, ಅದನ್ನೆಲ್ಲ ತಾನೊಬ್ಬನೇ ತಿಂದು ಬಿಡಲೋ? ಎಂಬಂತೆ ಪ್ರತಿಯೊಬ್ಬರಿಗೂ ಆಗಿ ಹೋಯಿತು. ಎರಡೆರಡು ಚಪಾತಿಗಳೂ ಸೊಪ್ಪಿನ ಪಲ್ಲೆಯು ಒಂದೊಂದು ಮುದ್ದಿಯೂ ಅವರ ಕೈ ಮೇಲೆ ಇಡಲಾಯಿತು. ಅಡವೀ ಕಡಿಯುವ ಟೋಳಿಗಳಿಗೆ ಇಂಥ ಗೊಂದಲದ ದಿನದಲ್ಲಿ ಥಾಲಿಪಾಟನ್ನು ಕೂಡ ಸಂಗಡ ಒಯ್ಯಲಿಕ್ಕೆ ಶಕ್ಯವಾಗುವದಿಲ್ಲ. ಅದರಿಂದ ಅವರು ಒಂದು ಕೈಯು ಥಾಲೀಪಾಟು ಮಾಡಿ, ಅದರ ಮೇಲೆ ಚಪಾತೀ-ಪಲ್ಲೆಗಳ ಮುದ್ದೆಯನ್ನಿಟ್ಟು ಕೊಳ್ಳಬೇಕು; ಇನ್ನೊಂದು ಕೈಯಿಂದ ತಿನ್ನಬೇಕು! ಮೇಲೆ ಒಂದೇಸವನೆ ಮಳೆ! ಮುರಿಮುರಿಯುತ್ತಿರುವಾಗಲೇ ಚಪಾತಿಗಳು ನೆನೆದು, ಮೆತ್ತಗೆ ಕಣಕವಾಗಬೇಕು. ಪಲ್ಯವು ಹರಿಯುಹತ್ತಬೇಕು!

ಜವಾದಾರರು, ಸೈನಿಕರು ಮತ್ತು ಕಂಟಕಬಾಬು ಇವರಿಷ್ಟೇ ಮಂದಿ ಅಲ್ಲಿ ನಿಲ್ಲಿಸಿದ್ದ ತಾತ್ಪೂರ್ತಿಕ ಗುಡಿಸಲಿನಲ್ಲಿ ಉಂಡರು. ಅವರನ್ನು 'ಹಾಂ-ಜೀ' 'ಹಾಂ-ಜೀ' ಮಾಡುವ ಕೆಲವು ವಶೀಲೆಯು ದಂಡಿತರೂ ಆ ಗುಡಸಿಲದಲ್ಲಿ ಅವರ ಕಾಲು ನೆಕ್ಕುತ್ತ ಪ್ರವೇಶಿಸುತ್ತಿದ್ದರು; ಅಂಥವರಿಗೆ ಒಂದೊಂದು ಹೆಚ್ಚು ಚಪಾತಿಯೂ ಚೆಲ್ಲಲಾಗುತ್ತಿತ್ತು. ರಫೀಉದ್ದೀನನಾದರೂ ಅಂಥ ವಶೀಲೆಯು ಜನರೊಳಗಿನವನೇ ಆಗಿದ್ದನೆಂಬದನ್ನು ಹೇಳಬೇಕಾಗಿಲ್ಲ. ಯಾಕಂದರೆ ಜಮಾದಾರ, ಹವಾಲದಾರ, ಸೈನಿಕರೇ ಮುಂತಾದವರು ಟೋಳಿಯೊಳಗಿನ ಮುಖ್ಯಸ್ತ 'ಬಾಬು' ವು ಯಾವನಿರುವನೋ ಅವನಿಗೇ ಅವರೆಲ್ಲ ಅಂಜಿ ನಡೆಯುತ್ತಿರುತ್ತಾರೆ. ಕಂಟಕನಂತೂ ಬರಿಯು ಬಾಬುವೇ ಆಗಿರದೆ, ಆತನು ತನ್ನ ಒಳ್ಳೇ ಕೆಲಸಗಳಿಂದಲೂ ನಿಸ್ಪೃಹವೃತ್ತಿಯಿಂದಲೂ ಇಂಗ್ಲಿಷ ಅಧಿಕಾರಿಗಳ ಪ್ರೀತಿಗೂ ಪಾತ್ರನಾಗಿದ್ದನು; ಅದರಿಂದ ಅವರು ಆತನಿಗೆ ಹೆಚ್ಚಾಗಿಯೇ ಅಂಜಿ ನಡೆಯುತ್ತಿದ್ದರು. ಅವರ ಹಲವು ತಪ್ಪುಗಳನ್ನೂ ಸುಳ್ಳುಸೊಟ್ಟಗಳನ್ನೂ ಮುಚ್ಚಿಕೊಳ್ಳುವವನೆಂದರೆ, ಆ ಕಂಟಕ ಬಾಬುವೇ; ಮತ್ತು ಆ ಕಂಟಕಬಾಬುವಿನ ಹಿಂದೆ ಮುಂದೆ ಲಾಂಗೂಲ ಚಾಲನ ಮಾಡುವದರಲ್ಲಿ ರಫೀಉದ್ದೀನನೇ ನಿಷ್ಣಾತನೂ, ಎದೆಗಾರನೂ ಆಗಿದ್ದನು. ಕಷ್ಟಾಳುತನದ ಮೂಲಕ ಜವಾದಾರನಿಗೂ ಆತನು ಬೇಕಾದವನಾಗಿದ್ದನು. ಅದರಿಂದ ಕಂಟಕ ಬಾಬುವಿನ ಕಾಲೊಳಗೆ ಸುಳಿದಾಡುತ್ತ, ಆತನೂ ಆ ಗುಡಸಿಲದಲ್ಲಿ ಹೋಗಲಿಕ್ಕೆ ಶಕ್ತನಾದನು. ಒಂದು ಕಾಲೊಳಗೆ ಬಿಗಿಯಲ್ಪಟ್ಟಿದ್ದ ಸರಪಳಿ ಬೇಡಿಯನ್ನು ಡೌಲಿನಿಂದ ನಡುನಡುವೆ ಖುಳ ಖುಳ ಎಂದು ಸಪ್ಪಳ ಮಾಡುತ್ತ, ಎತ್ತು ಹುರಿಗೆಜ್ಜೆಗಳ ನಾದದೊಡನೆ ಮೇವು ತಿನ್ನುವ ಹಾಗೆ ಮೆಲುಕಾಡಿಸುತ್ತ, ಆತನು ನಾಲ್ಕೈದು ಚಪಾತಿಗಳ ಮೇವನ್ನು ಕಂಟಕ ಬಾಬುವಿದ್ದ ಗುಡಸಿಲದ ಮೂಲೆಯಲ್ಲಿ ಕುಳಿತು ತಿಂದನು!

ಅಂದು ರಫೀ ಉದ್ದೀನನು ಒಳ್ಳೇ ಕಷ್ಟಬಟ್ಟು ದುಡಿದಿದ್ದನು! ಬೇರೆ ಪಂಡಿತರು ಕಡಿಯಲಿಕ್ಕೆ ತಕ್ಕದಾದ ಅಡವಿಯನ್ನು ಕಡಿಯುತ್ತಿರಲು, ಯಾವುದನ್ನು ಇಂಗ್ಲಿಷರ ಜನರು ಎಂದೂ ಪ್ರವೇಶಿಸಿರಲಿಲ್ಲವೋ, ಆ ಮುಂದಿನ ಅಡವಿಯೊಳಗೆ ಹೊಕ್ಕು ದಾರಿ ಮಾಡಲಿಕ್ಕೆ ಯಾವ ಯಾವ ಮುಂದಾಳುಗಳ (Pioneer) ಟೋಳಿಯು ಕಂಟಕನ ಕೈಕೆಳಗೆ ಹೋಗಿತ್ತೋ, ಅದರಲ್ಲಿಯೇ ರಫೀಉದ್ದೀನನೂ ಹೋಗಿದ್ದನು. ಕೊಡ್ಲಿ, ಕಂದ್ಲಿ, ಕುಡಗೋಲು ಇವುಗಳಿಂದ ಅಡ್ಡತಿಡ್ಡಗಳಾದ ಹರಿ-ಟೊಂಗೆ, ಗಿಡ-ಗಂಟೆ, ಮುಳ್ಳುಜಾಳಿಗೆಗಳನ್ನು ಕಡಿದು, ದೊಡ್ಡ ದೊಡ್ಡ ಕಲ್ಲುಗಳನ್ನು ಎತ್ತಿ ನಡುವಿನ ಕೊಳಗಳಲ್ಲಿ ಚೆಲ್ಲಿ ಭರತಿ ಮಾಡುತ್ತ, ಸಂಪೂರ್ಣ ಅರ್ಧ ಮೈಲಿನ ಸರ್ವಸಾಧಾರಣ ದಾರಿಯನ್ನು ಅವರು ಆ ಎರಡು-ಮೂರು ತಾಸುಗಳಲ್ಲೇ ಮಾಡಿಬಿಟ್ಟಿದ್ದರು. ಹಿಡಿಗಡುತರವಾದಂಥ ಒಂದು ಬಹು ದೊಡ್ಡ ಹೆಬ್ಬಾವನ್ನು ಸ್ವತಃ ರಫೀಉದ್ದೀನನೇ ಕೊಡ್ಲಿಯಿಂದ ಅದರ ತಲೆ ಕಡಿದು ಕೆಡಹಿದ್ದನು. ಆ ಅಜಸ್ರ ಪ್ರಾಣಿಯ ಆ ಭಯಪ್ರದವಾದ ಧಡವನ್ನು ಹೆಗಲ ಮೇಲಿರಿಸಿಕೊಂಡು, ಮೈಗೆಲ್ಲ ಸುತ್ತಿಕೊಂಡು ಆತನು ಜಮಾದಾರನ ಎದುರಿಗೆ ಕುಣಿಯುತ್ತಿದ್ದನು! ಮೂರು ದಿನಗಳ ಕೆಲಸವನ್ನು ಮೂರೇ ತಾಸುಗಳಲ್ಲಿ ಮಾಡಿಸಿಕೊಂಡದ್ದರಿಂದ, ಜಮಾದಾರ ಸಹಿತವಾಗಿ ಎಲ್ಲ ಅಧಿಕಾರಿಗಳು ಕಂಟಕನ ಮೇಲೆ ಪ್ರಸನ್ನರಾಗಿದ್ದರು. ಕಂಟಕನು ಬಾಬುವಾಗಿದ್ದರೂ ಆತನೂ ಒಬ್ಬ ಬಂದಿಯೇ ಆಗಿದ್ದನು. ಅದರಿಂದ ಆ ಘೋರವೂ ಘನದಟ್ಟವೂ ಆದ ಅಡವಿಯಲ್ಲಿ ಬೆಳಗ್ಗೆ ಆತನು ಯಾವ ಆರಿಸಿಟ್ಟ ಐದಾರು ಜನ ಬಂದಿಗಳೊಡನೆ ಹೋದನೋ, ಆಗ ಆತನೊಡನೆ ಮತ್ತು ವಿಶೇಷವಾಗಿ ಆತನ ಜೊತೆಯಲ್ಲಿ ರಫೀ ಉದ್ದೀನನಂತಹ ಮುಂಚೆ ಓಡಿಹೋಗಿದ್ದ ದಂಡಿತನಿದ್ದುದರಿಂದ ಅವರೆಲ್ಲರ ಮೇಲೆ ಪಹರೆ ಮಾಡುವದಕ್ಕೆಂದು ಬಂದೂಕ ಧರಿಸಿದಂಥ ಒಬ್ಬ ಸೈನಿಕನೂ ಕಳಿಸಲ್ಪಟ್ಟಿದ್ದನು ಅದರಲ್ಲಿಯೂ ಆ ಅಡವಿಯ ಒಂದು ಹೊಸ ತುಂಡಿನಲ್ಲಿ ಮೊಟ್ಟಮೊದಲೇ ಸರಕಾರದ ಪ್ರವೇಶವಾಗುವದಿದ್ದುದರಿಂದ, ಅಲ್ಲಿ ಜಾನವರಾಗಳ ಉಪದ್ರವದ ಅಂಜಿಕೆಯೂ ಇತ್ತು; ಆದರೆ ಈಗ ಅರ್ಧ ಮೈಲು ಒಳಗೆ ಪ್ರವೇಶವಾಗಿ, ಆ ಕಾಡಿನಲ್ಲಿ ಸಾಧಾರಣವಾದ ದಾರಿಯು ನಿರ್ವಿರೋಧವಾಗಿ ಕೆಡವಲ್ಪಟ್ಟಿದ್ದರಿಂದ, ಜಾನವರಾಗಳ ಉಪದ್ರವದ ಆ ಅಂಜಿಕೆಯು ಸುಳ್ಳುಬಿದ್ದಿತ್ತು; ಮತ್ತು ಎಲ್ಲರ ಜೀವಗಳೂ ಆ ಪ್ರಮಾಣದಲ್ಲಿ ನಿರ್ಧಾಸ್ತವಾಗಿದ್ದವು.

ಊಟದ ಬಿಡುವು ಮುಗಿದ ಮೇಲೆ ಇನ್ನು ಮುಂಚಿನ ಬೇತಿನಂತೆ ಆ ದಿನದ ಮಟ್ಟಿಗೆ ಕಂಟಕನ ಕೆಲಸವು ಇಷ್ಟೇ ಉಳಿದಿತ್ತು. ಅದಾವುದೆಂದರೆ, ದಾರಿ

ಮಾಡಿದ್ದ ಆ ಅರ್ಧ ಮೈಲಿನ ಪ್ರದೇಶದ ಎಡಬಲಗಳಲ್ಲಿ ಯಾವ ಯಾವ ಉಪಯುಕ್ತ ವೃಕ್ಷಗಳಿರುವವೋ ಅವುಗಳ ಮೇಲೆ ಸಾಧಿಸಿದ ಸುಟ್ಟಿಗೆ ಡಾಂಬರದಿಂದ ಕ್ರಮಾಂಕಗಳನ್ನು ಹಾಕುವದು; ಮತ್ತು ಸಂಜೆಯ ಐದು ಗಂಟೆಯೊಳಗಾಗಿ ಅಲ್ಲಿಂದ ಹಿಂದಿರುಗುವದು. ಆ ಕೆಲಸಕ್ಕಾಗಿ ರಫೀ ಉದ್ದೀನ ಸಹಿತವಾಗಿ ಐದಾರು ಮಂದಿ ದಂಡಿತರನ್ನು ಸಂಗಡ ಕರೆದುಕೊಂಡು, ಕಂಟಕಬಾಬುವು ಮತ್ತೆ ಆ ಮಾಡಿದ್ದ ದಾರಿ ಹಿಡಿದು ಆ ಕಾಡನ್ನು ಪ್ರವೇಶಿಸಿದನು. ಅವರ ಹಿಂದೆ ಮುಂದೆ ಪಹರೆ ಮಾಡಲಿಕ್ಕೂ ಸಂರಕ್ಷಣಕ್ಕೂ ಆ ಬಂದೂಕವಾಲಾ ಸಶಸ್ತ್ರ ಸೈನಿಕನೂ ಹೋದನು. ಉಳಿದ ನೂರು-ನೂರೈವತ್ತು ಜನರು ಕಟ್ಟಿಗೆಯನ್ನು ಕಡಿಯುವ, ಕೊರೆಯುವ ಕೆಲಸಗಳನ್ನು ಬೆಳಿಗ್ಗೆ ಮಾಡುತ್ತಿದ್ದ ಭಾಗದಲ್ಲಿಯೇ ಮಾಡಹತ್ತಿದರು; ಮತ್ತು ಉಳಿದ ಇಬ್ಬರು ಬಂದೂಕ ಧರಿಸಿದ ಸೈನಿಕರು ಆ ನೂರೈವತ್ತು ಜನರೊಡನೆಯೇ ಇದ್ದರು.

ಮಳೆಯು ಒಂದೇಸವನೆ ಸುರಿಯುತ್ತಿತ್ತು. ಆ ಮಳೆಯಲ್ಲಿ ಕಂಟಕನ ಆ ಟೋಳಿಯು ಯಾವ ನಿಬಿಡ ಕಾಡಿನಲ್ಲಿ ಹೊಕ್ಕಿತ್ತೋ, ಅಂಥ ಕಾಡಿನಲ್ಲಂತೂ ಮೇಲಿನ ಆಕಾಶದೊಳಗಿನ ಮಳೆಯು ಒಂದು ವೇಳೆ ತಾಸುಗಟ್ಲೆ ಬಾರದಿದ್ದರೂ, ಕಾಡಿನಲ್ಲಿಯ ಮಳೆಯ ಹನಿಗಳು ಕಟ್ಟಾಗುವದಿಲ್ಲ. ಯಾಕಂದರೆ ಎತ್ತರವೂ ವಿಸ್ತೀರ್ಣವೂ ಆದ ಮಹಾವೃಕ್ಷಗಳು, ಅವುಗಳ ಕೆಳಗೆ ಮರಗಳು, ಅವುಗಳ ಕೆಳಗೆ ಗಿಡಗಳು, ಅವೆಲ್ಲವುಗಳನ್ನು ಸುತ್ತುಗಟ್ಟಿ ತೊಡಕಾಗಿ ಒಂದು ದೊಡ್ಡ ಜಾಳಿಗೆಯಂತಾಗಿದ್ದ ಬಳ್ಳಿ-ಬಡಕಲುಗಳು, ಗಿಡ-ಗಂಟೆಗಳು, ಪೆಳೆಗಳು ಇವುಗಳು ಒಂದರ ಮೇಲೊಂದರಂತೆ ಚಪ್ಪರಗಟ್ಟಿದ್ದವು. ಮುಗಿಲೊಳಗಿಂದ ಮಳೆ ಬೀಳುವದು ಕಟ್ಟಾದರೂ, ಆ ಕಾಡಿನೊಳಗಿನ ಗಿಡ-ಮರ-ಪೆಳೆಗಳೊಳಗಿನ ಮಳೆಯು ತಾಸುಗಟ್ಲೆ ನಿಲ್ಲುವದೇ ಇಲ್ಲ. ದೊಡ್ಡ ಹನಿಗಳಾಗಿ, ಸಣ್ಣ ಹನಿಗಳಾಗಿ, ಹನಿಬಿಟ್ಟು ಹನಿಯಾಗಿ ಒಂದೇಸವನೆ ಸುರಿಯುತ್ತಿರುತ್ತದೆ. ಬಿಸಿಲೆಂಬದು ಆ ಅರಣ್ಯದ ತಳಕ್ಕೆ ಅಂದರೆ, ನೆಲಕ್ಕೆ ಎಂದೂ ಮುಟ್ಟುತ್ತಲೇ ಇರಲಿಲ್ಲ; ಆದರೆ ಅಂದು ಸಂಜೆಯ ನಾಲ್ಕು ಗಂಟೆಗೇ ಅಲ್ಲಿ ಹೆಚ್ಚಾಗಿ ಕತ್ತಲುಗವಿದದ್ದರಿಂದ, ಸಮೀಪದಲ್ಲಿಯ ಒಬ್ಬರ ಮೋರೆಯು ಇನ್ನೊಬ್ಬರಿಗೆ ಕಾಣಿಸದಂತಾಯಿತು.

ಆ ಕತ್ತಲೆ ಹಾಗು ಮಳೆಯನ್ನು ಕಂಡು ಐದು ಗಂಟೆಯವರೆಗೂ ಅಲ್ಲಿ ನಿಲ್ಲದೆ, ನಾಲ್ಕಕ್ಕೇ ಹಿಂದುರುಗಬೇಕೆಂದು ಕಂಟಕನು ಸೈನಿಕನಾದ ಪಹರೆಯುವನಿಗೆ ಅಂದನು. ಆತನಂತೂ ಒಂಟೆಗಾಲ ಮೇಲೆಯೇ ಸಿದ್ಧನಾಗಿದ್ದನು; ಯಾಕಂಬರೆ ಆತನು ಬಂದೂಕನ್ನು ಹೆಗಲ ಮೇಲೆ ಚೆಲ್ಲಿಕೊಳ್ಳುವ ಕಷ್ಟದಿಂದ,

ಅಡವೀ ಕಡಿಯುವ ಬಂದಿಗಳ ಕಷ್ಟಕ್ಕಿಂತಲೂ ಹೆಚ್ಚಾಗಿ ತ್ರಾಸುಗೊಂಡುಬಿಟ್ಟಿದ್ದನು. ಆ ಕಾಲಕ್ಕೆ ಸಂಗಡದ ಇಬ್ಬರು-ಮೂವರು ಬಂದಿಗಳಿಗ ಗುರ್ತುಮಾಡಿದ ಗಿಡಗಳ ಮೇಲೆ ಕ್ರಮಾಂಕ ಹಾಕುವ ಕೆಲಸ ವಹಿಸಿಕೊಟ್ಟು, ಕಂಟಕನೂ ಸೈನಿಕನೂ ಆ ಹೊಸ ದಾರಿಯ ಆ ಕಡೆಯ ತುದಿಯುವರೆಗೂ ಆ ಕಾಡಿನಲ್ಲಿ ಹೊಕ್ಕಿದ್ದರು ರಫೀಉದ್ದೀನನು ಅವರಿಗಿಂತಲೂ ಮುಂದೆ ತುಸ ಅಂತರದಲ್ಲಿದ್ದ ಸಮುದ್ರದ ಒಂದು ಒತ್ತಿನ ಬಳಿಗೆ ತಲುಪಿದ್ದನು. ಸಮುದ್ರವು ಬಹಳ ದೂರದಲ್ಲಿತ್ತು. ಅದರ ಒತ್ತಾದರೂ ಗಿಡಗಳ ಮರೆಯಿಂದ ಮುಚ್ಚಲ್ಪಟ್ಟಿತ್ತು; ಆದರೆ ಅದರದೊಂದು ಕಿರಿದಾದ ಆದರೆ ಆಳವಾದ ಭಾಗವು ಆ ಕಾನಿನಲ್ಲಿ ದೂರದವರೆಗೆ ಒಳಹೊಕ್ಕು, ಅದು ಅಲ್ಲಿ ಮುಗಿದಿತ್ತು. ಆ ಒತ್ತಿನಿಂದ ಅಲ್ಲಿ ಗಿಡ-ಮರಗಳ ದಟ್ಟಣೆಯು ತುಸ ಕಡಿಮೆಯಾಗಿತ್ತು. ಕಂಟಕನು ಇನ್ನು ಆ ಸೈನಿಕನೊಡನೆ ಮರಳುವ ಬೇತು ಮಾಡುತ್ತಿರುವಾಗಲೇ, ಮುಂದಕ್ಕೆ ಹೋಗಿ ಆ ಒತ್ತಿನ ತುದಿಗೆ ತಲುಪಿದ್ದ ರಫೀಉದ್ದೀನನು ಕಂಟಕಬಾಬುವನ್ನು ಮೆಲ್ಲನೆ ಕೂಗಿ ಕರೆದನು. ಕೂಡಲೆ ಕಂಟಕನು ಲಗುಬಗನೆ ಮುಂದಾಗಹತ್ತಿದ್ದನು. ಅಷ್ಟರಲ್ಲಿ ಆತನ ಕೈಹಿಡಿದು ಜಗ್ಗಿ, ಆತನೊಡನೆ ಒಂದು ವಿಶಾಲವಾದ ಮರದ ಗೋಡೆಯಂತಹ ಬೊಡ್ಡೆಯ ಕೆಳಗೆ ನಿಂತುಕೊಂಡು, ರಫೀಉದ್ದೀನನು ಸಂದೇಹದ ದನಿಯಿಂದ:—

"ಬಾಬುಜೀ, ವೋ ದೇಖೋ! ಆ ರಣಹದ್ದು, ಹದ್ದು ಹಾಗು ಕಾಗೆಗಳು ಆ ಒತ್ತಿನ ದಂಡೆಯಲ್ಲಿ ಹೇಗೆ ಸತ್ತುಬಿದ್ದಿವೆಯೆಂಬದನ್ನು? ಈ ಲಕ್ಷಣ ವೇನೂ ವಿಹಿತವಾದದ್ದಲ್ಲ."

"ಅದೇಕಪ್ಪಾ? ನೀನು ಆಗಲೆ ಆ ಅಜಸ್ರ ಹಾಗು ಜೀವಂತ ಹೆಬ್ಬಾವಿಗೆ ಕೂಡ ಹೆದರದಿದ್ದವನು, ಈಗ ಇಲ್ಲಿ ಹೀಗೆ ಸತ್ತುಬಿದ್ದಿದ್ದ ಈ ಹಕ್ಕಿಗಳನ್ನು ಕಂಡು ಇಷ್ಟೇಕೆ ಗದಗುಟ್ಟಿ ನಡುಗುತ್ತಿರುತ್ತೀ?" ಎಂದು ಕೇಳುತ್ತಿರುವಷ್ಟರಲ್ಲಿ ಬಂದೂಕ ಧರಿಸಿದ್ದ ಆ ಸೈನಿಕನೂ ಅಲ್ಲಿಗೆ ಬಂದನು. ಆತನ ಕಡೆಗೆ ಹೊರಳಿ ನಿಂತು, ಕಂಟಕನು:—

"ದೇಖೋ, ಮೆರೆ ಚಿಡಿಯಾಂಕೋ ರಫೀ ಉದ್ದೀನ ಡರತೇ ಹೈ! ಈ ಪಕ್ಷಿಗಳ ರೂಪ ಧರಿಸಿ ಭೂತ-ಪಿಶಾಚಿಗಳು ಆಡ್ಡಾಡುತ್ತವೆಂದು ಇಲ್ಲಿಯ ಕಾಡು ಜನರು ಏನು ಹೇಳುತ್ತಿರುವರೋ, ಅವೇ ಪಕ್ಷಿಗಳು ಇವಾಗಿರುತ್ತವೆಂದು ಈತನಿಗನಿಸುತ್ತಿರಬೇಕು"

"ನಹಿ ಬಾಪೂಜಿ, ನಹಿ! ಯಹ ಚೀಷ್ಯಾಕೀ ಬಾತ ನಹಿ! ದೇಖೋ, ಆ ಕಾಡು ಜನರೊಳಗೆ ನಾನು ಮುಂಚೆ ಕರಿನೀರೊಳಗಿಂದ ಓಡಿ ಹೋಗು

ವಾಗ ಹೆಚ್ಚಾಗಿ ಕೂಡಿ ವ್ಯವಹರಿಸಿರುತ್ತೇನೆ. ಅವರು ಯಾರ ಮೇಲಾದರೂ ಗುಪ್ತವಾಗಿ ನುಗ್ಗಿ ಅವರನ್ನು ಕೊಲ್ಲಬೇಕಾಗಿದ್ದರೆ, ಆ ಭಾಗದಲ್ಲಿಯ ಎಡಬಲಗಳಲ್ಲಿರುವ ಹದ್ದು, ರಣಹದ್ದು, ಕಾಗಿ ಮುಂತಾದವುಗಳನ್ನು ಮೊದಲು ಕೊಂದು ಬಿಡುತ್ತಾರೆ ಯಾಕೆಂದರೆ ಆ ಪಕ್ಷಿಗಳು ನಮ್ಮ ಚಲನವಲನಗಳ ಸಂಗತಿಯನ್ನು ಹಾರುತ್ತ ಹಾರುತ್ತ ಹೋಗಿ, ತಮ್ಮ ಹಗೆಗಳಿಗೆ ತಿಳಿಸುತ್ತವೆಂದು ಅವರ ತಿಳುವಳಿಕೆಯಾಗಿರುತ್ತದೆ. ಅಲ್ಲದೆ ಎಂದೂ ತಿನ್ನಲಿಕ್ಕೆಂದು ಉಪಯೋಗಿಸದಿದ್ದ ಈ ಪಕ್ಷಿಗಳನ್ನು ಇಂದೇ ಇಲ್ಲಿ ಹೀಗೆ ಬೇಕಂತ ಕೊಂದು ಚಲ್ಲಿರುವಂತೆ ಕಾಣುತ್ತದೆಯಾದ್ದರಿಂದ........''

''ಧಡಲ್, ಧಡಲ್, ಧಡಲ್!'' ಎಂಬ ತುಬಾಕಿಯ ಸಪ್ಪಳವು ಬಂದಿಗಳ ಮುಖ್ಯ ತಂಡದ ಹೆಚ್ಚು ಜನರಿದ್ದ ಕಡೆಯಿಂದ ಕೇಳಿಸಿತು! ಆ ಕೂಡಲೆ ಕೂಗಾಟ ಒದರಾಟವೂ ಕೇಳಹತ್ತಿತು! ಅಷ್ಟರಲ್ಲಿ ದಿನ್ನೆಯ ಮೇಲಿನ ಆ ಗುಡಿಸಿಲದ ಹತ್ತರಿದ್ದ ಗಂಟೆಯು ಭಯಸೂಚನೆಗಾಗಿ ಘಣ 'ಘಣ ಘಣ ಘಣ!' ಎಂದು ಒಂದೇಸವನೆ ಬಡಿಯಹತ್ತಿತು.

''ಜಾವರಾಗಳು ಬಂದರು! ನಮ್ಮ ಟೋಳಿಗಳ ಮೇಲೆ ಅವರು ನುಗ್ಗಿರಬೇಕು; ಮತ್ತು ಅತ್ತ ಸೈನಿಕರು ಅವರ ಮೇಲೆ ಗುಂಡುಹಾರಿಸುತ್ತಿರಬೇಕು!!" ಹೀಗೆಂದು ರಫೀಉದ್ದೀನನು ಗೊಗ್ಗರದನಿಯಿಂದಲೂ ಧೈರ್ಯದಿಂದಲೂ ತರ್ಕಿಸಿದನು.

ಆ ಕೂಡಲೆ ಎಲ್ಲರಿಗಿಂತಲೂ ಯಾವನಾದರೂ ಹೆಚ್ಚಾಗಿ ಗಾಬರಿಗೊಂಡಿದ್ದರೆ, ಆತನೇ ಅವರೆಲ್ಲರ ಸಂರಕ್ಷಣಕ್ಕೆಂದು ಬಂದಿದ್ದ ಪಹರೆಯವನು! ಆ ಬಂದೂಕ ಧರಿಸಿದ್ದ ಸೈನಿಕನೇ ಅವನಾಗಿದ್ದನು!

''ಅಯ್ಯಯ್ಯಪ್ಪ! ಇನ್ನು ನಾವೇನು ಮಾಡಬೇಕು? ಒಮ್ಮೆಲೆ ಹೇಳಿ ಬಿಡಿರಿ! ನಾನು ಈಗಲೆ ಬಂದೂಕ ಹಾರಿಸಿ ಬಿಡಲೊ?''

"ಬೇಡ-ಬೇಡ'' ಎಂದು ಆತನನ್ನು ತಡೆಯುತ್ತ, ಕಂಟಕನು ''ಈ ಗಿಡಗುಂಪಿನೊಳಗೆ ನಿನ್ನ ಬಂದೂಕಿನ ಗುಂಡಿನಿಂದೇನು ಪ್ರಯೋಜನ? ಆ ಗುಂಡಿನ ಸಪ್ಪಳದಿಂದ ನಾವು ಇಲ್ಲಿರುತ್ತೇವೆಂಬ ಸಂಗತಿಯು ಮಾತ್ರ ಇದುವರೆಗೆ ಗೊತ್ತಿರದಿದ್ದರೆ ಗೊತ್ತಾಗಿ, ಆ ಜಾವರಾ ಜನರು ಈ ಗಿಡ-ಗುಂಪುಗಳಲ್ಲಿ ಬಂದು ನಮಗೂ ಗಂಟು ಬೀಳಬಹುದು! ನಾವು ಇನ್ನು ಧೈರ್ಯಗೆಡದೆ, ಇದೇ ದಾರಿಯಿಂದ ಹಿಂದಿರುಗಿ ಹೋಗಿ, ಮುಖ್ಯ ತಂಡವನ್ನು ಸೇರಬೇಕಾದುದೇ ವಿಹಿತವೆಂದು ನನಗನಿಸುತ್ತದೆ ''

ಆ ಸೈನಿಕನಿಗಾದರೂ ಅದೇ ಬೇಕಿತ್ತು. ಆತನು ತನ್ನ ಮನಸ್ಸಿನಲ್ಲಿ

"ಯಾರಾದರೂ ಜಾವರಾ ಜನರು ನುಗ್ಗಿಯೇ ಬಿಟ್ಟರೆ, ಅವರು ಈ ಜವುಳಿನ ಕಡೆಯಿಂದಲೇ ಬರತಕ್ಕವರು. ತಿರುಗಿ ಹೋಗುವಾಗ ನಮ್ಮ ಬೆನ್ನು ಆ ಕಡೆಗೇ ಆಗುವದು; ಆದ್ದರಿಂದ ನಾನು ಈ ದಂಡಿತರ ಮುಂದು ಮುಂದೆ ಹೋಗಹತ್ತಿದರೆ, ಇದ್ದದ್ದರಲ್ಲಿಯೇ ನನ್ನ ಜೀವಕ್ಕೆ ಅಂಜಿಕೆ ಕಡಿಮೆ. ಜವುಳಿನ ಕಡೆಯಿಂದ ಬರಬಹುದಾದ ಜಾವರಾಗಳ ಬಾಣಗಳು ಮೊದಲು ಈ ದಂಡಿತರೊಳಗಿನ ಯಾವನೊಬ್ಬನ ಬೆನ್ನಲ್ಲೇ ನಡಬಹುದು. ಆ ಕೂಡಲೆ ನಾನು ಮುಂದಿನಿಂದ ಮುಂದೆಯೇ ಕಾಲಿಗ ಬುದ್ಧೀ ಹೇಳಿ, ಪಾರಾಗಿ ಹೋಗಿ ಬಿಡಬೇಕು!" ಈ ಬಗೆಯಾಗಿ ತನ್ನ ಮನಸ್ಸಿನಲ್ಲೇ ಅಧೈರ್ಯಪಟ್ಟು, ಆದರೆ ಮೇಲೆ ಮೇಲೆ ಒಳ್ಳೇ ಧೈರ್ಯದ ಆವೇಶ ತಂದು ಆ ಸೈನಿಕನು:—

"ಹಾ! ಎಲ್ಲರೂ ನಡೆಯಿರಿ! ಅಂಜುತ್ತೀರೇನಿರೋ ಹೀಗೆ? ಇಗೋ, ನೋಡಿರಿ. ನಾನು ನಿಮ್ಮ ಮುಂದೆಯೇ ನಾಲ್ಕು ಹೆಜ್ಜೆ ಹೋಗುತ್ತಿದ್ದೇನೆ. ಜಾವರಾಗಳೆಂದರೇನು? ಅವರು ಈ ಹಕ್ಕಿಗಳನ್ನು ಹೇಗೆ ಹೇಗೆ ಪಟಪಟನೆ ಕೆಡಹಿದ್ದರೋ, ಹಾಗೆಯೇ ನಾನು ನನ್ನೀತು ಬಾಕಿಯಿಂದ ಅವರನ್ನು ಟಪ್ಪ-ಟಪ್ಪ ಎಂದು ನೆಲಕ್ಕೆ ಕೆಡವಿಬಿಟ್ಟೇನು ಚಲಾವ!"

ಹೀಗೆಂದವನೇ ಆ ಸೈನಿಕನು ಮುಂದಾಗಿ, ದಾರಿ ಕೂಡ ನಡೆಯಹತ್ತಿದನು. ಕಂಟಕ ಹಾಗು ರಫೀಉದ್ದೀನರು ಆತನ ಹಿಂದೆ; ಆದರೆ ಆ ಸೈನಿಕನು ವಹಿಸಿದ್ದ ಆ ಮುಂದಾಳುತ್ವದ ಇಂಗಿತವು ಕಂಟಕ-ರಫೀಉದ್ದೀನರಿಗೆ ತಿಳಿದಿತ್ತಾದ್ದರಿಂದ, ಕಂಟಕನು ಆ ಸೈನಿಕನ ಆ ಕಡ ತಂದ ಅವಸಾನದ ವಿಷಯಕವಾಗಿ ತೋರುವ ಮೋಜನ್ನು ಬರಿಯ ಕಣ್ಣಾಸನ್ನೆಯಿಂದಲೇ ರಫೀಉದ್ದೀನನಿಗೆ ವ್ಯಕ್ತಪಡಿಸಿದನು; ಆದರೆ ರಫೀಉದ್ದೀನನಿಗೆ ಆ ಸಂಕಟದ ಹಾಗು ಗೊಂದಲದ ಕಾಲಕ್ಕೂ ಚೇಷ್ಟೆಯ ಹೊರತು ಸೊಗಸೆನಿಸದಾಯಿತು. ಕೂಡಲೆ ಆತನು ಹೇಗೆ ಹೇಗೋ ಆಗಿದ್ದ ಆ ಮುಳ್ಳು ದಾರಿಯಲ್ಲಿ ಲಗುಬಗನೆ ಸಾಗಿರುವಾಗಲೇ ಕುಚೇಷ್ಟೆಯಿಂದ:—

"ಹವಾಲದಾರಜೀ! ದೇಖೋ, ಯೇ ಜಾವರಾ ಲೋಕ ರಹತೇ ಹೈ ತೋ ಬಢೇಹಿ ಶೂರ! ಅವರು ಯಾರ ಮೇಲೆ ನುಗ್ಗಬೇಕಾಗುವದೋ ಅವರ ಮೇಲೆ ಹಿಂದಿನಿಂದೆಂದೂ ಬಾಣ ಹೊಡೆಯಕೂಡದೆಂದು ಅವರಲ್ಲಿ ರೀತಿಯೇ ಇದೆ. ದಾರಿಯಲ್ಲಿ ಎದುರಿಗಿದ್ದವನ ಮೇಲೆಯೇ, ಎದುರಿನಿಂದಲೇ ಅಡ್ಡಗಟ್ಟುವರು; ಎದುರಿನಿಂದಲೇ ಬಾಣ ಹೊಡೆಯುವರು."

ರಫೀಉದ್ದೀನನು ಹೇಳಿದ ಆ ಸಂಗತಿಯನ್ನು ಕೇಳಿದ ಕೂಡಲೆ ಆ ಸೈನಿಕನ ಮೋರೆಯು ಒಮ್ಮೆಲೆ ಕಪ್ಪಿಟ್ಟಿತು! ತಾನು ಮುಂದುಮುಂದಾಗಿಯೇ

ತನ್ನ ಜೀವವನ್ನು ಸಂಕಟಕ್ಕೀಡು ಮಾಡಿದೆನೆಂಬುದು ಆತನ ಮನಸ್ಸಿನಲ್ಲಿ ಬಂದ ಕೂಡಲೆ ಆತನು ಹೆಚ್ಚಾಗಿ ಚಮಕಿತನಾದನು. ಜಾವರಾಗಳ ಬಾಣವು ಎದುರಿನಿಂದ ಸೂಂಯಿಗುಟ್ಟುತ್ತ ಬಂದೇಬಿಟ್ಟಿತೆಂಬಂತೆ ಆಗ ಅವನಿಗೆ ಆಗಿ ಹೋಯಿತು. ಇನ್ನು ತನ್ನ ಅಂಜಿಕೆಯನ್ನು ಮರೆಮಾಚಿ ಸಹಜವಾಗಿಯೇ ಹಿಂದುಳಿಯುವ ಬಗ್ಗೆ ಏನು ಕಾರಣ ಹುಡುಕಬೇಕು? ಎಂದು ಯೋಚಿಸಿ ಪೇಕರಿಸುತ್ತಿರುವಾಗಲೇ, ಆತನಿಗೊಂದು ಒಳ್ಳೇ ನೆವ ದೊರಕಿತು.

ಕೂಡಲೆ ಆತನು ಒಮ್ಮೆಲೆ ನಿಂತು ಬಂದೂಕನ್ನು ನೆಲಕ್ಕೆ ಊರಿ ಟೊಂಕದೊಳಗಿನ ಕಾಡತೂಸಿನ ಪೆಟ್ಟಿಗೆ ತೆಗೆದನು. ಆತನು ನಿಂತ ಕೂಡಲೆ ರಫೀಉದ್ದೀನ ಕಂಟಕರೂ ತುಸ ನಿಂತುಕೊಂಡರು. ಆ ಕೂಡಲೆ ಹವಾಲದಾರನು ಅವರನ್ನು ಬೆದರಿಸುತ್ತ ಅನ್ನುತ್ತಾನೆ:

"ಕ್ಯಾ ಗವಾರ ಹೊ! ನಡೆಯಿರಿ ಬೇಗಬೇಗನೆ! ತುಬಾಕಿಯಲ್ಲಿ ಕಾಡತೂಸು ತುಂಬಿ ಪಟ್ಟೆ ಹಾಕಿಕೊಂಡವನೇ ಬಂದೆನು; ನಡೆಯಿರಿ. ದಾರೀ ಹಿಡಿದು ನಡೆಯಲಿಕ್ಕೆ ಇಷ್ಟೇಕೆ ಅಂಜುತ್ತಿರುವಿರಿ?"

ಆಗ ಒಂದು ಕ್ಷಣ ಕೂಡ ವ್ಯರ್ಥಗಳೆಯುವಂತಹದಿರಲಿಲ್ಲವೆಂಬುದನ್ನು ಕಂಟಕನು ತಿಳಿದಿದ್ದನು. ಚೇಷ್ಟೆಗಾಗಿ ಜೀವವನ್ನೇ ಕಳಕೊಳ್ಳಬೇಕಾದೀತೇದು ಬಗೆದು, ಆಗ ಆ ಹವಾಲದಾರನ ಕಡೆಗೆ ಸುಮ್ಮನೆ ಉಪಹಾಸ್ಯಪೂರ್ವಕ ನಗುವುದರಿಂದ ಎಷ್ಟು ಮೋಜು ಉಪಭೋಗಿಸಲಿಕ್ಕೆ ದೊರೆಯುವುದೋ ಅಷ್ಟನ್ನೇ ಉಪಭೋಗಿಸುತ್ತ ಕಂಟಕನು ಮುಂದಾದನು. ರಫೀಉದ್ದೀನನೂ ಆತನನ್ನೇ ಅನುಸರಿಸಿದನು. ತುಸ ಅಂತರದ ಮೇಲೆ ಅವರು ಮುಂದಾದುದನ್ನು ಕಂಡು, ಕಾಡುತೂಸುಗಳನ್ನು ತುಂಬಿದ್ದ ತನ್ನ ಬಂದೂಕನ್ನು ಮತ್ತೆ ಹೆಗಲ ಮೇಲಿಟ್ಟುಕೊಳ್ಳುತ್ತ ಆ ಹವಾಲದಾರನೂ ಅವರ ಹಿಂದಿನಿಂದಲೇ ನಡೆಯಹತ್ತಿದನು. ಜಾವರಾ ಜನರು ನಡುವೆ ಬರುವುದೇ ಆದರೆ, ಮುಂದಿನಿಂದಲೇ ಬರತಕ್ಕವರು. ಅವರ ಬಾಣಗಳಿಗೆ ಈ ದಂಡಿತರ ಎದೆಗಳೇ ಢಾಲಿನಂತೆ ನಡುವಿರುತ್ತವೆ. ಇವರುಗಳ ಹಿಂದೆ ನಾನಿರುತ್ತೇನೆ. ಇದ್ದದ್ದರಲ್ಲಿಯೇ ತನ್ನ ಜೀವವನ್ನು ಳಿಸಿಕೊಳ್ಳಲಿಕ್ಕೆ ಶಕ್ಯವಾದ ಆ ವ್ಯೂಹವನ್ನು ರಚಿಸಿಕೊಂಡ ಬಗ್ಗೆ ಆ ಹವಾಲದಾರನಿಗೆ ಬಹುಮಟ್ಟಿಗೆ ಹಾಯ ಎನಿಸಿತು.

ಇನ್ನೂರು-ಮುನ್ನೂರು ಯಾರ್ಡಿನವರೆಗೆ ಆ ಹಂಗಾಮಿ ದಾರಿಯಿಂದ ಆ ನಿಬಿಡವಾದ ಕಾರ್ಗತ್ತಲೆಯಲ್ಲಿ, ವಿಚಿತ್ರ ಮಳೆಯ ಹೊಡೆತದಲ್ಲಿ ಆ ಕಾನಿನೊಳಗೆ ಆ ಮೂವರೂ ಆ ಮುಖ್ಯ ತಂಡದ ಕಡೆಗೆ ಹೋಗುವದಕ್ಕೆಂದು ನಡೆದಿರಲು, ಇಷ್ಟರಲ್ಲಿ—

ಜವುಳಿನ ದಂಡೆಯೊಳಗಿನ ನಿಬಿಡ ಗಿಡಗಳಲ್ಲಿಯ ಒಂದು ಬಹು ಎತ್ತರ ವಾದ ಮರದಿಂದ ಇವರ ಎಲ್ಲ ಚಲನವಲನವನ್ನು ಆಗಿನಿಂದಲೇ ನೋಡು ತ್ತಿದ್ದ ಇಬ್ಬರು ಒರಟು ಜಾವರಾಗಳು ಆ ಮರದಿಂದ ಕೆಳಗಿಳಿದರು. ಗಿಡ-ಗಂಟೆಗಳೊಳಗಿಂದ ಹಾವಿನ ಹಾಗೆ ಸಳಸಳನೆಂದು ಇವರುಗಳ ಹಿಂದಿನಿಂದ ಬಂದರು; ಮತ್ತು ತಮ್ಮ ಬಾಣವನ್ನು ತಪ್ಪದೆ ನಾಟಿಸುವಷ್ಟು ಅಂತರ ಹಾಗು ಸಮಯ ಸಾಧಿಸಿ, ಅವರು ಬಾಣಗಳನ್ನೆಸೆದರು. ಹತ್ತೆಂಟು ಬಾಣಗಳನ್ನು ಎಲ್ಲಕ್ಕೂ ಹಿಂದಿರುವ ಆ ಬಂದೂಕ ಧರಿಸಿದ್ದ ಸೈನಿಕನ ಬೆನ್ನ ಮೇಲೆಯೇ ಚಪಲತೆಯಿಂದ ಬಿಟ್ಟರು!

“ಅಯ್ಯಯ್ಯೋ! ಸತ್ತೆನು! ಜಾವರಾ! ಸತ್ತೆನು!” ಅಕಸ್ಮಾತ್ತಾಗಿ ಹೀಗೆಂದು ಚೀರಿ, ಆ ಸೈನಿಕನು ಬಂದೂಕದೊಡನೆ ಮುಕ್ಕರಿಸಿ ಬಿದ್ದುಬಿಟ್ಟನು! ಆತನಿಗೆ ಹಿಂದಿರುಗಿ ನೋಡಲಿಕ್ಕೆ ಕೂಡ ಅವಕಾಶ ದೊರೆಯಲಿಲ್ಲ. ಆತನ ಬೆನ್ನಲ್ಲಿ ಆಕಸ್ಮಿಕವಾಗಿ ಎರಡು ವಿಷಾರಿ ಬಾಣಗಳು ನೆಟ್ಟು, ಅವು ಬೆನ್ನಹುರಿಯ ಬದಿಯಿಂದ ನೆಟ್ಟಗೆ ಹೊಟ್ಟೆಯೊಳಗೆ ಹೋಗಿ ಸಿಕ್ಕವು. ಅವನ ಬೆನ್ನ ಮೇಲೆ ನೆಟ್ಟುಳಿದಿದ್ದ ಆ ಬಾಣಗಳ ತುದಿಯ ಮೇಲಿನ ಪುಚ್ಛಗಳು ಹಾರುವ ಹಕ್ಕಿ ಯಂತೆ ಅತ್ತಿತ್ತ ಅಲೆದಾಡುತ್ತಿದ್ದವು. ಅವುಗಳು ಸಂಪೂರ್ಣ ವಿಷಯುಕ್ತ ಗಳಾಗಿದ್ದು, ಒಳ್ಳೇ ಕಸುವಿನಿಂದ ನಟ್ಟುಬಿಟ್ಟಿದ್ದವು!

ಆ ಚೀರುವಿಕೆಯನ್ನು ಕೇಳುತ್ತಲೆ ಕಂಟನು ತಟ್ಟನೆ ಹಿಂದಿರುಗಿ ಸೈನಿ ಕನ ಕಡೆಗೆ ಧಾವಿಸಿದನು; ಆದರೆ ರಫೀ ಉದ್ದೀನನು ಆತನ ಕೈಯನ್ನು ಒಮ್ಮೆಲೆ ಹಿಡಿದು, ಆತನನ್ನು ಗಿಡಗಳ ಗುಂಪಿನಲ್ಲಿ ಜಗ್ಗಿಕೊಂಡನು. ನಂತರ: “ಬಾಬೂಜಿ, ಛೂಪ ಜಾವ, ಛೂಪ ಜಾವ ಪಹಿಲೆ!”

ಜೀವದ ಮೇಲಿನ ಸಂಕಟವೊದಗಲು, ತತ್ಕಾಲದಲ್ಲಿ ಮನುಷ್ಯನು ಕೇವಲ ಶಾರೀರಿಕ ಪ್ರತಿಕ್ರಿಯೆಯ ಮೂಲಕ ಹೇಗೆ ಏನಾದರೂ ಮಾಡಿ ಬಿಡುತ್ತಾನೋ, ಹಾಗೆಯೇ ಆ ಗಿಡಗುಂಪುಗಳಲ್ಲಿ ಆ ಕಂಟಕ ಮತ್ತು ರಫೀ ಉದ್ದೀನರು ಅಡಗಿಕೊಂಡರು. ಮುಳ್ಳು, ಜಿಗಳಿ, ಸೊಳ್ಳೆ, ಹಾವು, ಕಾನ ಖಜೂರೆ, ಗಿಡಬಳ್ಳಿಗಳ ಕೊಳೆತಹಸೀ ಸೊಪ್ಪು ಇವಾವುಗಳೂ ಆ ನ್ಯೂನತರ ಉಪದ್ರವದೆದುರಿಗೆ ಅವರ ಲಕ್ಷ್ಯದಲ್ಲಿ ಕೂಡ ಬರಲಿಲ್ಲ. ಎದ್ದು ನಿಂತು ಒಳಗೆ ಸೇರುವದು ಕೂಡ ದೂರತೋಪಾಸ್ತವಾಗಿತ್ತು. ಆದರಿಂದ ಅವರು ಕೇವಲ ಹಾವಿನ ಹಾಗೆಯೇ ಶಕ್ಯವಾದಷ್ಟು ದೂರ ಗಿಡಗಳೊಳಗೆ ಸೇರಹತ್ತಿದರು. ತಮ್ಮ ಕೈಗಳೊಳಗಿನ ಕೊಡಲಿಗಳನ್ನು ಮಾತ್ರ ಅವರು ಬಿಟ್ಟಿರಲಿಲ್ಲ. ಎಂಟು-ಹತ್ತು ನಿಮಿಷಗಳ ವರೆಗೆ ಅವರ ಮನಸ್ಸಿನಲ್ಲೂ

ಹೃದಯದಲ್ಲೂ ಚಿಂತೆಯೂ ಗಡಿಬಿಡಿಯೂ ಇವುಗಳ ಹೊರತು ಬೇರೆ ಯಾವ ಅರಿವೇ ಇರಲಿಲ್ಲ; ಆದರೆ ಕಂಟಕನಿಗೆ ಒಮ್ಮೆಲೆ ಸೂಚಿಸಿತೇನಂದರೆ, ಆ ಸೈನಿಕನು ನೆಲಕ್ಕೆ ಬಿದ್ದಾಗ ಆತನ ಕೈಯಲ್ಲಿದ್ದ ತುಬಾಕಿಯೂ ಟೊಂಕದೊಳಗಿನ ಕಾಡತೂಸುಗಳ ಪೆಟ್ಟಿಗೆಯೂ ಹಾಗೆಯೇ ಇವೆ! ಅವು ಒಂದು ವೇಳೆ ಜಾವರಾಗಳ ಕೈಸೇರಿದರೆ ಬಹು ದೊಡ್ಡ ಅನರ್ಥವೇ ಆದೀತು!

"ಜಾವರಾಗಳಿಗೆ ತುಬಾಕಿಯು ಅಷ್ಟೊಂದು ರುಚಿಸುವದಿಲ್ಲ." ಎಂದು ಹೇಳಿ ರಫೀ ಉದ್ದೀನನು:-"ಮತ್ತು ಈಗಲೆ ಇಲ್ಲಿಂದ ಹೊರಬೀಳುವುದೆಂದರೆ ಜೀವಕ್ಕೇ ಎರವಾಗುವ ಸಂಭವವಿದೆ."

"ಆದರೆ ಆ ಬಂದೂಕನ್ನು ಹಾಗೆಯೇ ಬಿಟ್ಟುಬಿಡುವದರಿಂದಂತೂ ಆ ಸಂಭವವು ಹೆಚ್ಚಾಗಿಯೇ ಭಯಂಕರವಾದೀತು! ಅವರು ಅದನ್ನು ಒಯ್ಯಲಿಕ್ಕಿಲ್ಲೆಂದು ಆದಾರು ಹೇಳಬೇಕು? ಇದ್ದದ್ದರಲ್ಲಿ ಆ ಬಂದೂಕು ನಮ್ಮ ಕೈಯಲ್ಲಿರುವುದೇ ಹೆಚ್ಚು ಬಲವು--ಹೆಚ್ಚು ಸುರಕ್ಷಿತತೆಯು!" ಈ ಬಗೆಯ ಆಗ್ರಹದಿಂದ ಕಂಟಕನು ಅಡಗುತ್ತ ಕುಗ್ಗುತ್ತ ಮತ್ತೆ ಗಿಡಗುಂಪಿನ ಬಾಯಿಗೆ ಬಂದನು. ತುಬಾಕಿ, ಕಾಡತೂಸು, ಶಿಕಾರಿಯ ಚಾಕೂ, ಖಂಜೀರ ಮುಂತಾದವುಗಳನ್ನು ಆ ಸೈನಿಕನ ದೇಹದ ಮೇಲಿಂದ ಕಿತ್ತುಕೊಂಡನು. ಸೈನಿಕನ ಬಾಯೊಳಗಿಂದ ರಕ್ತವು ಹೊರಹೊರಡುತ್ತಿತ್ತು. ಆ ನೆತ್ತರದ ಹೊಲಸಿನಿಂದ ಆತನ ಹೆಣವು ಮುಳುಗಿ ಹೋಗಿತ್ತು.

"ಪಾಪ! ಸತ್ತು ಹೋದನು!" ಎಂದು ನಿಟ್ಟುಸಿರುಗರೆದು, ಕಂಟಕನು ಆ ಆಯುಧಗಳೊಡನೆ ಮತ್ತೆ ಗಿಡಗುಂಪಿನಲ್ಲಿ ಸೇರಿಕೊಂಡನು.

ಆಗ ರಫೀಉದ್ದೀನನು:-"ಬಂದೂಕಿನಿಂದ ಒಂದೆರಡು ಹುಸಿಗುಂಡುಗಳನ್ನು ಹಾರಿಸಿರಿ. ಜಾವರಾ ಜನರು ಬಂದೂಕದ ಸಪ್ಪಳಕ್ಕೆ ಬಹಳೇ ಹೆದರುತ್ತಾರೆ. ಅವರು ಸಮೀಪದಲ್ಲೆಲ್ಲಾದರೂ ಇದ್ದರೆ, ಮುಂದೆ ಬರಲಾರರು. ಇಲ್ಲದಿದ್ದರೆ ಅವರು ಆ ಸೈನಿಕನ ಬೆನ್ನಲ್ಲಿ ನಟ್ಟ ತಮ್ಮ ಬಾಣದ ಅಲಗುಗಳನ್ನು ಕಿತ್ತುಕೊಂಡೊಯ್ಯಲಿಕ್ಕೆ ಆ ಹೆಣದ ಬಳಿಗೆ ಬರುವ ಸಂಭವವಿದೆ. ಅವರ ಬಳಿಯಲ್ಲಿ ಸ್ವಲ್ಪೇ ಬಾಣಗಳಿರುತ್ತವೆ. ಬೇಟೆ ಹೊಡೆಯುವಾಗ ಬಿಟ್ಟ ಬಾಣಗಳನ್ನು ಅವರು ಶಕ್ಯವಾದಷ್ಟು ಪ್ರಯತ್ನಿಸಿ ಹುಡುಕಿಕೊಂಡು ಬರುತ್ತಿರುತ್ತಾರೆ; ಹಾಗು ಅವುಗಳನ್ನು ಸರಿಪಡಿಸಿಕೊಂಡು ಮತ್ತೆ ಉಪಯೋಗಿಸುತ್ತಿರುತ್ತಾರೆ."

ಆ ಕೂಡಲೆ ಕಂಟಕನು ದಾರಿಯ ಬಳಿಗೆ ಬಂದು, ಒಂದೆರಡು ಹುಸಿಗುಂಡುಗಳನ್ನು ಹಾರಿಸಿದನು; ಹಾಗು ಅವರು ಮತ್ತೆ ಆ ಕಾಡಿನಲ್ಲಿ ಅಡಗಿ

ಕೊಂಡು ಕುಳಿತರು.

ತಂಡದೊಳಗಿನ ಜಮಾದಾರರೂ ಸೈನಿಕರೂ ಕೆಲ ಜನರೊಡನೆ ತಮ್ಮನ್ನು ಈ ಸಂಕಟದೊಳಗಿಂದ ಬಿಡಿಸಿಕೊಂಡೊಯ್ಯುವ ಸಲುವಾಗಿ ಅಥವಾ ತಮ್ಮನ್ನು ಹುಡುಕುವ ಸಲುವಾಗಿ ಸಾವಿರ ಪಾಲಿಗೆ ಈ ದಾರಿ ಹಿಡಿದು ಬಂದೇ ಬರುವರೆಂದು ಅವರಿಗೆ ಒಮ್ಮೆ ಅನಿಸಿತು; ಆದರೆ ಮೊದಲು ಬಡೆಯುತ್ತಿದ್ದ ಸಂಕಟದ ಗಂಟೆ(Alarm Bell)ಯೂ ಬಹು ದೂರದ ದಿನ್ನೆಯ ಮೇಲಿನ ಜನರ ಕೂಗಾಟ-ಚೀರಾಟವೂ ಈಗ ತೀರ ಕಟ್ಟಾಗಿ ಹೋಗಿತ್ತು. ಆದರ ಮೇಲಿಂದ ಅವರಿಗೆ ಒಮ್ಮೆಲೆ ಅನಿಸಹತ್ತಿತೇನಂದರೆ, ಜಾವರಾಗಳ ಹೊಡತಕ್ಕೆ ಅಂಜಿ, ಅವರೆಲ್ಲರು ದಂಡಿತರನ್ನು ಕಟ್ಟಿಕೊಂಡು, ಜಮಾದಾರನು ಸರಕಾರೀ ಚಾಳಿನ ಕಡೆಗೆ ಹೋಗಿಬಿಟ್ಟಿರಬಹುದು!

ಕೆಲಕಾಲದ ಮೇಲೆ ಕಂಟಕನು ಕೇಳುತ್ತಾನೆ:-''ಜಾವರಾಗಳಲ್ಲಿಯ ಎಷ್ಟು ಜನರು ನಮ್ಮ ಮೇಲೆ ಸಾಗಿ ಬಂದಿರಬಹುದು?''

ರಫೀ ಉದ್ದೀನ:-'ಎಷ್ಟೆಂದು ಕೇಳುವಿರಾ? ನೂರುಗಟ್ಟಲೆ ಜಾವರಾ ಜನರು ಎಂದಿಗೂ ಬರುತ್ತಿರುವದಿಲ್ಲ! ಆ ಬಡವರು ಇರುವುದೇ ನೊದಲು ಅಲ್ಪಸಂಖ್ಯಾಕರು! ಅವರ ದಾಳಿಯೆಂದರೆ, ನಾಲ್ವತ್ತು-ಐವತ್ತು ಜನ ಧನುರ್ಧಾರಿಗಳು! ಗಿಡಗಳ ಮರೆಗೆ ಅವಿತುಕೊಂಡು ಅಕಸ್ಮಾತ್ತಾಗಿ ತಮ್ಮ ನಾಲ್ವತ್ತು-ಐವತ್ತು ವಿಷಾರಿ ಬಾಣಗಳನ್ನೆಸೆದು, ಹತ್ತಿಪ್ಪತ್ತು ಹೆಣಗಳನ್ನು ಕೆಡವಿ, ಓಡಿ ಹೋಗುವುದೇ ಅವರ ಕಾಳಗ! ದಟ್ಟವಾದ ಮರ-ಗಿಡಗಳು, ಕತ್ತಲು ಗವಿ! ಅದರಿಂದ ತುಬಾಕಿಯ ಸೈನ್ಯವು ಕೂಡ ಅವರನ್ನು ಹಿಂಬಾಲಿಸಲಿಕ್ಕೆ ನಿರುಪಯೋಗವಾಗುತ್ತದೆ. ಆ ಅನುಕೂಲತೆಯ ಮೂಲಕವೇ ಅವರು ಇನ್ನೂ ಈ ಅರಣ್ಯದ ಅರಸರಾಗಿರುತ್ತಾರೆ. ಇಂಗ್ಲಿಷರು ಅವರನ್ನು ಹೊಂದು ಹಿಡಿದು ಕೊಲ್ಲಬೇಕೆಂದು ಸಂಕಲ್ಪಿಸಿದರೆ, ಬಹು ಪ್ರಯತ್ನಾಂತ್ಯದಲ್ಲಿ ಹಾಗೆ ಮಾಡಲಾದೀತು; ಆದರೆ ಒಂದು ಕಾಡೇ ಕಾಡಾದ ವಸಾಹತಿಯಲ್ಲಿ ಯುದ್ಧ ಹೂಡಿದರೆ, ಇಲ್ಲಿ ಇಂಗ್ಲಿಷರಿಗೆ ಲಭಿಸಬೇಕಾಗಿದೆಯೇನು? ಅಂತೆಯೇ ಇಂಗ್ಲಿಷರು ಇಲ್ಲಿಯ ಮೂಲ ನಿವಾಸಿಗಳನ್ನೆಲ್ಲ ಕೊಲ್ಲಹೋಗದೆ, ತಮ್ಮ ಕಾರ್ಯಕ್ಕೆ ಅಡ್ಡ ಬರುವವರನ್ನಷ್ಟೇ ಹೇಗಾದರೂ ಸಂಹರಿಸುತ್ತ, ತಮ್ಮ ಕೆಲಸ ನಡೆಸಿರುತ್ತಾರೆ. ಹ! ಈಗ ಆ ವಿಮಾನಗಳೋ ಏನೋ ಹೊರಟಿರುವವೆಂತಲ್ಲ? ಅಂಥ ಸಾಧನ ಹೊರಟರೆ ಮಾತ್ರ ಮುಗಿಲೊಳಗಿಂದ ದಿಟ್ಟಿಸಿ ನೋಡಿ, ಜಾವರಾಗಳಿರುವ ಠಾಣ್ಯಗಳನ್ನು ಚೆನ್ನಾಗಿ ಕಂಡುಹಿಡಿಯಲಿಕ್ಕೂ ನೂರಿನ್ನೂರು ಸ್ಫೋಟಕ ಗುಂಡುಗಳನ್ನುಪಯೋಗಿಸಿ ಆ ಎಲ್ಲ ಜಾವರಾಗಳನ್ನು ನಾಶಗೊಳಿಸಲಿಕ್ಕೂ

ಇಂಗ್ಲಿಷರಿಗೆ ಒಂದು ವಾರ ಕೂಡ ಹಿಡಿಯಲಿಕ್ಕಿಲ್ಲ; ಆದರೆ ಅದೆಲ್ಲ ಭವಿಷ್ಯತ್ಕಾಲದ ಕತೆ! ಈಗಲಂತೂ ಜಾವರಾ ಜನರು ದಾಳಿವೆಸಗಲಿಕ್ಕೆ ಬಂದೇ ಬಂದಿದ್ದರೆ, ಹಿಂದಕ್ಕೊಮ್ಮೆ ಅವರು ಇಂಗ್ಲಿಷರೊಡನೆ ಕಾದಲಿಕ್ಕೆ ಬಂದಾಗ ನಾಲ್ವತ್ತು-ಐವತ್ತು ಜನರಿದ್ದಂತೆ ಈಗಲಾದರೂ ತುಸ ಹೆಚ್ಚು ಕಡಿಮೆ ಅಷ್ಟೇ ಮಂದಿ ಬಂದಿರಬಹುದು; ಅಲ್ಲವೆ ಅವರು ನಮ್ಮ ಮುಖ್ಯ ತಂಡದ ಮೇಲೆ ಬಾಣಗಳನ್ನೆಸೆಸು ಅಲ್ಲಿಂದ ಈಗಾಗಲೆ ಬೇರೆ ಕಾನಿನ ಕಡೆಗೆ ಜಾರಿ ಕೂಡ ಹೋಗಿರಬಹುದು!''

''ಹಾಗೆಯೇ ಸಂಭವಿಸಿದ್ದರೆ ನಾವು ಇನ್ನು ಇಲ್ಲಿ ಹೀಗೆ ಇಲಿ-ಹೆಗ್ಗಣಗಳಂತೆ ಹೋರು ಸೇರಿ ಕುಳಿತುಕೂಂಡಿರುವುದೇಕೆ? ನಡೆ, ಹೊರಬೀಳೋಣ. ಇನ್ನು ನಮ್ಮ ಕಾಲುದಾರಿಯು ಮಸುಮಸಕಾಗಿ ಕಾಣುತ್ತಿದೆ. ಜೊತೆಗೆ ತುಬಾಕಿಯೂ ಇವೆ. ನಾವು ನಮ್ಮ ಮುಖ್ಯ ತಂಡದ ಕಡೆಗೆ ಹೋಗೋಣ ನಡೆ. ತಂಡವೊಳಗಿನ ನಮ್ಮ ಜನರು ಇತ್ತ ಕಡೆಗೇ ಬರುತ್ತಿದ್ದರೆ, ಅವರು ಸಮೀಪದಲ್ಲಿಯೇ ಗಂಟು ಬಿದ್ದಾರು; ಆದರೆ ಅವರಾನ ಸಂಕಟದಲ್ಲಿರುವರೋ, ಅವರು ಅಲ್ಲಿರುವರೋ, ಹೊರಟು ಹೋದರೊ? ಇದ್ದರೂ ಹೊರಟಿದ್ದರೂ ಸಮೀಪದಲ್ಲಿಯೇ ಅವರನ್ನು ಕೂಡಬಹುದು. ಇನ್ನೂ ಆರು ಗಂಟೆಯಾಗಿಲ್ಲ. ಗಂಟೆ ಹೊಡೆಯುವ ಹೊತ್ತಿಗೆ ನಾವು ಚಾಳನ ಹತ್ತರ........''

''ಮತ್ತೆ ಬಂದಿಗಳೆಂದು ನಾವಾಗಿ ಆ ಚಾಳಗೆ ಹೋಗಿ ಗಣತಿ ಕೊಡುವುದೇ? ಛೇ! ಕಂಟಕಬಾಬು, ಈಗ ನನ್ನ ಮನಸ್ಸಿನಲ್ಲೊಂದು ಭಯಂಕರ ಕಲ್ಪನೆಯು ಬರಹತ್ತಿವೆ. ಓಡಿಹೋಗುವ ಯಾವ ಸಂಧಿಯು ಇದುವರೆಗೂ ನಮಗೆ ಸಿಗುತ್ತಿರಲಿಲ್ಲವೋ, ಅದು ಇಂದು ತಾನಾಗಿಯೇ ಲಭಿಸಿವೆ. ನಮ್ಮ ದೈವವು ಅದನ್ನು ನಮಗ ತಂದುಕೊಟ್ಟಿರುತ್ತದೆಂದು ಏಕೆನ್ನಬಾರದು? ಇಂದು ಬೆಳಗ್ಗೆ ಚಾಳಿನೊಳಗಿಂದ ಹೊರಡುವಾಗಲೆ ಹಲ್ಲಿಯು ಅನುಕೂಲವಾಗಿ ನುಡಿಯಿತು! ಬಾಬೂಜಿ, ಹಲ್ಲಿಯ ನುಡಿಗಳಿಂದ ನನಗೆ ಶುಭಾಶುಭಗಳ ಶಕುನವು ಚನ್ನಾಗಿ ತಿಳಿಯುತ್ತದೆ.''

''ನೀನು ಆಗಲೆ ಅದನ್ನೇಕೆ ಕಂಡು ಹಿಡಿಯಲಿಲ್ಲ? ಮುಂಬೆ ಶುಭವಾಯಿತೆಂದರೆ, ಹಿಂದಿನ ಶಕುನಗಳೆಲ್ಲವೂ ನೆನಪಾಗುತ್ತವೆ. ನೂರುಸಾರೆಯಾದರೂ ಮನುಷ್ಯನು ಹೀಗೆ ಕೇಳಿದ್ದ ಆ ನೂರಾರು ಹಲ್ಲಿಗಳ ನುಡಿಗಳನ್ನು ಮರೆತುಬಿಡುತ್ತಾನೆ. ಅದು ಏನೇ ಇರಲಿ, ತಂಡವೊಳಗಿನ ಜಮಾದಾರನು ನಮ್ಮನ್ನು ಶೋಧಿಸಲಿಕ್ಕೆಂದು ಯಾರನ್ನಾದರೂ ಕಳಿಸಿರುವನೋ ಇಲ್ಲವೋ ಎಂಬದನ್ನಾದರೂ ನಿರೀಕ್ಷಿಸಬೇಡವೆ? ನಡೆ ಹಾಗಾದರೆ, ಹೊರಗೆಹೋಗೋಣ.

ಬಳಿಕ ಅವರಿಬ್ಬರೂ ಕೈಗಳಲ್ಲಿ ಆಯುಧಗಳನ್ನು ಧರಿಸಿಕೊಂಡು, ಆ ಗಿಡಗಳ ಹೊದರಿನೊಳಗಿಂದ ಹೊರಬಿದ್ದರು. ಅತ್ತಿತ್ತ ನಿರೀಕ್ಷಿಸುತ್ತ, ಕಿವಿಗಳನ್ನು ನಿಗುರಿಸಿ ಆಲಿಸುತ್ತ ದಾರಿಯುವರೆಗೂ ಬಂದರು. ಅಲ್ಲಿ ಬಂದು ನೋಡುತ್ತಾರೆ, ಅಲ್ಲೆಲ್ಲವೂ ಶೂನ್ಯವೇ!

ಯಾಕಂದರೆ, ನಾಲ್ಕು ಮತ್ತು ಐದು ಗಂಟೆಗಳ ಮಧ್ಯದಲ್ಲಿ ಯಾವಾಗ ಆ ತಂಡದೊಳಗಿನ ದಂಡಿತರ ಮೇಲೆ ದಟ್ಟವಾದ ಗಿಡಗಳೊಳಗಿಂದ ಹತ್ತೆಂಟು ಮಂದಿ ಜಾವರಾಗಳು ಬೇರೆ ಬೇರೆ ಕಡೆಯ ಮೂರು-ನಾಲ್ಕು ಸ್ಥಳಗಳಿಂದ ಆಕಸ್ಮಾತ್ತಾಗಿ ವಿಷಾರಿ ಬಾಣಗಳನ್ನು ಬಿಟ್ಟಿದ್ದರೋ, ಆಗ ಆ ದಂಡಿತರಲ್ಲಿಯ ಹತ್ತು-ಹದಿನೈದು ಜನ ಬಂದಿಗಳು ಗಾಯುಗೊಂಡು ಬಿದ್ದದ್ದನ್ನು ಕಂಡೊಡನೆಯೇ ಆ ತಂಡದಲ್ಲಿ ಒಮ್ಮೆಲೆ ಕೂಗಾಟ-ರಂಭಾಟ-ಓಡಾಟಕ್ಕಾರಂಭವಾಗಿತ್ತು. ಬಂದೂಕ ಧರಿಸಿದ್ದ ಯಾವ ಇಬ್ಬರು ಸೈನಿಕರಿದ್ದರೋ, ಅವರು ತಮ್ಮ ತುಬಾಕಿಗಳನ್ನು ಹಾರಿಸಿದ್ದರು; ಆದರೆ ಅವರ ಆ ಗುಂಡುಗಳೂ ಛರಿಗಳೂ ಆ ದಟ್ಟವಾದ ವೃಕ್ಷರಾಶಿಗಳ ಹಲಕೆಲವು ಸೊಪ್ಪು-ಜಾಳಿಗೆಗಳಲ್ಲೆಲ್ಲಾದರೂ ಅಡಗಿ ಹೋದವು! ಅಂಥ ಐವತ್ತು ತುಬಾಕಿಗಳನ್ನು ಏಕೋಪ್ರಕಾರವಾಗಿ ಹಾರಿಸಿದರೂ, ಕಾಡಿನಲ್ಲಿ ಹುದುಗಿಕೊಂಡು ಕುಳಿತು ಶರಸಂಧಾನ ನಡೆಯಿಸಿರುವವರ ಕೂದಲು ಕೂಡ ಕೊಂಕಲಾರದು! ಅದು ಸಾಯಂಕಾಲದ ಸಮಯ. ಕತ್ತಲಲ್ಲೂ ಮಳೆಯಲ್ಲೂ ಆ ಕಾಡಿನಲ್ಲಿ ಮುಂದಾಗಿ ಸಾಗಿ ಹೋಗುವ ಧೈರ್ಯವು ಆ ಬಾಜಾರಬುಣುಗೆಯ-ಹಿಡಕೊಂಡ ಬಂದ ದಂಡಿತರಲ್ಲೆಲ್ಲಿಂದ ಬರಬೇಕು? ಮತ್ತು ಬಂದಿಗಳು ಆ ಬಗ್ಗೆ ತಮ್ಮ ಜೀವಿತವನ್ನು ಪಣಕಟ್ಟಿ ಸುಮ್ಮನೆ ಪೇಚಾಡುವುದಾದರೂ ಏಕೆ? ಆ ಇಂಗ್ಲಿಷರೂ ಸಾಯಲಿ; ಆ ಜಾವರಾಗಳೂ ಸಾಯಲಿ! ತಂಡದ ಜಮಾದಾರ ಸಹಿತವಾಗಿ ತಮ್ಮ ಜೀವವನ್ನು ತಕ್ಕೊಂಡು ಶಕ್ಯವಾದಷ್ಟು ತೀವ್ರ ಅಲ್ಲಿಂದ ಜಾರಿ ಹೋಗುವದು ಹೇಗೆ? ಎಂಬ ಮಾರ್ಗಕ್ಕೇ ತೊಡಗಿದರು. ಕಂಟಕನೊಡನೆ ಹೋಗಿದ್ದ ಹಾಗು ದಾರಿಯ ಅರ್ಧ ಮುಕ್ಕಾಲು ಭಾಗದ ವೃಕ್ಷಗಳ ಮೇಲೆ ಕ್ರಮಾಂಕಗಳನ್ನು ಹಾಕುತ್ತಿದ್ದ ನಾಕ್ಕೈದು ಮಂದಿ ಬಂದಿಗಳು ಮುಖ್ಯ ತಂಡದಲ್ಲಿದ್ದ ಹಾಹಾಃಕಾರದ ಗೊಂದಲವನ್ನು ಕೇಳುತ್ತಲೆ, ಕಾಲಿಗೆ ಬುದ್ಧೀ ಹೇಳಿ ಓಡಿ ಹೋದವರೇ ತಮ್ಮ ಠಾಣ್ಯವನ್ನು ಸೇರಿಕೊಂಡಿದ್ದರು. ಕಂಟಕ-ಗಿಂಟಕ ಮುಂತಾದ ಯಾರು ದಾರಿಯ ಆ ಕಡೆಯ ತುದಿಯ ಹತ್ತರ ಸಿಕ್ಕಿಬಿದ್ದಿದ್ದರೊ, ಅವರು ಜೀವದಿಂದಿರುವರೋ ಸತ್ತಿರುವರೋ, ಅವರ ವಿಚಾರಣೆ ಮಾಡುವ ಭಾನವು ಕೂಡ ಆದಾಗಿಗೂ ಉಳಿಯಲಿಲ್ಲ. ತುಬಾಕಿ ಧರಿಸಿದ್ದ ಸೈನಿಕರೇನು,

ಜಮಾದಾರರೇನು, ಮುಂದೆ ಹೆಜ್ಜೆ ಕೂಡ ಇಡದೆ, ಸಂಕಟದ ಗಂಟೆ (Alarm Bell) ಬಡಿದು, ಸಿಕ್ಕಷ್ಟು ದಂಡಿತರನ್ನು ಕಟ್ಟಿಕೊಂಡು, ಗಾಯಗೊಂಡವರನ್ನು ಉಳಿದವರ ಹೆಗಲುಗಳ ಮೇಲೆ ಹೊರಿಸಿ ಚಾಳಿನ ಕಡೆಗೆ ಹಿಂದಿರುಗಿ ನಡೆದರು. ಜಾವರಾಗಳು ಹಾಗೆ ಹಿಂದಿರುಗಿದ ನಡೆದಿದ್ದ ಆ ಬಂದಿಗಳ ತಂಡದ ಬೆನ್ನಮೇಲೆಯೂ ಮತ್ತೆ ನಾಲ್ಕಾರು ಬಾಣಗಳನ್ನೆಸೆಯುತ್ತಲೆ ಆ ತಂಡಕ್ಕೆ ತಂಡವೇ ಕ್ವಿಕ್ ಮಾರ್ಚ್ ಮಾಡಿ ಓಡಿಹೋಯಿತು!

ಚಾಳಿನ ಹತ್ತರ ಬರುತ್ತಲೆ ಆ ಸೈನಿಕರೂ ಜಮಾದಾರನೂ ಆ ಸಂಗತಿಯನ್ನು ಅರಣ್ಯವಿಭಾಗದ ಇಂಗ್ಲಿಷ ಅಧಿಕಾರಿಗೆ ಉಪ್ಪುಕಾರ ಹಚ್ಚಿ ಹೇಳಿಬಿಟ್ಟರು.

"ಸಾಬ, ಜಾವರಾಗಳದೊಂದು ಬಹು ದೊಡ್ಡ ಸೈನ್ಯವು ಆ ಕಾಡಿನಲ್ಲಿ ಕಾಳಗಕ್ಕೆ ಬಂದಿದೆ."

"ಆ ಜಾವರಾಗಳು ಸಾಧಾರಣವಾಗಿ ಎಷ್ಟು ಜನರಿರಬಹುದು?" ಹೀಗೆಂದು ಸಾಬನು ಕೇಳಲು,

"ಸಾಬ, ಅವರು ಸಾವಿರಾರು ಜನರಾದರೂ ಇದ್ದಿರಲೇಬೇಕು!"

ಆ ತಂಡದೊಳಗಿನ ಜನರ ಸಮಾಚಾರವನ್ನು ಆ ಬಗೆಯಾಗಿ ತಕ್ಕೊಂಡ ಬಳಿಕ ಆ ಇಪ್ಪತ್ತು ಮೂವತ್ತು ಮಂದಿ ಜಾವರಾಗಳೂ ಓಡಿ ಹೋಗಿ ತಮ್ಮ ಸುದುರ್ಗಮವೂ ಸುದೂರವೂ ಆದಂಥ ಗ್ರಾಮನಿವಾಸವನ್ನು ಸೇರಿಕೊಂಡರು. ಕಂಟಕಾದಿಗಳ ಟೋಳಿಯ ಮೇಲೆ ಬಾಣವೆಸಗಿದ್ದ ಇಬ್ಬರು-ಮೂವರು ಜಾವರಾಗಳಾದರೂ ಮೂರು ನಾಲ್ಕು ಹುಸಿಗುಂಡಿನ ಸಪ್ಪಳವನ್ನು ಕೇಳಿದಾಗಲೆ ಜಪುಳಿನ ಕಡೆಗಾಗಿ, ಆ ಮುಖ್ಯ ತಂಡದ ಕಡೆಯಿಂದ ಆಗಲೆ ಅತ್ತ ಬರುತ್ತಿದ್ದ ಜಾವರಾಗಳ ಹಿಂಡಿನಲ್ಲಿ ಕೂಡಿಬಿಟ್ಟಿದ್ದರು. ಅಂದು ಅವರು ಇಂಗ್ಲಿಷರ ಜನರ ಮೇಲೆ ದಾಳಿ ಮಾಡಿದ್ದರೂ, ಮುಂಚೆ ಕೆಲವು ವರ್ಷಗಳ ಹಿಂದೆ ಆದ ಕಾದಾಟದಲ್ಲಿ ಇಂಗ್ಲಿಷರು ಅವರದೆಂದು ಯಾವ ಮೇರೆಯನ್ನು ಗೊತ್ತು ಮಾಡಿದ್ದರೋ, ಅದರಾಚೆಗೆ ಜಾವರಾಗಳದೆಂದು ಗೊತ್ತಾಗಿದ್ದ ಕಾಡಿನಲ್ಲಿ ಇಂದು ಇಂಗ್ಲಿಷರು ಮತ್ತೆ ಕಳ್ಳರಂತೆ ಪ್ರವೇಶಿಸಿದ ಬಗ್ಗೆ ಅವರು ಇಂಗ್ಲಿಷರ ಜನರೊಳಗಿನ ಇಪ್ಪತ್ತು ಮೂವತ್ತು ಮಂದಿಗಳನ್ನು ಗಾಯಗೊಳಿಸಿ ಸೇಡು ಹಾಯಿಸಿಕೊಂಡಿದ್ದರೂ, ಇಂಗ್ಲಿಷರಾದರೂ ಪ್ರತಿಶೋಧಕ್ಕಾಗಿ ಇನ್ನು ಎರಡು-ಮೂರು ದಿನಗಳಲ್ಲೇ ಸಶಸ್ತ್ರ ಸೈನ್ಯದಳವನ್ನು ತಕ್ಕೊಂಡು ಆ ಅಡವಿಯೊಳಗೆ ಪ್ರವೇಶಿಸದ ಹೊರತು ಬಿಡಲಾರರೆಂಬದನ್ನು ಆ ಜಾವರಾಗಳಾದರೂ ಚನ್ನಾಗಿ ಅರಿತಿದ್ದರು. ಕ್ವಚಿತ್ತಾಗಿ ನಾಳೆಯೆಂದರೆ ನಾಳೆಗೇ ಕೂಡ

ಬರಬಹುದೆಂದು ತಿಳಿದಿದ್ದರು; ಯಾಕಂದರೆ ಇಂಗ್ಲಿಷರ ಕಡೆಯ ಒಬ್ಬ ತುಬಾಕಿಯ ಸೈನಿಕನನ್ನು ಅವರು ಕೊಂದೇಬಿಟ್ಟಿದ್ದರು. ಆತನ ಹಾಗು ಆತನಂತೆ ಬೇರೆ ತಪ್ಪಿಸಿಕೊಂಡಿದ್ದ ದಂಡಿತರ ಶೋಧಕ್ಕೆ ಇಂಗ್ಲಿಷರ ಜನರು ನಾಳೆ ಎಂದರೆ ನಾಳೆಯೇ ಬಂದರೆ? ಒತ್ತಟ್ಟಿಗೆ ನಿಂತು ನಿಶ್ಚಿತ ರಣಭೂಮಿಯ ಮೇಲೆ ಆ ಜಾರವರಾಗಳು ಎದುರಾಗುವ ಬಗೆ ಹೇಗೆ? ಅದು ಅವರ ಸಮರ ಭೂಮಿಯೇ ಅಲ್ಲ ಪಿಶಾಚಿಗಳಂತೆ ಅವರ ಸಂಚಾರ; ಅದೃಶ್ಯತೆಯೆಂಬುದೇ ಅವರ ಅಸ್ತ್ರವೂ ಬಲವೂ ಇಂಗ್ಲಿಷರು ಅವರನ್ನು ಶೋಧಿಸಲಿಕ್ಕೆ ಹತ್ತಿದಾಗ ಅವರು ಬೇಕಂತ ಸಿಗಲಾರರು ಶೋಧಿಸದಿದ್ದಲ್ಲಿಂದಲೇ ಅವರು ಅಕಸ್ಮಾತ್ತಾಗಿ ನುಗ್ಗತಕ್ಕವರು! ಅಂತೆಯೇ ಅವರು ಆ ಕಾಡಿನ ಕಡೆಗೆ ಮತ್ತೆ ಹಣಿಕಿಕೂಡ ನೋಡಬಾರದೆಂದು ನಿಶ್ಚಯಿಸಿ, ಬೇರೆ ಕಾಡಿನೊಳಗಿಂದಲೇ ಅಂಜದೆ ಇಂಗ್ಲಿಷರ ಜನರ ಮೇಲೆ-ಸಕ್ತದುಡಿಯುವ ಅಥವಾ ಸ್ವತಂತ್ರ ಗ್ರಾಮವಾಸಿಗಳಾದ ಬಂದಿಗಳ ಮೇಲೆ-ಮುಂದಿನ ದಾಳಿಯನ್ನಿಕ್ಕುವ ಬೇತು ಮಾಡಿಕೊಂಡು ಬಿಟ್ಟಿದ್ದರು

ಈ ರೀತಿಯಾಗಿ ಬಂದಿಗಳ ಟೋಳಿಯೊಳಗಿಂದ ಇಲ್ಲವೆ ಜಾರವರಾಗಳ ಕಡೆಯಿಂದ ಯಾರೂ ಆ ದಾರಿಯ ಹಿಂದಿಸ ಇಲ್ಲವೆ ಮುಂದಿನ ಕಾಡಿನಲ್ಲಿ ಉಳಿದಿರದ್ದರಿಂದ, ಕಂಟಕ-ರಫೀಉದ್ದೀನರು ಅಲ್ಲಿಗೆ ಬಂದ ಕೂಡಲೆ ಅಲ್ಲಿ ಅವರಿಗೆ ಎಲ್ಲವೂ ನಿವಾಂತವಾಗಿ ತೋರಿತು.

ಅಂಥ ನಿವಾಂತ ಸ್ಥಳದಲ್ಲಿ ಅಂಥ ಜೀವದ ಮೇಲಿನ ಪ್ರಸಂಗದಲ್ಲಿ ಮತ್ತು ಅರಣ್ಯದಲ್ಲಿ ಕಪ್ಪು ಕಾಡಿಗೆಯಂತಾಗುತ್ತ ನಡೆದಿದ್ದ ಕಾರಿರುಳ ದವಡೆಯಲ್ಲಿ ತಾವು ಸ್ವತಃ ಸಿಕ್ಕಿರುವದನ್ನು ಕಂಡೊಡನೆಯೇ ಯಾವದೊಂದು ದಿಙ್ಮೂಢ ಭೀತಿಯಿಂದ ಅವರೀರ್ವರ ಮನಸ್ಸೂ ಗಾಬರಿಗೊಂಡಿತು! ಮತ್ತು ಅವರಿಬ್ಬರ ಮನಸ್ಸಿನ ಎಳೆತವು ಹೊಸ ಹೊಸ ಸಂಕಟಗಳಲ್ಲಿ ಬೀಳದೆ, ನೆಟ್ಟಗೆ ಸರಕಾರೀ ಚಾಳಿಗೆ ಹೋಗಿ, ತಮ್ಮ ದಂಡಿತ ಬಂಧುಗಳಿಗೂ ಸರಕಾರೀ ಅಧಿಕಾರಿಗಳಿಗೂ ಭೆಟ್ಟಿಯಾಗುವ ಕಡೆಗೇ ಆಯಿತು.

ಆದರೆ ಇಬ್ಬರ ಮನಸ್ಸಿನಲ್ಲೂ ಓಡಿ ಹೋಗುವ ಸ್ಫೂರ್ತಿಯು, ಹೊಟ್ಟೆಯಲ್ಲಿ ವೇದನೆಗಳೇಳುವಂತೆ ಏಕೋಪ್ರಕಾರವಾಗಿ ಏಳುತ್ತಿತ್ತು. ಅದು ಅವರಿಗೆ ಕೊಂಚವೂ ಸೊಗಸಾಗಗೊಡಲೊಲ್ಲದು.

ರಫೀಉದ್ದೀನನು ಕಂಟಕನಿಗೆ ಆಗಲೆ ಯಾವಾಗ ಸ್ಪಷ್ಟವಾಗಿ 'ಕರಿನೀರೊಳಗಿನ ಬಂದಿಗೃಹವನ್ನೊಡೆದು ಓಡಿ ಹೋಗುವದಾದರೆ, ಅದಕ್ಕೆ ಇದೇ ಸಂಧಿಯಾಗಿದೆ?' ಎಂದು ಸೂಚಿಸಿದ್ದನೋ, ಕಂಟಕನ ಮನಸ್ಸಿನಲ್ಲಾದರೂ ಅದ

ಕ್ಕಿಂತ ಮುಂಚೆಯೇ ಅದೇ ಎದೆಗಾರಿಕೆಯ ಕಲ್ಪನೆಯು ಬಂದಿತ್ತು! ಆದರೀ ಕಲ್ಪನೆಯ ಬೆನ್ನ ಹಿಂದೆಯೇ ಆತನಿಗೆ ಸ್ಮರಣವಾದುದೇನೆಂದರೆ,

"ಎಲೋ, ಓಡುವುದೇನೋ ನಿಜ; ಆದರೆ ನಾನೊಬ್ಬನೇ ಓಡಿ ಹೋಗಬೇಕಾಗಿಲ್ಲಲ್ಲ! ನಾನು ನನ್ನ ಮಾಲತಿಯನ್ನು ಬಂಧವಿಮುಕ್ತಗೊಳಿಸಿ, ಅವಳೊಡಗೂಡಿ ಓಡಿ ಹೋಗಬೇಕಾಗಿದೆ. ಈಗ ನಾನೊಬ್ಬನೇ ಈ ಕಾಡಿನಲ್ಲಿ ಸೇರಿದರೆ, ಪುನಃ ಮಾಲತಿಯನ್ನು ಬಂದಿಗಳ ವಸತಿಯೊಳಗಿಂದ ಬಿಡಿಸಿಕೊಂಡು ಬರುವ ಮೂಲನ್ನೇ ಹಾರಿಸಿಬಿಟ್ಟಂತಾದೀತು! ಒಮ್ಮೆ ಅಡವೀಪಾಲಾದೆನೆಂದರೆ, ಮತ್ತೆ ವಸಾಹತಿಯ ಕಡೆಗೆ ಹೊರಳುವುದೇ ಅಶಕ್ಯ. ಹೀಗೆ ಅತರ್ಕವಾಗಿ ಇಂದೇ ಸಂಧಿ ದೊರಕೀತೆಂಬ ಕನಸು ಕೂಡ ಬಿದ್ದಿರಲಿಲ್ಲ. ಇಲ್ಲದಿದ್ದರೆ ಅವಳನ್ನು ಯುಕ್ತಿ-ಪ್ರಯುಕ್ತಿಗಳಿಂದ ಬಿಡಿಸುವ ಏನಾದರೂ ಯೋಜನೆಯನ್ನು ಮೊದಲೇ ನಿಶ್ಚಯಿಸಿ, ಆ ಬಳಿಕ ಇಂದಿನ ಸಂಧಿ ಸಾಧಿಸಬಹುದಿತ್ತು!"

ಆ ಅಡಚಣೆಯ ಸಲುವಾಗಿ ಕಂಟಕನು ತತ್ಕಾಲದಲ್ಲಿ ಓಡಿ ಹೋಗಬೇಕೆಂಬ ರಫೀಉದ್ದೀನನ ಒತ್ತಾಯಕ್ಕೆ ಸಮ್ಮತಿಯನ್ನು ಕೊಡಲೊಲ್ಲನು; ಅಸಮ್ಮತಿಯನ್ನೂ ಪ್ರಕಟಿಸಲೊಲ್ಲನು ಈ ಮೇಲಿನ ಕಂಟಕನ ನಿಜವಾದ ಅಡಚಣೆಯು ರಫೀಉದ್ದೀನನಿಗೆ ಗೊತ್ತೇ ಇರಲಿಲ್ಲ. ಆದರಿಂದ ಆತನು ಆ ಸಂಧಿಯ ಬೇರೆ ಲಾಭಗಳನ್ನೇ ಕಂಟಕನ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಮತ್ತೆ ಮತ್ತೆ ಹೇಳಿ, ಕೊನೆಗೆ—

"ಬಾಬೂಜೀ, ಸಬಸೇ ಬಢಕರ ಬಾತ ಯಹ ಹೈ ಕಿ, ಆಜ ಸರಕಾರ ಆಪಕಾ ಪೀಛಾ ಭೀ ನ ಕರೇಗೀ! ಇನ್ನು ನಾಲ್ಕೈದು ದಿನಗಳಾದರೂ ನಾವು ಓಡಿ ಹೋಗಿರದೆ, ಜಾನವರಾಗಳೇ ನಮ್ಮನ್ನು ಆ ಸೈನಿಕನಂತೆ ಈ ಅಡವಿಯೆಲ್ಲೆಲ್ಲಾದರೂ ಗಂಟು ಬಿದ್ದು ಕೊಂದಿರಬೇಕೆಂದು, ಬಹುಶಃ ಹೀಗೆಯೇ ಸರಕಾರಕ್ಕೆ ಅನಿಸುತ್ತಿರುವದು! ಸರಕಾರೀ ಜನರು ನಮ್ಮಗಳ ಶೋಧಕ್ಕೆ ಇತ್ತ ಬಂದಾರು; ಆನರೆ 'ಭಗೋಡೆ' ಎಂದಲ್ಲ; 'ಮಾರೇ ಗಯೇ' ಎಂದು! ಮತ್ತು ಇದೇ ಅಡವಿಯಲ್ಲಿ ಮೊದಲು ಶೋಧಿಸಬಹುದು. ಇದಕ್ಕಿಂತಲೂ ಹೆಚ್ಚಿನ ರಿಯಾಯತಿ ಅದೇನು ಸಿಗಬೇಕು? ನಿಜವಾಗಿಯೂ ಯಾರು ಓಡಿ ಹೋಗಬೇಕಾಗಿದೆಯೋ, ಆ ಬಂದಿಗಳಿಗೆ ಸರಕಾರವು ತಾನಾಗಿ ಸರಕಾರೀ ಖರ್ಚಿನಿಂದ ಬಂದೂಕು-ಕಾಡತೂಸು-ಆಯುಧಗಳನ್ನು ಪೂರೈಸಿ, ಪಹರೆಯೊಳಗಿಂದ ಬಿಡಿಸಿ, ಈ ದಟ್ಟವಾದ ಕಾಡಿನ ವರೆಗೆ ಸ್ವತಃ ಸುರಕ್ಷಿತವಾಗಿ ತಲುಪಿಸಿ, ಮೇಲೆ ಆಶ್ವಾಸನ ಕೊಡಬೇಕೇನೆಂದರೆ, 'ಇನ್ನು ನಾಲ್ಕೈದು ದಿನಗಳ ವರೆಗೆ ನಾವು ನಿಮ್ಮನ್ನು ಬೆನ್ನಟ್ಟಲಿಕ್ಕೆ ಸಹ ಪ್ರಯತ್ನಿಸುವದಿಲ್ಲಪ್ಪಾ. ನೀವು ಹೊರಟು

ಹೋಗಿರಿ; ಅಷ್ಟರೊಳಗೆ ಶಕ್ಯವಾದಷ್ಟು ದೂರ ಹೊರಟು ಹೋಗಿರಿ! ಇಂಥ 'ಭಗೋಡೆ' (ಓಡಿಹೋಗುವವರಾದ) ಬಂದಿಗಳು ಈ ಅಂಡಮಾನದ ಇಡೀ ಇತಿಹಾಸದಲ್ಲಿ ನಾವಿಬ್ಬರೇ ಹೊರಟವರೆನ್ನಬಹುದು! ಇನ್ನು ಇಷ್ಟಾದರೂ ಓಡಿ ಹೋಗದೆ, ತಿರುಗಿ ತನ್ನ ಕಾಲಿನಿಂದ ಯಾವನು ಸರಕಾರೀ ಚಾಳಿಗೆ ಹೋಗಿ ಸರಕಾರೀ ಬಂದಿಶಾಲೆಯಲ್ಲಿ ಮತ್ತೆ ಸೇರಿ ಕೂಡ್ರುವನೋ, ಆತನು ಬಂದಿಗೃಹದಲ್ಲಿಯೇ ಕೊಳೆತು ಸಾಯಲಿಕ್ಕೆ ತಕ್ಕವನಾಗಿರುತ್ತಾನೆಂದು ಅನ್ನ ಬೇಕಾಗುವದು! ಆದ್ದರಿಂದ ನಿಮಗೆ ಅದೇ ಬೇಕಿದ್ದರೆ, ನೀವು ಚಾಳಿಗೆ ತಿರುಗಿ ಹೋಗಿರಿ. ನಾನಂತೂ ಇನ್ನು ಜೀವ ಹೋದರೂ ಹಿಂದಿರುಗಲಾರೆನು. ಆ ತುಬಾಕಿಯನ್ನಷ್ಟು ನನಗೆ ಕೊಡಿರಿ; ಅಂದರೆ ನಾನು ಕಾನಿನಲ್ಲಿ ಹೊಕ್ಕವನೇ ಒಮ್ಮೆಲೆ ಹಿಂದುಸ್ತಾನವನ್ನು ತಲುಪಿಯೇ ಬಿಡುವೆನು."

ಆತನ ಆ ನಿಕರದ ನುಡಿಯೊಡನೆ ಹೇಳಲೋ-ಬೇಡವೋ ಎಂದು ಕಂಟಕನ ಮನಸ್ಸಿನೊಳಗೆ ನಡೆದಿದ್ದ ಚಲನವಲನವೊನ್ನು ನಿರ್ಧಾರಕ್ಕೆ ತಲುಪಿತು. ಸಾಧಾರಣವಾಗಿ, ಆದರೆ ಈಗ ಹೇಳುವದೇ ಇಷ್ಟವೆಂದು ಆತನ ನಿಶ್ಚಯವಾಗಲು, ಆಗ ಆತನು:—

"ಮೂರು ನಾಲ್ಕು ದಿನಗಳ ಮುಂಚೆ ಈ ಸಂಧಿಯು ಲಭಿಸಿದ್ದರೆ, ಇಂದಿನ ಓಡುವ ಕೆಲಸದಲ್ಲಿ ನಾನೇ ನಿನಗಿಂತಲೂ ನಾಲ್ಕು ಹೆಜ್ಜೆ ಮುಂದಾಗುತ್ತಿದ್ದೆನು; ಆದರೆ ನಿನಗೆ ಗೊತ್ತಿಲ್ಲ ಈ ಮೂರು-ನಾಲ್ಕು ದಿನಗಳಲ್ಲಿಯು ಈ ಹೊಸ ಸರಕಾರೀ ಕೆಲಸದ ಅವಸರದಲ್ಲಿ ನಿನಗೆ ಹೇಳಲಿಕ್ಕೆ ಕೂಡ ಅವಸರವಾಗದಂತಹ ಒಂದು ಸಂಗತಿಯು ಹಾಗೆಯೇ ಉಳಿದಿದೆ ನನ್ನಂತೆ ಜೀವಾವಧಿ ದಂಡಿತಳಾದ ನನ್ನ ಭಗಿನಿಯು ಇಲ್ಲಿಯ ಸ್ತ್ರೀ ಬಂದಿಗೃಹಕ್ಕೆ ಕಳೆದ ವಾರದಲ್ಲಿ ಬಂದಿರುತ್ತಾಳೆ! ನಾನು ಓಡುವುದಾದರೆ, ಅವಳನ್ನು ಕಟ್ಟಿಕೊಂಡೇ ಓಡುವವನು. ಸರಕಾರದ ಎಲ್ಲ ಅಧಿಕಾರಿಗಳಿಗೆ ನನ್ನ ಶಿಕ್ಷಾವೃತ್ತದಿಂದ ತಿಳಿದಿರುವುದೇನಂದರೆ, ಅವಳು ನನ್ನ ಖಾಸ ತಂಗಿಯಾದ ಕಂಟಕಿಯೆಂದು. ನಮ್ಮಿಬ್ಬರ ಮೇಲೆಯೂ ನಾವಿಬ್ಬರೂ ಸೇರಿ ಮಾಡಿದ ಕೊಲೆಯ ಒಂದೇ ಆರೋಪವಿದ್ದು, ಇಬ್ಬರಿಗೂ ಕರಿನೀರಾಗಿದೆಯೆಂದು. ಈಗ ನಾನೊಬ್ಬನೇ ಓಡಿ ಹೋದರೆ, ಅವರು ಕ್ವಚಿತ್ತಾಗಿ ನನ್ನ ಸೇಡು ಎಂದು ಅಥವಾ ಅವಳಿಗೆ ಈ ಸಂಗತಿಯು ಗೊತ್ತಿರಲೇಬೇಕೆಂಬ ಸಂಶಯದಿಂದ ಅವಳನ್ನು ಪೀಡಿಸಲಿಕ್ಕೆ ಹಿಂದುಮುಂದೆ ನೋಡಲಾರರು; ಅಲ್ಲದೆ ಅವಳು ಬಂದಿಗೃಹದ ಗೋರಿಯಲ್ಲೇ ಹೂತಿರಲು, ನಾನು ಅದರೊಳಗಿಂದೆದ್ದು ಜೀವಂತನಾದರೂ ಸತ್ತಂತೆಯೇ ಸರಿ! ಇದೊಂದು ನನ್ನ ಓಡಿ ಹೋಗುವ ಮಾರ್ಗದೊಳಗಿನ ಮುಖ್ಯ ಅಡಚಣಿಯಾಗಿದೆ ಈಗ

ಒಮ್ಮೆ ಒಡಿಬಿಟ್ಟೆನೆಂದರೆ, ಮತ್ತೆ ಅವಳನ್ನು ಬಿಡಿಸಿಕೊಳ್ಳುವ ಕಟ್ಟನ್ನು ಮಾಡಲೆಂತು? ಆ ಮೇಲೆ ಅವಳೆಡೆಗೆ ಹೋಗಿ ತಿರುಗಿ ಅವಳನ್ನು ಭೆಟ್ಟಿ ಯಾಗುವದು ಕೂಡ ಅಶಕ್ಯವೇ ಆದೀತು! ಅವಳು ಗಾಬರಿಗೊಂಡಾಳು. ನನ್ನ ಪತ್ತೆ ಇಲ್ಲದಂತಾ'ಭಗೋಡಾ'ದುದನ್ನು ಕೇಳಿ ಅವಳು ಚಿಂತೆಯಿಂದ ಕುಂದಿ, ಜೀವ ಕೂಡ ಕೊಟ್ಟಾಳು."

"ನಡೆಯಿರಿ. ಇದೇ ನಿಮ್ಮ ಅಡಚಣಿಯುಷ್ಟೇ? ಆದರೆ ನಾನು ನಿಮಗೆ ಪ್ರತಿಜ್ಞಾಪೂರ್ವಕವಾಗಿ ತಿಳಿಸುವ್ರದೇನಂದರೆ, ನಿಮ್ಮ ಭಗಿನಿಯನ್ನು ಬಂದಿ ಗೃಹದೊಳಗಿಂದ ಬಿಡಿಸುವ ಕೆಲಸವು ನಾವು ಸ್ವತಃ ಬಂದಿಗಳಿರಲು,-ಓಡಿ ಹೋಗದಾಗಿನಗಿಂತಲೂ ಓಡಿಹೋದ ಮೇಲೆಯೇ ಸ್ವತಂತ್ರವಾಗಿ ವ್ಯವ ಹರಿಸಹತ್ತಿದಾಗಲೇ ಹೆಚ್ಚು ಸುಸಾಧ್ಯವಾಗತಕ್ಕದಿದೆ! ಇಂದು ನಾವು ಅರಣ್ಯ ದೊಳಗೆ ಓಡಿಹೋದೆವೆಂದರೆ, ಮತ್ತೆ ಈ ಬಂದಿಗಳ ವಸಾಹತಿಗೆ ಬರಲಿಕ್ಕೇ ಬಾರದೆಂಬ ಅಂಜಿಕೆಯು ತಪ್ಪಿನದು. ನಾನು ಹಿಂದಕ್ಕೆ ಓಡಿದ್ದೆನಷ್ಟೇ? ಆಗ ಮೂರು-ನಾಲ್ಕು ತಿಂಗಳು ಇರುಳಲ್ಲಿ ಬೇಕಾದ ಹಾಗೆ ಆ ಜಾವದಾಗಳಲ್ಲಿರು ತ್ತಿದ್ದೆನು; ಮತ್ತು ಹಗಲೊಳಗೆ ಗುಪ್ತರೀತಿಯಿಂದ ಈ ವಸಾಹತುಗಳಲ್ಲಿ ಅಡ್ಡಾಡುತ್ತಿದ್ದೆನು! ಕಂಟಕಬಾಬು, ಆ ಕೆಲಸ ನನ್ನ ಕಡೆಗೆ. ನಾನು ನಿಮ್ಮ ಭಗಿನಿಯನ್ನು ಬಂದಿಗೃಹದೊಳಗಿಂದ ಒಮ್ಮೆಲೆ ಎತ್ತಿಕೊಂಡು ಅರಣ್ಯದೊಳಗೆ ನೀವಿದ್ದಲ್ಲಿಗೆ ನಿಮ್ಮೆದುರಿಗೇ ತಂದಿಳಿಸುತ್ತೇನೆ! ನನ್ನ ನಿಜವಾದ ಕರ್ತೃತ್ವಶಕ್ತಿ ಯನ್ನಾದರೂ ನೋಡಿರಿ. ತಾನು ತುಸ ಪ್ರತಿಬಂಧರಹಿತನಾದರೆ, ಈ ಕಾಡಿನ ಆಹಾರ-ನೀರು-ಹವೆಗಳನ್ನು ಈ ಹುಲಿಯು ಮತ್ತೊಮ್ಮೆ ಭುಂಜಿಸಿದರೆ, ಈತನ ಈ ತುಕ್ಕು ಹಿಡಿದಿದ್ದ ಉಗುರುಗಳಿಗೆ ಮತ್ತೆ ಆ ಮೊದಲಿನ ಹುಲಿ ಯುಗುರಿನ ಹರಿತವೇ ಬಂದು ಬಿಡುವದು! ಕಂಟಕಬಾಬು! ನಿಮಗೆ ನನ್ನ ಮುಂಚಿನ ಪರಾಕ್ರಮವು ತಿಳಿಯದು. ನಿಮ್ಮ-ನಮ್ಮ ಗುರುತೆಂದರೆ, ನನ್ನ ಕೈಗಳಿಗೆ ಬೇಡಿ ಬಿದ್ದ ಮೇಲೆ ಕರಿನೀರಿಗೆಂದು ಬರುವಾಗ 'ಮಹಾರಾಜಾ' ಹಡಗಿನಲ್ಲಾದದ್ದೇ ಮೊದಲು; ಆದರೆ ಆ ದಿವಸ ಯಾವ ಭಾಊಬಂದದ ಆಣೆಯನ್ನು ನಾವು ಮಾಡಿರುವೆವೋ, ಅದನ್ನು ನೀವು ಪಾಲಿಸಿ, ಈ ಕಠೋರ ಬಂದಿವಾಸದಲ್ಲಿ ನನ್ನ ಮೇಲೆ ಯಾವ ಅನೇಕ ಉಪಕಾರಗಳನ್ನು ಮಾಡಿರು ತ್ತೀರೋ, ಅವುಗಳನ್ನು ನಾನು ಜನ್ಮಜನ್ಮಾಂತರದಲ್ಲೂ ಮರೆಯಲಾರೆನು. ಅದೇ ಹಡಗದೊಳಗಿಂದ ಕರಿನೀರಿಗೆ ಬರುವಾಗ ನಾನು ಕರಿನೀರಿನ ಬೇಡಿ ಗಳನ್ನು ಕಡಿದೊಗೆದು ಓಡುವ ವಚನವನ್ನು ನಿಮಗೆ ಕೊಟ್ಟಿದ್ದೆನು; ಮತ್ತು ಇಂದು ಅದನ್ನು ಅಂಶತಃ ದಿಟವಾಗಿ ಮಾಡಿರುತ್ತೇನೆ. ಕಂಟಕಬಾಬು,

ನಾಳೆ-ನಾಡದ್ದರಲ್ಲಿ ಅದನ್ನು ಸಂಪೂರ್ಣ ದಿಟವಾಗಿ ಮಾಡಿ ತೋರಿಸೇನು. ಬೇಡಿಗಳನ್ನು ಹಾಕಿಕೊಂಡು ಪಂಜರದಲ್ಲಿ ಬಿದ್ದಿದ್ದ ರಫೀಉದ್ದೀನನನ್ನಷ್ಟೇ ನೀವು ನೋಡಿರುತ್ತೀರಿ; ಅಂತೆಯೇ ನಿಮಗೆ ನನ್ನ ಮಾತುಗಳೆಲ್ಲ ಬಡಬಡಿಕೆ ಯೆಂದು ತೋರಬಹುದು; ಆದರೆ ಪಂಜರದಲ್ಲಿ ಸಿಕ್ಕು ಬೀಳುವ ಮೊದಲು ನನ್ನಲ್ಲಿ ವಾಸಿಸಿದ್ದ ಹುಲಿಯನ್ನು ನೀವು ಕಂಡುಕೊಂಡಿದ್ದರೆ, ನನ್ನ ಕರ್ತೃತ್ವ ದಲ್ಲಿ ನಾನು ಹೇಳುವ ಮೊದಲೇ ನಿಮ್ಮ ನಂಬಿಗೆ ಕೂಡ್ರುತ್ತಿತ್ತು!'

ರಫೀಉದ್ದೀನನ ಈ ಕೊನೆಯ ನಾಲ್ಕಾರು ವಾಕ್ಯಗಳಿಂದ ಕಂಟಕನಲ್ಲಿ ಆತನ ನಂಬಿಗೆ ಹುಟ್ಟುವ ಬದಲು, ಆತನ ವಿಷಯದ ಅಂಜಿಕೆಯೇ ಹೆಚ್ಚಾಗ ಹತ್ತಿತು. ರಫೀಉದ್ದೀನನು ಕಂಟಕನೊಡನೆ ಮಾತನಾಡುತ್ತಿದ್ದನು; ಆದರೆ ರಫೀಉದ್ದೀನನ ಆ ನುಡಿಗಳನ್ನು ಕೇಳಿಕೊಳ್ಳುತ್ತಿದ್ದವನು ಕಿಶನನು! ಕಂಟಕ ನಿಗೆ ಪಂಜರದೊಳಗಿನ ರಫೀಉದ್ದೀನನಷ್ಟೇ ಗೊತ್ತಿದ್ದನೆಂಬುದು ನಿಜ; ಆದರೆ ಕಿಶನನು ಮುಂಚಿನ ರಫೀಉದ್ದೀನನನ್ನೂ ಚನ್ನಾಗಿಯೇ ಗುರ್ತಿಸಿದ್ದನು. ಕಂಟಕನು ತುಸಹೊತ್ತು ಸುಮ್ಮನಿದ್ದನು ಆ ಮೇಲೆ ತನ್ನ ಮನಸ್ಸಿನಲ್ಲಿಯೇ:

"ಆದರೂ ಈತನೇನು ಮಾಡುವನು? ಈತನೊಳಗಿನ ಮೊದಲಿನ ಹುಲಿಯು ಮತ್ತೆ ರೇಗಿಗೊಂಡರೂ ಚಿಂತೆಯೇನು? ಈತನು ಹುಲಿಯಾದರೆ, ಅಂಡಮಾನಕ್ಕೆ ಬಂದಂದಿನಿಂದ ನಾನೂ ಬಬ್ಬ ನಿಪುಣ ದರವೇಶಿಯಾಗಿರು ತ್ತೇನೆ. ಈತನು ರೇಗಿಗೊಂಡದ್ದೇ ಆದರೆ, ಇದೇ ತುಬಾಕಿಯಿಂದ ನೋಡು ನೋಡುತ್ತಿರಲಿಕ್ಕೆ ಈತನನ್ನು ಹಾರಿಸಿ ಬಿಟೇನು!"

"ಕಂಟಕಬಾಬು, ಮತ್ತೇನು? ಹೇಳಿರಿ, ಓಡಿ ಹೋಗುವುದಷ್ಟೇ? ಜೀವಾವಧಿಯ ಬೇಡಿಯನ್ನು ಈಗಿಂದಲೇ ಕಿತ್ತೊಗೆಯುವುದಷ್ಟೇ?"

"ಕಡಿದೊಗೆಯುವದೇ ಎಂದು ಮತ್ತೇಕೆ ಕೇಳುತ್ತೀ? ಅದನ್ನು ಈಗಾ ಗಲೇ ಕಡಿದು ಚೆಲ್ಲೀಬಿಟ್ಟಿರುತ್ತೇವಷ್ಟೇ? ಓಡಿ ಹೋಗುವ ಮಾತೇತಕ್ಕೆ? ಇಗೋ, ಇಲ್ಲಿಗೆ ಓಡಿಯೇ ಬಂದಿರುತ್ತೇವಲ್ಲ! ಇನ್ನು ಮುಂದಿನ ಹೆಜ್ಜೆ ಯನ್ನೆಲ್ಲಿಡಬೇಕೆಂಬದನ್ನಷ್ಟು ತಿಳಿಸು!"

"ಭಲೆ ಬಹಾದ್ದರ! ಮುಂದಿನ ಹೆಜ್ಜೆಯನ್ನು ಹಿಂದುಸ್ತಾನದಲ್ಲಿ-ಸ್ವದೇಶ ದಲ್ಲಿ!"

ಕಂಟಕನು "ಆದರೆ ಅಂಧಃಕಾರದ ಹಾಗು ಸಂಕಟದ ಒಂದು ದೊಡ್ಡ ಸಮುದ್ರವೇ-ಈ ಕರಿನೀರಸಮುದ್ರವು-ಈ ಹೆಜ್ಜೆಗಳ ಹಾಗು ಸ್ವದೇಶದ ಮಧ್ಯದಲ್ಲಿ ಅಡ್ಡಬಿದ್ದಿರುತ್ತದಲ್ಲ! ಅದನ್ನು...."

"ಅದನ್ನು ದಾಟಿಯೇ." ಈಸುವ ಪದ್ಧತಿಯ ಎರಡು ಮಾರುಗಳನ್ನು

ಆ ಕಾವಳದ ವಾತಾವರಣದಲ್ಲಿಯೇ ಆವೇಶದಿಂದ ಹಾಕಿ, ರಫೀಉದ್ದೀನನು ಉತ್ತರವಿತ್ತನು. "ಆ ಕರಿನೀರ ಸಂಕಟದ ಸಮುದ್ರವನ್ನು ಉಲ್ಲಂಘಿಸಿಯೇ ಸ್ವದೇಶಕ್ಕೆ ಹೋಗುವುದು ನಿರ್ಧಾರವು! ಹೋಗಿಯೇ ಹೋಗುವೆವೆಂಬ ನಿಶ್ಚಿತಿಯು!!"

---

೧೭ನೇ ಪ್ರಕರಣ.

"ಕಂಟಕಬಾಬು!" ಆ ಘನದಟ್ಟ, ಹಾಳು ಹಾಗು ಕತ್ತಲುಗವಿದ ಅರಣ್ಯದಲ್ಲಿ ಸುಮಾರು ಅರ್ಧ ಗಂಟೆಯು ವರೆಗೆ ಚರ್ಚಿಸಿದ ಬಳಿಕ ರಫೀಉದ್ದೀನನು ರಚಿಸಲ್ಪಡುತ್ತಿರುವ ಕಟ್ಟಿನ ಉಪಸಂಹಾರ ಮಾಡುತ್ತ:— "ಅಂದಿನ ರಾತ್ರಿ ಜಾಳಿನ ಎದುರಿಗಿನ ಅಂಗಳದಲ್ಲಿ ನಾವು ಇದೇ ಚರ್ಚೆ ಮಾಡುತ್ತಿದ್ದೆವು ಆಗ ಜಾವರಾಗಳ ಗ್ರಾಮಗಳಿಗೆ ಆಶ್ರಯಕ್ಕೆಂದು ಹೋಗುವುದೆಂದರೆ, ಭಯಂಕರ ಮೃತ್ಯುವಿನ ಆಶ್ರಯಕ್ಕೇ ಹೋಗುವದೆಂದು ನೀವು ಅಂದಿದ್ದಿರಲ್ಲವೆ?"

"ಅಹುದು ನೀನು ಆ ಜಾವರಾಗಳ ಆಶ್ರಯಕ್ಕೆ ಹೋಗುವಾಗ ಯಾವ ಸಂಕಟಗಳನ್ನು ಅನುಭೋಗಿಸಬೇಕಾಗುತ್ತದೆಂದು ಆಗ ಹೇಳಿದ್ದೆಯೋ ಅವುಗಳು ಹಾಗೆಯೇ ಇದ್ದವು! ವಿಜಾತೀಯ ಮತ್ತು ವಿಶೇಷವಾಗಿ ಸುಧಾರಿಸಿದ ಜನರ ನಾತವು ಬಡಿದೊಡನೆಯೇ ಅವರು ಬಹುಶಃ ಒಮ್ಮೆಲೆ ನಾಲ್ಕೂ ದಿಕ್ಕಿನಿಂದ ವಿಷಾರಿ ಬಾಣದ ಮಳೆಗರೆಯುತ್ತಿದ್ದರೆ, ಅವರ ಆಶ್ರಯ ಬೇಡಹೋಗುವುದೆಂದರೆ ಮೃತ್ಯುವಿನ ಆಶ್ರಯ ಬೇಡಹೋಗುವಷ್ಟೇ ಮಂಕು ಕೆಲಸವಲ್ಲವೆ? ಈ ಜಾವರಾಗಳ ಕಾನಿನಲ್ಲೂ, ಅವರ ಕೈಸೇರಿದ ಮೇಲೂ ಅವರ ವಸತಿಯೊಳಗೆ ನೀನು ಹಿಂದಕ್ಕೆ ಓಡಿಹೋದಾಗ ಅನುಭವಿಸಿದ ಯಾವ ಯಾವ ಸಂಕಟಗಳನ್ನು ವರ್ಣಿಸಿದ್ದೆಯೋ ಮತ್ತು ಅವುಗಳ ದವಡೆಯಲ್ಲೇ ಹಾರಿಕೊಳ್ಳುವ ಬೇತನ್ನು ಸೂಚಿಸಿದ್ದೆಯೋ ಅದು ಆಗ ನನಗೆ ಅದೆಷ್ಟೋ ಭಯಂಕರವೆನಿಸಿರಲಿ; ಆದರೆ ಈಗ ಅದು ಹಾಗೆನಿಸುವದಿಲ್ಲೆಂಬದು ನಿಜವು. ಕಾರಣವೇನಂದರೆ, ಈಗ ಇದೊಂದೇ ಬೇತು ಸಾಧ್ಯವೆಂದು ತೋರುತ್ತದೆ. ಸದ್ಯಕ್ಕೆ ಸಾಕು ಮಾಡು, ಈ ವಿಚಾರದ ರಗಳೆಯನ್ನು. ನನಗೆ ಈಗ ನಿಜವಾಗಿಯೂ ಏನೊಂದು ಭಯಂಕರವಾಗಿ ಅನಿಸುತ್ತಿದ್ದರೆ, ಅದು ನಿನ್ನ ಕಟ್ಟಿನ ಬೇತಲ್ಲ; ಈಗ ನನಗಾಗಿರುವ ಅಸಹ್ಯ ಹಸಿವೆಯು!"

"ನನ್ನ ಉದರದಲ್ಲಾದರೂ ಹಸಿವೆಯು ಬೇಗೆಯೇ ಎದ್ದಿದೆ! ಆದರೆ ಇನ್ನು ನಾಳೆ ಬೆಳಗಾಗುವವರೆಗಂತೂ ಇದನ್ನು ನಂದಿಸುವ ಉಪಾಯವುಳ್ಳ

ದಿಲ್ಲ! ಅದೊಂದೇ ಉಪಾಯವು ಈ ಹೊಟ್ಟೆಯ ಹಸಿವೆಯನ್ನು ನೀಗಿಸಲಿಕ್ಕಿದೆ!" ಎಂದು ರಫೀ ಉದ್ದೀನನು ಕತ್ತಲಲ್ಲಿಯೇ ನಗೆಮೊರೆಯಿಂದ ನುಡಿದನು.

"ಅದಾವ ಉಪಾಯವಪ್ಪಾ? ಬೇಗನೆ ತಿಳಿಸಬಾರದೇ?"

"ಬೇರೆ ಯಾವುದು? ನೀವು ರುಚಿ ರುಚಿಯಾದ ಪದಾರ್ಥಗಳ ನಾಮಗಳನ್ನುಚ್ಚರಿಸಹತ್ತಿರಿ. ಕಮ್ಮಗಿನ ಹುಗ್ಗಿ, ಪುರಿ, ಈರುಳ್ಳಿಯ ಬೊಂಡಾ, ಇಡಿ ಬದನೇಕಾಯಿಯ ಪಲ್ಲೆ, ತಾಜಾ ಜಿಲೇಬಿ ಇವುಗಳ ಹೆಸರು ಕೇಳಿ ಕೇಳುತ್ತಲೆ ಮೂಗಿಗೆ ಬರುವ ಕಮ್ಮಗಿನ ವಾಸನೆಯೊಡನೆ ನನ್ನ ಬಾಯಿಗೆ ನೀರೊಡೆಯ ಹತ್ತೀತು. ಅದರ ಶೋಷಣದಿಂದ ಹೊಟ್ಟೆಯೊಳಗಿನ ಹಸಿವೆಯ ಬೇಗೆಯು ಎಷ್ಟು ನಂದಿತೋ ಅಷ್ಟು ನಂದಲಿ!" ಎಂದಂದು, ತಿಂದಲ್ಲದಿದ್ದರೂ ನಕ್ಕು ನಕ್ಕು ರಫೀ ಉದ್ದೀನನು ಹೊಟ್ಟೆಯನ್ನು ತುಂಬಿಕೊಂಡನು

"ಒಳ್ಳೇದು. ನಿನ್ನ ಮಟ್ಟಿಗೆ ಹೊಟ್ಟೆತುಂಬುವ ಉಪಾಯವನ್ನು ನೀನು ಕೈಕೊಳ್ಳುತ್ತಿರುವವರೆಗೆ ನನ್ನ ಮಟ್ಟಿಗೆ ಬೇರೆ ಯಾವುದೊಂದು ಉಪಾಯವನ್ನು ನಾನೂ ಯೋಚಿಸಲೇಬೇಕು. ಹಗಲೆಲ್ಲ ಮಳೆಯಿಂದ ತೊಯ್ದು ತೊಯ್ದು ತೊಯ್ದು ಬಿಟ್ಟಿರುತ್ತೇವೆ." ಹೀಗೆಂದು ಮಾರ್ಮಿಕವಾಗಿ ನುಡಿದವನೇ, ಕಂಟಕನು ಎದ್ದು ನಿಂತು ಕೈಯಲ್ಲಿ ತುಬಾಕಿಯನ್ನು ತಕ್ಕೊಂಡು ಅತ್ತಿತ್ತ ಎಡತಾಕುತ್ತ, ಕೈಗಳನ್ನು ತಿಕ್ಕಿಕೊಳ್ಳುತ್ತ, ಕಾಲುಗಳನ್ನು ಝಾಡಿಸುತ್ತ ಮೈಯೊಳಗೆ ಕಾವನ್ನುಂಟುಮಾಡಿಕೊಳ್ಳಹತ್ತಿದನು. ಅಷ್ಟರಲ್ಲಿ ಅವನಿಗೆ ಅರ್ಧಮೈಲು ಸಮೀಪದಲ್ಲಿಯೇ ಇದ್ದ ಆ ಕಾನಿಗೆ ಹೊಂದಿರುವ ಸರಕಾರೀ ತೆಂಗಿನ ತೋಟದ ನೆನಪಾಯಿತು. ಕೂಡಲೆ ಆತನು ರಫೀಉದ್ದೀನನ ಕಡೆಗೆ ಹೊರಳಿ:-

"ಏಳು! ಎಲ್ಲ ಅಡಿಗೆಯೂ ಸಿದ್ಧವಿದೆ. ಅಮೃತಪಾನ ಮಾಡಲಿಕ್ಕೂ ಮಿಠಾಯಿ ತಿನ್ನಲಿಕ್ಕೂ ನಡೆ. ಸಮೀಪದ ಟೆಂಗಿನ ತೋಟಕ್ಕೆ ಹೋಗೋಣ"

"ಮತ್ತೂ? ತೆಂಗಿನಕಾಯಿಗಳೆಂದರೇನೂ ಗಿಡವನ್ನಲ್ಲಾಡಿಸುತ್ತಲೇ ನೆಲಕ್ಕೆ ಸುರಿಯುವ ಬೇವಿನ ಹಣ್ಣುಗಳಲ್ಲವಲ್ಲ! ಹಾಗು ನೆಲದ ಮೇಲೆಯೇ ನಿಂತು ತೆಂಗಿನಕಾಯಿ ಹರಿಯುವಷ್ಟು ನಾನೇನೂ ಎತ್ತರವಾಗಿಲ್ಲ"ಎಂದಂದು, ರಫೀ ಉದ್ದೀನನು ನಕ್ಕನು.

"ಎರಡು ಸಲ ಅಂಡಮಾನದಲ್ಲಿದ್ದು, ತೆಂಗಿನ ಮರಕ್ಕಿಂತಲೂ ಗಿಡ್ಡವಾಗುಳಿದಂತಹ ಮನುಷ್ಯನು ನೀನೇ ಮೊದಲನೆಯವನಾಗಿ ಕಂಡೆ! ಆದರೆ ಯಾವ ತೆಂಗಿನ ಮರವೂ ನನಗಿಂತ ಎತ್ತರವಾಗಿಲ್ಲೆಂಬನ್ನು ನಾನು ನಿನಗೆ ತೋರಿಸಿ ಕೊಡುತ್ತೇನೆ, ನಡೆ!"

ಅವರಿಬ್ಬರೂ ಎದ್ದರು. ಹಿಂದೆ ಮುಂದೆ ಎಡಬಲಗಳಲ್ಲೆಲ್ಲ ನಿವಾಂತ ವಿರುವುದನ್ನು ಕಂಡು ಅವರು ಸರಕಾರೀ ದಾರಿ ಹಿಡಿದು ನಡೆದರು ಅಲ್ಪಾವಧಿಯಲ್ಲಿ ತೋಟದ ಕಡೆಗೆ ಹೊರಳಿದರು. ಅವರ ಗೊತ್ತಿನ ತೋಟವೇ ಅದು. ತೆಂಗಿನ ಗಿಡಗಳ ಗುಂಪುಗಳಲ್ಲಿ ಬರಲು, ಚೂರಿಗಳನ್ನು ಟೊಂಕಕ್ಕೆ ಕಟ್ಟಿ ಅವರಿಬ್ಬರೂ ಎರಡು ಎತ್ತರವಾದ ಗಿಡಗಳನ್ನೇರಿದರು. ಆ ಗಿಡಗಳಿಗೆ ಬೊಟ್ಟು ಊರುವ ಸಲುವಾಗಿ ಮೊದಲೇ ತೆಗ್ಗು ಮಾಡಿರುತ್ತಾರೆ ಇಬ್ಬರೂ ಹತ್ತುವುದರಲ್ಲಿ ನಿಪುಣರು. ಇಬ್ಬರೂ ಗಿಡವನ್ನೇರಿ ಕಾಯಿ ಕೊಯ್ದರು. ಕಾಯಿಗಳು ರಪ್ಪರಪ್ಪೆಂದು ನೆಲಕ್ಕೆ ಬಿದ್ದವು. ಆ ಕೂಡಲೆ ತೋಟದ ಆ ಕಡೆಗಿದ್ದ ಕಾವಲುಗಾರನ ಗುಡಿಸಿಲದಿಂದ 'ಸೂಂಯಿ' ಎಂದು ಕವಣೆಯ ಕಲ್ಲುಗಳು ಬರಹತ್ತಿದವು!

ಇಬ್ಬರ ಎದೆಯೂ ಧಸ್ಸೆಂದಿತು! ಗಿಡವನ್ನೇರುವಾಗ ಕಂಟಕನು ತನ್ನ ಬಳಿಯ ತುಬಾಕಿಯನ್ನೂ ಕೊಡಲಿಯನ್ನೂ ತೆಂಗಿನ ಮಟ್ಟೆಗಳ ಹಾಗು ಎಲೆ-ಸೊಡರುಗಳ ಗುಡ್ಡೆಯೊಳಗೆ ನೆಲದ ಮೇಲೆಯೇ ಅಡಗಿಸಿಟ್ಟಿದ್ದನು. ಆದ್ದರಿಂದ ವಿಹಿತವಾಗಿತ್ತು; ಆದರೆ ಇಲ್ಲಿಗೆ ದೀಪ ತಕ್ಕೊಂಡು ಯಾರಾದರೂ ಬಂದರೆ ಹಾಗು ಅವರಿಗೆ ಅವು ದೊರೆತರೆ? ಕಂಟಕನು ಸಾಹಸ ಮಾಡಿ ಒಮ್ಮೆ ಕೆಳಗಿಳಿದು ಪಹರೆಯವನ ಮೇಲೆ ತುಬಾಕಿ ಹೊಡೆಯಬೇಕೆಂದು ಮನಸ್ಸು ಮಾಡಿದನು; ಆದರೆ ಆ ತುಬಾಕಿಯ ಸಪ್ಪಳದಿಂದ ಅಡವಿಯೆಲ್ಲವೂ ನಿನಾದಗೊಂಡು ಎಲ್ಲರೂ ಎಚ್ಚರಾಗುವರು! ಅದಾದರೂ ಮೂರ್ಖತನವೇ ಆಗುವದು. ಮೇಲೆಯೇ ಕೂಡ್ರಬೇಕೆಂದರೆ, ಯಾವುದೊಂದು ಕಲ್ಲು ಸೂಂಯಿಗುಟ್ಟುತ್ತ ಬಂದು ತಲೆ ಬುರುಡೆಗೆ ಬಡೆದರೆ ಎಲ್ಲ ಸಾಹಸವೂ ಮುಗಿದು ಹೋದೀತು!

ಈ ಪ್ರಕಾರದ ಇಬ್ಬಗೆಯ ಭೀತಿಯಿಂದ ಅವರು ಇದ್ದಲ್ಲಿಯೇ ಸುಮ್ಮನೆ ಕುಳಿತುಬಿಟ್ಟರು; ಆದರೆ ಹಸಿದ ಹೊಟ್ಟೆಯು ಸುಮ್ಮನೆ ಕೂಡ್ರಗೊಡುವುದೆ? ಅಂಜಿಕೆಗಿಂತ ಹಸಿವೆಯಿಂದಲೇ ಕಸವಿಸಿ ಪಡಹತ್ತಿದರು. ಕಟ್ಟಕಡೆಗೆ ಗಿಡಕ್ಕೆ ಆತು ಕುಳಿತು-ಕುಳಿತಲ್ಲಿಯೇ ಅವರು ಎಳೆಗಾಯಿಗಳನ್ನು ಕೊಯ್ದು ಚೂರಿಯಿಂದ ಸುಲಿದು ಮೇಲಿನ ದಪ್ಪನ್ನ ತೊಗಟೆಯನ್ನು ಅಲ್ಲಿಯ ಮಟ್ಟೆಗಳಲ್ಲಿಯೇ ಸಿಕ್ಕಿಸಿದರು; ಹಾಗು ಆ ಎಳೆಗಾಯಿಗಳ ನೀರನ್ನು ಗಟಗಟ ಎಂದು ಕುಡಿದರು; ಗಿಣ್ಣದಂತಹ ಮೆತ್ತನ್ನ ಕೊಬ್ಬರಿಯನ್ನು ತಿಂದರು. ಆಗ ಅದು ಅವರಿಗೆ ಎಷ್ಟು ಮಧುರ ಹತ್ತಿತೆಂದು ಹೇಳಲಿ! ಬಂಗಾರದ ಕಲಶವುಳ್ಳ ಅರಮನೆಯ ಮೇಲುಪ್ಪರಿಗೆಯ ಮೇಲೆ ಕುಳಿತು ಚಿನ್ನದ ಪಾತ್ರೆಯಲ್ಲಿ ಮದ್ಯವನ್ನು ಕುಡಿಯುವ ರಾಜರಂತೆ ಅವರು ಆಗ ಬಾಯಿಚಪ್ಪರಿಸಿದರು! ಕವಣೆಯ ಕಲ್ಲುಗಳು ನಡುನಡುವೆ ಸೂಂಯಿಗುಟ್ಟುತ್ತ ಅವರ ಎಡಬಲಗಳಲ್ಲಿ

ಬರುತ್ತಲೇ ಇದ್ದವು. ಹೀಗಿದ್ದರೂ ಮತ್ತೂ ಒಂದೊಂದು ಎಳೆಗಾಯನ್ನು ಸುಲಿದು, ಅದರೊಳಗಿನ ಮಧುರವಾದ ಹಾಲನ್ನು ಅವರು ಕುಡಿಯುತ್ತಲೇ ಇದ್ದರು; ತಿರುಳನ್ನು ತಿನ್ನುತ್ತಲೇ ಇದ್ದರು.

ಈಗ ಅವರಿಗೆ ಒಳ್ಳೇ ಹುಷಾರೆನಿಸಿತು. ಕಲ್ಲುಗಳು ಬರುವದೂ ಕಟ್ಟಾದಂತೆ ತೋರಿತು. ಇನ್ನು ಕೆಳಗಿಳಿಯಬೇಕೆಂಬ ಬೇತಿನಿಂದ ರಫೀ ಉದ್ದೀನನು ಕೆಳಗೆ ಗಿಡಕ್ಕೆ ಹೊಸೆಯುತ್ತ ತುಸ ಕೆಳಗಿಳಿಯ ಹತ್ತಿದನು. ಅಷ್ಟರಲ್ಲಿ ಆ ಕಡೆಯ ಗುಡಸಿಲದಲ್ಲಿ ಯಾರೋ ಲಾಂದರ ಹೊತ್ತಿಸಿದಂತೆ ಬೆಳಕಾಯಿತು! ಅರ್ಧಮರದ ವರೆಗೆ ಇಳಿದು ಬಂದಿದ್ದ ರಫೀ ಉದ್ದೀನನು ಮೆಟ್ಟಿಬಿದ್ದು, ಹಾವಿನಂತೆ ಮತ್ತೆ ಸರಸರನೆ ಮೇಲೆ ಹತ್ತಿ ತುದಿಯ ವರೆಗೂ ಹೋದನು. ಆ ಲಾಂದರವು ಗುಡಸಿಲದ ಹೊರಗೆ ಅಲ್ಲಾಡಹತ್ತಿತು. ಯಾರಾದರೂ ತಮ್ಮನ್ನು ಹುಡುಕಲಿಕ್ಕೆ ಬರುತ್ತಿರುವುದೇ ಖಂಡಿತ; ಒಂದಲ್ಲ ಎರಡು ಲಾಂದರಗಳು! ಹೆಗಲ ಮೇಲೆ ತುಬಾಕಿ! ಅಹುದು, ತುಬಾಕಿಗಳೇ ಅವು! ಬಂದೂಕಗಳನ್ನು ತುಂಬಿಕೊಂಡು ಇಬ್ಬರು ಪೋಲೀಸರು, ಅಂದು ಸಾಯಂಕಾಲದಲ್ಲಾದ ಜಾನರಾಗಳ ದಾಳಿಯ ಮೂಲಕ ಆ ತೋಟದಲ್ಲಿ ವಿಶೇಷ ಕಾವಲಿಗೆಂದು ಅಂದು ಬೇಕಂತ ಇರಿಸಲ್ಪಟ್ಟಿದ್ದರು. ಅವರು ಸಪ್ಪಳವೆಲ್ಲಾಗುತ್ತದೆಂಬದನ್ನು ನಿರೀಕ್ಷಿಸುವ ಸಲುವಾಗಿ ಅತ್ತಿತ್ತ ನೋಡುತ್ತ, ಕಿವಿಗೊಟ್ಟು ಸಪ್ಪಳ ಕೇಳುತ್ತ ಹೊರಟದ್ದರು. ಅವರೊಡನಿರುವ ದಂಡಿತರು ನಡುನಡುವೆ ಕವಣೆಗಳಿಂದ ಕಲ್ಲುಗಳನ್ನೆಸೆಯುತ್ತಿದ್ದರು. ಕಡೆಗೆ ಅವರು ತೀರ ಇತ್ತ ಕಡೆಗೇ ಬರಹತ್ತಿದರು!

ಕಂಟಕ-ರಫೀ ಉದ್ದೀನರು ಅಕ್ಕಪಕ್ಕದ ಎರಡು ಎತ್ತರವಾದ ತೆಂಗಿನ ಮರಗಳನ್ನೇರಿ ಕುಳಿತಿದ್ದರು. ಆ ಗಿಡಗಳ ತೀರ ಬುಡಕ್ಕೇ ಆ ಪೋಲೀಸರು ಬಂದರು. ಕಂಟಕ ಹಾಗು ರಫೀ ಉದ್ದೀನರ ಎದೆಗಳು ಥರಗುಟ್ಟಿ ನಡುಗಹತ್ತಿದವು. ತೋಫಿನ ಗುಂಡಿಗೆ ಕಟ್ಟಿದವರ, ಎದೆಯು ತೋಫು ಈಗ ಹಾರುವದೊ, ಈಗ ಹಾರಿಯೇ ಬಿಟ್ಟಿತೋ ಎಂದು ಹೇಗೆ ಪ್ರತಿಸ್ಪಂದನದೊಡನೆಯೂ ನಡುಗುತ್ತಿರುವದೊ, ಹಾಗೆಯೇ ಪ್ರತಿಕ್ಷಣದಲ್ಲಿ ಪೋಲೀಸರ ಲಕ್ಷ್ಯವು ತಮ್ಮ ಗಿಡದ ಮೇಲೆಯೇ ವೇಧಿಸಿ, ಅವರ ತುಬಾಕಿಯ ಗುಂಡು ಎಲ್ಲಿ ಹಾರುವದೋ ಎಂದು ಅವರು ಗಡಗುಟ್ಟಿ ನಡುಗಹತ್ತಿದರು; ಆದರೆ ಗಿಡಗಳನ್ನು ಹೆಚ್ಚಾಗಿಯೇ ಅವಚಿಕೊಂಡು ಸುಮ್ಮನೆ ಕೂಡ್ರುವುದೊಂದೇ ಮಾರ್ಗವು ಅವರಿಗಾಗ ಉಳಿದಿತ್ತು. ಆದರಿಂದ ಅವರು ಮರಣವನ್ನು ಅವಚಿಗೊಂಡಂತೆಯೂ ಆಗಬಹುದಿತ್ತು; ಅಥವಾ ಮರಣವನ್ನು ಸಿರಾಕರಿಸುವಂತೆಯೂ ಆಗಬಹುದಿತ್ತು!

ಪೋಲೀಸರ ಲಾಂದರದ ಕಿರಣಗಳು ಮೇಲೆ ಮೇಲಾಗುತ್ತ ಪೋಲೀ

ಸದು ಹೇಗೆ ಹೇಗೆ ಹತ್ತ, ಹತ್ತರಕ್ಕೆ ಬರಹತ್ತಿದರೋ, ಹಾಗೆ ಹಾಗೆ ಕಂಟಕ ಮತ್ತು ರಫೀ ಉದ್ದೀನರ ಜೀವಗಳು ಅವರನ್ನು ತ್ಯಜಿಸಿ ದೂರ ದೂರ ಹೋಗಹತ್ತಿದವು!

ಅಷ್ಟರೊಳಗೆ ಸಮೀಪದ ಟೆಂಗಿನ ಮರಗಳ ತುದಿಗಳಲ್ಲಿ ಘಡಘಡೆಂದು ಸಪ್ಪಳವಾಯಿತು. ಪೋಲೀಸರು ಚಮಕಿತರಾಗಿ ಅತ್ತ ಓಡಿದರು; ಹಾಗು ಅವರಲ್ಲಿಯ ಒಬ್ಬನು ತುಬಾಕಿ ಹಾರಿಸಿದನು. ಆ ಕೂಡಲೆ 'ಘೂಂ-ಘೂಂ-ಘೂಂ' ಎಂದು ಧ್ವನಿಗೆಯ್ಯುತ್ತ ಕೆಲವು ಗೂಗೆಗಳು ಮೇಲಕ್ಕೆ ಹಾರಿ ಹೋದವು; ಮತ್ತು ಒಂದು ಗೂಗೆಯು 'ಟಪ್' ಎಂದು ನೆಲಕ್ಕೆ ಬಿದ್ದಿತು. ಪೋಲೀಸರು 'ಖ್ಯೊ-ಖ್ಯೊಕ್ಕೆ'ಂದು ನಕ್ಕರು.

ಅವರೊಳಗಿನವನೊಬ್ಬನು ಆ ಗೂಗೆಯನ್ನೆತ್ತಿಹಿಡಿದು ಉಳಿದವರಿಗೆ ತೋರಿಸಿ "ಇದು ನೋಡಿದಿರಾ ನಿಮ್ಮ ಕಳ್ಳನನ್ನು! ಗೂಗೆಗಳೇ ಘಡ ಘಡಿಸುತ್ತಿದ್ದವು. ನೀವು ಸುಮ್ಮನೆ ಹಟ ಹಿಡಿದು, ಕಳ್ಳರು ಕಾಯಿಕೊಯ್ಯು ತ್ತಿರುವರೆಂದು ಅಂದಿರಿ. ತಿರುಗಿರಿನ್ನು; ನಡೆಯಿರಿ!"

ಆ ಟೋಳಿಯು ಬಂದ ದಾರಿಯಿಂದ ತಿರುಗಿ ಸಾಗಹತ್ತಿದಂತೆ, ಕಂಟಕ ರಫೀಉದ್ದೀನರ ಜೀವಗಳು ತಿರುಗಿ ಬರಹತ್ತಿದವು! ಉದ್ದೀನನು ಮನಸ್ಸಿನಲ್ಲೇ ನಕ್ಕು:---

'ಜೀವದ ಮೇಲೆ ಬಂದದ್ದು ಗೂಗಿಯಮೇಲೆಯೇ ದಾಟಿ ಹೋಯಿತು!' ಎಂದು ಮೆಲ್ಲನೆ ಅಂದನು.

ಆದರೆ ಮತ್ತೆ ಜೀವದ ಸುತ್ತು ತಂದುಕೊಳ್ಳುವದಿರದಿದ್ದರೆ ಆ ಪೋಲೀ ಸರು ತಮ್ಮ ಗುಡಸಿಲಿಗೆ ಹೋಗಿ ಲಾಂದರಗಳನ್ನಾರಿಸುವವರೆಗಾದರೂ ಆ ಗಿಡದ ತುದಿಯಲ್ಲೇ ಹೇಗಾದರೂ ಕುಳಿತಿರುವದವಶ್ಯಕವಾಗಿತ್ತು. ಅದರಂತೆ ಅವರೀರ್ವರೂ ಕುಳಿತರು; ಆದರೆ ಅಂದಿನ ಮುಂಚಿನ ಅಸಹ್ಯ ದಣುವಿಕೆಯೂ ಈಗಿನ ನಿಷ್ಕ್ರಿಯತೆಯೂ ಇವುಗಳ ಮೂಲಕ ಅವರಿಬ್ಬರಿಗೂ ಗುಂಗು ಬರ ತೊಡಗಿತು. ಅವರು ಮರದ ತುದಿಯನ್ನು ಗಟ್ಟಿಯಾಗಿ ಹಿಡಿದುಕೊಂಡೇ ತೂಕಡಿಸುತ್ತಿದ್ದರು! ಸುಮಾರು ಅರ್ಧಗಂಟೆಯಾದರೂ ಪೋಲೀಸರೂ ಪಹರೆಯವರೂ ಲಾಂದರದ ಸುತ್ತುಮುತ್ತಲು ಚುಟ್ಟಾ ಸೇದುತ್ತ ಕುಳಿತೇ ಬಿಟ್ಟಿದ್ದರು. ಕಂಟಕ ಮತ್ತು ರಫೀಉದ್ದೀನರು ಆಗಾಗ್ಗೆ ಅವರ ಕಡೆಗೆ ನೋಡು ತ್ತಿದ್ದರು. ಮತ್ತೆ ತೂಕಡಿಸುತ್ತಿದ್ದರು. ಹೀಗೆ ಅವರು ಕ್ರಮವನ್ನಿಟ್ಟುಕೊಂ ಡಿರುವಾಗಲೇ ಹೇಗೋ ತಿಳಿಯದು; ಅವರು ಅಲ್ಲಿಯೇ ಗಾಢನಿದ್ರಾಸಕ್ತರಾಗಿ ಬಿಟ್ಟರು!

ಆ ಸಂಧಿನಲ್ಲಿಯೇ ರಫೀಉದ್ದೀನನು ಗಟ್ಟಿಯಾಗಿ ಹಿಡಿದ ಕೈಗಳು ಯಾವಾಗಲೋ ಸಡಿಲಾದವು; ದೇಹವು ಒಲೆಯಿತು; ಹಾಗು ಆತನು ಸರ್ರನೆ ಸರಿದನು! ಆ ಕೂಡಲೆ ಆತನ ದೇಹವೇ ಮನಸ್ಸಿನಗಿಂತಲೂ ಮೊದಲು ಎಚ್ಚತ್ತಂತಾಗಿ, ಆತನ ಕೈಕಾಲುಗಳು ಹಾವಿನಂತೆ ಗಿಡಕ್ಕೆ ಸುತ್ತುವರಿದವು. ನಿದ್ರಾರೋಗಿಗಳದಾದರೂ ಹೀಗೆಯೇ ಆಗುತ್ತದೆ. ಅವರು ನಿದ್ದೆಯಲ್ಲಿ. ಅವರ ಕೈ-ಕಾಲುಗಳು ತೀರ ಜಾಗ್ರತಸ್ಥಿತಿಯಲ್ಲಿ ಎತ್ತರವಾದ, ಆದರೆ ತೀರ ಅಡ್ಡಗಲ ಕಡಿಮೆಯುಳ್ಳ ಗೋಡೆಯ ಮೇಲಿಂದ ತಮ್ಮ ಜೀವವನ್ನು ಸಂರಕ್ಷಿಸುತ್ತ ಜೋಕೆಯಿಂದ ಹೇಗೆ ನಡೆಯುತ್ತಾರೋ, ಅದರಂತೆಯೇ ರಫೀಉದ್ದೀನನು ಆ ಎತ್ತರವಾದ ಗಿಡದ ಮೇಲಿಂದ ನಿದ್ದೆಯಲ್ಲಿ ಜಾರಿದನು; ಆದರೆ ಗಿಡಕ್ಕೆ ಹಾವಿನಂತೆ ಸುತ್ತಿಕೊಂಡು ಕೆಳಗೆ ಸರಿಯ ಹತ್ತಿದವನು ನೆಟ್ಟಗೆ ನೆಲಕ್ಕೆ ಬಂದೇ ಮುಟ್ಟಿದನು. ಆತನ ಎದೆ-ತೊಡೆಗಳೆಲ್ಲ ಸುಲಿದಂತಾಗಿದ್ದವು; ಆದರೆ ಮೇಲಿನಿಂದಲೇ ಜಾರಿದ್ದರೆ ಕಪಾಳ ಮೋಕ್ಷವೇ ಆಗತಕ್ಕದ್ದು ತಪ್ಪಿತೆಂಬದನ್ನು ಅರಿತು, ಆ ಎದೆ ತೊಡೆಗಳು ತೆರೆದು ರಕ್ತವಾದದ್ದರ ಬಗ್ಗೆ ವಿಶೇಷವೇನೂ ಅನಿಸಲಿಲ್ಲ. ಕೆಳಗೆ ಬಂದ ಕೂಡಲೆ ಆತನಿಗೆ ಎಲ್ಲ ಪರಿಸ್ಥಿತಿಯು ನೆನಪಿಗೆ ಬಂದು ಗುಡಸಿಲದ ಕಡೆಗೆ ಹೊರಳಿ ನೋಡುತ್ತಾನೆ, ಅಲ್ಲಿಯ ಲಾಂದರವು ನಂದಿತ್ತು. ಎಲ್ಲ ಕಡೆಗೂ ನಿಶ್ಶಬ್ದವಾಗಿತ್ತು. ತುಸ ತಡೆದು, ಆ ಮೇಲೆ ಆತನು ಕಂಟಕನಿದ್ದ ಮರದೆಡೆಗೆ ಬಂದು ಎರಡು ಮೂರು ಸಾರೆ ಮೆಲ್ಲಮೆಲ್ಲನೆ ಚಪ್ಪಾಳೆ ಬಡೆದನು. ಕಂಟಕನಿಗೆ ಗುಂಗಿನಲ್ಲೂ ಸಾವಧವಿರುವ ಚಟವಿದ್ದಿತು. ಅದರಿಂದ ಆತನು ರಫೀಉದ್ದೀನನ ಸಂಜ್ಞೆಯನ್ನು ತಿಳಿದು, ತಾನೂ ಮೆಲ್ಲಮೆಲ್ಲನೆ ಪ್ರತಿಚಪ್ಪಾಳೆ ಬಡೆದನು. "ನೀನು ಇಳಿದಿರುವೆಯಾ? ಒಳ್ಳೇದು. ನಾನೂ ಮೆಲ್ಲನೆ ಇಳಿಯುತ್ತೇನೆ ತಡೆ!" ಇಷ್ಟೆಲ್ಲ ಅರ್ಥವು ಆ ಚಪ್ಪಾಳೆಯಲ್ಲಡಗಿತ್ತು.

ಕಂಟಕನು ಮೆಲ್ಲನೆ ಕೆಳಗಿಳಿದು ಬರುತ್ತಲೆ, ಅವರಿಬ್ಬರೂ ಕೆಲಕ್ಷಣಗಳ ವರೆಗೆ ಅಲ್ಲಿಯೇ ಹುದುಗಿಕೊಂಡು ಕುಳಿತರು. ಆಗ ಉತ್ತರ ರಾತ್ರಿಯಾಗಿರಬೇಕೆಂದು ತರ್ಕಿಸಿದರು. ಆ ಮೇಲೆ ಅವರು ಆ ತುಬಾಕಿ, ಕೊಡ್ಲಿ ಮುಂತಾದ ಆಯುಧಗಳನ್ನು ಅಡಗಿಸಿಟ್ಟ ಸ್ಥಳದಿಂದ ತಕ್ಕೊಂಡರು. ಬೆಳಗಾಗುವ ಮುಂಚೆ ಅವರು ಘೋರ ಕಾಂತಾರಕ್ಕೆ ಹೋಗಿ ಅಡಗಿಕೊಳ್ಳಲೇ ಬೇಕಾಗಿತ್ತು. ಆದ್ದರಿಂದ ಅವರು ಅಲ್ಲಿಂದ ಲೈನದಾರಿಯ ಕಡೆಗೆ ನಡೆದರು. ಹೊರಡುವಾಗ ರಫೀ ಉದ್ದೀನನು ಗಿಡಗಳ ಕೆಳಗೆ ಬಿದ್ದಿರುವುದನ್ನೇನೋ ಎತ್ತಿಕೊಳ್ಳುತ್ತಿರುವದನ್ನು ಕಂಡು ಕಂಟಕನು ಮೆಲ್ಲನೆ:—

"ಏನೋ? ಸುಮ್ಮನೆ ಏನನ್ನು ಹುಡುಕುತ್ತಿಯೋ ಅಲ್ಲಿ?"

"ಸುಮ್ಮನೆಯೆ? ಆಗಲೆ ಕಡಿದು ಚೆಲ್ಲಿದ್ದ ಆ ಎರಡು-ಮೂರು ಟೆಂಗಿನ ಕಾಯಿಗಳನ್ನೇನು ಇಲ್ಲಿಯೇ ಚೆಲ್ಲಿಕೊಟ್ಟು ಹೋಗುವದೆ?"

"ಎಂಥ ಭಿಕಾರಿಯಿರುವೆ ನೀನು? ಎಂಥ ಕ್ಷುಲ್ಲಕ ಬುರುಡೆಗಳವು? ಚೆಲ್ಲು!"

"ಕ್ಷುಲ್ಲಕ ಬುರುಡೆಗಳೆ? ಈ ಕ್ಷುಲ್ಲಕ ಬರುಡೆಗಳಿಗಾಗಿಯೇ ಆಗಲೆ ನಮ್ಮ ತಲೆಬುರುಡೆಗಳು ತುಬಾಕಿಯ ಗುಂಡುಗಳಿಂದ ಹಾರಿಹೋಗುತ್ತಿದ್ದವಲ್ಲ!"

ರಫೀ ಉದ್ದೀನನು ಸಿಕ್ಕಷ್ಟು ಕಾಯಿಗಳನ್ನು ಬಗಲಲ್ಲಿಯೇ ಇಟ್ಟು ಕೊಂಡು ಬಂದ ಹಾಗೆಯೇ ಅವರು ಆ ದಾರಿಯಿಂದ ತಿರುಗಿ ಹೋಗಿ ಆ ಹೊಸ ಕಾಡು ದಾರಿಯ ಹತ್ತರ ಬಂದರು; ಹಾಗು ಬೆಳ್ಳಗೆ ಬೆಳಗಾಗುವ ಮೊದಲೇ ಅವರು ಅದೇ ದಾರಿ ಹಿಡಿದು ಕಾನಿನಲ್ಲಿ ಸೇರಿದರು. ದಾರಿಯಲ್ಲಿ ಆ ಸೈನಿಕನು ನಿನ್ನೆ ಎಲ್ಲಿ ಸತ್ತುಬಿದ್ದಿದ್ದನೋ ಅಲ್ಲಿಗೆ ಹೋಗಿ, ಆತನ ಪೋಲೀಸ ಡ್ರೆಸ್ಸನ್ನೂ ಕಡ್ಡಿಪೆಟ್ಟಿಗೆ, ಚುಟ್ಟ ಮೊದಲಾದವುಗಳನ್ನೂ ಅವರು ಕಿತ್ತುಕೊಂಡರು. ಜಾವದಾಗಳ ಆ ಬಾಣಗಳನ್ನಷ್ಟು ಮತ್ತೆ ನೆಟ್ಟಲ್ಲಿಯೇ ಸಿಗಿಸಿಟ್ಟರು. ಬಳಿಕ ಅವರು ಆ ದಾರಿಯನ್ನು ಅಲ್ಲಿಯೇ ತ್ಯಜಿಸಿದರು.

ಆ ಮೇಲೆ ಆ ಅಡವಿಯ ಆ ಪಕ್ಕದಿಂದ ದೂರವಾಗಿದ್ದ ಒಂದು ಘನ ದಟ್ಟವಾದ ಭಾಗದಲ್ಲಿ ಒಳಸೇರಲಿಕ್ಕೆ ಅವರು ಶಕ್ಯವಾದಷ್ಟು ಯತ್ನಿಸಿದರು. ದಾರಿಯಲ್ಲೊಂದು ಅಗಲವೂ ಆಳವೂ ಆದಂಥ ಸಮುದ್ರದ ಒತ್ತು ಬಂದಿತು. ಅದರೊಳಗಿನ ಉಸಗಿನ ಪ್ರದೇಶವು ಆಗ ಬೈಲಾಗಿದ್ದು, ಒಣಗಿ ಬೆಳ್ಳಗೆ ಕಾಣಿ ಸುತ್ತಿತ್ತು. ಅಂತವಾನದೊಳಗಿನ ಸಿಂಧುತಟಾಕದ ಮೇಲೆ ನಡು ನಡುವೆ ಬೀಳುವ ಪ್ರಖರ ಬಿಸಿಲು ಆಗ ಅಲ್ಲಿ ಬಿದ್ದಿತ್ತು; ಮತ್ತು ಅದರಿಂದ ಆ ಮಳಲು ಪ್ರದೇಶವೂ ಅದರ ಮೇಲಿನ ಚಿತ್ರ-ವಿಚಿತ್ರ ಬಣ್ಣಗಳ ಸಿಂಪುಗಳೂ ತೀರ ಬಿಳುಪಾದ ಸ್ವಚ್ಛ ಉಸುಗೂ ಏಕೋಪ್ರಕಾರವಾಗಿ ಹೊಳೆಯುತ್ತಿದ್ದವು ಆಗ ಆ ಉಸುಗು ಹೆಚ್ಚಾಗಿ ಕಾದಿತ್ತು; ಆದರೆ ಕಳೆದ ಎರಡು ಹಗಲೂ ರಾತ್ರಿ ಗಳಲ್ಲಿ ಒಂದೇಸಮನೆ ದುಡಿದ ಬೆವರಿನಿಂದ, ಮಳೆಯ ಹೊಡೆತದಿಂದ, ಕೊಳೆತ ಹುಲ್ಲಿನಿಂದ, ಕೆಸರನ್ನು ಆಗಾಗ್ಗೆ ಲೇಪಿಸಿಕೊಳ್ಳುವುದರಿಂದ ಹಾಗು ಚಳಿ-ಗಾಳಿ ಗಳಿಂದ ಜೀವವು ಬೇಸರೆನಿಸಿದ್ದ ಆ ಇಬ್ಬರು 'ಭಗೋಡೆ'ಯರಿಗೆ, ಅಂದರೆ ಕರಿನೀರಿನಿಂದ ಓಡಿದ್ದ ದಂಡಿತರಿಗೆ ಆ ಬೇಡಾಗಿದ್ದ ಬಿಸಿಲೂ, ಕಾದ ಮಳಲು ಪ್ರದೇಶಗಳೂ ಹೆಚ್ಚಾಗಿ ಬೇಕಾದವು. ಎಲ್ಲಿ ಮನುಷ್ಯರ ಸುಳಿದಾಟವು ಇಲ್ಲವೇ ಇಲ್ಲವೋ ಅಂಥ ದುರ್ಗಮವೂ ದುಃಸಾಧ್ಯವೂ ಆದ ಸ್ಥಾನವದು. ಅಂದಮೇಲೆ ಅಲ್ಲ ತುಸ ಬೈಲೊಳಗೆ ವ್ಯವಹರಿಸಲಿಕ್ಕೆ ಅವರಿಗೆ ಅಡ್ಡಿ ತೋ।

ಲಿಲ್ಲ. ಅಂತೆಯೇ ಆ ಮೇಲೆ ಇವರಿಬ್ಬರೂ ಆ ಒತ್ತಿನಲ್ಲಿ ತಮ್ಮ ಬಳಿಯಲ್ಲಿದ್ದ ಎಲ್ಲ ಅರಿವೆ-ಅಂಚಡಿಗಳನ್ನು ಚೆನ್ನಾಗಿ ತಿಕ್ಕಿ ತಿಕ್ಕಿ ತೊಳೆದು, ಆ ಕಾದ ಮಳ ಲಲ್ಲಿ ಒಣಗಹಾಕಿದರು. ತಮ್ಮ ಮೈ-ಕೈಗಳಿಗೆ ಕಳೆದ ಹಗಲು-ರಾತ್ರಿಗಳಲ್ಲಿ ಚಿಗಳಿ, ಸೊಳ್ಳೆ, ಮುಳ್ಳು ಇವುಗಳು ದಂಶದಿಂದ ಒಂದು ಝುರಡಿಯನ್ನೇ ಮಾಡಿದ್ದವು. ಅದರ ಮೇಲೆ ಆ ಅಡವಿಯ ಔಷಧವೆಂದರೆ ಕೆಸರಿನ ಲೇಪ. ಅದನ್ನು ಮೈತುಂಬ ಚೆನ್ನಾಗಿ ಮಾಡಿಕೊಂಡರು; ಬಿಸಿಲಲ್ಲಿ ಒಣಗಿಸಿದರು; ಮತ್ತು ಆ ಮೇಲೆ ಕಲ್ಲು-ಮಣ್ಣುಗಳ ಸಬಕಾರದಿಂದಲೇ ಅವರು ತಮ್ಮ ಮೈ-ಕೈಗಳನ್ನು ಚೆನ್ನಾಗಿ ತಿಕ್ಕಿಕೊಳ್ಳುತ್ತ, ಆ ಒತ್ತಿನಲ್ಲೇ ಯಥೇಚ್ಛವಾಗಿ ಸ್ನಾನ ಮಾಡಿದರು.

ಆ ಮೇಲೆ ಅವರಿಗೆ ಯಾವ ಹಿರಿದಿನ ಹೊಟ್ಟೆ ಹಸಿಯಿತೋ, ಅದು ಅಂಥ ಜೀವದ ಮೇಲಿನ ಪ್ರಸಂಗದೊಳಗಿನ ಶ್ರಮದ ನಂತರ ಹಾಗೆ ಸ್ನಾನ ಮಾಡಿದ್ದ ಬಲಿಷ್ಠ ಪ್ರಕೃತಿಯ ಜನರಿಗೇ ಗೊತ್ತಾದೀತು! ಆದರೆ ಅಲ್ಲಿ ಅನ್ನ ವೆಂದರೆ ಮೃಗಯಾನೇ ಆಗಿತ್ತು. ಆದರಲ್ಲಿಯೂ ಬಂದೂಕ ಹಾರಿಸಿ ಅಡವಿ ಯಲ್ಲಿ ಗೊಂದಲವೆಬ್ಬಿಸುವದು ಅವರಿಗಿನ್ನೂ ಅಂಜಿಕೆಯದಾಗಿ ತೋರುತ್ತಿತ್ತು; ಆದರೆ ಆ ಕಾಡಿನಲ್ಲಿ ಕಾಡು ಹಂದಿಗಳ ಹೊರತು ಮತ್ತೇನು ದೊರೆಯ ಬೇಕಾಗಿದೆ? ಮತ್ತು ರಫೀ ಉದ್ದೀನನು ಆ ಕಾಡಿನಲ್ಲಿ ಈ ಮೊದಲು ಓಡಿ ಹೋದಾಗಿನಿಂದ ಜಾವರಾಗಳಂತೆಯೇ ಎಲ್ಲ ಬಗೆಯ ಬೇಟೆ ಹೊಡೆಯುವದ ರಲ್ಲಿ ನಿಪುಣನಾಗಿ ಬಿಟ್ಟಿದ್ದನು! ಸುಮಾರು ಅರ್ಧ ಗಂಟೆಯ ವರೆಗೆ ಸರವು-ಸಾಡ್ಲಗಳಲ್ಲಿ ಅಡಗಡಗಿ ಹೋದ ಬಳಿಕ ಆತನಿಗೊಂದು ಬೇಟೆ ದೊರಕಿತು. ಕೂಡಲೆ ಆತನು ತನ್ನ ಕೈಯೊಳಗಿನ ಕೊಡ್ಲಿಯ ಒಂದೇ ಕಡಿತದಿಂದ ಅದನ್ನು ನೆಲಕ್ಕುರುಳಿಸಿ ಬಿಟ್ಟನು. ಆ ಮೇಲೆ ಕಾದ ಮಳಲ ಪ್ರದೇಶಕ್ಕೆ ಅದನ್ನೊಯ್ದು ಒಣಗಿದ್ದ ಕಟ್ಟಿಗೆಗಳನ್ನು ತಂದು, ಸೈನಿಕನಿಂದ ತಂದಿದ್ದ ಬೆಂಕಿಪೆಟ್ಟಿಗೆ ಯಿಂದ ಅವುಗಳನ್ನು ಹೊತ್ತಿಸಿ, ಜಾವರಾಗಳ ಸೂಪಶಾಸ್ತ್ರದಂತೆ ಆ ಮಾಂಸ ವನ್ನು ವಿಧಿಪೂರ್ವಕವಾಗಿ ಸುಟ್ಟು, ಒಂದೊಂದು ಎಲೆಯ ಮೇಲೆ ಬಡಿಸಿ ಕೊಂಡು ಅವರಿಬ್ಬರೂ ಭೋಜನಕ್ಕೆ ಪ್ರಾರಂಭಿಸಿದರು.

ಹಾಗಿದ್ದರೂ ಕೂಡ ಕಂಟಕನಿಗೆ ಆ ಪಕ್ವಾನ್ನವನ್ನು ಇಡೀ ಜನ್ಮದಲ್ಲಿ ಪ್ರಥಮತಃ ತಿನ್ನುವ ಪ್ರಸಂಗವಿದ್ದದರಿಂದ, ಆತನು ಸೊಟ್ಟ-ಡೊಂಕ ಮೋರೆ ಮಾಡುತ್ತ ಹೇಗಾದರೂ ಮಾಡಿ ಅದನ್ನು ನುಂಗಿ ನೀರು ಕುಡಿಯಬೇಕಾ ಯಿತು. ಸಂಗಡ ತಂದಿದ್ದ ತೆಂಗಿನ ಕಾಯಿಗಳ ಕೊಬ್ಬರಿಯು ಬಾಡಿಸಿ ಕೊಳ್ಳಲಿಕ್ಕೆ ದೊರೆತಿತ್ತೆಂದೇ ಕಾರಿಕೊಳ್ಳುವವರೆಗೆ ಪ್ರಸಂಗ ಬರಲಿಲ್ಲವಷ್ಟೆ.

ಆದರೂ ಅದನ್ನು ತಿನ್ನುವಾಗ ನಾಲಿಗೆಗೆ ಎಷ್ಟು ಜಡವೆನಿಸಿತೊ ಅದು ಹೊಟ್ಟೆಯೊಳಗಿನ ಜಠರಾಗ್ನಿಗೆ ಕೊಂಚವೂ ಜಡವೆನಿಸಲಿಲ್ಲ. ಎಲ್ಲವನ್ನೂ ಚಟ್ಟಾ-ಪಟ್ಟಾ ಮಾಡಿದ ಬಳಿಕ ಕಂಟಕನಿಗೆ ಹೊಟ್ಟೆ ತುಂಬಿದ ಬಗ್ಗೆ ಸಮಾಧಾನದ್ದೊಂದು ತೇಗು ಬಂದಿತು. ಆ ಕೂಡಲೆ ಆತನಿಗೊಳ್ಳೇ ಹುಷಾರೆನಿಸಿತು. ಅದನ್ನು ಕಂಡು ರಫೀ ಉದ್ದೀನನು ನಕ್ಕು:—

"ಎರಡು ಮೂರು ದಿನಗಳಲ್ಲೇ ಈ 'ಜಾವರಾ' ತಿನಸು ನಿಮಗೊಳ್ಳೇ ಮನ್ನಿಸುವದಾಗಿ ಕಾಣುತ್ತದೆ. ಅದರಿಂದ ನನ್ನ ಪಾಲಿಗೆ ಏನಾದರೂ ಉಳಿದೀತೋ ಇಲ್ಲವೋ ಎಂಬ ಬಗ್ಗೆ ನನಗೆ ಈಗಾಗಲೆ ಅಂಜಿಕೆಯುಂಟಾಗಿದೆ!"

ಅವರ ಊಟವು ಹಾಗೆ ನಗೆ-ಕೆಲೆದಾಡುತ್ತ ನಡೆದಿರಲು, ಮುಗಿಲು ಮೇಘಾಚ್ಛನ್ನವಾಯಿತು. ಆಗ ಕಂಟಕನು:—

"ಅತ್ತ ನೋಡು, ಮಳೆಯು ಹೇಗೆ ಏರಿ ಬರುವದರಲ್ಲಿದೆ? ಆದ್ದರಿಂದ ಇನ್ನು ಮುಂದಿನ ಚಲನವಲನವು ನಿರ್ಧರವಾಗುವವರೆಗೆ ಈ ಕಾಡಿನಲ್ಲಿ ನಿವಾಂತವಾದ ದರಿ-ಕಂದರವನ್ನೆಲ್ಲಾದರೂ ಶೋಧಿಸಬೇಕು. ನಿನ್ನೆಯ ರಾತ್ರಿಯನ್ನು ಗಿಡದ ಮೇಲೆ ಮಲಗಿಯೇ ಕಳೆದೆವು; ಆದರೆ ಅಂಥ ಶಯ್ಯಾ ಮಂದಿರವೊಳಗಿನ ಆ ವಿಲಾಸಗಳನ್ನು ಪ್ರತಿರಾತ್ರಿಯಲ್ಲೂ ಅನುಭವಿಸುತ್ತಿರುವದು ನನಗಂತೂ ಇಚ್ಛೆಯಿಲ್ಲ. ಈ ಕಾಡಿನಲ್ಲಿ ನೀನೇ ನನ್ನ ದಾರಿಕಾರನು. ನೀನು ಸಂಜೆಯೊಳಗಾಗಿಯೇ ಒಂದು ಸುಂದರ ಬಂಗ್ಲೆಯನ್ನು ಹುಡುಕಿ ತೆಗೆಯಬೇಕು ಹೂಂ, ಏಳು, ನಡೆ"

"ಆದರೆ ನಾನು ಇತ್ತ ಕಡೆಗೇ ನಿಮ್ಮನ್ನು ಕರೆತಂದದ್ದು ಆ ಸುಂದರ ಬಂಗ್ಲೆಗಳಿಗೆಂದೇ. ಇಲ್ಲಿ ಸಂದಿ ಮೂಲೆಗಳಿಲ್ಲದ, ಕಲ್ಲಿನಿಂದ ರಮ್ಯವಾಗಿ ನಿರ್ಮಿಸಿದ ಬೇಕಾದಷ್ಟು ಬಂಗ್ಲೆಗಳು ದೊರೆಯುವವೆಂದೇ ಇಲ್ಲಿಗೆ ಬಂದಿರುವದು. ಈ ದಿನ್ನೆಯ ಗಿಡ-ಗುಂಪುಗಳನ್ನಷ್ಟು ದಾಟೋಣ ಆ ಮೇಲೆ ನೋಡುವಿರಂತೆ!"

ಅವರು ದಿನ್ನೆಯನ್ನು ದಾಟಿ ಇಳಿದು ಮತ್ತೊಂದು ದಿಬ್ಬವನ್ನು ಹತ್ತಿದರು. ಸಮುದ್ರವು ಅಲ್ಲಿಂದ ದೂರದಲ್ಲಿ ಕಾಣಿಸುತ್ತಿತ್ತು. ಆ ದಿಬ್ಬದ ಕೆಳಬದಿಗೆ ಗುಹೆಗಳು ಸಾಲುಗಟ್ಟಿಕೊಂಡಿದ್ದವು. ಮುಂದೆ ಮಳಲು ಪ್ರದೇಶದವರೆಗೂ ಪ್ರಚಂಡಗಳಾದ ಬಿಡಿ ಬಿಡಿ ಕೋಡುಗಲ್ಲುಗಳು ಸಾಲು-ಸಾಲಾಗಿಯೇ ನಿಂತಿದ್ದವು. ಆ ಶಿಲಾಸಂಘವನ್ನು ನೋಡಿದರೆ, ಆನೆಯ ತಂಡವು ಸಮುದ್ರದಲ್ಲಿ ಮಿಯ್ಯಲಿಕ್ಕೆ ಉತ್ಸಾಹದಿಂದ ಹೊರಟಿರುವಂತೆ ಭಾಸವಾಗುತ್ತಿತ್ತು.

ಅಲ್ಲಿಯ ಗುಹೆಗಳನ್ನು ತೋರಿಸಿ ರಫೀಉದ್ದೀನನು ಅನ್ನುತ್ತಾನೆ:—
"ದೇಖಿಯೇ ಬಾಬೂಜಿ! ಬಂಗಲೆಗಳ ಪಕ್ಕದಲ್ಲಿಯೇ ಬಂಗ್ಲೆಗಳು ಹೇಗೆ

ಮುಂಬಯಿಯೊಳಗಿನ ಮಲಬಾರ ಹಿಲ್ಲಿನಂತೆ ಹೊಂದಿಕೊಂಡಿರುತ್ತವೆ ನೋ-ಡಿರಿ! ಇನ್ನು ಯಾವ ಬಂಗಲೆಯ ಬಾಡಿಗೆಯು ಎಷ್ಟೆಷ್ಟು? ಯಾವುದು ಅಗ್ಗ ಯಾವುದು ಯೋಗ್ಯವೆಂಬುದನ್ನು ನೋಡಿಕೊಳ್ಳಿರಿ''

ಅವರಿಬ್ಬರೂ ಕೂಡಿ ಆ ಗುಹೆಗಳನ್ನು ಹೊಕ್ಕು ಹೊಕ್ಕು ನಿರೀಕ್ಷಿಸ ತೊಡಗಿದರು ನೋಡುನೋಡುತ್ತಿರಲಿಕ್ಕೆ ಎರಡು ಬಹು ದೊಡ್ಡ ಬಂಡೆಗಳು ಒಂದಕ್ಕೊಂದು ತುದಿಗೆ ತುದಿ ಕೂಡಿಕೊಂಡು ತಂಬೂದಂತೆ ನಿಂತುಕೊಂಡಿರುವ ಮತ್ತು ಎರಡು ಕೊಬ್ಬಿದ ಆನೆಗಳು ಕಾದಾಡುವಾಗ ಮದೋನ್ಮತ್ತ ಮಸ್ತಕಕ್ಕೆ ಮಸ್ತಕದಿಂದ ದೂಡುವಂತಹ ಪದ್ಧತಿಯಲ್ಲೇ ಶೋಭಿಸುತ್ತಿರುವದು ಅವರಿಗೆ ಕಂಡಿತು. ಆ ಶಿಲೆಗಳ ಆ ತಂಬುವಿನಂತಹ ದರ್ಶನೀಯ ಭಾಗದ ಒಳಗಡೆಗೆ ದೂರದ ವರೆಗೆ ತಂಬೂದಂತೆಯೇ ವಿಸ್ತಾರವಾದ ಪೊಳು ಕಿದ್ದಿತು. ಅದರೊಳಗೆ ಮತ್ತೆ ಸಣ್ಣ ಸಣ್ಣ ಎರಡು ಮೂರು ಗುಹೆಗಳು ಕೋಣೆಗಳಂತೆ ಗೋಡೆಯ ಎರಡೂ ಪಕ್ಕಗಳಲ್ಲಿ ನಿರ್ಮಿಸಲ್ಪಟ್ಟಿದ್ದವು. ಅವುಗಳನ್ನು ನೋಡುತ್ತಲೆ ರಫೀ ಉದ್ದೀನನಿಗೆ ಅದೇ ಸ್ಥಳವು ವನನಿವಾಸಕ್ಕೆ ಯೋಗ್ಯವೆನಿಸಿತು. ಕೂಡಲೆ ಆತನು ಒಳಗೆ ಹೊಕ್ಕು ನಡುವಿನ ಪ್ರವೇಶದಲ್ಲಿ ವಿಶ್ರಾಂತಿಗಾಗಿ ಕುಳಿತನು; ಆದರೆ ಅಲ್ಲಿ ಒಂದಿಷ್ಟು ಕುಳಿತುಕೊಳ್ಳುವಷ್ಟರಲ್ಲೇ ಆತನು ಒಮ್ಮೆಲೆ 'ಘಾತ! ಘಾತ!!' ಎಂದು ಗೊಗ್ಗರದನಿಯಿಂದ ಚೀರಿ, ಗಾಬರಿಯಿಂದಲೇ ಹೊರಗೆ ಬಂದನು.

''ಯಾಕೋ, ಏನಾಯಿತು? ಆದದ್ದಾದರೂ ಏನು?" ಎಂದು ತುಬಾಕಿಯನ್ನು ಸಜ್ಜುಮಾಡಿ ಹಿಡಿಯುತ್ತ ಕಂಟಕನು ಕೇಳಲು,

''ಮನುಷ್ಯನೆನ್ನಿರಿ, ದೆವ್ವವೆನ್ನಿರಿ; ಆದರೆ ಕಂಟಕಬಾಬು, ಒಂದು ಹೊಲಸು ಪ್ರಾಣಿಯು ಆ ಒಳಗೆ ಮೂಲೆಯೊಳಗಿನ ಗವಿಯಲ್ಲಿ ಹುದುಗಿಕೊಂಡು ಕುಳಿತಿರುತ್ತಾನೆ! ಆತನ ಕಣ್ಣುಗಳು ಆತನ ಮೋರೆಯ ಕತ್ತಲಲ್ಲಿ ಪಣತಿಯಂತೆ ಮಿಣಿಮಿಣಿ ಎನ್ನುತ್ತವೆ!' ರಫೀ ಉದ್ದೀನನು ಆ ತನ್ನ ಅಂಜಿಕೆಯನ್ನು ಕೂಡ ತನ್ನ ನಿತ್ಯದ ರೂಢಿಯಂತೆ ನಕ್ಕು ವ್ಯಕ್ತಗೊಳಿಸಿದನು.

"ಹಾಗಾದರೆ, ಒಮ್ಮೆಲೆ ಗುಂಡು ಹಾಕಿಬಿಡೋಣವೇ?'' ಎಂದೆಂದು ಕಂಟಕನು ಬಂದೂಕನ್ನೆತ್ತಿದನು.

"ಬೇಡ ಬೇಡ! ತೀರ ಜೀವದ ಸುತ್ತೇ ಬರುವವರೆಗೆ ಬಂದೂಕಿನ ಬಾರಿನ ಅವಶ್ಯಕತೆಯಿಲ್ಲ. ಆ ಬಾರಿನ ಸಪ್ಪಳದಿಂದ ಒಂದುವೇಳೆ ಕಾನಿನ ತುಂಬ ಇಲ್ಲದ ಗಡಿಬಿಡಿಯುಂಟಾದೀತು. ಮೊದಲು ತಿವಿದು ನೋಡಿ, ಆ ಪ್ರಾಣಿಯಾರಿರುವರೆಂಬದನ್ನಾದರೂ ಪರೀಕ್ಷಿಸೋಣ!''

ಹೀಗನ್ನುತ್ತನ್ನುತ್ತ ರಫೀಉದ್ದೀನನು ಒಂದು ಉದ್ದನ್ನ ಕೋಲನ್ನು ತಕ್ಕೊಂಡು ತುಸ ಒಳಗೆ ಹೋಗಿ, ಆ ಕೋಲಿನಿಂದ ಆ ಗವಿಯೊಳಗೆ ತಿವಿದನು. ಆ ಕೂಡಲೆ ಒಂದು ದೈನ್ಯದ ಚೀತ್ಕಾರವು ಎದ್ದು, ಎಂಥವೋ ಏನೋ, ಆದರೆ ಕಕ್ಕುಲತೆಯ ಶಬ್ದಗಳು ಹೊರಟವು!

"ಎಲಾ ಇವನ! ಇವನಂತೂ ಅದಾವನೋ ಒಬ್ಬ ಜಾವರಾನಿರುವನು." ರಫೀಉದ್ದೀನನಿಗೆ ಜಾವರಾಗಳ ಯಾವ ಅಲ್ಪ ಸ್ವಲ್ಪ ಭಾಷೆಯ ಪರಿಚಯ ವಿದ್ದಿತೋ ಅದರ ಮೇಲಿಂದ ಅವನು ತರ್ಕಿಸಿದನು 'ನನ್ನನ್ನು ಕೊಲ್ಲಬೇಡಿರಿ.' ಎಂದು ತನ್ನನ್ನು ಕುರಿತು ದೈನ್ಯದಿಂದ ಬೇಡಿಕೊಳ್ಳುತ್ತಿರುವಂತೆ ಆತನಿಗೆ ತಿಳಿಯಿತು.

"ಹಾಗಾದರೆ ಆತನಿಗೆ ಹೇಗಾದರೂ ಹೊರಗೆ ಬಾ ಎಂದು ತಿಳಿಸು; ಅಲ್ಲದೆ ನಾವು ಜಾವರಾಗಳ ಮಿತ್ರರಿರುವೆವು; ಶತ್ರುಗಳಲ್ಲವೆಂದೂ ಹೇಳು." ಕಂಟಕನು ರಫೀಉದ್ದೀನನಿಗೆ ಸೂಚಿಸಿದನು.

ಉದ್ದೀನನು ಜಾವರಾಗಳ ಭಾಷೆಯಲ್ಲಿ ಅವನ್ನು ಅವನಿಗೆ ಹೇಗೆ ಹೇಗೋ ಹೇಳಿದನು; ಮತ್ತು ಸಂಪೂರ್ಣವಾಗಿ ತಿಳಿಹೇಳಲಿಕ್ಕೆಂದೋ ಏನೋ ಆ ಕೋಲಿನಿಂದ ಆ ಹೋರಿನೊಳಗೆ ಮತ್ತೊಮ್ಮೆ ತಿವಿದನು.

"ಕೂಡಲೆ ಬಂದೆನು ಬಂದೆನು." ಎಂದು ಆ ಹೋರಿನೊಳಗಿಂದ ದೈನ್ಯವಾಣಿಯು ಕೇಳಿಸಿತು; ಹಾಗು ಅಲ್ಪಾವಕಾಶದಲ್ಲಿಯೇ ತಲೆಯನ್ನು ಆ ಹೋರಿನೊಳಗಿಂದ ಹೊರತೆಗೆದು, ಆ ಮೇಲೆ ಕುಂಡಿಯಿಂದ ಹೊಸೆಯುತ್ತ ಹೊಸೆಯುತ್ತ ಒಬ್ಬ ದುಃಖ-ಕಷ್ಟಗಳಿಂದ ಹೈರಾಣಾದ ಜಾವರಾ ಮನುಷ್ಯನು ಆ ಬಿಲದಿಂದ ಹೊರಬಿದ್ದನು. ಹೊರಬಿದ್ದ ಕೂಡಲೆ ಆತನು ಒಂದು ಕಾಲು ಚಾಚಿ ಅದರ ಮೊನಗಂಡದ ಕಡೆಗೆ ಬೊಟ್ಟುಮಾಡಿ ತೋರಿಸಿದವನೇ ಕಣ್ಣಲ್ಲಿ ನೀರು ತಂದು ನರಳಹತ್ತಿದನು.

ಕಂಟಕ ಮತ್ತು ರಫೀಉದ್ದೀನರು ಆ ಮೊನಗಂಡದ ಕಡೆಗೆ ನೋಡುತ್ತಾರೆ, ಅಲ್ಲಿ ಏನಾದರೂ ರಕ್ತಮುಂಜುಗಟ್ಟಿ ನೊವಾದಂತೆ ಕಂಡಿತು. ಕೆಲ ಸಂಜ್ಞೆಗಳಿಂದ, ಕೆಲವು ಶಬ್ದಗಳಿಂದ ಉದ್ದೀನನಿಗೆ ಚೆನ್ನಾಗಿ ತಿಳಿಯಿತೇನಂದರೆ, ನಿನ್ನೆಯ ದಿವಸ ಜಾವರಾಗಳು ಇಂಗ್ಲಿಷರ ಕಡೆಯ ದಂಡಿತರ ತಂಡದ ಮೇಲೆ ನುಗ್ಗಿ ಯಾವ ಶರಸಂಧಾನ ನಡೆಸಿದ್ದರೋ, ಆ ಕಾಲಕ್ಕೆ ಇಂಗ್ಲಿಷರ ಕಡೆಯ ಸೈನಿಕರು ಹಾರಿಸಿದ್ದ ತುಬಾಕಿಗಳವೊಂದು ಗುಂಡು ಬಂದು ಆ ಜಾವರಾನ ಕಾಲಿಗೆ ಬಡಿದಿತ್ತು. ಆತನ ಸಂಗಡಿಗರು ಜೀವದ ಅಂಜಿಕೆಗೆ ಓಡಿಹೋಗುತ್ತಿರಲು, ಈತನಿಗೆ ಓಡಿಹೋಗುವದು ಶಕ್ಯವಾಗದ್ದರಿಂದ, ಈತನು

ಅಲ್ಲಿಯೇ ಒಂದು ಹೊದರು ನೋಡಿ ಅದರಲ್ಲಿ ಸೇರಿಕೊಂಡು ನರಳುತ್ತ ಬಿದ್ದಿದ್ದನು.

ರಫೀಉದ್ದೀನನಿಗೆ ಅವೆಲ್ಲ ವಸ್ತುಸ್ಥಿತಿಯು ಗೊತ್ತಾದ ಕೂಡಲೆ ಯಾವ ದೊಂದು ಭಾಗ್ಯನಿಧಿಯು ಆಕಸ್ಮಿಕವಾಗಿ ಸಿಕ್ಕಂತೆ ಮೋದಗೊಂಡನು! ಬಳಿಕ ಕಂಟಕನನ್ನು ತುಸ ಬದಿಗೆ ಕರೆದು, ಆತನು:—

"ಸಂತೋಷದಿಂದ ಮೊದಲು ಚಪ್ಪಾಳೆ ಹೊಡೆಯಿರಿ. ಬಾಬೂಜಿ! ಜಾವರಾಗಳ ವಸತಿಯಲ್ಲಿ ನಾವು ಆಶ್ರಯ ಹೊಂದಬೇಕಾಗಿತ್ತು; ಆದರೆ ಸದ್ಯಕ್ಕೆ ಅವರು ಇಂಗ್ಲಿಷರ ಮೇಲೆ ರೇಗಿಗೊಂಡವರು! ನಾವುಗಳು ಇಂಗ್ಲಿಷರ ದಂಡಿತರೊಳಗಿನ ಜನರು ಶರಣೆಂದು ಹೋದರೂ, ದೂರಿನಿಂದ ನೋಡುತ್ತಲೆ ಅವರು ಸಂಶಯದಿಂದ ನಮ್ಮ ಮೇಲೆ ನಗ್ಗಬಹುದೆಂಬ ಯಾವ ಒಂದು ದೊಡ್ಡ ಆತಂಕವು ನಮ್ಮ ದಾರಿಯಲ್ಲಿದ್ದಿತೋ, ಅದು ಈ ಜಾವರಾನ ಗೆಳೆತನ ದಿಂದ ನೀಗುವ ಸಂಧಿಯು ನಮಗೆ ಅನಾಯಾಸವಾಗಿ ದೊರೆತಂತೆ ತೋರುತ್ತದೆ. ಜಾವರಾಗಳ ರಾಜ್ಯದಲ್ಲಿ ಆತಂಕವಿಲ್ಲದೆ ಹೋಗಲಿಕ್ಕೆ ಈ ಜಾವರಾನೊಬ್ಬನು ಜೀವಂತ ನುಡಿ-ನಡೆಗಳುಳ್ಳ ಪ್ರವೇಶಪತ್ರನೇ (ಹುಕುಮೇ) ನಮಗೆ ದೊರೆತನೆನ್ನಬಹುದು! ಆದ್ದರಿಂದ ನಾವು ಈತನ ಶುಶ್ರೂಷೆಯನ್ನು ಚೆನ್ನಾಗಿಯೇ ಮಾಡಲಿಕ್ಕೆಬೇಕು."

ಆ ಬೇತು ಕಂಟಕನ ಮನಸ್ಸಿಗೂ ಬಂತು. ಅಂಡಮಾನದ ಕಷ್ಟಕಾರಾ ಗೃಹದಲ್ಲಿರುವಾಗ ಪ್ರಥಮೋಪಚಾರದ ಮತ್ತು ಔಷಧದ ಕೆಲಸವನ್ನು ಆತನು ಹೆಚ್ಚಾಗಿ ಮಾಡುತ್ತಿದ್ದನು. ಆ ವೈದ್ಯಕೀಯ ಕೆಲಸ ಸಾಗಿಸುವ ಮಟ್ಟಿಗಿನ ಜ್ಞಾನವು ಈಗ ಆತನಿಗೆ ಉಪಯುಕ್ತವಾಯಿತು.

ಆಗ ಅವರು ಆ ಜಾವರಾನಿಗೆ ಧೈರ್ಯ ಹೇಳಿದರು. ಆತನ ಮೊನ ಗಂಡವನ್ನು ತಮ್ಮ ಬಳಿಯ ಚೂರಿಯಿಂದಲೇ ಶಕ್ಯವಾದಂತೆ ಸೀಳಿ, ಒಳಗೆ ಸಿಕ್ಕಿದ್ದ ಗುಂಡನ್ನು ತೆಗೆದರು. ಬಳಿಕ ಆ ಗಾಯವನ್ನು ಚೆನ್ನಾಗಿ ತೊಳೆದು, ಕೆಲ ವನಸ್ಪತಿಗಳನ್ನು ಕುಟ್ಟಿ ಅದರಲ್ಲಿ ತುಂಬಿ ಕಟ್ಟಿದರು. ಗುಂಡು ಕಾಲೊಳಗೆ ಇರುವವರೆಗೆ ಆ ಜಾವರಾನಿಗೆ ಯಾವ ಅಸಹ್ಯ ವೇದನೆಗಳು ಆಗುತ್ತಿದ್ದವೋ, ಅವು ಗುಂಡು ಹೊರಬಿದ್ದೊಡನೆಯೇ ಕಡಿಮೆಯಾದವು. ಅದರಿಂದ ಅವನು ಅವರ ಉಪಕಾರಗಳನ್ನು ನಾನಾ ಬಗೆಯ ಗುರ್ತು-ಸಂಜ್ಞೆಗಳನ್ನು ಮಾಡಿ ವ್ಯಕ್ತಪಡಿಸತೊಡಗಿದನು.

ಅದೇ ಗುಹೆಯಲ್ಲಿ ಆ ಮೂವರೂ ಮುಂದೆ ಎರಡು-ಮೂರು ದಿನಗಳ ವರೆಗೂ ಅಡಗಿಕೊಂಡೇ ಇದ್ದರು. ಕಾನಿನೊಳಗಿನ ಪಶು-ಪಕ್ಷಿಗಳ ಯಾವ

ಬೇಟೆಯು ತುಬಾಕಿಯು ಬಾರಿನ ಹೊರತು ಮಾಡಬರುತ್ತಿತ್ತೋ, ಅದನ್ನೇ ಅವರು ಮಾಡುತ್ತಿದ್ದರು ಆ ಜಾವರಾಸಿಂದ ಆತನ ವಸತಿಯ ಮಾಹಿತಿಯನ್ನು ಅವರು ತಿಳಿದುಕೊಂಡರು ತಾವು ಕರಿನೀರಿನಿಂದ ಹೇಗೆ ಓಡಿದೆವು, ತಾವೂ ಇಂಗ್ಲಿಷರಿಗೆ ಹೇಗೆ ವೈರಿಗಳಾಗಿರುತ್ತೇವೆ; ಮತ್ತು ತಾವು ಜಾವರಾಗಳ ವಸತಿಗೇ ಹೇಗೆ ಶರಣು ಹೋಗಬೇಕೆಂದಿರುತ್ತೇವೆ? ಇದೆಲ್ಲವನ್ನೂ ಅವರು ಆತನಿಗೆ ಹೇಳಿದರು. ಆ ಜಾವರಾನಾದರೂ ಅವರನ್ನು ಅತ್ಯಂತ ಮನಃಪೂರ್ವಕವಾಗಿ ಆಶ್ವಾಸಿಸಿದನೇನಂದರೆ, ನೀವು ನನಗೆ ಜೀವದಾನವನ್ನಿತ್ತಿರುವುದರಿಂದ ಆ ಉಪಕಾರವನ್ನು ತೀರಿಸುವ ಸಲುವಾಗಿ ಶಕ್ಯವಾದಷ್ಟು ಸಹಾಯ್ಯವನ್ನು ನಮ್ಮ ಜಾವರಾಗಳು ನಿಮಗೆ ಮಾಡದಿರಲಾರರು; ಯಾಕಂದರೆ, ಜಾವರಾಗಳ ಯಾವ ಜಾತಿಯೊಳಗಿನವನು ಅವನಾಗಿದ್ದನೋ ಆ ಜಾತಿಯ ನಾಯಕನ ಬೀಗನೂ ನಂಬಿಗೆಯ ಸೇವಕನೂ ಆತನಾಗಿದ್ದನು!

ಆ ಜಾವರಾ ಮನುಷ್ಯನು ಗುಣಹೊಂದುವವರೆಗೆ ಅವರು ಅಲ್ಲಿಯೇ ಕಳ್ಳರ ಹಾಗೆ ಹುದುಗಿಕೊಂಡು ಮೂರು ನಾಲ್ಕು ದಿನಗಳನ್ನು ಕಳೆದನು. ಆ ಸಮಯದಲ್ಲಿ ರಫೀಉದ್ದೀನನು ತೀರ ನಿಶ್ಚಿಂತನಂತೆ ಆನಂದಲೋಲುಪನಾಗಿದ್ದನು; ಆದರೆ ಕಂಟಕನು ಮಾತ್ರ ಮನಸ್ಸಿನ ಮನಸ್ಸಿನೊಳಗೆ ಅತ್ಯಂತ ಸಚಿಂತನಾಗಿದ್ದನು. ರಫೀಉದ್ದೀನನಿಗನಿಸಿದ್ದಕ್ಕಿಂತಲೂ ತೀರ ಸುಲಭವಾಗಿ ಅವರ ಓಡಿ ಹೋಗುವ ಬೇತು ಈ ಮಜಲಿನ ವರೆಗೆ ಸಾರುಗಂಡಿತ್ತು. ಅಪೇಕ್ಷಿತವಲ್ಲದಂತಹ ಎಷ್ಟೋ ಅನುಕೂಲ ಸಂಧಿಗಳು ಅವರ ಮುಂದೆ ಸಾಗಿಬಂದವು. ಆತನು ಸ್ವತಃವಂತೂ ನಾವು ಕರಿನೀರಿನಿಂದ ಓಡಿಯೇ ಹೋದೆವೆಂದು ತಿಳಿದನು! ಆದರೆ ಕಂಟಕನ ಮನಸ್ಸನ್ನು ಚಿಂತೆಯು ಒಂದೇಸವನೆ ದಹಿಸತೊಡಗಿತ್ತು. ಆತನೆದುರಿಗೆ ತನ್ನ ಸ್ವಂತದ ಬಿಡುಗಡೆಯ ಪ್ರಶ್ನೆಯಷ್ಟೇ ಇರಲಿಲ್ಲ; ಆದರೆ ಮಾಲತಿಯ ಬಿಡುಗಡೆಗಾಗಿಯೇ ಅವನು ಅಷ್ಟು ಚಿಂತಾಮಗ್ನನಾಗಿದ್ದನು!

ಅವಳನ್ನು ಬಿಡುಗಡೆ ಮಾಡಿಸುವ ಬಗೆ ಹೇಗೆ? ಬಿಡಿಸಿದರೂ ಅವಳನ್ನು ಈ ಅಡವಿಗೆ, ಈ ಗಪಿಗೆ, ಈ ಭಯಾನಕ ಪೇಚಿನಲ್ಲಿ ಅಥವಾ ಜಾವರಾಗಳ ವಸತಿಯಲ್ಲಿ ಇರಿಸುವ ಬಗೆ ಹೇಗೆ? ಕಾಪಾಡುವದೆಂತು? ರಫೀಉದ್ದೀನನ ಹೊರತಂತೂ ಹೆಜ್ಜೆ ಮುಂದರಿಸುವದು ದುರ್ಘಟವು; ಆದರೆ ಸದ್ಯದಲ್ಲಿ ಏಕನಿಷ್ಠಸೇವಕನಂತೆ ತೋರುತ್ತಿದ್ದರೂ ಆತನು ಮುಬ್ಬಾ ಒಬ್ಬ ಹೆಸರುವಾಸಿ ಯಾಪದ ಓಂಸ್ರ ಪಶುವಾಗಿದ್ದನು! ಆದ್ದರಿಂದ ಆತನನ್ನೆಷ್ಟು ನಂಬಬೇಕು? ಮತ್ತು ಆತನಿಗೆ ಕಂಟಕನೇ ಕಿಶನನಿರುವನೆಂಬ ಶಂಕೆ ಕೂಡ ಈಗ ಬರು

ವದು ಶಕ್ಯವಿರದಿದ್ದರೂ ಮತ್ತು ಅಂತೆಯೇ ಕಂಟಕನೊಡನೆ ಮಾಲತಿತ್ವದ ಯಾವ ಸ್ಮೃತಿಯು ಎಳೆ-ಕಂಡಕಿಗಳು ಆತನ ಮನಸ್ಸಿನಲ್ಲಿ ತೊಡಗಿರುವದೂ ಅಸಂಭವವಾಗಿದ್ದರೂ; ಹಾಗು ಕಂಟಕಿಯು ವಯಸ್ಸಿನಿಂದಲೂ ರೂಪದಿಂದಲೂ ಕಷ್ಟಪರಂಪರೆಗಳಿಂದಾದ ಕ್ಷೀಣತೆಯಿಂದಲೂ ಮಾಲತಿಯೆಂದು ಹೇಳಿದರೂ ಕೂಡ ನೋಡಿದ ಕೂಡಲೆ ಗುರುತು ಹಿಡಿಯುವದು ಕಠಿಣವಾಗಿತ್ತಾದರೂ ರಫೀಉದ್ದೀನನು ಅವಳನ್ನು ಕಂಡೊಡನೆ ಅವಳು ಮಾಲತಿಯೇ ಅಹುದೆಂದು ಒಂದು ವೇಳೆ ಗುರ್ತಿಸಿದರೆ? ಯಾವುದೊಂದು ಭಯಂಕರ ಪ್ರಸಂಗವು ಸಂಭವಿಸಲಿಕ್ಕೇ ಇಲ್ಲೆಂಬದು ಹೇಗೆ? ಅವಳಂತೂ ಇವನನ್ನು ಗುರ್ತಿಸುವವಳೇ. ಆಗ ಈತನ ಮುಂಚಿನ ನೀಚತೆಯಾಗಲಿ, ಆಕೆಯ ಮುಂಚಿನ ಸಿಟ್ಟಾಗಲಿ ಸ್ಫೋಟಗೊಂಡು, ಆ ಬೇಗೆಯಲ್ಲಿ ಎಲ್ಲರದೂ ಬೆಂಕಿ-ಬೂದಿಯಾಗಿ ಹೋದೀತು. ಈ ಇಂಥ ನಿಬಿಡವಾದ ಕಾಂತಾರದೊಳಗಿನ ಏಕಾಂತದಲ್ಲಿ ಅವಳು, ನಾನು ಮತ್ತು ಈತ! ಈತನ ಸಹಾಯದಿಂದ ನಾನು ಆಕೆಯ ಬಿಡುಗಡೆ ಮಾಡುವುದೆಂದರೆ, ರಾಮನು ರಾವಣನ ಸಹಾಯಪಡೆದು ಸೀತೆಯನ್ನು ಬಿಡಿಸಿಕೊಳ್ಳುವಂತೇ ಸರಿ! ಆದರೆ ಈಗ ಬೇರೆ ಉಪಾಯವಾವುದಿದೆ?

ರಫೀಉದ್ದೀನನ ಮನಸ್ಸಿನಲ್ಲಿ ಮಾತ್ರ ಆಗ ವಂಚನೆಯ ಭಾವವು ಲೇಶಮಾತ್ರವೂ ಇರಲಿಲ್ಲ. ಆತನದೊಂದೇ ಅಡಚಣೆಯಿದ್ದಿತು; ಅದೆಂದರೆ, ದುಡ್ಡು! ಜಾವರಾಗಳ ವಸತಿಯಲ್ಲಿ ಲೋಕಪ್ರಿಯನಾಗಬೇಕಾಗಿದ್ದರೆ ಮೊದಲು ಮದ್ಯಬೇಕು; ಮತ್ತು ಮುಂದೆ ಕರಿನೀರಿಗೆ ಶರಣು ಹೊಡೆಯಲಿಕ್ಕೆಬೇಕಾಗುವ ಡೋಣಿ, ಅರಿವೆ, ಆಯುಧ, ಖಾದ್ಯ ಮುಂತಾದ ಸಾಧನಗಳನ್ನು ದೊರಕಿಸಲಿಕ್ಕೂ ದುಡ್ಡು ಬೇಕು. ಅದನ್ನು ದೊರಕಿಸಲಿಕ್ಕೆ ಎರಡೇ ಮಾರ್ಗಗಳಿದ್ದವು. ಬಂದಿಗಳ ವಸತಿಯಲ್ಲಿ ರಾತ್ರಿ-ಅಪರಾತ್ರಿಗಳಲ್ಲಿ ಹೊಕ್ಕು ದರವಡೆ ಮಾಡುವದು; ಇಲ್ಲವೆ ಕಂಟಕ ಬಾಬುವು ತನ್ನ ಸಾವಿರ-ಹದಿನೈದು ನೂರರ ಯಾವ ಇಡಿಗಂಟನ್ನು ಕೊಡುವವನಿದ್ದನೋ ಅದನ್ನು ದೊರಕಿಸುವದು. ಅವರು ಮೊದಲು ಬೇತು ಮಾಡುತ್ತಿದ್ದರೇನಂದರೆ, ಆ ಹಣವನ್ನು ಕಂಟಕನು ತನ್ನ ಸಂಗಡ ತಕ್ಕೊಂಡೇ ಬಂದಿಗಳ ಚಾಳಿನೊಳಗಿಂದ ಬರುವದು; ಆದರೆ ಮಧ್ಯದಲ್ಲಿ ಜಾವರಾಗಳ ಆ ದಾಳಿಯ ಅನಪೇಕ್ಷಿತ ಸಂಧಿಯು ಲಭಿಸಿದ್ದರಿಂದ ಅವರು ಒಮ್ಮಿಂದೊಮ್ಮೆಲೆ ಕಾಸಿನಲ್ಲಿ ಸೇರಿದರು. ಆದರಿಂದ ಬೇರೆ ಎಲ್ಲ ಸಂಕಟಗಳ ನಿವಾರಣವೂ ಆಯಿತು; ಆದರೆ ದುಡ್ಡನ್ನಷ್ಟು ಸಂಗಡ ತಕ್ಕೊಳ್ಳುವದುಳಿದಿತ್ತು. ಆ ಅಡಚಣಿಯನ್ನು ಆತನು ಕಂಟಕನೆದುರಿಗೆ ಇಟ್ಟು "ಈ ಬಗ್ಗೆ ಏನು ಮಾಡಬೇಕೆನ್ನುವಿರಿ? ಹೇಳಿರಿ. ದರವಡೆ ಮಾಡಬೇಕೋ ಅಥವಾ

ನೀವು ನಿಮ್ಮ ಆ ಇಡಿಗಂಟನ್ನು ಯಾವುದೊಂದು ಹಂಚಿಕೆಯಿಂದ ಈಗಲೂ ತಿರುಗಿ ಪಡೆಯಬಹುದೊ? ಎಂದು ಕೇಳುತ್ತಿದ್ದನು."

ಅದಕ್ಕೆ ಕಂಟಕನು "ಬೇಡ, ಬೇಡ; ದರವಡೆಯು ಬೇಡ. ನಾವಾಗಿ ಮೃತ್ಯುವನ್ನು ಶಕ್ಯವಾದಷ್ಟು ಕೂಗಿ ಕರೆಯುವುದು ಬೇಡ! ನಾನು ನನ್ನ ಠೇವ ಣಾತಿಯನ್ನು ಒಂದಿಲ್ಲೊಂದು ಹಂಚಿಕೆಯಿಂದ ತಿರುಗಿ ಪಡೆದೇನು. ಆ ಬಗ್ಗೆ ನನಗಿನ್ನೂ ಆಶೆಯಿದೆ. ಬಂಡೆಯ ಕೆಳಗೆ ಸಿಕ್ಕ ಕೈಯನ್ನು ಶಕ್ಯವಾದಷ್ಟು ಬೇಗನೆ ತೆಗೆದುಕೊಳ್ಳುವದೇ ವಿಹಿತವು. ಕೊಸರಾಡಿದರೆ ಕೈಯೇ ಮುರಿಯುವ ಆಟ!"

ಎರಡು-ಮೂರು ದಿನಗಳನ್ನು ಹೀಗೆ ಕಳೆಯಲು, ಕೆಲವಂಶದಿಂದ ಸುಮ್ಮನಿರಲಾಗಲಿಲ್ಲೆಂದೂ ಕೆಲವಂಶದಿಂದ ನಿರುಪಾಯವೆಂದೂ ಕಂಟಕನು ರಫೀಉದ್ದೀನನ ಬಳಿಯಲ್ಲಿ ತನ್ನ ಭಗಿನಿಯನ್ನು ಜೇಲಿನಿಂದ ಬಿಡಿಸಿಕೊಂಡು ಬರುವ ಬೇತಿನ ವಿಷಯವನ್ನು ಮತ್ತೆ ತೆಗೆದನು. ಅವರಿಬ್ಬರೂ ತಿರುವುಮುರು ವಾದ ಅನೇಕ ಬೇತುಗಳನ್ನು ಯೋಜಿಸಿ ನೋಡಿದರು ಏನೂ ನಿರ್ಧರವಾಗ ದಿರುವಾಗಲೇ ಅಂದು ಅವರು ಮಲಗಲಿಕ್ಕೆ ಹೋದರು.

ಆದರೆ ರಫೀ ಉದ್ದೀನನ ಮನಸ್ಸಿನಲ್ಲಿ ಅಂದು ಹಗಲೆಲ್ಲ ಆ ಕಂಟಕಿ ಯನ್ನು ಬಿಡಿಸಿಕೊಂಡು ಬರುವ ಕಲ್ಪನೆಗಳೇ ಒಂದೇಸವನೆ ನಡೆಯುತ್ತಿದುದ ರಿಂದ, ಅವಳ ವಿಷಯದ ಬೇರೆ ಜಿಜ್ಞಾಸೆಗಳೂ ಸಹಜವಾಗಿಯೇ ತಲೆಯೆತ್ತ ಹತ್ತಿದ್ದವು. ಹಾಸಿಗೆಯ ಮೇಲೆ ಬಿದ್ದ ಕೂಡಲೆ ಆತನು ತನ್ನ ಮನಸ್ಸಿ ನಲ್ಲಿ ಯೋಚಿಸಹತ್ತಿದನೇನಂದರೆ:—"ಅವಳು ಹೇಗೆ ಕಾಣುತ್ತಿದ್ದಾಳು? ಬಿಡಿಸಿ ಕೊಂಡೇ ಬಂದರೆ, ಆವಳ ಸಹವಾಸದಲ್ಲಿ ತನಗೂ ಹೆಚ್ಚಾಗಿ ಮೋಜೆನಿಸೀತು. ಅವಳ ಸ್ವಭಾವವು ಹೇಗಿದ್ದೀತು? ಅವಳು ಚೆನ್ನಾಗಿ ತೋರುತ್ತಿದ್ದರೆ ಮತ್ತು ಸ್ವಭಾವದಿಂದ ಪ್ರೇಮಲಳಾಗಿದ್ದರೆ....?" ಅಕಸ್ಮಾತ್ತಾಗಿ ಆಕೆಯ ಲಾಲಸೆಯು ಹೊಡೆದೆಬ್ಬಿಸಿದಂತಾಯಿತು; ಹಾಗು "ಹಾಗಿದ್ದರೆ ಅವಳಿಗೆ ನಾನು, ನನಗೆ ಅವಳು ಬೇಕೆನಿಸಲಿಕ್ಕಿಲ್ಲೆಂದು ಏತರ ಮೇಲಿಂದ? ಒಳ್ಳೇದು ಕಂಟಕನಂತೂ ಆಕೆಯ ಖಾಸ ಅಣ್ಣನೇ ಅಂದ ಬಳಿಕ ಆಕೆಯ ಕಾಮುಕ ಅಭಿಲಾಷೆ ಗಳಲ್ಲಂತೂ ಈತನು ಪ್ರತಿಸ್ಪರ್ಧಿಯಾಗಲಿಕ್ಕೆ ಶಕ್ಯವೇ ಇಲ್ಲ. ಬಹಳವಾದರೆ, ಈತನಿಗೆ ನನ್ನ-ಆಕೆಯ ಪ್ರೇಮಸಂಬಂಧವು ಆಕೆಯ ಅಣ್ಣ ಮತ್ತು ಪಾಲಕ ಈ ಸಂಬಧದಿಂದ ಸೇರಲಿಕ್ಕಿಲ್ಲ, ಇಷ್ಟೇ ಅಂಜಿಕೆ. ಆದರೆ-ಆದರೆ-ಆದರೆ...."

ರಫೀ ಉದ್ದೀನನಿಗೆ ಆಕಸ್ಮಿಕವಾಗಿ ಒಂದು ಹಂಚಿಕೆಯು ಸೂಚಿಸಿತು. ಕಂಟಕಬಾಬುವಿನ ಯಾವ ಉಪಕಾರಗಳು ತನ್ನ ಮೇಲಾಗಿರುವವೋ ಅವುಗಳನ್ನು ತೀರಿಸುವ ಸಲುವಾಗಿ ತಾನು ಈತನ ಜೀವಕ್ಕೆ ಜೀವಕೊಟ್ಟು,

ಇವನನ್ನೂ ಈತನ ಆ ಭಗಿನಿಯನ್ನೂ ಕಠಿನೀರಿನಿಂದ ಬಿಡಿಸಿ, ಸುರಕ್ಷಿತವಾಗಿ ಪರತೀರಕ್ಕೆ ತಲುಪಿಸುವದರಲ್ಲಿ ಸೇವೆ ಹಾಗು ಪ್ರಾಮಾಣಿಕತನ ಇವುಗಳನ್ನು ಹೆಚ್ಚಾಗಿ ತೋರಿಸಿದರೆ, ಅದರಿಂದ ಈತನ ಆ ಭಗಿನಿಯು ತಾನಾಗಿಯೇ ನನ್ನನ್ನು ಕೂಡಲಿಕ್ಕೆ ಅಪೇಕ್ಷಿಸಬೇಕು; ಮತ್ತು ಕಂಟಕಜಾಬುವು ಅದಕ್ಕೆ ಆನಂದದಿಂದ ಸಮ್ಮತಿಸಬೇಕು. ಅಚ್ಛಾದ ಆಶೆಗೆ ಅಸಂಭವವೇನು ತೋರ ಬೇಕು?

ಆದರೆ ಆ ಅಚ್ಛದ ಆಶೆಯಿಂದ ರಫೀ ಉದ್ದೀನನ ಕಂಟಕನ ಮೇಲಿನ ನಿಷ್ಠೆಯೂ ಅವಲಂಬನವೂ ಮೊದಲಿನಗಿಂತಲೂ ಬಲಿಷ್ಠವಾದದ್ದು ನಿಜವು; ಅಲ್ಲದೆ ದುಡ್ಡಿನ ಹಾಗು ಸಹಕಾರ್ಯದ ಅವಶ್ಯಕತೆಯಿಂದಲೂ ಕಂಟಕನ ಹೊರತು ಆತನಿಗೆ ಹೆಜ್ಜೆ ಹೆಜ್ಜೆಗೂ ಅಡ್ಡಿಯಾಗುತ್ತಿದ್ದುದು ಬೇರೆ.

ಅಂಥ ಮನಃಸ್ಥಿತಿಯಲ್ಲಿ ಆ ಜಾವರಾ ಮನುಷ್ಯನು ಗುಣ ಹೊಂದುವ ದಾರಿ ಕಾಯುತ್ತ ಅವರು ಅಲ್ಲಿ ಯಾವ ನಾಲ್ಕೈದು ದಿನಗಳ ವರೆಗೆ ಅಡಗಿ ಕೊಂಡಿರುತ್ತಿದ್ದರೋ, ಆ ಅವಧಿಯಲ್ಲಿ ಮತ್ತೆ ಇವರ ಹಿಂದಿನ ಸರಕಾರೀ ಅಧಿ ಕಾರಿಗಳ ಚಲನವಲನವಾದರೂ ಇವರಗೆ ಅನುಕೂಲವಾಗಿಯೇ ನಡೆದಿತ್ತು. ಆ ದಿನ ಸಂಜೆಯು ಮುಂದೆ ಜಾವರಾಗಳ ದಾಳಿಯೊಡನೆ ಕಾನು ಬಿಟ್ಟು ಮತ್ತು ಜೀವ ತಕ್ಕೊಂಡು ಸರಕಾರೀ ಬಂದಿಗಳ ತಂಡವು ಚಾಳಿಗೆ ತಿರುಗಿ ಹೋದ ನಂತರ ಮರುದಿನ ಒಂದು ಸೈನಿಕರ ಟೋಳಿಯು ಆ ಕಾನಿ ನೊಳಗೆ ಕಳಿಸಲಾಯಿತು. ಅವರಿಗೆ ಅಲ್ಲಿ ಆ ದಾರಿಯಲ್ಲಿ ಜಾವರಾಗಳ ಬಾಣ ಗಳಿಂದ ಕೊಲ್ಲಲ್ಪಟ್ಟಿದ್ದ ಆ ಸೈನಿಕನ ಹೆಣವು ದೊರಕಿತು ಬಾಣವೂ ದೊರೆ ತದ್ದರಿಂದ ಆತನನ್ನು ಜಾವರಾಗಳೇ ಕೊಂದರೆಂಬದು ಸ್ಪಷ್ಟವಾಗಿತ್ತು. ಆದರ ಮೇಲಿಂದಲೇ ಆತನ ಸಂಗಡಿಗರಾಗಿದ್ದ ಕಂಟಕ-ರಫೀ ಉದ್ದೀನರೆಂಬ ಯಾವ ದಂಡಿತರಿದ್ದರೋ ಅವರಿಗೂ ಬೇರೆ ಬೇರೆಯಾಗಿ ಗಂಟುಬಿದ್ದು, ಜಾವರಾಗಳು ಕಾನಿನೊಳಗೆಲ್ಲಾದರೂ ಅವರನ್ನು ಕೊಲೆಮಾಡಿರಬೇಕೆಂಬ ತರ್ಕವನ್ನೇ ಸರ ಕಾರೀ ಅಧಿಕಾರಿಗಳು ಮಾಡಿದರು; ಮತ್ತು ಅದನ್ನು ಸುಳ್ಳು ಕೆಡಹುವಂಥ ಬೇರೆ ಸಬಲ ಪುರಾವೆಯು ದೊರಕುವವರೆಗೂ ಅವರು ಆ ದಂಡಿತರ ಹೆಸರನ್ನು 'ಭಗೋಡೆ' ಎಂದು ಪ್ರಸಿದ್ಧಿಸುವ ಗೋಜಿಗೆ ಹೋಗಲಿಲ್ಲ. ಅದರಿಂದ ಆ ದೃಷ್ಟಿ ಯಿಂದ ಅವರನ್ನು ಬೆನ್ನಟ್ಟುವ ಅಥವಾ ಶೋಧಿಸುವ ಕೆಲಸಗಳು ಎಷ್ಟೋ ದಿನಗಳ ವರೆಗೆ ಸರಕಾರದಿಂದ ಅದೆಲ್ಲಿಯೂ ನಡೆಯಲಿಲ್ಲ. ಇದು ಕಂಟಕ ರಫೀಉದ್ದೀನರಿಗೆ ಒಳ್ಳೇ ಪಥ್ಯಕರವಾಗಿ ಪರಿಣಮಿಸಿತು. ಇವುಳನ ವರೆಗಿನ ಆ ಅಡವಿಯ ಆ ಹೊಸಪ್ರದೇಶವನ್ನು ಮಾತ್ರ ಇಂಗ್ಲಿಷರು ತಮ್ಮ ನಿತ್ಯದ

ವಸಾಹತಿಯಲ್ಲಿ ಸೇರಿಸಿಕೊಂಡರು; ಆದರ ಮೇಲೆ ಸಕ್ತಪಹರೆಯಿರಿಸಿದರು; ಮತ್ತು ಜಾವರಾ ಜನರಾದರೂ ತಮ್ಮ ಬಲಾ-ಬಲಗಳನ್ನರಿತು, ಪದ್ಧತಿಯ ಮೇರೆಗೆ ಆ ಭಾಗದೊಳಗಿನ ತಮ್ಮ ಬರ-ಹೋಗುವದನ್ನು ನಿಲ್ಲಿಸಿ ಮತ್ತೂ ಒಂದು ಹೆಜ್ಜೆ ಹಿಂಜರಿದು, ಆ ಪ್ರಕರಣವನ್ನು ಹೆಚ್ಚು ಜಿಗಿಯಲಿಕ್ಕೆ ಅವಕಾಶ ಕೊಡದಂತೆ ಮುಗಿಸಿಬಿಟ್ಟರು.

ಮುಂದೆ ನಾಲ್ಕೈದು ದಿನಗಳ ನಂತರ ಆ ಜಾವರಾನ ಕಾಲು ತುಸ ಗುಣ ವಾಯಿತೆಂಬದನ್ನು ಕಂಡು ಆತನನ್ನು ಮುಂದಿಟ್ಟುಕೊಂಡು, ಆತನ ವಶೀಲೆ ಯಿಂದ ಆತನ ಜಾತಿಯ ಜಾವರಾಗಳ ಕಡೆಗೆ ಆಶ್ರಯಪಡೆಯುವದಕ್ಕೆಂದು ಕಂಟಕ-ರಫೀಉದ್ದೀನರು ಆ ನಿಬಿಡವಾದ ಕಾನಿನೊಳಗಿನ ಆ ಜಾವರಾಗಳ ಸಂಪೂರ್ಣ ಸ್ವಾತಂತ್ರ್ಯದ ಪ್ರವೇಶದೊಳಗಿನ ಕಳ್ಳ ದಾರಿಯಿಂದ ಜಾವರಾ ಗಳ ಆ ಕಾಡುರಾಜ್ಯದ ರಾಜಧಾನಿಯ ಕಡೆಗೆ ನಡೆದರು.

ಆದರೆ ಹೋಗು ಹೋಗುತ್ತಿರುವಾಗ ಆ ಜಾವರಾನ ಎದೆಯು ಥರ ಗುಟ್ಟಿ ನಡುಗಹತ್ತಿತ್ತು ಕಾರಣವೇನಂದರೆ, ತಮ್ಮ ಜಾವರಾ ಜನರು ಇವರ ಸ್ವಾಗತವನ್ನು ಗಿಡದ ಮೇಲೆ ಕುಳಿತು ಅಕಸ್ಮಾತ್ 'ಸೂಯ್-ಸೂಯ್' ಎಂದು ಬರುವ ವಿಷಾರಿ ಬಾಣಗಳನ್ನೆಸೆದು ಮಾಡಲಿಕ್ಕೆಂದು ಹೇಗೆ ತಿಳಿಯಬೇಕು? ಜಾವರಾ ಜನರು ಒಮ್ಮೊಮ್ಮೆ 'ಭಗೋಡಾ' ಜನರು ತಮಗೆ ಶರಣು ಬರು ತ್ತಲೆ ಆಶ್ರಯ ಕೊಡುತ್ತಿರುವದು ಸತ್ಯವಾಗಿದ್ದರೂ ಮತ್ತು ತಮ್ಮ ಸ್ವಂತದ ಜಾತಿಯಲ್ಲಿ ಹಾಗೆಯೆ ಆಶ್ರಯ ಪಡೆದಿರುವಂಥ ಒಬ್ಬ 'ಭಗೋಡಾ'ನು ಅದೇ ಕಾಲಕ್ಕೆ ಇರುತ್ತಿದ್ದರೂ ಕೂಡ ಅವರ ಲಹರಿಯು ಈ ಪ್ರಕರ್ಣದಲ್ಲಿ ಹಾಗೆಯೆ ಇದ್ದೀತೋ ಇಲ್ಲವೋ ಎಂಬ ಬಗ್ಗೆ ಆ ಜಾವರಾನಿಗೂ ಸಂಕೋಚವೇ ಎನಿ ಸಿತು; ಯಾಕಂದರೆ ಸದ್ಯಕ್ಕೆ ಅವರು ಇಂಗ್ಲಿಷರ ಮೇಲೆ, ಅಂದರೆ ಇಂಗ್ಲಿ ಷರ ದಂಡಿತರ ಮೇಲೆಯೂ ಹಗೆತನ ತಾಳಿದ್ದರು. ಕೆಲಜನ ದಂಡಿತರನ್ನು 'ಭಗೋಡೆ'ಯರ ಮಿಷದಿಂದ ಅವರ ವಸತಿಯ ಶೋಧ ಹಚ್ಚಲಿಕ್ಕೆ ಇಂಗ್ಲಿ ಷರೇ ಕಳಿಸುತ್ತಿರಬೇಕೆಂದು ಆ ಜಾವರಾಗಳಿಗೆ ಅಂಜಿಕೆಯು ಇದ್ದೇ ಇದ್ದಿತು.

ಹೆಜ್ಜೆ ಹೆಜ್ಜೆಗೂ ಜಾವರಾಗಳ ಆ ಕಾಡು ರಾಜಧಾನಿಯು ಸಮೀಪಿಸ ಹತ್ತಿದಂತೆ, ಕಂಟಕ-ರಫೀಉದ್ದೀನರ ಮನಸ್ಸಿನಲ್ಲಿ ಹೆಚ್ಚೆಚ್ಚು ಧಸ್ಸೆನ್ನುತ್ತಿತ್ತು. ಈ ಜಾವರಾನೊಡನೆ ನಾವು ಹೋಗುತ್ತಿರುವೆವೆಂದು ಆ ಜಾವರಾಜನರು ನಮಗೆ ಆಶ್ರಯ ಕೊಡುವರೋ ಅಥವಾ 'ನಮ್ಮಂತಹ ಇಂಗ್ಲಿಷರ ಜನರು' ಕೂಡ ಈ ಜಾವರಾನು ಬರುತ್ತಿರುವನೆಂದು ಈತನನ್ನೂ ಜಾತಿದ್ರೋಹಿಯೆಂದು ತಿಳಿದು, ನಮ್ಮೆಲ್ಲರನ್ನು ವಿಷಾರಿ ಬಾಣಗಳಿಗೆ ಆಹುತಿ ಮಾಡುವರೊ? ಹೆಜ್ಜೆ

ಹೆಜ್ಜೆಗೊ ಗಿಡಗುಂಪಿನೊಳಗೆ ಎಲ್ಲಾದರೂ ತುಸ ಸಪ್ಪಳವಾದರೆ ಸಾಕು; ಅವರಿಗೆ ಗಾಬರಿಯುಂಟಾಗಿ, ಹೇರನ ಮರೆಯಲ್ಲಿ ದೂರ ನಿಂತು ನೋಡುತ್ತಿರುವ ಯಾವನೊಬ್ಬ ಜಾವರಾನ ಬಾಣವೇ ಸೂಂಯಿಗುಟ್ಟುತ್ತ ಇತ್ತಿಂದಲೋ ಅತ್ತಿಂದಲೋ ಬರುತ್ತಿರುವದೆಂದು ಅನಿಸುತ್ತಿತ್ತು. ಆ ಕಾಡು ರಾಜಧಾನಿಯು ಇನ್ನು ಎರಡು ಮೂರು ಮೈಲುಗಳಷ್ಟೇ ಉಳಿಯಿತು; ಅಷ್ಟರಲ್ಲಿ ರಾತ್ರಿಯಾದುದನ್ನು ಕಂಡು, ಆ ಮೂವರೂ ಅಲ್ಲಿಯೇ ನಿಂತುಕೊಂಡರು ಆ ರಾತ್ರಿಯನ್ನು ಅವರು ಅದೇ ಕಾನಿನಲ್ಲಿ ಕಳೆದರು.

---

೧೮ನೇ ಪ್ರಕರಣ

ಇದು ನೋಡಿರಿ, ಜಾವರಾಗಳದೊಂದು ಅನಾದಿ ರಾಜಧಾನಿಯನ್ನು. ಒಂದು ರಾಜಧಾನಿ ಅನ್ನುವ ಕಾರಣವಿಷ್ಟೇ, ಅಂಡಮಾನವೊಳಗಿನ ಆದಿಮಾನವರ ಯಾವ ಕಾಡು ತಂಡಗಳಿರವವೋ ಅವು ಅಲ್ಲಿಯ ವಿಸ್ತೀರ್ಣ ಹಾಗು ನಿಬಿಡವಾದ ಕಾಂತಾರವೊಳಗಿನ ದೊಡ್ಡ ದೊಡ್ಡ ದಿನ್ನೆಗಳಲ್ಲಿ ಬೇರೆ ಬೇರೆ ಸ್ಥಾನಗಳಲ್ಲಿ ಅಂದು ವಾಸಿಸಿದಂತೆಯೇ ಪೃಥಕ್ ಪೃಥಕ್ಕಾಗಿ ಇಂದಿಗೂ ನೆಲಸಿರುತ್ತವೆ. ಅವರವೆಲ್ಲರದೂ ಕೂಡಿದಂತಹ ಒಂದು ರಾಜ್ಯವಿಲ್ಲ; ಸಂಘವಿಲ್ಲ. ಯಾವ ಟೋಳಿಯು ಎಲ್ಲಿ ಇರುವದೋ ಅದಪದದೇ ರಾಜಧಾನಿ. ಅದೊಂದು ಜಾತಿಯೇ ಪ್ರತ್ಯೇಕವಾಗಿರುತ್ತದೆ. ಅಂಥ ವಿಭಿನ್ನ ಜಾತಿಗಳಲ್ಲಿ ಯಾವ ಜಾತಿಯು ಇಂಗ್ಲಿಷರ ಮೇಲೆ ಅಂದು ದಾಳಿಯಿಕ್ಕಿದ್ದಿತೋ, ಆ ತಂಡವು ಇಲ್ಲಿರುತ್ತದೆ. ಇದೇ ಅದರ ರಾಜಧಾನಿಯು.

ನಿಬಿಡವಾದ ಗಿಡ-ಗುಂಪುಗಳಿಂದ ಮುಚ್ಚಲ್ಪಟ್ಟಂಥ ಆ ದಿನ್ನೆಯ ಮೇಲ್ಭಾಗದಲ್ಲಿ ಒಂದು ಸಾಧಾರಣ ಬೈಲುಪ್ರದೇಶವಿದ್ದಿತು. ಅದರ ಪಕ್ಕದಲ್ಲಿ ಆ ದಿನ್ನೆಯ ಮೇಲಿನ ಬಂಡೆಗಳಲ್ಲಿ ಗುಹೆ-ಗಂಹ್ವರಗಳ ಭಾಗದಲ್ಲಿರುವಂತೆ ದೊಡ್ಡ ದೊಡ್ಡ ನಾಲ್ಕೈದು ಫೂಟು ಆಳವಾದ ಹಾಗು ವಿಶೇಷ ವಿಸ್ತಾರವುಳ್ಳ ಐದಾರು ಗವಿಗಳು ಅಥವಾ ದೊಡ್ಡ ಹೋರುಗಳಿದ್ದವು. ಅವೇ ಆ ರಾಜಧಾನಿಯ ಕೋಟಿ-ಕೊತ್ತಳಗಳಿಂದ ಯುಕ್ತವಾದ ಕಲ್ಲಿನ ಬಲಿಷ್ಠವಾದ ಗ್ರಾಮಠಾಣ್ಯವು! ಆ ಹೋರಿನಲ್ಲಿ ಆ ಎಲ್ಲ ನಾಗರಿಕರು ಧರ್ಮಶಾಲೆಯೊಳಗಿನ ಇಟಕವಾದ ಆಟವಾಳಿಗೆಯಲ್ಲಿ ಪ್ರವಾಸಿಗರು ಕಿಕ್ಕಿರಿದು ಉಣ್ಣುತ್ತ-ಕೂಡ್ರುತ್ತ-ಮಲಗುತ್ತಿರುವಂತೆ, ಸಾಮೂಹಿಕ ಕುಟುಂಬದವರ ಹಾಗೆ ತಲೆಗಟ್ಟಿ ವಾಸಿಸುತ್ತಿದ್ದರು. ಆ ವಿಸ್ತೀರ್ಣ ರಾಜಧಾನಿಯೊಳಗಿನ ಪ್ರಜೆಗಳ ಸಂಖ್ಯೆಯೆಂದರೆ, ಗಂಡಸರು-ಹೆಂಗಸರು-ಹುಡುಗರು-ಹುಡಿಗಿಯರು ಸಹಿತ

ವಾಗಿ ಒಂದೂವರೆ ನೂರರ ಮೇಲಿರದಿದ್ದರೂ ಅದಕ್ಕೂ ಕಡಿಮೆಯಂತೂ ಇರಲಿಲ್ಲ.

ಆ ಗವಿಗಳಲ್ಲಿ ಗೋಡೆಗಳಿರಲಿಲ್ಲ; ಕೋಣೆಗಳಿರಲಿಲ್ಲ; ಪೋಟ ಭಾಗ ಗಳಿರಲಿಲ್ಲ. ಎಲ್ಲ ರಾಜಧಾನಿಗೂ ಕೂಡಿ ಅದೊಂದೇ ಮನೆಯಾಗಿದ್ದಿತು; ಮತ್ತು ಆ ಮನೆಗಾದರೂ ಕೋಣೆ, ಅಟ್ಟ, ಮೇಲುಪ್ಪರಿಗೆ. ನಡುಮನೆ, ಅಡುಗೆ ಮನೆ ಪ್ರಭೃತಿ ಯಾವ ವಿಭಾಗಗಳನ್ನೂ ಮಾಡಿರವೆ, ಅದೊಂದು ಬರಿಯ ಬೈಲು ಪಡಸಾಲೆ ಮಾತ್ರವಾಗಿತ್ತು!

ಆ ಗವಿಯ ಮುಂದಿನ ಬೈಲಿಗೆ ಆ ಗವಿಯೊಳಗಿನ ಮುಖ್ಯ ರಾಜಧಾನಿ ಯ ಉಪನಗರವೆನ್ನಲಿಕ್ಕೆ ಏನೂ ಅಡ್ಡಿಯಿರಲಿಲ್ಲ. ಆ ಉಪನಗರದಲ್ಲಿ ಮಳೆ ಯಿಲ್ಲದ ಹಗಲೊಳಗಿನ ಬಿಸಿಲಲ್ಲಿ ಅಥವಾ ರಾತ್ರಿ ಬೆಳದಿಂಗಳಲ್ಲಿ ವಿಲಾಸ ಮಾಡ ಲಿಕ್ಕೆಂದು ಕೆಲ ವಿಲಾಸ ಮಂದಿರಗಳನ್ನು ಮನೆತನಸ್ಥ ಜನರು ಕಟ್ಟಿಸಿದ್ದರು. ಯಾವುದಕ್ಕೆ ನಾವು ಮನೆಗಳೆನ್ನುವೆವೋ ಅವುಗಳಂತೂ ಅವಿರಲಿಲ್ಲ; ಆದರೆ ಯಾವುದಕ್ಕೆ ನಾವು ಗುಡಿಸಲಗಳೆನ್ನುವೆವೋ ಅವುಗಳಂತೆಯೂ ಅವಿರಲಿಲ್ಲ. ಬಿದರಿನ ಉದ್ದ-ಅಡ್ಡ ಡಬ್ಬಿಗಳನ್ನು ಕಟ್ಟಿಬಿಟ್ಟತೆಂದರೆ, ಆ ವಿಲಾಸ ಮಂದಿ ರದ ಕಟ್ಟಡವು ಸಿದ್ಧವಾಯಿತೆಂದೇ ಹೇಳಬಹುದು! ಅದರ ಮೇಲೆ ಚಪ್ಪರ ವಿರಬೇಕೆಂದು ಕೂಡ ಆ ಜಾವರಾಗಳ ಶಿಲ್ಪಶಾಸ್ತ್ರದಂತೆ ಪ್ರತಿಬಂಧವಿರಲಿಲ್ಲ; ಅಂದಮೇಲೆ ಕಿಟಕಿ, ಬಾಗಿಲು ಮುಂತಾದ ಇಲ್ಲದ ಉಸಾಬರಿಗಳ ಆವಶ್ಯಕತೆ ಯೇ ಇರಲಿಲ್ಲ. ಎತ್ತರವಾದ ಕಲ್ಲಬಂಡೆಗಳ ತುದಿಯ ಮೇಲೆ ಕೆಳಗೆ ಕಾಲು ಇಳಿಬಿಟ್ಟುಕೊಂಡು ಆ ಜಾವರಾಗಳ ಜನಸಮೂಹವು ಕುಳಿತಿರುವಾಗ ಹಿಂದೆ ಆನಲಿಕ್ಕೆ ಏನಾದರೂ ಬೇಕು; ಅಷ್ಟರಮಟ್ಟಿಗೇ ಆ ಬಿದರಿನ ತಟ್ಟೆಯು ಕಟ್ಟಲ್ಪಟ್ಟಿ ತೆಂದರೆ, ಅಲ್ಲಿ ವಿಲಾಸಮಂದಿರವು ಸಿದ್ಧವಾದಂತಾಯಿತು!

ಆ ತಂಡದ ರಾಜನಾದ ನಾನಕೋಬಿಯೂ ಸ್ವಂತದ ರಾಣಿಗಾಗಿ ಅಂಥ ದೊಂದು ವಿಲಾಸಮಂದಿರವನ್ನು ಆ ರಾಜಧಾನಿಯ ಮುಂದಿನ ಆ ವಿಲಾಸ ನಗರಲ್ಲಿ ಕಟ್ಟಿಸಿದ್ದನು. ಅಲ್ಲಿಯ ಕಲ್ಲಿನ ಉದ್ದಗಲುಳ್ಳ ಮಂಚದಂತಹ ಪಾಟಿ ಗಳ ಮೇಲೆ ತನ್ನ ರಾಣಿಯ ಸಹಿತ ಹಾಗು ಮಕ್ಕಳೊಡನೆ ಕುಳಿತು, ಆ ಬಿದ ರಿನ ತಟ್ಟೆಗೆ ಆತು ಮತ್ತು ಕೆಳಗಡೆಯ ದರಿಯಂಥ ತಗ್ಗು ಪ್ರದೇಶದಲ್ಲಿ ಕಾಲ ನ್ನಿಳಿಬಿಟ್ಟು ಆಲ್ಲಾಡಿಸುತ್ತ ನಾನಕೋಬಿ ರಾಜನು ಮಧ್ಯಾಹ್ನದಲ್ಲಿ ಬಿಸಿಲು ಬಡಿಸಿಕೊಳ್ಳುತ್ತಿರುವದು; ಇಲ್ಲವೆ ರಾತ್ರಿಯಲ್ಲಿ ಬೆಳದಿಂಗಳೊಳಗೆ ಅದೇ ಮಂಚದ ಮೇಲೆಯೇ ಸುಖಶಯ್ಯೆಯ ವಿಲಾಸಗಳನ್ನು ಭೋಗಿಸುತ್ತಿರುವದು ಮಳೆಬೀಳದಿರುತ್ತಿರುವಾಗ ಗೋಚರವಾಗುತ್ತಿತ್ತು; ಆದರೆ ಮಳೆಯು ಸರ್ವ

ಸಾಧಾರಣವಾಗಿ ಯಾವಾಗಲೂ ಇದ್ದದ್ದೇ. ಆದಕಾರಣ ಅವರ ಬಹುತರ ವೇಳೆಯು ಆ ಹೊದರಿನೊಳಗಿನ ಆ ಮುಖ್ಯ ರಾಜಧಾನಿಯಲ್ಲೇ ಇತರ ಪ್ರಜಾ ಜನರೊಡನೆ ಭೇದಭಾವವಿಲ್ಲದೆ ಸಾಮೂಹಿಕ ರೀತಿಯಿಂದಲೇ ಊಟ-ಪಾಟ, ನಿದ್ದೆ-ನೀರಡಿಕೆಗಳಲ್ಲಿ ಕಳೆಯುತ್ತಿತ್ತು.

ಹಗಲೆಲ್ಲ ಆ ರಾಷ್ಟ್ರಕ್ಕೆ ರಾಷ್ಟ್ರವೇ ಮೃಗಯೆಗಾಗಿ ಕಾನಿನೊಳಗೆ ಹೋಗುತ್ತಿದ್ದದರಿಂದ, ಆಗ ಆ ರಾಜಧಾನಿಯು ಬಹುಮಟ್ಟಿಗೆ ಹಾಳೇ ಬಿದ್ದಿರುತ್ತಿತ್ತು. ರಾತ್ರಿಯಲ್ಲಿ ನಾಚು (ನೃತ್ಯ) ಇದ್ದರೆ, ಒಬ್ಬರೂ ಉಳಿಯದಂತೆ ಎಲ್ಲರೂ ಆ ಪಟಾಂಗಣದಲ್ಲಿ ಕುಣಿಯುತ್ತಿದ್ದರು; ಇಲ್ಲದಿದ್ದರೆ ಆ ಎರಡು ಮೂರು ಹೋರುಗಳಲ್ಲೇ ಎಲ್ಲ ಗಂಡಸರೂ ಹೆಂಗಸರೂ ಹುಡುಗರೂ ಒಟ್ಟಾಗಿ, ಯಾವ ಹಾಸಿಗೆ-ಹೊದಿಕೆಯು ಆವಡಂಬರಕ್ಕೂ ಒಳಗಾಗದಂತೆ ಕೇವಲ ಉಲ್ಲಿಂಗ (ನಗ್ನ) ಅವಸ್ಥೆಯಲ್ಲೆ ನಗೆಯುತ್ತ ಕೆಲೆಯುತ್ತ ನಿದ್ದೆ ಬಂದ ಕೂಡಲೆ ಮಲಗುತ್ತಿದ್ದರು; ವಿವಾಹಿತ ಸ್ತ್ರೀ ಪುರುಷರ ಜೊತೆಗಳೂ ಅವಿವಾಹಿತ ಸ್ತ್ರೀ-ಪುರುಷರೂ ಎಲ್ಲರೂ ಕೂಡಿಯೇ ಮಲಗಿಬಿಡುತ್ತಿದ್ದರು!

ಅವರುಗಳಿಗೆ ಅದೇ ಧರ್ಮವು; ಇಷ್ಟೇ ಅಲ್ಲದೆ ಅದು ಸನಾತನ ಧರ್ಮವಾಗಿದ್ದಿತು. ಧರ್ಮಾಧರ್ಮಗಳಲ್ಲಿ ಹಿರಿಯತನದ ಮನ್ನಣೆಯು ಅವರಷ್ಟು ಇಂದಿನ ಬೇರೆ ಯಾವ ಧರ್ಮಗಳಿಗೂ ಲಭಿಸಲಿಕ್ಕಿಲ್ಲ. ಜಾವರಾಗಳದೇ ಅಲ್ಲ; ಆದರೆ ನಮ್ಮ ಮನುಷ್ಯಜಾತಿಯದಾದರೂ ಅದೇ ಧರ್ಮವಾಗಿವೆ. "ತಾನಿ ಧರ್ಮಾಣಿ ಪ್ರಥಮಾನ್ಯಾಸನ್"

ಅವರ ಧರ್ಮದಂತೆ ಅವರ ದಿನಚರ್ಯೆಯಾದರೂ ಕೇವಲ ಸನಾತನವೇ ಆಗಿದೆ. ಆ ರಾಜಧಾನಿಯನ್ನೇ ನೋಡಿರಿ. ಅದು ಅಲ್ಲಿ ಯಾವಾಗ ನೆಲೆಸಿತೆಂಬದನ್ನು ಹೇಳುವುದು ಇತಿಹಾಸಕ್ಕೂ ಸ್ಮೃತಿಗಳಿಗೂ ಶಕ್ಯವಿಲ್ಲ. ಆದರೂ ಕೂಡ ಅದರ ವಯಸ್ಸಿನ ಕಾಲಗಣತಿ ಮಾಡಬಹುದಾದವೊಂದು ಕಾಲಮಾಪಕ ಯಂತ್ರವು ಅದಕ್ಕೆ ಜೋಡಿಸಲ್ಪಟ್ಟದ್ದಿದೆ. ಆ ಯಂತ್ರವೆಂದರೆ, ಆ ದಿನ್ನೆಯೊಳಗಿನ ಆ ಪಟಾಂಗಣದ ಪಕ್ಕದಲ್ಲಿದ್ದ ಒಂದು ಶಿಲಾಖಂಡವು ಒಡೆದು ನೈಸರ್ಗಿಕ ಆಳವಾದ ತೆಗ್ಗು ಬಿದ್ದಿದೆ. ಈ ವಸತಿಯೊಳಗಿನ ಜಾವರಾಗಳ ಪೀಳಿಗೆಯು ನಂತರದ ಪೀಳಗೆಗಳು ಸಮುದ್ರದ ಮೇಲಿನ ಸಿಂಪುಗಳೊಳಗಿನ ಪ್ರಾಣಿಗಳನ್ನು ಹಿಡಿಹಿಡಿದು ತರಹತ್ತಿ, ನಾವು ಬಟಗಡ್ಲೆಗಳನ್ನು ಹೇಗೆ ಸುಲಿ ಸುಲಿದು ತಿಂದು ಮೇಲಿನ ಸಿಪ್ಪೆಯನ್ನು ಕೆಳಗೆ ಚಲ್ಲಿ ಕೊಡುವೆವೋ, ಅದರಂತೆಯೆ ಅವರು ಆ ಸಿಂಪುಗಳೊಳಗಿನ ಪ್ರಾಣಗಳನ್ನು ಬಾಯಲ್ಲಿ ಹಾಕಿಕೊಂಡು, ಆ ಸಿಂಪುಗಳನ್ನು ಆ ಆಳವಾದ ತಗ್ಗಿನಲ್ಲಿ ತಲೆಗಟ್ಲೆ ಚಲ್ಲುತ್ತಬಂದಿರುವರು. ಆ ಸಿಂಪು

ಗಳು ಶತಾವಧಿವರ್ಷಗಳಿಂದ ಥರಗಳ ಮೇಲೆ ಥರಗಳು ಕುಳಿತು, ಶಿಲಾಸ್ಥಿಗಳಾಗಿ (Fossilized) ಆ ಸಿಂಪುಗಳ ಬಹು ದೊಡ್ಡ ಗುಡ್ಡೆಯಿಂದ ಕಾಲ ಗಣನೆಯನ್ನು ಮಾಡಿದರೆ, ಯುಗಯುಗಾಂತರಗಳಿಂದಲೂ ಆ ವಸತಿಯು ಈಗಿನಂತೆಯೇ ಅಲ್ಲಿ ವಾಸಿಸುತ್ತಿರಲಿಕ್ಕೆಬೇಕು; ಆ ಜಾವರಾ ಜನರು ದಿನಾಲು ಮಧ್ಯಾಹ್ನದಲ್ಲಿ ಸಮುದ್ರದ ಸಿಂಪುಗಳೊಳಗಿನ ಪ್ರಾಣಿಗಳನ್ನು ಬಟಗಡ್ಲೆಯು ಕಾಳಿನಂತೆ ಸುಲಿದು ತಿನ್ನುತ್ತ, ಸಿಂಪುಗಳನ್ನು ಅದೇ ಕೊಳದಲ್ಲಿ ಒಗೆಯುತ್ತ ತಮ್ಮ ಅಡುಗೆಯ ಮನೆಯ ಆ ಪಡಸಾಲೆಯಲ್ಲಿ ಅದರಂತೆಯೇ ಬಾಯಿಚಪ್ಪರಿಸಿ ಕುಳಿತಿರುತ್ತ ಬಂದಿರಲಿಕ್ಕೆ ಬೇಕು.'

ಆ ರಾಜಧಾನಿಯೊಳಗಿನ ಎಲ್ಲ ನಾಗರಿಕರೂ ಸಮುದ್ರ ತಟಾಕದ ನೃತ್ಯಕ್ಕೆ ಇಂದು ಮತ್ತೆ ಹೋಗತಕ್ಕವರಿದ್ದರು. 'ಮತ್ತೆ' ಎನ್ನುವ ಕಾರಣವೇನಂದರೆ, ಈ ಮಧ್ಯದಲ್ಲಿ ಇಂಗ್ಲಿಷರೊಡನೆ ಕಾಳಗ ಪ್ರಾರಂಭವಾದದ್ದರಿಂದ ಕಳೆದ ಹತ್ತು ಹದಿನೈದು ದಿನಗಳು ಆ ಗಡಿಬಿಡಿಯಲ್ಲೇ ಗತಿಸಿದ್ದವು. ಅದರಿಂದ ಅವರ ನಿತ್ಯದ ನಾಚು ಇದುವರೆಗೂ ನಡೆದಿರಲಿಲ್ಲ. ಅದರಲ್ಲಿಯೂ ಇಂದಿನ ನಾಚು ಅವರ ರಾಷ್ಟ್ರೀಯ ವಿಜಯದ್ದಿತ್ತು. ಅವರ ಮತದಂತೆ ಇಂಗ್ಲಿಷರೊಡನೆ ಆದ ಕಾಳಗದಲ್ಲಿ ಜಾವರಾಗಳದೇ ಜಯವಾಗಿತ್ತು. ಆ ದಿನದ ದಾಳಿಯಲ್ಲಿ ತಮ್ಮ ಅತ್ಯಲ್ಪ ಜನರಿಂದ ಇಂಗ್ಲಿಷರ ಆ ಆರೇಳು ನೂರು ಜನರು ಚದರಿ ದಿಕ್ಕಾಪಾಲಾಗಿ ಜೀವಸಹಿತವಾಗಿ ಓಡಿ ಹೋಗಿದ್ದರಿಷ್ಟೇ ಅಲ್ಲದೆ, ಇಂಗ್ಲಿಷರ ದಂಡಿನೊಳಗಿನ ಒಬ್ಬ ದೊಡ್ಡ ಅಧಿಕಾರಿ (ಅಂದರೆ ತುಬಾಕಿ ಧರಿಸಿದವನು) ಯನ್ನು ಜಾವರಾಗಳು ಬಾಣಬಿಟ್ಟು ಕೊಂದೇಬಿಟ್ಟಿದ್ದರು! ಆ ಕಾಡಿನ ಭಾಗವನ್ನು ಇಂಗ್ಲಿಷರು ಆಕ್ರಮಿಸಿ ಬಿಟ್ಟಿದ್ದರೂ, ಆ ಬಗ್ಗೆ ಹಾನಿಯೇನು? ಬೇಕಾದಷ್ಟು ಕಾಡುಹಂದಿಗಳೂ, ಎರಡೂ ಕಾಲಿನಿಂದ ನಡೆದರೂ ತೀರದಂತಹ ನಿಬಿಡವಾದ ಕಾಂತಾರವೂ ಮತ್ತು ಯಾವುದರ ತುದಿಗೆ ದೃಷ್ಟಿಹರಿಯುವುದಿಲ್ಲವೋ ಇಂಥ ಏಕಾಂತವಾದ ಸಿಂಧು ತಟಾಕವೂ ಮಳಲುಪ್ರದೇಶವೂ ಎಲ್ಲಿಯ ವರೆಗೆ ನಿರ್ವಿರೋಧವಾಗಿ ತಮ್ಮ ಸ್ವಾಧೀನವಾಗಿವೆಯೋ ಅದುವರೆಗೆ ಕಾಡಿನ ಆ ಹೊಸ ತುಂಡು ಇಂಗ್ಲಿಷರವಶವಾದದ್ದೆಂದರೆ ಲಕ್ಷಾಧೀಶನ ಜೇಬಿನೊಳಗಿಂದ ಕಳೆದು ಹೋದ ಒಂದು ಕವಡಿಯೇ ಸರಿ! ಯುದ್ಧದ ಹೇತುವು ಆ ಅರಣ್ಯದ ಭಾಗದ ಸಲುವಾಗಿ ಇರದೆ, ಕೇವಲ ಜಾವರಾಗಳಿಗಾದ ಅವಮಾನದ ಬಗ್ಗೆಯೇ ಆಗಿತ್ತು!! ಆ ವಿಷಯದ ಸೇಡನ್ನು ಅವರು ಹಾಯಿಸಿಕೊಂಡಿದ್ದರು!

ಮತ್ತು ಜಾವರಾಗಳ ಜಯವೆಂದರೇ ಸೇಡುಹಾಯಿಸಿಕೊಳ್ಳೋಣವು.

ಅವರುಗಳ ಸಿಟ್ಟು ಎಷ್ಟು ಬೇಗನೆ ಹೆಚ್ಚುವುದೋ ಅದು ಅಷ್ಟೇ ಬೇಗನೆ ಶಮನವಾಗುವುದು. ತಮ್ಮ ವೈಯಕ್ತಿಕ ಶತ್ರುವಿನ ಬಗ್ಗೆ ಕೂಡ ವೈರಿಯು ಅಲ್ಲಿಂದಲ್ಲಿ ಇರುವವರೆಗೇ ಆತನ ಸೇಡು ತೀರಿಸಿಕೊಳ್ಳಲಿಕ್ಕೆ ಅವರು ಹಿಂದುಮುಂದೆ ನೋಡಲಾರರು; ಆದರೆ ಆತನು ಕೆಲವು ವರ್ಷಗಳವರೆಗೆ ಇಲ್ಲದಂತಾದರೆ, ಆತನ ಬಗ್ಗೆ ಅವರಿಗೆ ಹೆಚ್ಚಾಗಿ ವಿಸ್ಮರಣವಾಗುತ್ತಿರುವದರಿಂದ, ಅವನು ಮತ್ತೆ ಅವರೊಳಗೆ ಬಂದು ಸೇರಿಕೊಂಡರೂ, ಆತನ ವಿಷಯದ ಮುಂಚಿನ ಸಿಟ್ಟು ಅವರಿಗೆ ನೆನಪಾಗುವದಿಲ್ಲ. ಆದರಿಂದಲೇ ಆತನು ಅವರೊಳಗೆ ಪುನಃ ಕೂಡಿ ನಡೆಯಲು ಶಕ್ಯವಾಗುತ್ತದೆ! ಇಂಗ್ಲಿಷರು ಮಾಡಿದ್ದ ಆಕ್ರಮಣದ ಬಗ್ಗೆ ಯಾದರೂ ಅಂದು ಆ ದಾಳಿಯಲ್ಲಿ ಅವರು ಯಾವ ಸೇಡು ಹಾಯಿಸಿಕೊಂಡಿದ್ದರೋ, ಅಷ್ಟೇ ಅವರ ಸಮಾಧಾನವಾಗಲಿಕ್ಕೆ ಸಾಕಾಯಿತು. ಅಂದು ಅವರು ದೊರಕಿಸಿದ್ದ ವಿಜಯದ ಉತ್ಸಾಹದಲ್ಲಿ ಅವರಿಗಿನ್ನೂ ನೆನಪಿರತಕ್ಕ ಶಲ್ಯವೆಂದರೆ, ನಾನಕೋಬಿ ರಾಜನ ಆ ಬೀಗನಷ್ಟು ಕಾಲೊಳಗೆ ಗುಂಡು ಹೊಕ್ಕು ಗಾಯಗೊಂಡದ್ದರಿಂದ. ಆತನು ಇದುವರೆಗೆ ಎಲ್ಲಿಯೋ ಹುದುಗಿಕೊಂಡಿದ್ದನಾದರೂ ಅವನು ಸುಖರೂಪದಿಂದ ತಿರುಗಿ ಬರುವನೆಂಬ ವಿಷಯದಲ್ಲಿ ಅವರಿಗೆ ಸಂದೇಹವೇ ಇರಲಿಲ್ಲ; ಯಾಕಂದರೆ, ಆತನೇನೂ ಇಂಗ್ಲಿಷರ ಕೈವಶವಾಗಿರದೆ, ಅವನು ಆ ಅರಣ್ಯದೊಳಗಿನ ದುಷ್ಟ ಭೂತ 'ಎರಮುಚಾಗಾ'ದ ಹಸ್ತಗತವಾಗಿದ್ದನು!

ಆ ಜಾವರಾಗಳಲ್ಲಿ ಯಾವ ಒಬ್ಬಳು ಪಂಚಾಕ್ಷರಿಯು ಇದ್ದಳೋ, ಅವಳಿಗೆ ನಾನಕೋಬೀ ರಾಜನು ಮೊನ್ನೆಯೇ ತನ್ನ ಬೀಗನ ಶೋಧವನ್ನು ಮಂತ್ರ-ತಂತ್ರಗಳ ಬಲದಿಂದ ಹಚ್ಚಲಿಕ್ಕೆ ತಿಳಿಸಿದ್ದುದು ನಿಜವು. ಆದರಿಂದ ಆ ಮಾಂತ್ರಿಕ ಸ್ತ್ರೀಯು ಬೆಂಕಿಯ ಎದುರಿಗೆ ತನ್ನ ಆಸನವನ್ನು ಮಂಡಿಸಿದಳು. ಬೆಂಕಿಯನ್ನು ದಿಟ್ಟಿಸಿ ನೋಡುತ್ತ, ಆ ಜ್ವಾಲೆಯಲ್ಲಿ ಕೆಲವೊಂದು ಆಕೃತಿಯನ್ನು ನಿರೀಕ್ಷಿಸುತ್ತ ಎಷ್ಟೋ ಹೊತ್ತಿನ ವರೆಗೆ ಗುಂಗಾದಂತೆ ಕುಳಿತಳು. ಆ ಮೇಲೆ ಆವೇಶಗೊಂಡಂತೆ ಒಮ್ಮೆಲೆ ಎದ್ದು ನಿಂತು, ಅವಳು ತನ್ನ ಕೊರಳೊಳಗಿನ ಹೆಣದ ಎಲುವಿನ ಮಾಲೆಯನ್ನು ಕೈಯಲ್ಲಿ ಹಿಡಿದುಕೊಂಡು, ಆ ಬೆಂಕಿಯ ಸುತ್ತಲೂ ಒದರುತ್ತ ಚೀರುತ್ತ ಕುಣಿಯಹತ್ತಿ:—"ಹಾ, ಹಾ! ತಿಳಿಯಿತು, ತಿಳಿಯಿತು. ಇದು ನೋಡಿರಿ, ಆ 'ಎರಮುಚಾಗನನ್ನು!' ಹೇಳು; ಏನು ಕಾಡಾಟ ನಡೆಸಿರುತ್ತೀ ಎಂಬುದನ್ನು ಬೇಗನೆ ಹೇಳು" ಎಂದು ಆಹ್ವಾನ ಮಾಡಿ, ಗಾಳಿಯಲ್ಲಿ ಯಾರಾದರೂ ಮಾತಾಡುತ್ತಿರುವಾಗ ತಾನು ಕಿವಿಗೊಟ್ಟು ಕೇಳುತ್ತಿರುವಂತೆ, ಆಕೆಯು ಕೇಳಿಕೊಳ್ಳಹತ್ತಿದಳು! ಬಳಿಕ ಅವಳು:

"ಹೇಗೆಯೋ? ನಾನಕೋಬಿ ರಾಜಾ, ಕೇಳಿದೆಯಾ? ನಮ್ಮ ಜಾವರಾಗಳ ವೈರಿಯಾದ ಈ ಏರಮುಚಾಗ-ಕಾಡೊಳಗಿನ ಈ ಖೋಡಿ ಭೂತವು-ಇವನೇ ನಿನ್ನ ಬೀಗನ ವಿಶ್ವಾಸಘಾತ ಮಾಡಿರುತ್ತಾನೆ ನೋಡು! ಆ ವೀರನು ನಿಬಿಡವಾದ ಗಿಡಗಳಲ್ಲಡಗಿ ಇಂಗ್ಲಿಷರ ಮೇಲೆ ಬಾಣಬಿಡುತ್ತಿದ್ದಾನೆ; ಆದರೆ ಇಂಗ್ಲಿಷರಿಗೆ ಆತನು ಕಾಣಿಸಲೊಲ್ಲನು; ಇಷ್ಟರಲ್ಲಿ ಈ ಖೋಡಿ ಕಾಡಿನ ದೆವ್ವವು ಆ ಗಿಡದ ಎಲ್ಲ ಹರಿ-ಟೊಂಗೆಗಳನ್ನು ಬದಿಗೆ ಸರಿಸಿತು ನೋಡು! ಆ ಕೂಡಲೆ ಆ ವೀರನು ಬೈಲಿಗೆ ಬಿದ್ದುದರಿಂದ, ಅವನು ಇಂಗ್ಲಿಷರಿಗೆ ಕಾಣಿಸಿದನು. ಕೂಡಲೆ ಅವರು ಗುರಿಯಿಟ್ಟು ಹೊಡೆಯಲು, ಆ ನಿನ್ನ ಬೀಗನ ಕಾಲಿಗೆ ಅವರ ಗುಂಡು ಬಡೆಯಿತು. ಈ ಭೂತವು ಅವರಿಗೆ ನೆರವಾಗದಿದ್ದರೆ ಆ ಇಂಗ್ಲಿಷರ ತಾಯಿಯೇನು ಹಡೆದಾಳು, ಆ ಜಾವರಾನನ್ನು ಕಾಣಲಿಕ್ಕೆ! ಎಲೆ, ದುಷ್ಟ ಏರಮುಚಾಗಾ! ಈಗ ಆದದ್ದಾಯಿತು; ಇನ್ನು ನಿನ್ನ ಅರಣ್ಯದಲ್ಲಿಯೇ ಪ್ರತಿಬಂಧಿಸಿಟ್ಟಿದ್ದ ಆ ನಮ್ಮ ವೀರನನ್ನು ಒಂದೆರಡು ದಿನಗಳಲ್ಲಿಯೇ ನಮ್ಮೆಡೆಗೆ ಸುರಕ್ಷಿತವಾಗಿ ತಂದು ಒಪ್ಪಿಸು; ಇಲ್ಲದಿದ್ದರೆ ಆ ಕಾಡಿನೊಳಗೆ ಕಂಡಕಂಡಲ್ಲಿ ದೊಡ್ಡ ದೊಡ್ಡ ಬೇಗೆಗಳನ್ನೇ ಹಚ್ಚಿ, ಅದರಲ್ಲಿ ಈ ಅರಿವೆಯ ತುಣುಕಿನಂತೆ ನಿನ್ನನ್ನು ಸುಟ್ಟು ಸೂರೆಗೊಂಡೇನು!"

ಹೀಗೆಂದು ಅನ್ನುತ್ತ ಅವಳು ತನ್ನ ಟೊಂಕದ ಸುತ್ತಲೂ ಕಟ್ಟಿದ್ದ ಒಂದು ಕೆಂಪು ವಸ್ತ್ರದ ಬೋಟ್ಟಿನಷ್ಟು ಅಗಲವಾದ ಚಿಂದಿಯ ಅರಿವೆಯನ್ನು ಬಿಚ್ಚತೊಡಗಿದಳು. ಅಂಗಾಲಿನಿಂದ ನಡುನೆತ್ತಿಯವರೆಗೂ ಆಕೆಯ ಮೈ-ಮೇಲೆ ಜಾವರಾಗಳ ಎಲ್ಲ ಸ್ತ್ರೀಯರಂತೆಯೇ ವಸ್ತ್ರವೆಂಬುದು ಇರಲೇ ಇಲ್ಲ; ಮತ್ತು ಆ ಕೆಂಪು ಚಿಂದಿಯ ಅರಿವೆಯಾದರೂ ಅವಳು ತನ್ನ ಟೊಂಕಕ್ಕೆ ಸುತ್ತಿಕೊಂಡಿದ್ದ ವಸ್ತ್ರವೆಂದಾಗಿರದೆ, ಅದೊಂದು ಮಂತ್ರ-ತಂತ್ರಯುಕ್ತವಾದ ಉಡುದಾರವೆಂದು ಕಟ್ಟಿದ್ದಳು! ಆ ಚಿಂದಿಯು ಉಡುದಾರದಂತೆಯೇ ಸಣ್ಣಾಗಿದ್ದಿತು. ಅದರ ಯೋಗದಿಂದ ಯಾವ ಅವಯವವೂ ಮುಚ್ಚುವ ಕೊಂಚವೂ ದುಷ್ಕರ್ಮ ಘಟಿಸುವ ಶಕ್ಯತೆಯಿರಲಿಲ್ಲ!

ಆ ಅರಣ್ಯದ ದೆವ್ವವು. ಆ ಏರಮುಚಾಗವು ಬೆಂಕಿಗೆ ಭಯಂಕರವಾಗಿ ಅಂಜುತ್ತದೆ. ಆ ಚಿಂದಿಯನ್ನು ಆ ಮಾಂತ್ರಿಕಳು ಬೆಂಕಿಯಲ್ಲಿ ಚೆಲ್ಲುತ್ತಲೆ ಅದು ಹೇಗೆ ಭುರ್ರೆಂದು ಸುಟ್ಟು ಹೋಯಿತೋ, ಹಾಗೆಯೇ ತನ್ನ ಗತಿಯಾದರೂ ಆದೀತೆಂಬ ಭೀತಿಯಿಂದ ಆ ಕಾಡಿನ ದೆವ್ವವು ಆಕೆಗೆ ವಚನವಿತ್ತಿತ್ತೇನಂದರೆ. ಇನ್ನು ಎರಡು-ಮೂರು ದಿನಗಳಲ್ಲೇ ನಾನು ಅಡವಿಯಲ್ಲಿ ಪ್ರತಿಬಂಧಿಸಿಟ್ಟಿರುವ ಆ ಗಾಯಗೊಂಡ ಜಾವರಾನನ್ನು ನಾನಕೋಬಿ ರಾಜನ

ಕಡೆಗೆ ಸುಖರೂಪವಾಗಿ ಕಳಿಸಿ ಕೊಡುತ್ತೇನೆ.

ಆ ಅಭಿವಚನದಿಂದ ಸ್ವಾಭಾವಿಕವಾಗಿಯೇ ಆ ಯುದ್ಧದಲ್ಲಾದ ಜಾವರಾಗಳ ಎಲ್ಲ ಹಾನಿಯೂ ಕೂಡಿ ಬರುತ್ತವೆಂದು ತಿಳಿದು, ಅವರೆಲ್ಲರಿಗೂ ಬಹು ಸಂತೋಷವಾಗಿತ್ತು; ಮತ್ತು ಅದಕ್ಕಾಗಿಯೇ ಅಂದು ಆಗತಕ್ಕ ಆ ವಿಜಯ ನೃತ್ಯದಲ್ಲಿ ಭಾಗವಹಿಸಲಿಕ್ಕೆಂದು ಒಳ್ಳೇ ಆಡಂಬರದಿಂದ ಪ್ರತಿಯೊಬ್ಬ ಜಾವರಾನೂ ಬಹು ಉತ್ಸುಕತೆಯಿಂದ ಸಿಂಧುತಟಾಕದ ಕಡೆಗೆ ನಡೆದಿದ್ದನು.

ನಿತ್ಯಕ್ರಮದಂತೆ ಅಂದು ಬೆಳಗಿನ ಝಾವದಲ್ಲಿದ್ದು ಆ ಜಾವರಾಗಳ ರಾಷ್ಟ್ರಕ್ಕೆ ರಾಷ್ಟ್ರವೇ ಬೇಟೆಗೆ ಹೊರಟಿತು. ಗಂಡಸರು, ಹೆಂಗಸರು, ಹುಡುಗರು ಇವರೆಲ್ಲರೂ ಒಟ್ಟಾಗಿಯೇ ನಡೆದರು. ಪ್ರತಿಯೊಬ್ಬ ಸಣ್ಣದೊಡ್ಡ ವ್ಯಕ್ತಿಯ ಬಿಲ್ಲು-ಬಾಣಗಳು ಅವರವರ ಹೆಗಲ ಮೇಲೆಯೇ ಇದ್ದವು. ಆ ರಾಜಧಾನಿಯಲ್ಲಿ ಮನೆಯೆಂಬುದು ಇರಲೇ ಇಲ್ಲ. ಅದರಿಂದ ಹಿಂದುಳಿದು ಬಾಗಿಲಿಕ್ಕೆ, ಚಿಲಕ-ಕೊಂಡಿ, ಕೀಲಿ ಹಾಕಿಕೊಳ್ಳುವ ಅವಶ್ಯಕತೆಯೇ ಇರಲಿಲ್ಲ; ಮತ್ತು ಆದಕ್ಕಾಗಿಯೇ ಆ ಜಾವರಾಗಳ ಭಾಷೆಯಲ್ಲಿ ಬಾಗಿಲು, ಚಿಲಕ, ಕೊಂಡಿ, ಕೀಲಿ ಮುಂತಾದವುಗಳ ಹೆಸರುಗಳೇ ಇರುವುದಿಲ್ಲ! ಅವರು ಹೊರಟರೆಂದರೆ, ಅವರ ಹಿಂದುಗಡೆಯಲ್ಲಿ ಯಾವ ಸಾಮಾನೂ ಉಳಿಯುವಂಥದಿರುತ್ತಿರಲಿಲ್ಲ. ಪ್ರತಿಯೊಬ್ಬರ ಸಂಸಾರವೆಂದರೆ, ಸ್ವತಃ ಅವರೇ ಅವರೂ, ಅವರ ಕೈಯೊಳಗಿನ ಬಿಲ್ಲು-ಬಾಣಗಳೂ ಹಾಗು ಕೊರಳೊಳಗಿನ ಕವಡೆಯ ಇಲ್ಲವೆ ಮಣಿಗಳ ಮಾಲೆ! ಕೆಲ ಆಯುಧಗಳ ಹೊರತು ಅವರ ಮನೆಯಲ್ಲಿ ಬೇರೆ ಯಾವ ಸಾಮಾನು-ಸಟ್ಟುಗಳೂ ಇರುವುದಿಲ್ಲ. ಅರಿವೆ ಅಂಚಡಿಗಳದಂತೂ ಹೆಸರೇ ಹೇಳಕೂಡದು. ಅನ್ನದ ಬಗ್ಗೆ ಧಾನ್ಯ ಸಂಗ್ರಹದ ಬಳತ, ಚೀಲ, ಡಬ್ಬಿ, ಹಗೆ ಮುಂತಾದವುಗಳೆಲ್ಲ ಸೇರಿದ ಸಂಗ್ರಹವೆಂದರೆ, ಆ ವಿಶಾಲವಾದ ಕಾನನ ಹಾಗು ಆ ನೀರೇ ನೀರಾಗಿ ಕಾಣುವ ಸಮುದ್ರ! ನಿನ್ನೆ ಸಂಜೆಯ ತಿನಿಸನ್ನು ನಿನ್ನೆಯೇ ಕೊಂಚವೂ ಉಳಿಸದಂತೆ ತಿಂದುಬಿಟ್ಟಿರುತ್ತಾರೆ ಇಂದಿನ ಬಗ್ಗೆ ಇನ್ನು ಯಾವ ಬೇಟೆ ಯಾವಾಗ ಸಿಗುವದೋ ಆಗ. "Enough unto the day the evils thereof. Let tomorrow take care of its own"! ಸಹಸ್ರಾವಧಿ ವರ್ಷಗಳಿಂದ ಆ ಜಾವರಾಗಳು ಕ್ರೈಸ್ತನ ಆ ಧುರ್ವಸೂತ್ರವನ್ನು ದಿನಾಲು ಆಚರಿಸುತ್ತ ಬಂದಿರುತ್ತಾರೆ.

ರಾಜಧಾನಿಯು ಯಾವುದೊಂದು ಅಡ್ಡದಾರಿಯೊಳಗಿನ ಧರ್ಮಶಾಲೆಯಂತೆ ಹಾಳು ಬಿದ್ದು ಜಾವರಾಗಳ ಆ ರಾಷ್ಟ್ರಕ್ಕೆ ರಾಷ್ಟ್ರವೇ ತನ್ನ ನಿತ್ಯದ ದಿನಚರ್ಯೆಯಂತೆ ಬೆಳಿಗ್ಗೇ ಹಾಗೆ ಕಾಡು-ಕಂದರಗಳಲ್ಲಿ ಬೇಟೆಗಾಗಿ

ಹೊರಟು ಹೋದ ಬಳಿಕ ಅಲ್ಪಾವಕಾಶದಲ್ಲಿಯೇ ಅವರೊಳಗಿನ ಜನರು ತಂತಮ್ಮ ಲಹರಿಯಂತೆಯೂ ಅನುಕೂಲತೆಯಂತೆಯೂ ಬೇರೆ ಬೇರೆ ಬೇಟೆಗಳ ಬೆನ್ನು ಹತ್ತುತ್ತ, ಆ ಅಡವಿ ತುಂಬ ಹಂಚಿಹೋದರು ಕೆಲ ಜನ ಹೆಂಗಸರು, ಹುಡುಗರು ಬಿಲ್ಲು-ಬಾಣಗಳಿಂದ ಅಥವಾ ಕಲ್ಲು-ಗುಂಡುಗಳಿಂದ ಹಕ್ಕಿಪಕ್ಕಿಗಳನ್ನು ಸಂಹರಿಸುತ್ತ ಸಾಗಿದರು. ಕೆಲಜನ ಸ್ತ್ರೀ-ಪುರುಷರು ಕಾಡು ಹಂದಿಗಳನ್ನು ಬೆನ್ನಟ್ಟಿ ನಡೆದರು. ಕೆಲವರು ಸಮುದ್ರದ ಕಡೆಗೆ ಹೊರಳಿ, ಸಮುದ್ರದೊಳಗಿನ ಬಂಡೆಗಲ್ಲುಗಳಿಗೆ ತೆರೆಗಳ ಮೂಲಕ ಆಗಾಗ್ಗೆ ಬಂದು ಬಡೆಯುತ್ತಿರುವ ದೊಡ್ಡ ದೊಡ್ಡ ಮೀನುಗಳು ಯಾವಾಗ ಕಾಣುವವೋ, ನಾವು ಅವುಗಳನ್ನು ನಮ್ಮ ಬಾಣಗಳಿಂದ ಯಾವಾಗ ಭೇದಿಸುವೆವೋ ಎಂಬ ಉತ್ಸುಕತೆಯಿಂದ ಬಕಪಕ್ಷಿಯಂತೆ ಹೊಂಚುಹಾಕಿ ಕುಳಿತರು.

ನಾನಕೋಬಿ ರಾಜನೂ ಆತನ ರಾಣಿಯಾದ 'ಫುಲಿ'ಯೂ ಇವರುರಾಜ-ರಾಣಿಯರಾಗಿದ್ದರೂ ಬೇರೆ ಎಲ್ಲ ಪ್ರಜಾಜನರಂತೆ ಅವರೂ ತಮ್ಮ ಬೇಟೆಯನ್ನು ತಾವೇ ಅರಸಬೇಕಾಗುತ್ತಿತ್ತು; ಅದು ಸಿಗದಿದ್ದರೆ, ಉಪವಾಸ ಬೀಳಬೇಕಾಗುತ್ತಿತ್ತು! ಜಾರವರಾ ಜನರಲ್ಲಿ ರಾಜನಿಗೆ ಯಾವನೂ ಕರಕೊಡುತ್ತಿರುವುದಿಲ್ಲ. ಅರಸನ ಬಳಿಯಲ್ಲಿ ಒಬ್ಬನಾದರೂ ಪೋಲೀಸನಾಗಲಿ, ಚಾಕರನಾಗಲಿ, ಸೇವಿಕೆಯಾಗಲಿ ರಾಜನಗೋಸುಗವೆಂದು ಇರುವುದಿಲ್ಲ. ಸಂಧಿವಿಗ್ರಹ, ಸಂಕಟ-ಬಿಂಕಟಗಳ ಪ್ರಸಂಗಗಳಲ್ಲಿ ಮಾತ್ರ ಅವನು ಅವರ ಮುಂದಾಳಾಗಿರುತ್ತಾನೆ; ಆಗ ಆತನ ವಿಚಾರ-ಸಲಹೆಗಳಿಗೆ ವಿಶೇಷ ಮಹತ್ವವಿರುತ್ತದೆ. ಅದೇ ಆತನ ರಾಜತ್ವವು. ಅರಸುತನವು! ಆತನ ಕಡೆಗೆ ಜಾತಿ-ಜಾತಿಗಳೊಳಗಿನ ಜಗಳ ತಂಟೆಗಳ, ನ್ಯಾಯಾನ್ಯಾಯಗಳ ಕೆಲಸ ಕೂಡ ನಿರ್ಬಂಧದದೃಷ್ಟಿಯಿಂದ ಇರುವುದಿಲ್ಲ; ಯಾಕಂದರೆ ಜಾರವರಾಗಳಲ್ಲಿ ಒಬ್ಬನು ಮತ್ತೊಬ್ಬನೊಡನೆ ಕಾದಾಡಿದರ, ಅವರು ಪರಸ್ಪರರಿಗೆ ಯೋಗ್ಯವಾದಂಥ ಹಾಗು ಅನುಕೂಲ ಪ್ರಕಾರ ಪರಸ್ಪರರ ಪಾರುಪತ್ಯ ಮಾಡುವರು; ಅಥವಾ ಬಿಡುವರು. ಜಾತೀಯ ನ್ಯಾಯಾಲಯದ ಪ್ರಶ್ನೆಯೇ ಅದಲ್ಲ. ವ್ಯಕ್ತಿಯು ಶತ್ರುವನ್ನು ವ್ಯಕ್ತಿಯು ಕೊಲ್ಲಬಹುದು; ಅಥವಾ ಬಿಡಬಹುದು. ಅದು ವ್ಯಕ್ತಿಯ ಪ್ರಶ್ನೆಯು; ಜಾತಿಯ ಪ್ರಶ್ನೆಯಲ್ಲ. ಅಲ್ಲಿ ಖಟ್ಲೆಯಿಲ್ಲ, ಕೇಸು ಇಲ್ಲ, ವಿಚಾರಣೆ ಇಲ್ಲ, ದಂಡವಿಲ್ಲ. ಕಾರಾಗೃಹವಿಲ್ಲ, ಪೋಲೀಸರಿಲ್ಲ, ಗೌಡನಿಲ್ಲ, ಶಾನುಭೋಗನಿಲ್ಲ. ಅವರ ರಾಜಘಟನೆಯೇ ಈ ಪ್ರಕಾರದ್ದಿದೆ; ಮತ್ತು ಮುಕುಟ-ಕಿರೀಟವನ್ನೇ ಏಕೆ, ಲಂಗುಟವನ್ನು ಕೂಡ ಧರಿಸದಂತಹ ರಾಜನೂ, ಟೊಂಕದ ಕೆಳಗೆ ಗುಹ್ಯಪ್ರದೇಶದ ಎದುರಿಗೆ ಒಂದಿಂಚಿನಷ್ಟು ಸುಂದರವಾಗಿ ಕತ್ತರಿಸಿ ತೂಗಗಟ್ಟಿದ್ದ ಒಂದಲೆಯ ಹೊರತು,

ಧರ್ಮಾವರಮ್ ಸೀರೆ, ಇಳಕಲ್ಲ ಸೀರೆ, ಬನವಾರಸ ಜರೀ ಸೀರೆ ಮುಂತಾದವುಗಳನ್ನೊಂದೂ ಎಂದೂ ಕಾಣದಂತಹಳೇ ಆತನ ರಾಣಿಯು!

ಆ ದಿನ ಎಲ್ಲರೊಡನೆ ಬೇಟೆಗೆ ಹೊರಡುವಾಗ ಪುಲೀರಾಣಿಯು ತನ್ನ ಒಂದು ವರ್ಷದ ಮಗನನ್ನು ತನ್ನ ಬೆನ್ನ ಮೇಲೆ ನಿಲ್ಲಿಸಿಕೊಂಡು ನಡೆದಿದ್ದಳು. ನಮ್ಮ ಕಡೆಗೆ ಶಿಕ್ಲಗಾರರು, ಕೊರಚರೇ ಮೊದಲಾದ ಹೆಂಗಸರು ತಮ್ಮ ಎಳೆ ಮಕ್ಕಳನ್ನು ತಮ್ಮ ಬೆನ್ನಿಗೆ ಒಂದು ಅರಿವೆಯಿಂದ ಕಟ್ಟಿಕೊಂಡು ಒಯ್ಯುತ್ತಾರೆ; ಇಲ್ಲವೆ ಮಗುವು ತನ್ನ ಕೈಗಳಿಂದ ಬೆನ್ನ ಕಡೆಯಿಂದ ತಾಯಿಯ ಕುತ್ತಿಗೆಯನ್ನು ಹಿಡಿದು, ಕಾಲಿನಿಂದ ಅವಳ ಹೊಟ್ಟೆಯನ್ನು ಅವಚಿಕೊಂಡು ಕುರಿಮರಿಯಂತೆ ಕೂಡ್ರುತ್ತದೆ; ಆದರೆ ಅಂಡಮಾನದ ಸ್ತ್ರೀಯರು ಒಂದು ಪಟ್ಟಿಯನ್ನು ಮುಂದಲೆಗೆ ಸುತ್ತಿ, ಬೆನ್ನ ಮೇಲೆ ಬಿಡುತ್ತಾರೆ. ಹುಡುಗನನ್ನು ಬೆನ್ನ ಮೇಲೆ ತಕ್ಕೊಂಡ ಕೂಡಲೆ ಅದು ಆ ಪಟ್ಟಿಗೆ ಆನುತ್ತದೆ; ಇಲ್ಲವೆ ತಾಯಿಯ ಕುಂಡಿಗಳ ಮೇಲೆ ಗಡಗಂಚಿಯು ಮೇಲ ಊರುವಂತೆ ಕಾಲೂರಿ, ಆ ಪಟ್ಟಿಯನ್ನು ಹಿಡಿದು ಎದ್ದು ನಿಲ್ಲುತ್ತದೆ. ಆ ಸಂತತ ಭಾರದ ಮೂಲಕ ಅಲ್ಲಿಯ ಹೆಂಗಸರ ನೆತ್ತಿಯ ಮೇಲಿನ ಎಲವು ತೀರ ಸ್ಪಷ್ಟವಾಗಿ ಕಾಣಿಸುವಷ್ಟು ಹತ್ತಿಕ್ಕಿ, ಅದಕ್ಕೆ ಕಾಯಮವಾದ ಒಂದು ತೆಗ್ಗೇ ಬೀಳುತ್ತದೆ. ಆದರಿಂದ ಆ ತೆಗ್ಗಿನಲ್ಲಿ ಆ ಪಟ್ಟಿಯು ಚೆನ್ನಾಗಿ ಕೂಡ್ರುತ್ತದೆ; ಮತ್ತು ಅತ್ತಣದ ಪ್ರೌಢ ಹೆಂಗಸರ ಟೊಂಕದ ಎಲುವೂ ಕುಂಡಿಯ ರೂಂಡಿಗಳೂ ಹುಟ್ಟು ಒಳ್ಳೇ ಪ್ರಶಸ್ತಾಗಿ ಉಬ್ಬಿದಂಥವೂ ರೂಢಿಗೊಂಡವೂ ಇರುವುದರಿಂದ, ಮಗುವು ಆ ತಿಗಗಳ ಮೇಲೆ ತೀರ ಸಹಜವಾಗಿಯೇ ಕಾಲೂರಿ ನಿಂತುಕೊಳ್ಳಲು ಶಕ್ಯವಾಗುತ್ತದೆ. ಅದರಿಂದ ನಮ್ಮ ಕಡೆಯ ಕೊರಚರ ಹೆಣ್ಣುಮಕ್ಕಳ ಬೆನ್ನ ಮೇಲೆ ಮಗುವು ಕೂಡ್ರುತ್ತದೆಂದು ನಾವು ಹೇಗನ್ನುವೆವೋ, ಹಾಗೆಯೇ ಅತ್ತ ಕಡೆಯ ಹೆಂಗಸರ ಬೆನ್ನ ಮೇಲೆ ಮಗುವು ನಿಂತುಕೊಳ್ಳುತ್ತದೆಂದೇ ಅನ್ನಬೇಕಾಗುತ್ತದೆ.

ನಾನಕೋಬಿ ರಾಜನ ಆ ಹುಡುಗನ ಹೆಸರನ್ನು ಫುಲೀ ರಾಣಿಯು ಬಸಿರಿದ್ದಾಗಲೇ 'ಕೋರೀ' ಎಂದಿಡಲಾಗಿತ್ತು. ಯಾಕಂದರೆ ಜಾವರಾಗಳ ಸ್ಮೃತಿಶಾಸ್ತ್ರದಂತೆ ಹೆಂಗಸರು ಗರ್ಭಧರಿಸುತ್ತಲೆ ಆ ಕೂಸಿನ 'ನಾಮಕರಣ ಸಂಸ್ಕಾರ'ವನ್ನು ಕೂಡಲೆ ಮಾಡಬೇಕಾಗುತ್ತದೆ. ಅದರಿಂದ ಬಾಲ-ಬಾಲಿಕೆಯರ ಮೊದಲಿನ ಹೆಸರುಗಳಲ್ಲಿ ಭಿನ್ನತೆಯಿರುವದಿಲ್ಲ. ಆ ಕಾರಣದಿಂದ ಆ ಮಗುವಿನ 'ಕೋರೀ' ಎಂಬ ಹೆಸರಿನಿಂದ ಅದು ಜಾವರಾಗಳ ಯುವರಾಜನೋ, ರಾಜಕನ್ಯೆಯೋ ಎಂಬದು ವಾಚಕರಿಗೆ ತಿಳಿಯುವಂತಿರದ್ದರಿಂದ,

ಆತನು ಹುಡುಗನಿದ್ದನು, ಯುವರಾಜನಿದ್ದನು ಎಂಬದನ್ನು ಪ್ರತ್ಯೇಕವಾಗಿ ಹೇಳಬೇಕಾಯಿತು. ಹುಡುಗಿಯಾಗಿದ್ದರೆ ಆಕೆಯು ಆ ಗರ್ಭಾವಸ್ಥೆಯೊಳಗಿನ ಸಾಮಾನ್ಯ ಲಿಂಗದ ನಾಮವನ್ನು ಅವಳು ವಯಸ್ಸಿಗೆ ಬಂದೊಡನೆಯೆ ಬದಲಿಸಿ, ಅವಳು ಮೈನೆರೆಯುವಾಗ ಯಾವ ಹೂಗಳು ಅರಳಿರುವವೋ ಅವುಗಳಲ್ಲೊಂದರ ಹೆಸರು ಅವಳಿಗೆ ಇಡಲಾಗುತ್ತಿತ್ತು. ಈ ನಾಮಕರಣ ಪದ್ಧತಿಯು ಅವರ ಆ ಸನಾತನ ಧರ್ಮದ್ದೇ ಒಂದು ಜಾತೀಯ ಸಂಸ್ಕಾರವಾಗಿದೆ. ಪ್ರತಿಯೊಬ್ಬ ಹುಡುಗಿಯ ಆ ಹೆಸರು ಭಿನ್ನವಾಗುತ್ತಿರುವಂತೆ, ಆ ರಾಣಿಯು ಆಕೆಯು ಜನ್ಮದ ಪೂರ್ವದ ಸಾಮಾನ್ಯ ಲಿಂಗದ ಹೆಸರು ಬದಲಾಗಿ, ಅದು ಆ ರಾಣಿಯು ಪ್ರಥಮ ಋತುಮಂತಿಯಾದಾಗ ಎಲ್ಲ ಕಡೆಗೂ ಹೂವೇ ಹೂವಾಗಿ ಅರಳಿದ್ದರಿಂದ ಅವಳ ಎರಡನೇ ಹೆಸರೇ ಈ 'ಫುಲೀ' ಅಂದರೆ ಹೂವು ಎಂದಾಗಿತ್ತು.

ಆ ಜಾವರಾಗಳೊಳಗಿನ ಯಾರು ಸಮುದ್ರದೊಳಗಿನ ಮೀನುಗಳನ್ನು ಹೊಡೆಯಬೇಕೆಂದು ಹೋಗಿದ್ದರೋ, ನಾನಕೋಬಿ ರಾಜನೂ ಆ ಹುಡುಗನನ್ನು ಬೆನ್ನಮೇಲೆ ನಿಲ್ಲಿಸಿಕೊಂಡು ನಡೆದಿದ್ದ ಆ ಫುಲೀರಾಣಿಯೂ ಅತ್ತ ಕಡೆಗೇ ಹೋಗಿದ್ದರು. ಎತ್ತರವಾದ ಬಂಡೆಗಲ್ಲುಗಳ ತುದಿಗಳ ಮೇಲೆ ಬಿಲ್ಲುಗಳಿಗೆ ಬಾಣಗಳನ್ನು ಹೂಡಿಕೊಂಡಂಥ ಜಾವರಾಗಳು ನಿಂತಿದ್ದರು. ಕೆಳಗಡೆಗೆ ಆ ಬಂಡೆಗಲ್ಲ ಮೇಲೆ ಸಮುದ್ರದ ತೆರೆಗಳ ಮೇಲೆ ತೆರೆಗಳು ಅಪ್ಪಳಿಸಿ ಧಡಧಡಲ್ಲೆಂದು ಒಡೆಯುತ್ತಿದ್ದವು. ಅವುಗಳಲ್ಲೇ ಯಾವುದೊಂದು ದೊಡ್ಡ ಮೀನವು ಅಥವಾ ಮೀನುಗಳ ಗುಂಪು ಆ ತೆರೆಗಳ ಮೇಲೆ ಪುಟಪುಟಮ ಬರುತ್ತಿದ್ದವು. ಬೆಳ್ಳಗೆ ಸುಣ್ಣದ ಬಣ್ಣದ ದೊಡ್ಡ ದೊಡ್ಡ ರಣಹದ್ದಿನಂತಹ ಪಕ್ಷಿಗಳು ಆಕಾಶದೊಳಗಿಂದ ಸಮುದ್ರದ ಮೇಲೆ ಏರು-ಇಳುವಾಗಿ ಒಂದೇ ಸವನೆ ಹಾರುತ್ತಿದ್ದವು. ಅವುಗಳ ಕವಿನೆಳಲು ಆ ತೆರೆಗಳಲ್ಲಿ ಮೂಡಿದಾಗ ಆ ಪಕ್ಷಿಗಳೇ ಆ ತೆರೆಗಳ ಮೇಲೆ ಸಾಗುತ್ತವೆಂಬಂತೆ ಅನಿಸುತ್ತಿತ್ತು; ಆದರೆ ಒಮ್ಮೊಮ್ಮೆ ಯಾವಾಗ ಕೆಲ ಜಲಜೀವಿಗಳು ಸಮುದ್ರದ ತೆರೆಗಳೊಡನೆ ಗುಂಪುಗುಂಪಾಗಿ ಪುಟದು ಬರುತ್ತಿದ್ದವೋ, ಆಗ ಆ ಹಲವು ಭಾರವಾದ ಸುಶುಭ್ರ ಪಕ್ಷಿಗಳು ಹೊಂಚು ಹಾಕಿ ನಿಜವಾಗಿಯೂ ಆ ತೆರೆಗಳ ಮೇಲೆ ಈಸಹತ್ತುತ್ತಿದ್ದವು ಅವುಗಳ ಸಾಲಿಗೆ ಸಾಲೇ ಆ ತೆರೆಗಳ ಮೇಲೂ ಹಾಗು ಅವುಗಳ ಕವಿನೆಳಲು ತೆರೆಗಳೊಳಗೂ ಅಲ್ಲಾಡುತ್ತಿರುವಾಗ, ಆ ನೀಲವರ್ಣದ ಸಮುದ್ರದ ತೆರೆಗೆ ತೆರೆಯೇ ಒಳ್ಳೇ ಶುಭ್ರವಾಗಿ ಕ್ಷೀರಸಾಗರದೊಳಗಿನ ಯಾವುದೊಂದು ತೆರೆಯು ತಪ್ಪಿ ಇತ್ತ ಹರಿಯುತ್ತ ಬಂದಿರುವಂತೆ ತೋರುತ್ತಿತ್ತು!

ನೀರ ಮೇಲೆ ಬರುವ ದೊಡ್ಡ ದೊಡ್ಡ ಮೀನುಗಳಿಗೆ ಜಾವರಾಗಳ

ತೀಕ್ಷ್ಣ ಬಾಣಗಳು ಬಡಿಯುತ್ತಲೇ ಅವು 'ಸಳ್' ಎಂದು ಒಮ್ಮೆಲೆ ಸಮುದ್ರದಲ್ಲಿ ಮುಳುಗಿ ಕಾಣವಂತಾಗುತ್ತಿದ್ದವು. ಹೀಗೆ ತಾಸುಗಟ್ಲೆ ಬಾಣಗಳನ್ನು ಹೊಡೆದ ಬಳಿಕ ನಾನಕೋಬಿ ರಾಜನೂ ಆತನ ಬೆನ್ನ ಹಿಂದೆಯೇ ಬೇರೆ ಕೆಲ ಜಾವರಾಗಳೂ ಆ ಎತ್ತರವಾದ ಶಿಲಾಶಿಖರಗಳಿಂದ ಅವುಗಳ ಪಕ್ಕದ ಸಮುದ್ರದಲ್ಲಿ ಜಿಗಿದು ಸಮುದ್ರದ ಬುಡಕ್ಕೆ ಹೋದರು. ನೀರು ಮುಳುಗುವ ಕೆಲಸದಲ್ಲಿ ಜಾವರಾಜನರು ಒಳ್ಳೇ ಪಾರಂಗತರಾಗಿರುತ್ತಾರೆ. ಅದು ಅವರ ನಿತ್ಯದ ಆಟವೇ ಆಗಿರುತ್ತದೆ. ಉಪಜೀವಿಕೆಯೂ ಆಗಿರುತ್ತದೆ. ಯಾವ ಮೀನುಗಳಲ್ಲಿ ಅವರ ತೀಕ್ಷ್ಣ ಬಾಣಗಳು ಸೇರಿರುತ್ತವೋ ಅವುಗಳೆಲ್ಲ ಬುಡದಲ್ಲಿ ಹೋಗಿ ಬಿದ್ದದ್ದರಿಂದ ಅವರಿಗೆ ಸಿಗುತ್ತವೆ. ಅವುಗಳಲ್ಲಿಯ ಶಕ್ಯವಾದಷ್ಟು ಮೀನುಗಳನ್ನು ಬೆನ್ನ ಮೇಲಿರಿಸಿಕೊಂಡು ಇಲ್ಲವೆ ಕಟ್ಟಿಕೊಂಡು ಅವರು ಮೇಲಕ್ಕೆ ತಂದರು. ಮುಳಲಿನ ಮೇಲೆ ಬಂದ ಕೂಡಲೆ ಆ ಹೊರೆಗೆ ಹೊರೆಯನ್ನೇ ಅವರು ಕೆಳಗಿಳಿಸಿದರು. ಎಲ್ಲರೂ ಅವುಗಳ ಸುತ್ತಮುತ್ತ ನೆರೆದು, ನಗುತ್ತ ಕೆಲೆಯುತ್ತ, ಯಾರ ಬಾಣದಿಂದ ಯಾವ ಮೀನು ಸತ್ತಿತೆಂಬ ಚರ್ಚೆಗೊಳಗಾಗಿ ಬಿಟ್ಟರು. ಬಳಿಕ ಅವರು ಬಹು ದೊಡ್ಡ ಬೆಂಕಿ ಹೊತ್ತಿಸಿದರು. ಅದರ ಮೇಲೆ ಆ ಎಲ್ಲ ಮೀನುಗಳನ್ನೂ ಅವರ ಹೆಂಡಿರುಮಕ್ಕಳು ಬೇಟೆ ಮಾಡಿದ್ದ ಪಕ್ಷಿಗಳನ್ನೂ ಬೇರೆಯವರು ತಂದಿದ್ದ ಎರಡು-ಮೂರು ಕಾಡು ಹಂದಿಗಳನ್ನು ಹೀಗೆ ಎಲ್ಲ ತಂಡವೂ ಸೇರಿ ಸಂಪಾದಿಸಿದ ಖಾದ್ಯಕ್ಕೆ ಅವಶ್ಯವೆಷ್ಟೋ ಅಷ್ಟು ಸುಟ್ಟು, ಬೆಯ್ಯಿಸಿದರು; ಕೆಲವನ್ನು ಸಂಜೆಗೆಂದು ಕಾದಿಟ್ಟರು. ಬೆಳಗಿನಿಂದ ಅದುವರೆಗೆ ಆ ಕಾನಿನೊಳಗೆ ಹಂಚಿಹೋಗಿದ್ದ ಅವರ ಜನರೆಲ್ಲರೂ ಬಹುಮಟ್ಟಿಗೆ ಹಿಂದಿರುಗಿ ಬಂದರು. ಆ ಮೇಲೆ ಆ ಶುಭ್ರವೂ ಪ್ರಶಸ್ತವೂ ಆದ ಉಸುಗಿನ ಪ್ರದೇಶದಲ್ಲಿ ಬಿಸಿಲಿನ ಪ್ರವೇಶದಲ್ಲಿ, ಬಿಸಿಲಿನ ಕಾವಿನಲ್ಲಿ ಅವರ ವನಭೋಜನಕ್ಕೆ ಪ್ರಾರಂಭವಾಯಿತು. ಆ ನಿಬಿಡವಾದ ಗಿಡಗಳೊಳಗಿನ ಮಳೆಯಲ್ಲೂ ಸಮುದ್ರದ ನೀರಲ್ಲೂ ಬೆಳಗಿನಿಂದ ತೊಯ್ದು ತೊಯ್ದು ಅವರು ನೆನೆದು ಹೋಗಿದ್ದರಾದ್ದರಿಂದ ನಡುಗುತ್ತಿದ್ದರು. ಆದರಿಂದ ಆ ಬಿಸಿಲಲ್ಲಿ ಅವರ ಮೈಗಳು ಒಣಗುತ್ತಿರುವಾಗ ಶೀತಲ ಬೆಳದಿಂಗಳೊಳಗೆ ಉಣ್ಣುವಾಗ ನಮಗೆ ಹೇಗೆ ಮೋಜೆನಿಸುವದೋ, ಅದರಂತೆಯೇ ಅವರಿಗೆ ಆ ಬಿಸಿಲೂಟದ ಕಾಲಕ್ಕೆ ಒಳ್ಳೇ ಮೋಜೆನಿಸುತ್ತಿತ್ತು. ಕೆಲವು ಚನ್ನಾಗಿ ಸುಟ್ಟ, ಕೆಲವು ಹಸಿಬಿಸಿಯಾಗಿ ಸುಟ್ಟ, ಕೆಲವು ಹಸಿ ಮಾಂಸ ಇವೆಲ್ಲವೂ ಅಲ್ಲಿಡಲ್ಪಟ್ಟಿದ್ದವು. ಯಾರಿಗೆ ಯಾವುದು ರುಚಿಸುವದೋ ಅದನ್ನು ಅವರು ನುಂಗಿ ನೀರುಹಿಡಿದರು. ಗಟ್ಟಿ ಎಲುವುಗಳನ್ನು ಹಲ್ಲಿನಿಂದ ಕಡಕಡನೆ ಕಡಿದು, ಅವುಗಳ ಸಂದುಗೊಂದುಗಳ

ಲ್ಲಿಯ ರಕ್ತದ ರಸವನ್ನು ಯಾವನೊಬ್ಬನು 'ಸುಸ್ವಸುಸ್ವ' ಎಂದು ಚೀಪಿದರೆ, ಬೇರೊಬ್ಬನು ಎಳೆ-ಎಳೆ ಎಲುವುಗಳನ್ನು ಇಷ್ಟಕ್ಕಿದ್ದಂತೆಯೇ ಹಲ್ಲುಗಳಿಂದ ಕಡಕಡನೆ ಕಡಿದು ತಿಂದುಬಿಟ್ಟನು. ಜಾವರಾಜನರು ಎಲ್ಲ ಪದಾರ್ಥಗಳನ್ನು 'ಕಚ್ಚಾ' ಅಂದರೆ ಹಸಿಬಿಸಿಯಾಗಿಯೇ ತಿನ್ನುತ್ತಾರೆ. ತೀರ ಪಕ್ವಾನ್ನವೇ ಆಗಬೇಕೆಂದರೆ, ಸುಟ್ಟ ಮಾಂಸವು! ಆದರೆ ಸುಡುವ ಮುಂದಿನ ಬೆಯ್ಸುವ, ಕುಚ್ಚುವ, ಉಪ್ಪುಕಾರ ಮಸಾಲಿ ಬೆರಿಸುವದಂತೂ ಇರಲಿ; 'ಅಡುಗೆ ಮಾಡುವ' ಎಂಬ ಶಬ್ದವು ಕೂಡ ಅವರ ಭಾಷೆಯೊಳಗಿರುವದಿಲ್ಲ!

ಇಷ್ಟರಲ್ಲಿ ನಾನಕೋಬಿರಾಜನು ಕೈಸನ್ನೆ ಮಾಡುತ್ತ ಹೇಳಿದನೇನೆಂದರೆ,

"ಡೋಲಕಾರೀ?-ಸೀಮೆಯ ನೀರು?"

ಜಾವರಾಗಳ ಭಾಷೆಯಲ್ಲಿ ಮೊದಲೇ ಶಬ್ದಗಳು ವಿರಲ. ಅವುಗಳಲ್ಲೂ ಅವರಿಗೆ ಶಬ್ದಗಳಿಗಿಂತಲೂ ಕಣ್ಣು ಮತ್ತು ಕೈ ಇವುಗಳ ಸನ್ನೆಯಿಂದಲೇ ಹೆಚ್ಚಾಗಿ ಮಾತನಾಡುವ ಅಭಿರುಚಿಯೇ ವಿಶೇಷ. ಶಬ್ದಾಡಂಬರದ ಬೇಸರ. ಆದರಿಂದ ಇಡೀ ವಾಕ್ಯವನ್ನು ನುಡಿಯುವುದಾದರೆ, ಒಂದೇ ಶಬ್ದದಲ್ಲಿ ನುಡಿದಾರು; ಹಾಗು ಅದರ ಮಿಕ್ಕ ಅರ್ಥವನ್ನು ಹಾವ ಭಾವಗಳಿಂದ ಪೂರ್ತಿಗೊಳಿಸುವರು. ನಾನಕೋಬರಾಜನು ಯಾವಾಗ ಬರಿಯ 'ಡೋಲಕಾರೀ' ಎಂಬದನ್ನಷ್ಟೇ ಉಚ್ಚರಿಸಿದನೋ, ಆಗ ಆತನಾದರೂ ಆ ವಾಕ್ಯದ ಉಳಿದ ಭಾಗವನ್ನು ಕೈಯಿಂದಲೂ ಕಣ್ಣಿನಿಂದಲೂ ಸನ್ನೆ ಮಾಡಿ ಪೂರ್ತಿಗೊಳಿಸಿದನು. ಆ ಶಬ್ದ ಮತ್ತು ಆವೆಲ್ಲ ಹಾವಭಾವಗಳನ್ನು ಕೂಡಿಸಿ ಕನ್ನಡದಲ್ಲಿ ಆ ವಾಕ್ಯವನ್ನು ಬರೆದರೆ, ಆ ಒಂದೇ ಶಬ್ದದ ಸಂಪೂರ್ಣ ಅರ್ಥವು ಹೀಗಾಗುತ್ತಿತ್ತು:

"ಏನು, ಆ ನಮ್ಮ 'ಡೋಲಕಾರಿ'ಯು ಎಲ್ಲಿಗೆ ಹೋಗಿರುತ್ತಾನೆ? ಎಷ್ಟೋ ದಿನಗಳಿಂದ ಆತನು ಇತ್ತಕಡೆಗೆ ಬಂದಿರುವುದಿಲ್ಲವಲ್ಲ! ಅದೇಕೆ? ಅವನು ಬಂದಿದ್ದರೆ ಆ 'ಸೀಮೆಯ ನೀರು' ಆ ಮದ್ಯವನ್ನು ಸಾಕಷ್ಟು ಕುಡಿಸುತ್ತಿದ್ದನು! ಅದಷ್ಟೇ ಈಗ ಕೊರತೆಯಾಗಿದೆ"

ಅದಕ್ಕೆ ಒಬ್ಬ ಜಾವರಾನು ಎರಡು ಶಬ್ದ, ಹತ್ತೆಂಟು ಕೈಸನ್ನೆ ಮತ್ತು ಹಲವು ಪ್ರಕಾರದ ದೃಷ್ಟಿ ವಿಭ್ರಮಗಳನ್ನು ಮಾಡಿ ಯಾವ ಉತ್ತರವಿತ್ತನೋ ಅದರ ಭಾವಾರ್ಥವು ಹೀಗಿದ್ದಿತು:—"ಆ 'ಡೋಲಕಾರಿ'ಯು ಜಾವರಾಗಳ ಜಾತಿಯೊಳಗಿನ 'ಟಟೋಬಿ' ಎಂಬ ಹೆಸರಿನ ಯಾವ ಬೇರೊಂದು ತಂಡವು ಈ ಕಾನಿನೊಳಗೆ ಇನ್ನೊಂದು ವಿಭಾಗದಲ್ಲಿ ನೆಲಿಸಿರುವದೋ, ಅವರಲ್ಲಿಯೂ ಆತನ ಗುರ್ತುಪರಿಚಯವಿದ್ದದರಿಂದ ಆತನು ಅಲ್ಲಿಗೆ ಹೋಗಿರುತ್ತಾನೆ; ಮತ್ತು ತುಸ ದಿನಗಳಲ್ಲೆ ಮರಳಿ ಬರತಕ್ಕವನಿರುತ್ತಾನೆ."

ಆದರೆ ಆತನ ಸಲುವಾಗಿ ಇಂದಿನ ವಿಜಯ ನೃತ್ಯವೇನೂ ರಹಿತವಾಗುವಂತಿರಲಿಲ್ಲ! ಬೇಟೆ ಮತ್ತು ನೃತ್ಯಗಳು ಜಾವರಾಗಳ ಜೀವನದ ಶ್ವಾಸೋಚ್ಛ್ವಾಸನಗಳು! ಆದರಲ್ಲಿಯೂ ಆ ಇಂಗ್ಲಿಷರೊಡನಾದ ಗಡಿಬಿಡಿಯಲ್ಲಿ, ಕೆಲ ದಿನಗಳಿಂದ ನಾಚು ಎಂಬುದು ಆಗಿರಲೇ ಇಲ್ಲ. ಆ ಇಚ್ಛೆಯ ಉಪವಾಸದ ಕೇವಲ ಪಾರಣೆಯೇ ಇಂದಿದ್ದಿತು. ಅಂಥ ನೃತ್ಯಕ್ಕಾಗಿ ಉತ್ಸುಕರಾಗಿದ್ದ ಆ ಜಾವರಾಗಳ ಗಂಡಸರು, ಹೆಂಗಸರು, ಹುಡುಗರು ಇವರೆಲ್ಲರೂ ಆ ಪ್ರಶಸ್ತವಾದ ಮಳಲುಪ್ರದೇಶದೊಳಗಿನ ನೃತ್ಯಾಂಗಣದಲ್ಲಿ ಕ್ಷಣಮಾತ್ರದಲ್ಲಿ ಕಲೆತರು. ಕೆಲ ಕೆಲವರು ಗಟ್ಟಿಗಟ್ಟಿಯಾಗಿ ಪಡ್ಡುಹೊಡೆಯುತ್ತಿದ್ದರು. ಕೆಲವರು ಸುಮ್ಮನೆ ಒಂದೊಂದು ಹಾರಿಕೆಯನ್ನೂ, ಲಾಗಾಟವನ್ನೂ, ಹಾಕಹತ್ತಿದರು ಕೆಲವರು ಮೂರು ನಾಲ್ಕು ಶಬ್ದಗಳದೇ ಆದ ತಮ್ಮ ಹಾಡನ್ನು ಎಂಥದೋ ಏಕದಾರಿಯ ಸ್ವರದಲ್ಲಿ ಒಂದೇ ಸವನೆ ಅನ್ನುತ್ತ ಅತ್ತಿತ್ತ ಅಡ್ಡಾಡಹತ್ತಿದರು. ಬಹುತರ ಎಲ್ಲ ಸ್ತ್ರೀ ಪುರುಷರೂ ಕೇವಲ ಬರೀ ಬತ್ತಲೆಯಿದ್ದರು. ಕೆಲವು ಡೌಲಿನ ಸ್ತ್ರೀಪುರುಷರು ಯಾವುದೊಂದು ಸುಂದರ ಎಲೆಯನ್ನು ಟೊಂಕದ ಮುಂದೆ, ಆದರೆ ಕಿಬ್ಬೊಟ್ಟೆಯ ಕೆಳಗೆ ಹೆಚ್ಚು ಇಳಿಬೀಳದ ಹಾಗೆ ತೂಗಗಟ್ಟಿದ್ದರು. ಅದಾದರೂ ಶೃಂಗಾರವೆಂದು; ಆಚ್ಛಾದನವೆಂದಲ್ಲ! ಇಬ್ಬರು ಮೂವರು ನಾಲ್ವರು ಕೈಯಲ್ಲಿ ಕೈಯಿರಿಸಿ ಕುಣಿಕುಣಿಯುತ್ತ ನಾಲ್ವತ್ತೈವತ್ತು ಮಂದಿ ಸ್ತ್ರೀ-ಪುರುಷರು, ಕೈಗಳ ಸರಪಳಿಯಿಂದ ಸುತ್ತುಗಟ್ಟಿದಂಥ ಒಂದು ವರ್ತುಲವನ್ನು ಶಾಸ್ತ್ರೋಕ್ತರೀತಿಯಿಂದ ನಟ್ಟನಡುವೆ ಇರಿಸಿ ಆ ದುಂಡನ್ನ ಪ್ರದೇಶದ ಸುತ್ತಲೂ ಕುಣಿಯಹತ್ತಿದರು. ಆ ಏಕದಾರೀ ತುಂಡು ತುಣುಕು ತಾಳದ ಹಾಡನ್ನೇ ಒಂದೇಸವನೆ ಹಾಡುತ್ತ, ಆ ಪ್ರದೇಶದ ಸುತ್ತಲೂ ಸುತ್ತುತ್ತ ಆ ನಾಚು ಒಳ್ಳೇ ರಂಗಿಗೆ ಬಂದಿತು. ಅವರಲ್ಲಿಯ ಯಾವನೊಬ್ಬನು ದಣಿದು ಹಿಂಜರಿದ ಕೂಡಲೆ ಅಲ್ಲಿ ಮತ್ತೊಬ್ಬನು ಸೇರಿಕೊಂಡು ಆ ಸರಪಳಿಯನ್ನು ಅಖಂಡವಾಗಿರಿಸುತ್ತಿದ್ದನು. ದಣಿಯುವುದೊಂದು ವೈಯುಕ್ತಿಕ ಕುಂದೆಂದೆಣಿಸಲಾಗುತ್ತಿತ್ತು. ಸರಪಳಿಯನ್ನು ಹರಿಯಗೊಡುವುದು ಇಲ್ಲವೆ ಸುತ್ತುವವರ ಗತಿಯನ್ನು ಕಡಿಮೆಮಾಡುವದು ಇವು ಜಾತೀಯ ಕುಂದಾಗುವಂತಿದ್ದವು ಹಾಗಾಗುವುದೆಂದರೆ, ಅವರ ರಾಷ್ಟ್ರೀಯ ದೇವರಾದ ಭಗವಾನ ಪುಲಿಗಾದೇವನ ಉಪಹಾಸಕ್ಕೂ ಧಿಕ್ಕಾರಕ್ಕೂ ಪಾತ್ರವಾಗುವಂತಿತ್ತು; ಜಾವರಾಗಳ ಸನಾತನ ಧರ್ಮಕ್ಕೆ ವಿರುದ್ಧವಾದ ಪಾಪಾಚರಣೆಯು ಆದಾಗುತ್ತಿತ್ತು. ಕಡೆಗೆ ನೃತ್ಯ ಸಮಾಪ್ತದ ವೇಳೆಯು ಯಾವಾಗ ಬಂದಿತೋ, ಆಗಂತೂ ಆ ವರ್ತುಲದ ನೃತ್ಯೋನ್ಮಾದಕ್ಕೆ ಮೇರೆಯೇ ಉಳಿಯ

ಲಿಲ್ಲ. ಭರಭರನೆ ಮತ್ತು ಗರಗರನೆ ತಿರುಗುವ ಕುಣಿತದ ಆ ವರ್ತುಲದ ಮೇಲೆ ದೃಷ್ಟಿ ಕೂಡ ವೇಧಿಸದಾಯಿತು!

ಇಂದಿನ ಯುರೋಪದೊಳಗಿನ ಯಾವ ನಗ್ನಸಂಘದ ಸಭಾಸದರೂ ಆ ಕಾಲಕ್ಕೆ ಅಲ್ಲಿದ್ದಿದ್ದರೆ, ಆ ಜಾವರಾಗಳ ಆ ಸಮ್ಮಿಶ್ರ ಸ್ತ್ರೀ-ಪುರುಷರು ಆ ಉಲ್ಲಿಂಗ ನೃತ್ಯದಲ್ಲಿ ಹಾಗೆ ದೇಹಭಾನವಿರಹಿತರಾದುದನ್ನು ನೋಡುವಾಗ ಬಾಯಲ್ಲಿ ಬೊಟ್ಟು ಇರಿಸಿ 'ಭಲೆ! ಭಲೆ! ನಗ್ನ ನಾಚು ಮಾಡಬೇಕಾದರೆ, ಹೀಗೆಯೇ ಮಾಡಬೇಕು' ಎಂದೆನ್ನದಿರರು. ಮಾರ್ಕ್ಸನ ಶತಾವಧಿ ವರ್ಷಗಳ ಮುಂಚಿನಿಂದ ಜಾವರಾಗಳು ಹೇಗೆ ಸಮಾಜಸತ್ತಾಕರಿದ್ದರೋ, ಹಾಗೆಯೇ ಇಂದಿನ ಯುರೋಪಿಯನ್ ನಗ್ನಸಂಘದ ಅತ್ಯುಚ್ಚ ಮಹಾತ್ಮಾಕಾಂಕ್ಷೆಗಳನ್ನು ಶತಾವಧಿ ವರ್ಷಗಳ ಮುಂಚೆಯೇ ಅವರು ವ್ಯವಹರಿಸಿಬಿಟ್ಟಿರುತ್ತಾರೆ!

ಆ ನಾಚು ಮುಗಿಯುವಷ್ಟರಲ್ಲೇ ಒಬ್ಬ ಜಾವರಾನು ಗಟ್ಟಿಯಾಗಿ ಚಪ್ಪಾಳೆ ಬಡಿದು, ತನ್ನ ತೋರುಬೆರಳು ತೋರಿಸುತ್ತ "ಡೋಲಕಾಠೀ! ಡೋಲಕಾಠೀ!" ಎನ್ನಲು, ಎಲ್ಲರೂ ಅತ್ತ ಹೊರಳಿ ನೋಡುತ್ತಾರೆ, 'ಡೋಲಕಾಠಿ'ಯು ನಿಜವಾಗಿಯೂ ಬರುತ್ತಿದ್ದು, ಆತನ ಬಗಲಲ್ಲೂ ಕೈಯಲ್ಲೂ 'ಸೀಮೆಯ ನೀರಿ'ನ ಬಾಟ್ಲಿಗಳಿರುತ್ತವೆ! ಆಗ ಜಾವರಾಗಳ ಆನಂದಕ್ಕೆ ಪಾರಾವಾರವಿಲ್ಲದಂತಾಯಿತು!

ಜಾವರಾಗಳಿಗೆ ತಂಬಾಕವು ಪೂರ್ವದಿಂದಲೂ ಹೆಚ್ಚಾಗಿ ರುಚಿಸುತ್ತದೆ; ಮತ್ತು ಕಳೆದ ನಾಲ್ವತ್ತು-ಐವತ್ತು ವರ್ಷಗಳಿಂದ ಅವರಲ್ಲಿ 'ಸೀಮೆಯ ಮದ್ಯ'ದ ಸೇರ್ಪಡೆಯೂ ಅಲ್ಪಸ್ವಲ್ಪ ಆಗಿ ಹೋಗಿದೆ; ಅವರು ಸೆರೆಯ ವ್ಯಸನಕ್ಕೆ ಇನ್ನೂ ಪೂರ್ಣ ವಶವಾಗದಿರುವದು ಅದು ಅವರಿಗೆ ಸೇರುವದಿಲ್ಲೆಂತಲ್ಲ; ಆದರೆ ಅದು ಅವರಿಗೆ ಹೆಚ್ಚಾಗಿ ಸಿಗುವದಿಲ್ಲೆಂದು. ಆ 'ಡೋಲಕಾಠಿ'ಯು ಅವರಲ್ಲಿ ಇಂದಿಗೆ ಇಷ್ಟು ಪ್ರಿಯವಾದದ್ದು ಆತನ ಕೂಡಿ ನಡೆಯುವ ಸ್ವಭಾವದಷ್ಟೇ ಅಥವಾ ಅದಕ್ಕೂ ಹೆಚ್ಚು ಅಂಶದಿಂದ ಆತನ ಆ ಸೆರೆ ತರುವ ಹಾಗು ತಂಬಾಕ ಪೂರೈಯಿಸುವ ಗುಣದಿಂದಲೇ.

ಯಾವಾತನ ಹೆಸರನ್ನು ಆ ಜಾವರಾಗಳು ಹೀಗೆ 'ಡೋಲಕಾಠೀ' ಎಂಬ ಅರ್ಥದ ಜಾವರಾ ಶಬ್ದದಲ್ಲಿಟ್ಟಿದ್ದರೋ, ಆತನಾದರೂ ಪೂರ್ವದ ಒಬ್ಬ 'ಭಗೋಡಾ'ನೇ ಆಗಿದ್ದನು. ಇಂಗ್ಲಿಷರ ಕರಿನೀರಿನ ಜೀವಾವಧಿ ದಂಡಿತರೊಳಗಿನವನೇ ಆತನೊಬ್ಬನಾಗಿದ್ದು, ಎಷ್ಟೋ ವರ್ಷಗಳ ಹಿಂದೆ ಆತನು ಬಂದಿಗೃಹದೊಳಗಿಂದ ಓಡಿ ಹೋಗಿದ್ದನು; ಆದರೆ ಹಿಂದುಸ್ಥಾನಕ್ಕೆ ಮರಳುವ ಆತನ ಬೇತು ಒಮ್ಮೆ ಹುಸಿಯಾದದ್ದರಿಂದ ಮತ್ತು ಆ ಸಾಹಸದಲ್ಲಿ ಕೆಲ

ಮಂದಿ ಜಾವರಾಗಳಿಗೂ ಆತನಿಗೂ ಕಾನಿನೊಳಗೆ ಆ 'ಸೀಮೆಯ ನೀರ'ನ ಮುರುವತ್ತಿನಿಂದಲೇ ದೃಢಪರಿಚಯವಾದದ್ದರಿಂದ, ಆ ಜಾವರಾಗಳ ತಂಡದಲ್ಲಿ ಆತನಿಗೆ ಕಳೆದ ಮೂರು-ನಾಲ್ಕು ವರ್ಷಗಳಿಂದಲೂ ಆಶ್ರಯ ದೊರೆತಿತ್ತು. ಆತನು ಕದ್ದು-ಮುಚ್ಚಿ ಅಂಡಮಾನದೊಳಗಿನ ಇಂಗ್ಲಿಷರ ವಸಾಹತಿಗಳಿಗೆ ಹೋಗುತ್ತಿದ್ದನು. ಜಾವರಾಗಳು ಕೊಟ್ಟಂಥ ಹಲವು ಸುಂದರ ಹಾಗು ದೊಡ್ಡ ದೊಡ್ಡ ಶಂಖಗಳನ್ನು, ಎರಡೆರಡು ಫೂಟು ಉದ್ದಗಲುಳ್ಳ ತಟ್ಟೆ ತಾ-ಬಾಣದಂತಹ ಗುಲಾಬೀ ಬಣ್ಣದ ಶಿಂಪುಗಳನ್ನು ಆ ಬಂದಿಗಳ ವಸಾಹತಿಯೊಳಗಿನ ವ್ಯಾಪಾರಿಗಳಿಗೆ ಕಳವಿನಿಂದಲೇ ಮಾರಿ, ಬಂದ ಹಣವನ್ನೆಲ್ಲ ಗಂಟು ಕಟ್ಟಿಕೊಳ್ಳುವನು. ಉಳಿದ ಅತ್ಯಲ್ಪ ಹಣದಿಂದ ತುಸ ವಿಲಾಯತೀ ಮದ್ಯ ವನ್ನೂ ಸಾಕಷ್ಟು ತಂಬಾಕವನ್ನೂ ಕೊಂಡು, ಗುಪ್ತರೀತಿಯಿಂದ ಜಾವರಾ ಗಳಿಗೆ ತಂದು ಕೊಡುತ್ತಿದ್ದನು. ಅವರೊಳಗೆ ಆತನು ಕೇವಲ ಅವರ ಜಾತಿಯ ವನೇ ಆದ ಒಬ್ಬ ಆಪ್ತನಂತೆ ಕೂಡಿಬಿಟ್ಟಿದ್ದನು. ಆತನು ಅವರ ಭಾಷೆಯನ್ನೇ ಮಾತಾಡುತ್ತಿದ್ದನು; ಅವರ ಆಹಾರವನ್ನೇ ಸೇವಿಸುತ್ತಿದ್ದನು; ಅವರಂತೆಯೇ ಉಲ್ಲಿಂಗನಾಗಿರುತ್ತಿದ್ದನು; ಬಣ್ಣ ಬಣ್ಣದ ಮಣ್ಣಿನ ಪಟ್ಟೆಗಳನ್ನು ಮೈತುಂಬ ಎಳೆದುಕೊಳ್ಳುತ್ತಿದ್ದನು; ಅವರುಗಳ ಸುಖ-ದುಃಖದಲ್ಲಿ ಭಾಗವಹಿಸುತ್ತಿದ್ದನು. ಅವರ ಸ್ತ್ರೀ-ಪುರುಷರಲ್ಲಿ ಅವರು ಹೇಗೆ ಸಮ್ಮಿಶ್ರನಾಗಿ ಕುಣಿಯುತ್ತಿದ್ದರೋ, ಮಲಗುತ್ತಿದ್ದರೊ ಅವರಂತೆಯೇ ಕುಣಿಯುತ್ತಿದ್ದನು; ಮಲಗುತ್ತಿದ್ದನು!

ಆ ಜಾವರಾ ಜನರು ಆತನಿಗೆ ಪ್ರೀತಿಯಿಂದ 'ಡೋಲಕಾಠೀ' ಎಂಬ ಯಾವ ಅರ್ಥದ ಹೆಸರಿನಿಂದ ಸಂಬೋಧಿಸುತ್ತಿದ್ದರೋ, ಅದಾದರೂ ಆತನಿಗೆ ಚೆನ್ನಾಗಿ ಒಪ್ಪುವಂತೆಯೇ ಇತ್ತು. ಯಾಕಂದರೆ, ಆತನ ಟೊಂಕಕ್ಕೆ ಮುಟ್ಟ ಬಹುದಾಗಿದ್ದ ಹಾಗು ಬೂಟಿನ ಪಾಲೀಶ ಬಣ್ಣದಂತೆ ಕಪ್ಪುಬಣ್ಣದಿಂದ ಮಿಂಚುವ ಆ ಜಾವರಾಗಳಲ್ಲಿ ಆ ಸಾದಗಪ್ಪಿನ ಮತ್ತು ಆರು ಫೂಟ ಎತ್ತರದ ಹಿಂದೀ ಭಗೋಡನು ಎದ್ದು ನಿಂತ ಕೂಡಲೆ, ಆತನು ಡಾಂಬರ ಬಡೆ ದಿದ್ದ ನೌಕೆಗಳ ಮಧ್ಯದಲ್ಲಿ ನಿಲ್ಲಿಸಲ್ಪಡುವ ಯಾವದೊಂದು 'ಡೋಲಕಾಠೀ' ಅಂದರೆ 'ಸೀಡುಗಂಬ' ದಂತಿದ್ದನು! ಆ ಸಾಮ್ಯದಿಂದ ಜಾವರಾ ಜನರು ವಿನೋದದಿಂದ ಆತನನ್ನು ಆ ಹೆಸರಿನಿಂದಲೇ ಕರೆಯುಹತ್ತಿದ್ದರು

ಆಗಿನ ಸರತಿಯಲ್ಲಿ ಯಾರು ಆತನಿಗೆ ಶಂಖಗಳನ್ನೂ ಶಿಂಪುಗಳನ್ನೂ ಕೊಟ್ಟಿದ್ದರೋ, ಅವರವರಿಗೆ ಆತನು ನಾಲ್ಕು ನಾಲ್ಕುಗುಟುಕು ಸೆರೆ ಕುಡಿಸಿ ದನು. ಉಳಿದವರಿಗೆಲ್ಲ ಬೇಕಾದಷ್ಟು ತಂಬಾಕದ ಪುಡಿಯನ್ನು ಕೊಟ್ಟನು; ಮತ್ತು ಅರಸು-ಅರಸಿಯರಿಗಂತೂ ಮದ್ಯದ ಎರಡು ಇಡೀ ಪಾತ್ರೆಗಳನ್ನು

ಸೂಸುಮುಟೆ ತುಂಬಿ ಅರ್ಪಿಸಿದನು. ಆ ಖುಷಿಯಲ್ಲಿ ನಾನಕೋಬಿ ರಾಜನೂ ಫುಲೀ ರಾಣಿಯೂ 'ಡೋಲಕಾರಿ'ಯು ಒಂದೊಂದು ಕೈಹಿಡಿದು ಆತನನ್ನು ನಡುವೆ ಹಾಕಿಕೊಂಡು ಆತನ ಸನ್ಮಾನಾರ್ಥವಾಗಿ ತಮ್ಮ ಮೂವರದೇ ಒಂದು ಸ್ವತಂತ್ರವಾದ ನಗ್ನ ನಾಚನ್ನು ಪ್ರಾರಂಭಿಸಿದರು.

ಜಾವರಾಗಳ ಆ ವಿಜಯನೃತ್ಯದ ತಾಬೂತವು ಕಡೆಗೆ ಸಿಂಧುತಟಾಕದೊಳಗೆ 'ಸೀಮೆಯ ನೀರಿ'ನಿಂದ ಹೀಗ ಶಾಂತವಾಗುತ್ತಿರಲು, ಅತ್ತ ಹಿಂದಿನ ಪ್ರಕರ್ಣದಲ್ಲಿ ಹೇಳಿದಂತೆ ಆ ಗಾಯಗೊಂಡ ಜಾವರಾನೊಡನೆ ಕಂಟಕ-ರಫೀ ಉದ್ದಿನರು ಆ ರಾಜಧಾನಿಯಿಂದ ಒಂದೆರಡು ಮೈಲುಗಳ ಅಂತರದ ಮೇಲೆ ಬಂದು ನಿಂತುಕೊಂಡಿದ್ದರು. ಆ ಗಾಯಗೊಂಡ ಜಾವರಾನು 'ಡೋಲಕಾರೀ' ಎಂಬ ಹೆಸರಿನ 'ಭಗೋಡ'ನನ್ನು ತಮ್ಮ ಜಾವರಾಗಳು ಕಳೆದ ಎರಡು-ಮೂರು ವರ್ಷಗಳಿಂದ ಹೇಗೆ ಸಂಭಾಳಿಸಿರುವರು; ಮತ್ತು ಕಂಟಕ-ರಫೀ ಉದ್ದೀನರಾದರೂ ಅವರಿಗೆ ಆತನಂತೆಯೇ ಉಪಯುಕ್ತರಾದರೆ, ಅಂದರೆ ಮದ್ಯ ಹಾಗು ತಂಬಾಕಗಳನ್ನು ಪೂರೈಸಿದರೆ, ನಿಮಗೂ ಅವರಿಂದ ಎಲ್ಲ ಬಗೆಯಿಂದಲೂ ಸಹಾಯವೂ ಪ್ರೀತಿಯೂ ಹೇಗೆ ದೊರೆತೀತೆಂಬದನ್ನು ತಿಳಿಸಿದನು; ಆದರೆ ಅವರಿಗೆ ಮೊಟ್ಟಮೊದಲಿನ ಅಡಚಣೆಯೆಂದರೆ, ತಾವು ಇಂಗ್ಲಿಷರ ಹಿಂಬಾಲಕರಾಗಿದ್ದುದು! ಮತ್ತು ಜಾವರಾಗಳು ಆ ಕಾಲಕ್ಕೆ ಇಂಗ್ಲಿಷರಿಗೆ ಶತ್ರುಗಳಾದದ್ದು. ಈ ಕಾರಣಗಳ ಮೂಲಕ ಆ ಗಾಯಗೊಂಡ ಜಾವರಾನು ಅವರ ಜೊತೆಗೇ ಬರುವದನ್ನು ಕಂಡರೆ, ಆ ಜಾವರಾಗಳು ಆಕಸ್ಮಾತ್ತಾಗಿ ಆ ಜಾವರಾನ ಬಗ್ಗೆಯೂ ಸಂದೇಹಪಟ್ಟಾರು, ರೇಗಿಗೊಂಡಾರು, ವಿಷಾರಿ ಬಾಣಗಳ ಮಳೆಗರೆದಾರು! ಇತ್ಯಾದಿ ಆಪತ್ತಿಯನ್ನು ನಿವಾರಿಸುವ ಸಲುವಾಗಿ ಕೊನೆಗೆ ನಿಶ್ಚಿತವಾದುದೇನೆಂದರೆ, ಕಂಟಕ-ರಫೀ ಉದ್ದೀನರು ಆ ರಾತ್ರಿಯನ್ನು ಆ ಕಾನನದಲ್ಲಿಯೇ ಹುದುಗಿಕೊಂಡಿದ್ದು ಕಳೆಯ ಬೇಕು; ಆ ಗಾಯಗೊಂಡ ಜಾವರಾನೊಬ್ಬನೇ ಮುಂದೆ ಹೋಗಿ ತನ್ನ ತಂಡವನ್ನು ಸೇರಬೇಕು; ಅಂದರೆ ಆತನ ಸ್ವಾಗತವು ಬಹು ಮಟ್ಟಿಗೆ ಸಂಪೂರ್ಣ ನಿರಾತಂಕವಾಗಿ ಆದೀತು. ಆ ಮೇಲೆ ಆ ಗಾಯಗೊಂಡ ಜಾವರಾನು ಈ ಕಂಟಕ-ರಫೀ ಉದ್ದೀನರ ಶುಶ್ರೂಷೆಯಿಂದಲೇ ತಾನು ಹೇಗೆ ಬದುಕಿಕೊಂಡೆನು; ಆ ಇಬ್ಬರೂ ಇಂಗ್ಲಿಷರ ಸಂಗಡಿಗರಾಗಿರದೆ, ಸದ್ಯಕ್ಕೆ ಅವರೂ ಹೇಗೆ ಇಂಗ್ಲಿಷರ ವೈರಿಗಳಾಗಿರುತ್ತಾರೆ, 'ಭಗೋಡ'ಯರಾಗಿರುತ್ತಾರೆ; ಮತ್ತು ಜಾವರಾಗಳಿಗೆ ಬಗಬಗೆಯ ಮದ್ಯ, ತಂಬಾಕು, ಕಾಜಿನ ಮಣಿ, ಚಿತ್ರ-ವಿಚಿತ್ರ ಬಣ್ಣದ ರೇಶ್ಮೆವಸ್ತ್ರಗಳ ತುಂಡುಗಳು ಇತ್ಯಾದಿಗಳನ್ನು ದಿನಾಲು

ಪೂರ್ವೈಸತಕ್ಕವರಿರುತ್ತಾರೆ, ಎಂಬದನ್ನು ಯುಕ್ತಿಪ್ರಯುಕ್ತಿಗಳಿಂದ ತಮ್ಮವರಿಗೆ ತಿಳಹೇಳಬೇಕು; ಮತ್ತು ತನ್ನ ಜೀವ ಉಳಿಸಿದ ಉಪಕಾರಕ್ಕೆಂದು ಆ ಹೊಸ ಭಗೋಡೆಯರಿಗೆ ಆಶ್ರಯವೀಯುವ ಸಲುವಾಗಿ ಆತನು ತಮ್ಮ ಆ ತಂಡದ ಅರಸು-ಅರಸಿಯರ ಮನಸ್ಸು ಒಲಿಸಬೇಕು. ಅಷ್ಟು ಕೆಲಸವು ಸಾಧಿಸಿದೊಡನೆಯೇ ಆ ಜಾವರಾನು ಆ ಕಾಡಿಗೆ ಮರಳಿ ಬಂದು ಕಂಟಕ-ರಫೀಉದ್ದೀನರನ್ನು ತನ್ನ ಸಂಗಡ ಕರೆದೊಯ್ಯಬೇಕೆಂದು ಸಿರ್ಧರವಾಯಿತು.

ಈ ಬೇತಿಸಿಂದ ಆ ಜಾವರಾನು ವಿಶೇಷವಾಗಿ ನಿರ್ಭಯನಾದನು; ಮತ್ತು ಆ ಕೂಡಲೆ ಜಾವರಾಗಳ ರಾಜಧಾನಿಯ ಕಡೆಗೆ ಭರದಿಂದ ನಡೆದನು. ಕಂಟಕ-ರಫೀಉದ್ದೀನರು ಆ ಕಾಡಿನಲ್ಲೇ ಉಳಿದರು. ಅಂದು ಆ ಜಾವರಾಗಳು ಏನು ಮಾಡುವರೋ ಎಂಬ ಬಗ್ಗೆ ಅವರ ಎದೆಯು ನಡುಗುತ್ತಿತ್ತು. ಅದರಲ್ಲಿಯೂ ರಫೀಉದ್ದೀನನ ಮೂಲ ಆತತಾಯಿ ವೃತ್ತಿಯ ಬಗ್ಗೆ ಕಂಟಕನು ಯಾವಾಗಲೂ ಮನಸ್ಸಿನ ಒಳಗೊಳಗೇ ಸಾಶಂಕನೂ ಸಾವಧನೂ ಆಗಿದ್ದದರಿಂದ ಮತ್ತು ತಾವು ಇನ್ನು ಮಾಡಲೆಳಿಸಿರುವ ಪಾಲತಿಯ ಬಿಡುಗಡೆಯ ನಂತರ ಈ ರಕ್ಕಸನು ಮತ್ತೆ ಮೊದಲಿನ ಹಗೆತನವನ್ನು ಜಾಗೃತಪಡಿಸಿಕೊಂಡು ಏಕಾಂತದಲ್ಲ ತನ್ನ ಮೇಲೆಯೂ ಎಲ್ಲಿ ತಿರುಗಿ ಬೀಳುವನೋ ಎಂಬ ಬಗ್ಗೆ ಅಂಜಿಕೆಯು ಆತನ ಮನಸ್ಸಿನಲ್ಲಿ ಒಂದೇಸವನೆ ಹಣಿಕಿ ಹಾಕುತ್ತಿತ್ತಾದ್ದರಿಂದ ಕಂಟಕನು ಆ ತುಬಾಕಿಯನ್ನೂ ಗುಂಡು-ಕಾಡತೂಸುಗಳನ್ನೂ ಸ್ವಲ್ಪವೂ ಮರೆಯಂತೆ, ಆದರೆ ಬಹಿರಂಗದಲ್ಲ, ಸಹಜವಾಗಿ ತನ್ನ ವಶದಲ್ಲಿಯೇ ಕಾದಿಟ್ಟುಕೊಳ್ಳತೊಡಗಿದ್ದನು. ಅದರಲ್ಲಿಯೂ ಅವರಿಬ್ಬರ ಮುಂದೆ ಈಗ ಹೊಸದೊಂದು ಪ್ರಶ್ನೆಯು ಎದ್ದುನಿಂತಿತು. ಆ 'ಡೋಲಕಾತಿ'ಯು ಯಾರು? ಜಾವರಾಗಳ ಮೇಲೆ ಇಷ್ಟು ವರ್ಷಗಳ ವರೆಗೆ ತನ್ನ ವರ್ಚಸ್ಸನ್ನು ಸ್ಥಾಪಿಸಿರುವಂಥ ಆ ಹಿಂದೀ 'ಭಗೋಡಾ'ನು ಯಾವನೊಬ್ಬ ಕರ್ತೃತ್ವಶಾಲಿ ಮನುಷ್ಯನಿರಬಹುದೇ? ಆತನು ಆ ಜಾವರಾಗಳಲ್ಲಿಯೇ ಸ್ಥಿರವಾಗಿ ಉಳಿದುದು ಏಕೆ? ಆತನು ಓಡಿ ಹೋಗುವ ಸಾಧನಗಳನ್ನು ಕಲಹಾಕುತ್ತಿರುವನೋ ಹೇಗೆ? ಆತನು ಯಾವನಾದರೊಬ್ಬ ಕರ್ತೃತ್ವಶಾಲಿ ಪುರುಷನಿರುವನೆಂದರೆ ಆದರೆ ಅವನು ತಮಗೆ ಉಪಯುಕ್ತ ಮಿತ್ರನಾಗುವನು; ಇಲ್ಲದಿದ್ದರೆ ಉಪದ್ರವೀ ಶತ್ರುವು. ಹೀಗೆ ಯಾವ ಸಂಬಂಧ ಹೊಂದುವನೋ ನೋಡಬೇಕು.

ಮತ್ತು ಎಲ್ಲಕ್ಕೂ ಅಗತ್ಯದ ವಿವಂಚನೆಯೆಂದರೆ, ಆ ಗಾಯಗೊಂಡ ಜಾವರಾನನ್ನು ಕಾಣುತ್ತಲೆ ನಾನಕೋಬಿ ರಾಜನು ಏನು ಅನ್ನುವನು? ಏನು ಮಾಡುವನು? ಎಂಬದಾಗಿತ್ತು.

೧೯ನೇ ಪ್ರಕರಣ

ಜಾವರಾಗಳ ಆಂದಿನ ವಿಜಯ ನೃತ್ಯವು ಪೂರೈಸಿದ ಬಳಿಕ ರವಿಯು ಅತ್ತ ಅಸ್ತಾಚಲದ ಕಡೆಗೆ ನಡೆದಿರಲು, ಇತ್ತ ಜಾವರಾಗಳು ತಮ್ಮ ರಾಜಧಾನಿಯ ಕಡೆಗೆ ನಡೆಯಹತ್ತಿದರು. ನಾನಕೋಬಿರಾಜನು ಆ ಹೋರಿನೊಳಗಿನ ತಮ್ಮ ಅರಮನೆಗೆ ಹೋಗದೆ, ಆ ಪಟಾಂಗಣದೊಳಗಿನ ಆತನ ಆ ವಿಲಾಸ ಮಂದಿರದ ಕಡೆಗೆ ನಡೆದನು. ಆ ವಿಲಾಸಮಂದಿರದಲ್ಲಿ ರಾಜಶಯ್ಯೆಗಾಗಿ ಒಂದು ವಿಸ್ತೃತವಾದ ಸಾಧಾರಣ ನುಣುಪು ಕಲ್ಲಿದ್ದಿತು. ಅದಕ್ಕೆ ಛತ್ತೆಂದರೆ ಆಕಾಶವೇ. ಮೂರು ಕಡೆಯ ಗೋಡೆಗಳೆಂದರೆ, ದಿಕ್ಕುಗಳು; ನಾಲ್ಕನೇ ಪಕ್ಕದ ಗೋಡೆಯೆಂದರೆ ಅನುವಮುಟ್ಟಿಗೆ ಗಿಡಗಳಿಗೆ ಕಟ್ಟಿದ್ದ ಆ ಬಿದರಿನ ತಟ್ಟಿಯು. ಅದೇ ಆ ರಾಜಶಯ್ಯೆಯ ಮೇಲಿನ ಲೋಡು ಆಗಿತ್ತು! ನಾನಕೋಬಿ ರಾಜನು ಆ ತಟ್ಟಿಗೆ ಆತು ಆ ಶಿಲಾಶಯ್ಯೆಯ ಮೇಲೆ ಕುಳಿತನು. ಆತನು "ಘುಲೀಡಾ!" ಎಂದು ಒಮ್ಮೆ ಪ್ರೇಮದಿಂದ ಕರೆದೊಡನೆಯೇ ಘುಲೀರಾಣಿಯು ನಗು ನಗುತ್ತಲೆ ಅಲ್ಲಿಗೆ ಬಂದಳು. ಆಗ ಆತನ ಕಣ್ಣೊಳಗೆ ಕಾಮುಕ ಲಂಪಟತೆಯೂ ಹೃದಯದಲ್ಲಿ ಆ 'ಸೀಮೆಯ ನೀರೂ' ಸಳಸಳ ಎನ್ನುತ್ತಿದ್ದವು.

ಆ ಕಾಲಕ್ಕೆ ಹೊರಪಾಗಿದ್ದಿತು. ಸೂರ್ಯಾಸ್ತ ಸಮಯದ ಚಿತ್ರ-ವಿಚಿತ್ರ ಬಣ್ಣದ ಎಳೆಕಿರಣಗಳು ಅಲ್ಲಾಡುವ-ಹೊಯ್ದಾಡುವ ಗಿಡಗಳೊಳಗಿಂದ ಎಲ್ಲೆಲ್ಲಿಯೂ ಹರಡಿದ್ದವು. ಪ್ರಣಯದಚ್ಚಿದ ಹಾವ-ಭಾವಗಳನ್ನು ಮಾಡುತ್ತ ಘುಲೀರಾಣಿಯು ಒಂದು ಕೈಯೊಳಗೆ ಹಿಡಿದಿದ್ದ ಒಂದು ಸಾಣೆ ಹಚ್ಚಿದ್ದ ಕಾಜಿನ ತುಂಡನ್ನು ಮುಂದೆ ಮಾಡಿ, ಎರಡನೇ ಕೈಯಿಂದ ಯಾವುದೊಂದು ಬ್ರಶ್ಯದಷ್ಟು ಕೂದಲು ಬೆಳೆದಿದ್ದ ತನ್ನ ತಲೆಯನ್ನು ತೋರಿಸಿ, ಬಿನ್ನಯಿಸಿದಳೇನಂದರೆ "ಬೋಳಿಸಬೇಕಲ್ಲ!"

ಆಕೆಯ ಆ ಅಭಿನಯದ್ದು ಹಾಗು ಶಬ್ದದ್ದು ಕೂಡಿ ಒಂದೇ ಅರ್ಥವಿದ್ದಿತೇನಂದರೆ 'ನನ್ನ ಕೂದಲುಗಳು ತುಸ ಬೆಳೆದಿರುವದರಿಂದ ಅಸಹ್ಯಾಳಾದ ಈ ನನ್ನ ತಲೆಯನ್ನು ಈ ಕಾಜಿನ ತುಂಡಿನ ಕತ್ತಿಯಿಂದ ನುಣುಪಾಗುವಂತೆ ಕ್ಷೌರಮಾಡು. ಪ್ರಿಯಕರಾ, ನಿನ್ನ ಸ್ವಂತ ಕೈಯಿಂದಲೇ ನನ್ನ ತಲೆ ಬೋಳಿಸಿ ಬಿಡು!"

ನಮ್ಮ ದೇಶದಲ್ಲಿ ಪ್ರಿಯ ಪತ್ನಿಯ ಕೇಶ ಕಲಾಪುಗಳಿಗೆ ಯಾವನೊಬ್ಬ ವಿಲಾಸೀ ಪತಿಯು ಸ್ವಹಸ್ತದಿಂದ ಜಡೆ ಹೆಣೆಯುವದು ಹೇಗೆ ಪ್ರಣಯದಚ್ಚೆಯಾಗುವದೋ, ಎತ್ತು ತನ್ನ ಕೋಡಿನಿಂದ ಆಕಳಿಗೆ ತುರಿಸುವಾಗ

ವೆ ನೆಕ್ಕುವಾಗ ಹೇಗೆ ಪ್ರೇಮಾಕಿಂತವಾಗಿರುತ್ತದೋ, ಅದರಂತೆಯೇ ತಿ ಹೆಚ್ಚಾದಾಗ ತನ್ನ ಪ್ರಿಯಕರಣಿಯ ತಲೆಯ ಮೇಲೆ ಬೆಳೆಯುತ್ತಿದ್ದ ದಲುಗಳನ್ನು ಹದವಾಗಿ 'ಬೋಳಿಸಿ,' ಅವಳ ತಲೆಯನ್ನು ನುಣುಪುಗೊಳಿ ವುದು ಇದು ಜಾವರಾ ಜನರೊಳಗಿನ ಪ್ರೇಮದೊಂದು ಅಚ್ಛೆಯಾಗಿರು ದೆ. ಅವರುಗಳ ರತಿವಿಲಾಸದೊಳಗಿನದೊಂದು ಶೃಂಗಾರವಾಗಿರುತ್ತದೆ. ವೆಯ ಕೇಶವಪನವು ನಮ್ಮ ಧರ್ಮಶಾಸ್ತ್ರಗಳ ಮೇರೆಗೆ ಎಷ್ಟು ಅನಿಂ ವೋ, ಅಲ್ಲಲ್ಲ. ಅದು ಹೇಗೆ ಅನುಲ್ಲಂಘ್ಯವಾದ ಧರ್ಮಸಂಸ್ಕಾರವೋ ಅದ ತೆಯೇ ಸಧವೆಯ(ಗಂಡುಳ್ಳವಳ)ಕೇಶವಪನವು ಆ ಜಾವರಾಗಳಲ್ಲಿ ಅವರ ರ್ಮ ಶಾಸ್ತ್ರದಂತೆಯೇ ಒಂದು ಸೌಭಾಗ್ಯ ಲಕ್ಷಣವೂ ಒಂದು ಧರ್ಮಸಂ ರವೂ ಎಂದು ತಿಳಿಯಲಾಗುತ್ತದೆ!

ತನ್ನ ಪ್ರಿಯ ಪತ್ನಿಯ ಆ ಬಯಕೆಯನ್ನು ಪೂರೈಸುವದಕ್ಕೆಂದು ನಾನ ೋಬಿ ರಾಜನು ಕೂಡಲೆ ಅವಳನ್ನು ಹತ್ತಿರ ಎಳೆದುಕೊಂಡನು. ಆ ಕಲ್ಲ ಸಿಗೆಯ ಮೇಲೆ ಅವಳನ್ನು ಮಲಗಿಸಿ, ಅವಳ ತಲೆಯನ್ನು ತನ್ನ ತೊಡೆಯ ಲಿಟ್ಟು ಆ ಕಾಜಿನ ಹದನಾದ ತುಂಡಿನಿಂದ ಅಚ್ಚೆಯಿಂದಲೂ ಹದವಾಗಿ ಆಕೆಯ ತಲೆಯನ್ನು ಹೊಂದು ಹಿಡಿದು ಬೋಳಿಸತೊಡಗಿದನು. ಆ ರ ಕರ್ಮವು ಮುಗಿದ ಬಳಿಕ ಆಕೆಯು ಯಾವಾಗ ಎದ್ದು ಕುಳಿತಳೋ, ಆಕೆಯ ತಾಮ್ರದ ತಂಬಿಗೆಯಂತಹ ನುಣುಪಾಗಿ ಹೊಳೆಯುವ ತಲೆ ರುಡೆಯಿಂದ ಹೆಚ್ಚಾಗಿಯೇ ಶೋಭಿಸುವ ಆ ವಿಕೇಶಿಯಾದ ಫುಲೀ ಣಿಯು ಒಳ್ಳೇ ಆಕರ್ಷಕವಾಗಿ ತೋರಹತ್ತಿದ್ದರಿಂದ, ಆತನು ಪ್ರೇಮದಿಂದ ಳನ್ನೊಮ್ಮೆ ಕ್ಷಣದಲ್ಲಿಯೇ ಚುಂಬಿಸಿಬಿಟ್ಟನು; ಮತ್ತು ತಾನು ಶೃಂಗಾರ ಅವಳ ಬಯಕೆಯನ್ನೆಂತು ಪೂರೈಸಿದೆನೋ ಅದರಂತೆಯೇ ಅವಳಾದರೂ 'ಇಚ್ಛೆಯನ್ನು ಈಡೇರಿಸಬೇಕೆಂದು ಜಾವರಾಗಳ ರೀತಿಯಂತೆ ಅಭಿ ರುದ ಭಾಷೆಯಲ್ಲಿ ಬಿನ್ನಯಿಸುತ್ತ, ಆ ಕಾಜಿನ ತುಂಡನ್ನು ಒಂದು ಕೈ ಂದ ಮುಂದೆ ಮಾಡಿ, ಎರಡನೇ ಕೈಯಿಂದ ತನ್ನ ತಲೆಯನ್ನು ತೋರಿಸಿ ನಕೋಬಿ ರಾಜನು ತನ್ನ ರಾಣಿಯನ್ನು ಪ್ರಾರ್ಥಿಸುತ್ತ: "ಹೂಂ, ಳಿಸು!" ಎಂದಂದನು.

ಆಗ ಫುಲೀ ರಾಣಿಯು ನಾನಕೋಬಿಯನ್ನು ಅದೇ ಕಲ್ಲಮಂಚದ ೇಲೆ ಮಲಗಿಸಿದಳು ಆತನ ತಲೆಯನ್ನು ತನ್ನ ವಸ್ತ್ರರಹಿತವಾದ ತೊಡೆಯ ೇಲಿಟ್ಟುಕೊಂಡು ಗಾಜಿನ ಬೇರೊಂದು ಹದನಾದ ತುಂಡಿನಿಂದ ಆ ಜಾವರಾ ಂದರಿಯು ತನ್ನ ಗಂಡನ ತಲೆ ಬೋಳಿಸತೊಡಗಿದಳು. ಇಷ್ಟರಲ್ಲಿ ನಾನ

ಕೋಬಿ ರಾಜನ ತಂಗಿಯೂ ಆಕೆಯ ಒಬ್ಬಿಬ್ಬ ಮಕ್ಕಳೂ ಜಲಿಗೆ ಬಂದರು. ಹೊಸಬಿಸಿಯಾದ ಒಂದೆರಡು ಬುಟ್ಟಿ ಸಜೀವ ಸಮುದ್ರ ಸಿಂಪುಗಳನ್ನು ಅವರು ತಮ್ಮ ಉಪಹಾರಕ್ಕೆಂದು ತಮ್ಮೊಡನೆ ತಂದಿದ್ದರು. ಆ ಸಿಂಪುಗಳನ್ನು ಬಿಚ್ಚಿ ಒಳಗಿನ ಹಲವು ಬಗೆಯ ಪ್ರಾಣಿಗಳನ್ನು ಅವರು ಬಟಗಡ್ಲೆಯೊಳಗಿನ ಬೀಜಗಳನ್ನು ನಾವು ಸುಲಿಸುಲಿದು ತಿನ್ನುವಂತೆ ತಿನ್ನುತ್ತ, ಆ ಬರಿಯ ಸಿಂಪುಗಳನ್ನು ಆ ಪುರಾತನವ ಖಂಡಶಿಲೆಯ ಗರ್ತದಲ್ಲಿ ಚೆಲ್ಲುತ್ತ ಅವರೆಲ್ಲರೂ ಹರಟೆ ಹೊಡೆಯ ಹತ್ತಿದರು.

ಇತ್ತ ಹೀಗೆ ನಡೆದಿರಲು, ಅತ್ತ ಆ ಗಾಯಗೊಂಡಿದ್ದ ಜಾವರಾನು ಕಂಟಕ-ರಹಿತರಾದ್ದೀನರನ್ನು ಆ ಕಾಸಿನೊಳಗೇ ಹಿಂದೆ ಬಿಟ್ಟು, ಈ ರಾಜಧಾನಿ ಕಡೆಗೆ ಬರಲು ಹೊರಟಿದ್ದವನು ತೀರ ಸಮೀಪಕ್ಕೆ ಬಂದನು. ಆತನು ದೃಷ್ಟಿಗೆ ಬೀಳುತ್ತಲೇ "ಬಂದನು! ಬಂದನು! ಊಽಽಽ ಊಽಽಽ" ಎಂದು ಅಕಸ್ಮಾತ್ತಾಗಿ ಕಿರಚಿ, ನಾನಕೋಬಿಯ ಆ ಭಗಿನಿಯು ಕುಣಿದಾಡಲಿಕ್ಕೇ ಪ್ರಾರಂಭಿಸಿದಳು. ಅವಳು ದೂರದ ಗಿಡಗಳ ಕಡೆಗೆ ಬೊಟ್ಟುತೋರಿಸಿ, ಅಲ್ಲಿದ್ದವರೆಲ್ಲರ ಲಕ್ಷ್ಯವನ್ನೂ ಅತ್ತಕಡೆಗೆ ಸೆಳೆದಿಳು. ನಾನಕೋಬಿಯು ಅತ್ತ ನೋಡಿದವನೇ, ತಮ್ಮ ಕೈಬಿಟ್ಟು ಹೋಗಿದ್ದ ಆ ಗಾಯಗೊಂಡ ತನ್ನ ಭಗಿನೀಪತಿಯು ತುಸ ಕುಂಟುತ್ತಲೇ, ಆದರೆ ಒಟ್ಟಿನಲ್ಲಿ ತೀರ ಸಿಕ್ತನಾಯನೂ ಸಿಕ್ಷಿಂತನೂ ಆಗಿ ತಮ್ಮ ರಾಜಧಾನಿಯ ಕಡೆಗೆ ಬರುತ್ತಿರುವದನ್ನು ಗುರ್ತಿಸಿದನು. ಆ ಕೂಡಲೆ ಆನಂದದಿಂದ ಚಪ್ಪಾಳೆ ಬಡೆದು, ಅವರೆಲ್ಲರೂ ಎದ್ದು ನಿಂತರು; ಹಾಗು ಬಗೆಬಗೆಯ ಕೈಸನ್ನೆ ಮಾಡುತ್ತ, ವಿಚಿತ್ರವಾಗಿ ಕಿರಚುತ್ತ "ಬಾ, ಬಾ, ಬೇಗನೆ ಹೊರಟು ಬಾ! ನಿನಗೆ ಸುಸ್ವಾಗತವು!" ಎಂಬ ಭಾವವನ್ನು ವ್ಯಕ್ತಪಡಿಸಹತ್ತಿದರು.

ತನ್ನ ಬಗ್ಗೆ ತನ್ನ ಜ್ಞಾತಿಬಾಂಧವರಲ್ಲಿ ಯಾವ ಬಗೆಯ ಕಿಲ್ಮಿಷವೂ ಉಂಟಾಗಿರುವದಿಲ್ಲವೆಂಬವನ್ನರಿತು ಹರ್ಷಗೊಂಡ ಆ ಜಾವರಾನು ಸಂತೋಷದಿಂದಲೂ ಉತ್ಸುಕತೆಯಿಂದಲೂ ಓಡುತ್ತಲೆ ಮುಂದೆ ಹೋದನು; ಆದರೆ ಆ ತನ್ನ ಬಂಧು-ಬಾಂಧವರ ಬಳಿಗೆ ಬಂದ ಕೂಡಲೆ ಸುಮ್ಮನೆ ನಿಂತುಕೊಂಡನು. ನಾನಕೋಬಿ ರಾಜನೂ ಫುಲೀ ರಾಣಿಯೂ ಆ ಗಾಯಗೊಂಡಿದ್ದ ಜಾವರಾನ ಹೆಂಡತಿ-ಮಕ್ಕಳೂ ಸೆಟೆದು ನಿಂತು ಆತನ ಕಡೆಗೆ ದಿಟ್ಟಿಸಿ ನೋಡ ಹತ್ತಿದರು. ಮೆಲ್ಲಮೆಲ್ಲನೆ ಅವರು ಆತನನ್ನು ಕಿಡಿಗಣ್ಣಿನಿಂದ ನೋಡಲಾರಂಭಿಸಿದರು. ಆತನೂ ಸೆಟೆದು ನಿಂತುಕೊಂಡನು; ಮತ್ತು ಸಿಟ್ಟಿನಿಂದ ನೋಡುವವರ ಹಾಗೆ ಅವರನ್ನು ಕಣ್ಣುಕಿಕ್ಕರಿಸಿ ನೋಡತೊಡಗಿದನು.

ಆ ಮೇಲೆ ಉಭಯ ಪಕ್ಷದವರೂ ಒಬ್ಬರ ಹಿಂದೊಬ್ಬರು ಖೇಕರಿಸಿ ಖೇಕರಿಸಿ ಕೆಮ್ಮುಹತ್ತಿದರು. ಐದಾರುಸಾರೆ ಹೀಗೆ ಖೇಕರಿಸಿ ಕೆಮ್ಮುವ ವಿಧಿಯು ಸಂದಿದ ಬಳಿಕ ಅವರು ಮತ್ತೆ ನಿಶ್ಚಲರಾಗಿ ಪರಸ್ಪರರ ಕಡೆಗೆ ದಿಟ್ಟಿಸಿ ನೋಡುತ್ತ ನಿಂತುಕೊಂಡರು.

ಯಾಕಂದರೆ, ಜಾವರಾಗಳೊಳಗಿನ ಶಿಷ್ಟಾಚಾರದ ರೀತಿಯೇ, ಅಂದರೆ ನಮಸ್ಕಾರ-ಚಮತ್ಕಾರಗಳ ಪದ್ಧತಿಯೇ ಅದಾಗಿರುತ್ತದೆ. ಯಾವ ವ್ಯಕ್ತಿಯೇ ಆಗಲಿ, ಆ ಮೇಲೆ ಅವನು ಹೊಟ್ಟೆಯ ಮಗನೇ ಏಕಾಗಲೊಲ್ಲನು, ನಾಲ್ಕು ದಿನ ದೂರವಿದ್ದು ತಿರುಗಿ ಬಂದನೆಂದರೆ, ಆತನನ್ನು ಭೇಟಿಯಾಗುವ ಮೊದಲು ಅವರು ಹೀಗೆಯೇ ನಮಸ್ಕಾರ-ಚಮತ್ಕಾರದ ವಿಧಿಯನ್ನಾಚರಿಸಬೇಕಾಗುತ್ತದೆ.

ಆ ರೂಢಿಯ ಮೂಲವು ಜಾವರಾಗಳ ಸ್ಮೃತಿಕ್ಷೀಣತೆಯಲ್ಲೇ ಇರಬೇಕು. ಅವರಿಗೆ ನೆನಪೆಂಬದು ಹೆಚ್ಚಾಗಿ ಇರುವುದೇ ಇಲ್ಲ. ಅದರಿಂದ ಮನುಷ್ಯನು ಕೆಲದಿನ ಇಲ್ಲದಂತಾಗಿ ಹಿಂದಿರುಗಿದನೆಂದರೆ, ಆತನ ಗುರ್ತು-ಪರಿಚಯಗಳು ಪುನಃ ಖಾತ್ರಿಯಾಗುವವರೆಗೆ ಆತನನ್ನು ಚೆನ್ನಾಗಿ ನಿರೀಕ್ಷಿಸಿ-ಪರೀಕ್ಷಿಸಿ ನೋಡಿಕೊಳ್ಳಬೇಕಾಗುತ್ತದೆ ಖೇಕರಿಸಿ-ಕೆಮ್ಮಿ ಆತನು ಶತ್ರುವೇ ಮಿತ್ರನೇ ಎಂಬದನ್ನು ವಿಚಾರಪೂರ್ವಕವಾಗಿ ನಿರ್ಧರಿಸಿ, ತಂಡದಲ್ಲಿ ಮತ್ತೆ ಸೇರಗೊಡುವ ಸಾವಧಾನತೆಯ ಒಂದು ಕರ್ತವ್ಯವಾಗಿರುತ್ತದೆ. ಆ ಮೊಟ್ಟಮೊದಲಿನ ಆವಶ್ಯಕತೆಯದೇ ಮುಂದೆ ಮುಂದೆ ಶಿಷ್ಟಾಚಾರದ ರೂಢಿಯಾಯಿತು; ಮತ್ತು ಗುರ್ತುಹತ್ತಿದ್ದರೂ ಆಗಂತುಕನೊಡನೆ ಹಾಗೆ ನಮಸ್ಕಾರ-ಚಮತ್ಕಾರ ಮಾಡದ ಹೊರತು ಮಾತನಾಡದಿರುವ ಪದ್ಧತಿಯೇ ಅಲ್ಲಿ ಬಿದ್ದಿರಬೇಕು.

ಆ ಶಿಷ್ಟಾಚಾರವು ಮುಗಿದೊಡನೆಯೇ ಅವರ ಆ ಕೆಕ್ಕರಿಸಿದ್ದ ಕಣ್ಣಾಗಳೊಳಗಿಂದಲೇ ಆನಂದಬಾಷ್ಪಗಳು ಬಳಬಳನೆ ಸುರಿಯಹತ್ತಿದವು; ಹಾಗು ತಮ್ಮ ಆ ಇಲ್ಲದಂತಾಗಿದ್ದ ವೀರಬಂಧುವಿನ ಕೊರಳಿಗೆ ಆತನ ಬಾಂಧವರ ಹಾಗು ಪತಿಯ ಕೊರಳಿಗೆ ಪತ್ನಿಯ ಪ್ರೇಮಲ ಆಲಿಂಗನವು ಆಯಿತು!

ತನ್ನ ಬಿಡುಗಡೆಯ ಅದ್ಭುತ ವೃತ್ತಾಂತವನ್ನು ಹೇಳುತ್ತಿರುವಾಗ ಆ ಪುನರಾಗತ ಜಾವರಾನು ಕಂಟಕ ಮತ್ತು ರಫೀಉದ್ದೀನರು ತನ್ನ ಮೇಲೆ ಮಾಡಿದ್ದ ಉಪಕಾರಗಳನ್ನು ಅಷ್ಟು ಹೆಚ್ಚಾಗಿ ಉಲ್ಲೇಖಿಸಿದುದಲ್ಲದೆ, ಕೊನೆಗೆ ಆ ಈರ್ವರು ಭಗೋಡೆಯರಿಗೂ ಜಾವರಾಗಳು ಆಶ್ರಯ ಕೊಡಬೇಕು; ಅವರು ಆತನಿಗೆ ಮಾಡಿದ್ದ ಜೀವದಾನಕ್ಕೆ ಪ್ರತ್ಯುಪಕಾರ ಮಾಡಬೇಕು ಎಂದು ಆಗ ಅಲ್ಲಿ ನೆರೆದಿದ್ದ ತಮ್ಮ ಎಲ್ಲ ಜನರನ್ನು ಕುರಿತು ಕಳಕಳಿಯಿಂದ ಬಿನ್ನಯಿಸಿದನು; ಮತ್ತು ಆ ನೂತನ ಭಗೋಡೆಯರಿಂದ ತಮಗೆ ಬೇಕಾದಷ್ಟು

ತಂಬಾಕವೂ ಮದ್ಯವೂ ದೊರೆಯುವ ಆಮಿಷವನ್ನು ತೋರಿಸಿದನು. ಆಗ ಆತನ ಮಾತಿಗೆ ತಲೆಬಾಗಬಂತಹ ಜಾವರಾನು ಅಲ್ಲಿ ಯಾರೂ ಕಾಣಲಿಲ್ಲ! ಆದರೂ ಕೂಡ ಕೊಂಚ ವಿಚಾರ ಮಾಡುವ, ಒಬ್ಬ ಮುಂದಾಳುವಿಗೆ ತಕ್ಕಂತಹ ಮುಖಮುದ್ರೆಯನ್ನು ಮಾಡಿ ನಾನಕೋಬಿ ರಾಜನು ಕೆಲಕ್ಷಣಗಳವರೆಗೆ ಸುಮ್ಮನಿದ್ದು, ಬಳಿಕ ಕೈ ಮತ್ತು ಕಣ್ಣು ಸನ್ನೆಗಳಿಂದ ತನ್ನ ಹೇಳಿಕೆಯಬಹು ಭಾಗವನ್ನು ವ್ಯಕ್ತಪಡಿಸುತ್ತ, ಕಡೆಗೆ ಒಂದೇ ಶಬ್ದವನ್ನು ಚ್ಚರಿಸಿದನೇನಂದರೆ: "ಡೋಲಕಾರೀ!"

"ಇಂಥ 'ಭಗೋಡೆ'ಯರ ನಿಜವಾದ ಪರೀಕ್ಷೆಯನ್ನು ನಮ್ಮ ಡೋಲಕಾರಿಯೇ ಮಾಡಬಲ್ಲನು. ನಮ್ಮ ಕಡೆಯವನೆಂದು ಆತನನ್ನೇ ಅವರಿದ್ದಲ್ಲಿಗೆ ಕಳಿಸಿರಿ ಕಂಟಕ-ರಫೀಉದ್ದೀನರನ್ನು ಡೋಲಕಾರಿಯು ಆಶ್ರಯಕ್ಕೆ ತಕ್ಕವರೆಂದು ನಿರ್ಧರಿಸಿದರೆ, ನಾವು ಅವರಿಗೆ ಆಶ್ರಯ ಕೊಡಬಹುದು" ಎಂಬ ಎಲ್ಲ ಅರ್ಥವೂ ಆದೊಂದೇ ಶಬ್ದದಲ್ಲಿ ಅಡಗಿದ್ದಿತು.

ಆ ಪುನರಾಗತ ಜಾವರಾನು ತಮ್ಮ ಜಾವರಾಗಳೊಡನೆ ಅತ್ತ ಹಾಗೆ ಆ ಸಂಧ್ಯಾಕಾಲದಲ್ಲಿ ಮಾತನಾಡುತ್ತಿರಲು, ಇತ್ತ ಕಂಟಕ-ರಫೀ ಉದ್ದೀನರಿಬ್ಬರೂ ಸೂರ್ಯನು ಅಸ್ತಂಗಂತನಾಗುವ ಮೊದಲೇ ಕೆಲ ಬೇಟೆ ಮಾಡಿ, ಮಾಂಸವನ್ನು ಬೆಂಕಿಯಲ್ಲಿ ಸಾಧಾರಣವಾಗಿ ಸುಟ್ಟು ತಿಂದು, ರಾತ್ರಿಯಾಗುತ್ತಲೆ ಆ ಭಯಾನಕ ಕಾಡಿನಲ್ಲಿ ತಂತಮ್ಮ ಹಾಸಿಗೆಗಳನ್ನು ಹಾಸುವ ಸಲುವಾಗಿ ಆ ಜವುಳ ಹಾಗು ಕೆಸರಿನ ಅರಣ್ಯದೊಳಗೆ ಮಂಚಗಳನ್ನು ಶೋಧಿಸತೊಡಗಿದರು. ಅಲ್ಲಿಯ ಮಂಚಗಳೆಂದರೆ, ಮಂಚದ ಮೂಲ ಪ್ರಕೃತಿಯಾದ ಗಿಡವೇ ಸರಿ! ಗಿಡಗಳನ್ನು ನೋಡು ನೋಡುತ್ತಿರಲಿಕ್ಕೆ ಎರಡು ದೊಡ್ಡ ದೊಡ್ಡ ಹರಿಗಳು ಎತ್ತರದಲ್ಲಿ ಯಾವ ಭಾಗದೊಳಗೆ ಒಂದೊಕ್ಕೊಂದು ಹೊಂದಿಕೊಂಡಿರುವವೆಂದು ತಿಳಿಯಿತೋ, ಅಲ್ಲಿ ಅಂಥ ಆ ಬೇರೆ ಬೇರೆ ಗಿಡಗಳ ಮೇಲೆ ಅವರಿಬ್ಬರೂ ಏರಿದರು; ಹಾಗು ಆ ಗಿಡಗಳ ಹರಿಗಳಿಂದಾದ ಆ ಅಟ್ಟಗಳ ಮೇಲೆ ಮಲಗಿದರು! ಗಾಢವಾದ ನಿದ್ರೆಯಲ್ಲಿ ಅಲ್ಲಾಡಿ ಕೆಳಗೆ ಬೀಳುವ ಅಂಜಿಕೆಯು ವಿಶೇಷವಾಗಿ ಉಳಿಯಬಾರದೆಂದು, ಅವರು ತಮ್ಮ ದೇಹಗಳಿಗೂ ಹರಿಗಳಿಗೂ ಕೂಡಿ ಅಡವಿಯ ಹಗ್ಗದಂತಹ ಜಿಗಟು ಬಳ್ಳಿಗಳಿಂದ ಕಟ್ಟಿಕೊಂಡಿದ್ದರು. ಅಂದು ಆಗ ಎಷ್ಟೋ ಹೊತ್ತಿನ ವರೆಗೆ ಮಳೆಯು ಹೊರಸಾಗಿದ್ದಿತು. ಆದರೂ ಕೂಡ ಆ ವಿಶಾಲ ಮರಗಳಲ್ಲಿ ಮೇಲಿನ ಹರಿ-ಟೊಂಗೆಗಳಿಂದ ನೀರ ಹನಿಗಳು 'ಟಪ್ಪ-ಟಪ್ಪ'ೆಂದು ಬೀಳುತ್ತಲೇ ಇದ್ದವು; ಮತ್ತು ಕೆಲ ಹೊತ್ತು ಬಿಟ್ಟು ನಡುನಡುವೆ ಮಳೆಯ್ಸರುವುಗಳೂ ಬರುತ್ತಿ

ದ್ದವು. ಹೀಗೆ ಆಗಿನ ಅಲ್ಲಿಯ ಪರಿಸ್ಥಿತಿಯಿದ್ದರೂ ಕೂಡ ಅವರಿಗೆ ಆಯಾ ಸ್ಥಳಗಳಲ್ಲಿ ಗಾಢವಾದ ನಿದ್ದೆಯು ಹತ್ತಿಯೇ ಬಿಟ್ಟಿತು; ಆದರೆ ಅವರ ಆ ನಿದ್ದೆಯು ಗಾಢನಿದ್ದೆಯಿದ್ದಿತೋ ಇಲ್ಲವೆ ಗ್ಲಾನಿಯ ಅಸಾವಧ ಸ್ಥಿತಿಯಿದ್ದಿತೋ ಎಂಬದು ಅವರ ಲಕ್ಷ್ಯದಲ್ಲಿಯೇ ಬಂದಿರಲಿಲ್ಲ.

ರಫೀಉದ್ದಿನನು ನಸಕಿನಲ್ಲಿಯೇ ಎದ್ದನು. ಆತನಿಗೆ ಆ ಗಾಢನಿದ್ರೆಯ ನಂತರ ಒಳ್ಳೇ ಹುಷಾರೆನಿಸಿದ್ದರಿಂದ, ಆತನು ತಮ್ಮ ತಲೆಯ ಮೇಲೆ ಜೀವದ ಮೇಲಿನ ಸಂಕಟದ ಕತ್ತಿಯು ಝಳಪಿಸುತ್ತಿದೆಂಬದನ್ನು ಕೂಡ ಮರೆತನು. ಸಮೀಪದಲ್ಲಿಯೇ ಬೇರೊಂದು ಮರದ ಮೇಲೆ ಕಂಟಕನು ಮಲಗಿದ್ದನು. ರಫೀಉದ್ದೀನನು ಅವನ ಕಡೆಗೆ ನೋಡುತ್ತಿರುವಷ್ಟರಲ್ಲಿ ಆತನಾದರೂ ಮೈ-ಕೈ ಒಡ್ಡಾರಿಯುತ್ತ ಎದ್ದೇಳತೊಡಗಿದನು. ತುಸ ಚೇಷ್ಟೆ ಮಾಡುವ ಲಹರಿಯುಂಟಾದ್ದರಿಂದ, ಕಂಟಕನನ್ನು ಪೂರಾ ಎಚ್ಚರಗೊಳಿಸುವ ಸಲುವಾಗಿ ರಫೀಉದ್ದೀನನು ದೊಡ್ಡ ದನಿಯಿಂದ ಉದಯರಾಗವನ್ನು ಅನ್ನಹತ್ತಿದನು:—

ಏಳು ನಾರಾಯಣನೆ ಏಳು ಲಕ್ಷ್ಮೀರಮಣನೆ
ಏಳು ಕಮಲಾಕ್ಷ ಕಮಲಜನಾಭಾ!
‘ ಉಠೋ ಉಠೋ ಕಂಟಕ-ಬಾಬುಜೀ
ಉದಯಾಚಲೇ ಭಾನು ಆಯಾ!

ಆ ಉದಯರಾಗವನ್ನು ಕೇಳಿ ಕಂಟಕನಿಗೆ ನಗೆ ಬಂದಿತು. ಆತನು ಎದ್ದು ಆ ಗಿಡದ ಟೊಂಗೆಯಲ್ಲಿ ತುಸ ಹೊತ್ತು ಕುಳಿತನು. ಹುಲಿಯ ಬೇಟೆಗೆ ಹೋದ ಬೇಟೆಗಾರರು ಗಿಡದ ಮೇಲಿನ ತೊಟ್ಟಿಲಲ್ಲಿ ಕೂಡ್ರುವಂತೆ ಆಗ ಕಂಟಕನು ಕುಳಿತದ್ದು ಕಂಡದ್ದರಿಂದ ರಫೀವುದ್ದೀನನು ಮತ್ತೆ ನಗೆಚೇಷ್ಟೆಗಾಗಿ,

“ಕ್ಯಾಂ ಬಾಬೂಜೀ, ಕಿತನೆ ಬಾಘ ಮಾರೆ?”

“ಭಯ್ಯಾ, ಜೋ ಸಚ ಮೂಚ ಬಾಘ, ವೋ ತೋ ಅಬೀ ಆನೇವಾಲಾ ಹೈ! ಆ ಜಾವರಾಗಳು ನಿನ್ನೆ ಗೊತ್ತುಪಡಿಸಿರುವಂತೆ ಇಷ್ಟರಲ್ಲೇ ಇಲ್ಲಿಗೆ ಬರಬಹುದು. ಆಗ ಅವರು ಮನುಷ್ಯರಿಗೆ ಈಲಾದವರಾದರೂ ಕಂಡಾರು; ಇಲ್ಲವೆ ರೇಗಿಗೆದ್ದ ಹುಲಿಗಳಂತಾದರೂ ಕಂಡಾರು. ತಮ್ಮ ಬಾಣಗಳೆಂಬ ವಿಷಯುಕ್ತ ಉಗುರುಗಳಿಂದ ನನ್ನ-ನಿನ್ನನ್ನು ಹರಿಹರಿದು ತಿಂದಾರು!” ಎಂದು ಕಂಟಕನು ಉತ್ತರವಿತ್ತನು.

ಕಂಟಕನು ಇಷ್ಟು ಮಾತನಾಡುತ್ತಿರುವಷ್ಟರಲ್ಲೇ ಎದುರಿಗಿನ ಗಿಡ-ಗಂಟೆಗಳಲ್ಲಿ ಸಳ್ಳ ಸಳ್ಳ ಎಂದು ಸಪ್ಪಳವಾಗಹತ್ತಿತು ತೀರ ಹತ್ತರ ನೂರಾರು ಹೆಜ್ಜೆಗಳ ಅಂತರಕ್ಕೆ ಬಂದೊಡನೆಯೇ ಆ ಗಾಯಗೊಂಡಿದ್ದ ಜಾವರಾನು

ತಮ್ಮ ಕಾಡುಬಾಷೆಯಲ್ಲಿ "ಊss ಊ" ಎಂದು ಗಟ್ಟಿಯಾಗಿ ಕೂಗತೊಡಗಿದನು. ಆ ಜಾವರಾನನ್ನು ಗುರ್ತಿಸಿದೊಡನೆಯೇ ಕಂಟಕನು ತಟ್ಟನೆ ಗಿಡದಿಂದ ಇಳಿದು ಬಂದನು. ರಫೀಉದ್ದೀನನು ಮಾತ್ರ ತಾನಿದ್ದ ಗಿಡದಲ್ಲಿಯೇ ಅಡಗಿಕೊಂಡಿದ್ದನು. ಹಾಗೆ ಆತನು ಗಿಡದ ಮೇಲಿಂದ ಕೆಳಗಿಳಿಯದಿರಲಿಕ್ಕೆ ಆತನು ಮೊದಲನೇ ರಾತ್ರಿಯಲ್ಲಿ ತನ್ನ ದೇಹಕ್ಕೂ ಆ ಗಿಡದ ಹರಿಗೂ ಬಿಗಿದುಕೊಂಡಿದ್ದ ಆ ಅಡವಿಯ ಜಿಗುಟು ಬಳ್ಳಿಯನ್ನು ಬೇಗನೆ ಬಿಚ್ಚಲಾಗದಿದ್ದದ್ದು ಕೆಲವಂಶದಿಂದಲೂ, ಮತ್ತು ಕೆಲವಂಶದಿಂದ ಆತನಲ್ಲಿ ನೈಯುಂಡಿದ್ದ ಜಂಬೂಕವೃತ್ತಿಯಿಂದಲೂ ಆತನು ಕೆಳಗಿಳಿದಿರಲಿಲ್ಲ; ಯಾಕಂದರೆ, ಆ ಜಾವರಾಗಳೊಡನೆ ಆ ಅಪರಿಚಿತನಾದ 'ಡೋಲಕಾಠಿ'ಯೂ ಅಲ್ಲಿಗೆ ಬಂದಿದ್ದನು. ಆ ಜಾವರಾಗಳಲ್ಲಿ ತಮ್ಮಿಬ್ಬರಿಗೆ ಆಶ್ರಯಕೊಡಬೇಕೆಂದು ನಿರ್ಧರವಾಗಿತ್ತೋ, ಇಲ್ಲವೆ ತಮ್ಮನ್ನು ಪ್ರತಿಬಂಧಿಸಿಡುವದು ಗೊತ್ತಾಗಿತ್ತೋ ಇದು ಇನ್ನೂ ಪಕ್ಕಾ ಗೊತ್ತಾಗಿರಲಿಲ್ಲ. ಆದ್ದರಿಂದ ಇಂಥ ಸಂದೇಹಾಸ್ಪದ ಸ್ಥಿತಿಯಲ್ಲಿ ತಾನು ಸ್ವತಃ ಒಮ್ಮೆಲೆ ಮುಂದಾಗದೆ, ಕಂಟಕನನ್ನೇ ಅವರ ಮುಖದೆದುರಿಗೆ ನಿಲ್ಲಿಸಬೇಕು. ತನಗೆ ಅನುಕೂಲವಾದ ಪ್ರಸಂಗವುಂಟಾಗುವ ಆಶೆದೋರಿದರೆ, ತಾನೂ ಅಲ್ಲಿಗೆ ಹೋಗಬೇಕು; ಪ್ರತಿಕೂಲವೆಂದು ಕಂಡರೆ, ಹಿಂದಿನಿಂದ ಹಿಂದೇ ಜಾರಿಹೋಗಲಿಕ್ಕೆ ಆಸ್ಪದವಾಗಬೇಕು, ಎಂಬ ಕಪಟಭಾವದಿಂದ ರಫೀಉದ್ದೀನನು ಹಾಗೆ ಹಿಂದುಳಿದದ್ದಿಲ್ಲವೆಂತಲ್ಲ.

ಕಂಟಕನು ಮುಂದೆ ಬಂದುದನ್ನು ಕಂಡೊಡನೆಯೇ ಆ ಜಾವರಾನು ಸಂತಸದಿಂದ ಚೀರುತ್ತ ಕಿರಚುತ್ತ ಓಡಿ ಬಂದು ಆತನನ್ನು ಅಪ್ಪಿಕೊಂಡನು. 'ಈತನೇ ಆ ಕಂಟಕ ಬಾಬುವು.' ಎಂದು ಆತನು ಆ ಡೋಲಕಾಠಿಗೆ ಆತನ ಪರಿಚಯ ಮಾಡಿಕೊಟ್ಟನು ಕೂಡಲೆ ಡೋಲಕಾಠಿಯೂ ಮುಂದೆ ಬಂದು ಕಂಟಕನನ್ನು ಕುರಿತು:---

"ಕಂಟಕಬಾಬೂ, ಅವರೇ ನೀವಿರಬಹುದೆಂದು ನನಗೆ ಆಗಲೆ ಅನಿಸಿದ್ದಿತು! ನಾನು ಕಳೆದ ಎರಡು-ಮೂರು ವರ್ಷಗಳಿಂದ ಈ ಜಾವರಾ ಜನರಲ್ಲಿ ಹೀಗೆ ಉಲ್ಲಿಂಗ(ಬರೀಬತ್ತಲೆ)ನಾಗಿ ಒಬ್ಬ ಜಾವರಾನೇ ಆಗಿದ್ದರೂ, ವೇಷಾಂತರದಿಂದ ಕರಿನೀರಿನ ವಸಾಹತಿಯೊಳಗ ಆಗಾಗ್ಗೆ ಆಡ್ಡಾಡುತ್ತಿರುತ್ತೇನೆ. ಅದರಿಂದ ನಾನು ಅಲ್ಲಿ ನಿಮ್ಮನ್ನು ಹಲವು ಸಾರೆ ನೋಡಿರುತ್ತೇನೆ. ಅಧಿಕಾರಿಗಳೊಳಗಿನ ನಿಮ್ಮ ಪತ್ತು-ವರ್ಚಸ್ಸು-ಅಧಿಕಾರಿಗಳೂ, ನಿಮ್ಮ ಓಡಿಹೋಗುವ ಬೇತೂ ಇವೆಲ್ಲ ನನಗ ಚೆನ್ನಾಗಿ ಗೊತ್ತಿವೆ. ಹದಿನೆಂಟುನೂರಾ ಐವತ್ತೇಳರೊಳಗಿನ ಸ್ವಾತಂತ್ರ್ಯವೀರರಾದ ಅಪ್ಪಾಜಿಗೆ ನಾನೂ ಒಬ್ಬ ನಂಬಿಗೆಯು

ವನಾಗಿದ್ದೆನು. ಅವರು ಸಾಯುವಾಗ ನಿಮಗೆ ನೆರವಾಗಬೇಕೆಂದು ಹೇಳಿರುವರು. ಅವರ ಗುಪ್ತ ಮಿತ್ರವೆಂದರೆ, ಮನುಷ್ಯ! ಅವರು ನನ್ನ ಮಾಹಿತಿಯನ್ನು ನಿಮಗೆ ತಿಳಿಸಿರುವದಿಲ್ಲ; ಆದರೆ ನಿಮ್ಮ-ಅವರಲ್ಲಿಯ ಸ್ನೇಹವು ಇತ್ತೀಚೆಗಿನದು-ಹೊಸದು. ನನ್ನ ಪರಿಚಯವು ಹಳೆಯದು. ನನಗೆ ಕರಿನೀರಿನಿಂದ ಓಡಿ ಹೋಗಲಿಕ್ಕೆ ತಕ್ಕ ಜೊತೆಗಾರರೆಂದರೆ, ನೀವೇ ಆಗಿರುತ್ತೀರಿ! ಕಂಟಕಬಾಬೂ, ನಿಮ್ಮ ಭಗಿನಿಯಾದ ಕಂಟಕಿಯನ್ನು ಬಿಡಿಸಿಕೊಂಡು ಬರುವ ಕೆಲಸದಲ್ಲಿ ನಾನು ಸಹಜವಾಗಿ ಯಶಸ್ವಿಯಾದೇನು! ಬೆದರಬೇಡಿರಿ! ನನಗೆ ನಿಮ್ಮ ಇಂಗಿತವೆಲ್ಲವೂ ಗೊತ್ತಿದೆ. ಅದು ಹೇಗೆಂಬದನ್ನು ಪ್ರಸಂಗನರಿತು ತಿಳಿಸುವೆನು. ನಾನು ನಿಮಗೆ ಜಾವರಾಗಳಿಂದ ಆಶ್ರಯ ಕೊಡಿಸುತ್ತೇನೆ; ಆದರೆ ನಿಮ್ಮ ಆ ಎರಡನೇ ಸಂಗಡಿಗ 'ಭಗೋಡಾನು' ಯಾವನಿರುವನೋ ಆತನನ್ನು ಕಣ್ಣಾರೆ ಕಾಣದ ಹೊರತು, ಆತನ ಬಗ್ಗೆ ನಾನು ಈಗಲೇ ಯಾವ ಅಭಿವಚನ ವನ್ನೂ ಕೊಡಲಿಚ್ಛಿಸುವದಿಲ್ಲ. ಕಾರಣ-ಕಾರಣ-ಕಾರಣ-ಆತನ ಹೆಸರು ಈ ಜಾವರಾಗಳ ಹರಕು ಮುರಕು ಉಚ್ಚಾರಗಳನ್ನು ಕೂಡಿಸಿಕೊಂಡು ನನಗೆ ತಿಳಿದಿರುವದು ರಫೀ ಉದ್ದೀನನೆಂದಿರಬೇಕೆನಿಸುತ್ತಿವೆ! ಆದರೆ ಆ ಮನುಷ್ಯ ನನ್ನು ಪ್ರತ್ಯಕ್ಷ ಕಂಡ ನಂತರ ಆ ಹೆಸರಿನಷ್ಟೇ ಆತನು ಅಧಮಾಧಮನಾಗಿರ ದಿದ್ದರೆ, ನಾನು ಆತನಿಗೂ ಜಾವರಾಗಳ ಆಶ್ರಯ ಕೊಡಿಸೇನು. ಅದಿರಲಿ; ಆದರೆ ಆತನ ನಿಜವಾದ ಹೆಸರೇನು?"

ಕಂಟಕನು ಅಂಜುತ್ತಲೆ ಹೇಳುತ್ತಾನೆ: "ಆತನ ಹೆಸರು ರಫೀಉದ್ದೀನ ನೆಂಬದೇ ನಿಜವು! ನನಗೆ ಇಲ್ಲಿಯವರೆಗೆ ಓಡಿ ಬರಲಿಕ್ಕೆ ಆತನೇ ಮುಖ್ಯ ಸಹಾಯ್ಯಕನಾಗಿರುತ್ತಾನೆ; ಆದುದರಿಂದ ನನಗೋಸುಗ ನೀವು ಆತನಿಗೂ—"

ಕಂಟಕನನ್ನು ಮತ್ತೆ ಮಾತನಾಡಗೊಡವೆ ತಡೆದು, ಡೋಲಕಾಠಿಯು ನಡುವೇ "ಅದು ಆ ಮನುಷ್ಯನನ್ನು ಕಂಡ ನಂತರದ ಪ್ರಶ್ನೆಯು! ಈಗ ಆತನು ಎಲ್ಲಿರುತ್ತಾನೆ?"

ಕಂಟಕ-ಡೋಲಕಾಠಿಯರಲ್ಲಿ ಹೀಗೆ ಸಂಭಾಷಣವು ನಡೆದಿರಲು, ರಫೀ ಉದ್ದೀನನು ತನ್ನ ಮೈಸುತ್ತಲಿನ ಬಳ್ಳಿಯನ್ನು ಹರಿದೊಗೆದು, ಆ ದೂರದ ಗಿಡದ ಕೆಳಗಿಳಿದು ಇವರ ಕಡೆಗೇ ಬರಹತ್ತಿದ್ದನು ಯಾಕಂದರೆ ಆ ಜಾವ ರಾನು ಕಂಟಕನನ್ನು ಪ್ರೇಮದಿಂದ ಅಪ್ಪಿಕೊಂಡದ್ದನ್ನೂ ಆತನ ಆ ಸಂತಸದ ಚೀತ್ಕಾರವನ್ನೂ, ಡೋಲಕಾಠಿಯು ಕಂಟಕನಿಗೆ ಮಾಡಿದ್ದ ಆ ನಗೆಮೊಗದ ಹಸ್ತಾಂದೋಲನವನ್ನೂ ಕಂಡು ಆ ಎಲ್ಲ ಲಕ್ಷಣಗಳ ಮೇಲಿಂದ ಜಾವರಾ ಗಳು ತಮ್ಮೊಡನೆ ಸ್ನೇಹ ಸಂಬಂಧವನ್ನೇ ಮಾಡಿರುತ್ತಾರೆಂಬ ಬಗ್ಗೆ ಅವನಲ್ಲಿ

ಯಾವ ಸಂಶಯವೂ ಉಳಿದಿರಲಿಲ್ಲ ಮುಂದಾಗುವುದು ಇನ್ನು ಸುರಕ್ಷಿತವೇ ಎಂಬ ಬಗ್ಗೆ ಆತನ ನಿಶ್ಚಿತಮತವಾಗಿತ್ತು. ಇಷ್ಟರಲ್ಲಿ ಕಂಟಕನು "ರಫೀ ಉದ್ದೀನ, ಆಗೇ ಆವ! ಜಾವರಾ ಜನರು ನಮ್ಮ ಮಿತ್ರರಾದರು!" ಎಂದು ಗಟ್ಟಿಯಾಗಿ ಕೂಗಿದನು.

ರಫೀಉದ್ದೀನನು ಮನಃಪೂರ್ವಕವಾಗಿ ನಗುತ್ತ ಮುಂದೆ ಬಂದನು. ಡೋಲಕಾಠಿಯು ಆತನ ಕಡೆಗೆ ದಿಟ್ಟಿಸಿ ನೋಡುತ್ತಿದ್ದನು; ಆದರೆ ರಫೀ ಉದ್ದೀನನು ಹತ್ತರ ಬಂದ ಕೂಡಲೆ ಆ ರಫೀಉದ್ದೀನನಿಗಿಂತಲೂ ಎತ್ತರವೂ, ಟೊಣಪನೂ, ಕಾಟಕನೂ ಆಗಿದ್ದ ಆ ಉಲ್ಲಿಂಗ ಡೋಲಕಾಠಿಯ ಹುಬ್ಬು ಗಳು ಸಂತ್ರಸ್ತವೂ ಆಕುಂಚಿತವೂ ಆಗತೊಡಗಿದವು. ಆ ಹುಬ್ಬಿನ ಗಂಟು ಗಳನ್ನು ಆತನು ಪುನಃ ಪುನಃ ಮುರಿಯುತ್ತಿದ್ದರೂ, ಆತನ ಹಣೆಯ ಮೇಲೆ ಸಿಟ್ಟಿನ ರೇಖೆಗಳು ಮತ್ತೆ ಮತ್ತೆ ಕಾಣಿಸಲಾರಂಭಿಸಿದವು. ಬುರುಗು ಬಂದ ಸೆರೆಯ ಬಿಣಿಯು ತಟ್ಟನೆ ಸಿಡಿದುಹೋಗುವ ಹಾಗೆ, ಸಿಟ್ಟಿನ ಆವೇಶದಿಂದ ತನ್ನ ದೇಹವು ಎಲ್ಲಿ ಪುಟಿದು ಹೋಗುವದೋ ಏನೋ ಎಂದು ಆತನಿಗೆ ಅನಿ ಸಿತು. ಆದರಿಂದ ಆ ಸಿಡಿದುಹೋಗುವ ಬಿಣಿಯನ್ನು ನಾವು ಹೇಗೆ ಒತ್ತಿ ಹಿಡಿಯುವೆವೋ, ಹಾಗೆಯೇ ಆತನು ತನ್ನ ಕಾಲುಗಳನ್ನು ನೆಲಕ್ಕೆ ಗಟ್ಟಿ ಯಾಗಿ ಒತ್ತಿ ಹಿಡಿಯತೊಡಗಿದನು. ಇಷ್ಟರಲ್ಲಿ ಆತನ ಮನಸ್ಸಿನಲ್ಲಿ ಯಾವ ಒಂದು ಶಂಕೆಯು ಕ್ಷೋಭಗೊಂಡಿದ್ದಿತೋ, ಅದರ ಬೇಡಿಕೆಯನ್ನು ನಿಶ್ಶೇಷ ವಾಗಿ ಪೂರೈಸುವಂತಹ ಒಂದು ಕ್ಲಪ್ತಿಯು ಆತನಿಗೆ ಹೊಳೆಯಿತು. ಆತನು ತನ್ನ ಮುಖದಲ್ಲಿ ಬಲಪೂರ್ವಕ ನಗುವನ್ನುಂಟು ಮಾಡಿಕೊಂಡು, ರಫೀಉದ್ದೀ ನನಿಗೆ ಪ್ರೇಮದಿಂದ ಹಸ್ತಾಂದೋಲನ ಮಾಡುವ ಸಲುವಾಗೆಂದು ತನ್ನ ಕೈಯನ್ನು ಮುಂದೆ ಮಾಡಿ "ಆಈಯೆ, ಆಈಯೆ!" ಎಂದಂದನು. ಡೋಲ ಕಾಠಿಯು ಹೀಗೆ ಸ್ವಾಗತಾತ್ಮಕವಾಗಿ ಸಂಬೋಧಿಸಿದ ಕೂಡಲೆ ರಫೀಉದ್ದೀ ನನು ಹುರುಪುಗೊಂಡನು. ಅವನು ತನ್ನ ಎರಡೂ ಕೈಗಳನ್ನು ಮುಂದೆ ಮಾಡಿ ಡೋಲಕಾಠಿಯ ಕೈಯನ್ನು ಅವುಗಳಲ್ಲಿ ಹಿಡಿದು, ಹಾಗು ತಲೆಯನ್ನು ಬಾಗಿಸಿ, ಡೋಲಕಾಠಿಯನ್ನು ಪ್ರತ್ಯಭಿವಂದಿಸಿದನು.

ರಫೀ ಉದ್ದೀನನ ಕೈಬೆರಳುಗಳನ್ನು ಕಂಡ ಕೂಡಲೆ ಡೋಲಕಾಠಿಗೆ ಆವಶ್ಯಕವಾಗಿದ್ದ ನಿರ್ಣಾಯಕ ಗುರ್ತು ದೊರಕಿತು. ರಫೀ ಉದ್ದೀನನ ಬಲಗೈಯ ಕಿರುಬೆರಳಿನ ಒಂದು ಗಣ್ಣು ಕತ್ತರಿಸಿ ಹೋಗಿತ್ತು. ಈ ರಫೀ ಉದ್ದೀನನೇ ಆ ರಫೀ ಉದ್ದೀನನು! ಮತ್ತು ಅದರೊಡನೆಯೇ ಡೋಲಕಾಠಿ ಯು ತುಟಿ-ದವಡೆಗಳನ್ನು ಕಚ್ಚುತ್ತ:—

"ದುಷ್ಟಾ! ನೀನೋ? ನೀನೇ ಆ ರಫೀ ಉದ್ದೀನನು!!"

ಆ ಭಯಂಕರ ಅವಸಾನದ ಹಾಗು ಆರೋಪದ ಅರ್ಥವು ಕಂಟಕನಿಗಷ್ಟೇ ಅಲ್ಲ; ಆದರೆ ಸ್ವತಃ ಆ ರಫೀ ಉದ್ದೀನನಿಗೂ ತಿಳಿಯುವ ಮೊದಲೇ ಡೋಲಕಾಠಿಯು ತನ್ನ ಕೈಯೊಳಗೆ ದೊರೆತಿದ್ದ ಆತನ ಕೈಯನ್ನು ತಟ್ಟನೆ ಕೊಡವಿ, ಹೊರಪೇಚು ಹಾಕಿ, ಆತನನ್ನು ಬೆನ್ನಿನ ಕಡೆಯಿಂದ ತನ್ನ ಕೆಳಗೆ ತಕ್ಕೊಂಡನು; ಆತನ ನಡುವಿಗೆ ಎಡಗೈಯಿಂದ ಗಟ್ಟಿಯಾಗಿ ಸುತ್ತಿಹಿಡಿದು, ಬಲಗೈಯನ್ನು ಎರಡೂ ಮೊಣಕಾಲೊಳಗೆಹೊಗಿಸಿ, ಆತನನ್ನು ಮೇಲಕ್ಕೆತ್ತಿದನು; ಹಾಗು ತೂರಿ ಒನ್ನೆಲೆ ನೆಲಕ್ಕೆ ಅಪ್ಪಳಿಸಿದನು; ಮತ್ತು ಲಗುಬಗನೆ ಆತನ ಎದೆಯ ಮೇಲೆ ಕುಳಿತು, ತನ್ನ ಎರಡೂ ಕೈಗಳಿಂದ ಡೋಲಕಾಠಿಯು ರಫೀ ಉದ್ದೀನನ ಕುತ್ತಿಗೆಯನ್ನು ಒಳ್ಳೇ ಬಲವಾಗಿ ಹಿಚುಕಿ ಹಿಡಿದನು. ಆಗ ರಫೀ ಉದ್ದೀನನ ಲಕ್ಷ್ಯದಲ್ಲಿ ಬಂದಿತೇನಂದರೆ, ಈ ಡೋಲಕಾಠಿಯು ತನ್ನ ಒಬ್ಬ ಪುರಾತನ ಶತ್ರುವಾಗಿದ್ದರಿಂದಲೇ ತನ್ನ ಎದೆಯ ಮೇಲೇರಿ ಕುಳಿತಿರುತ್ತಾನೆ. ರಫೀ ಉದ್ದೀನನು ಆತನನ್ನು ಗುರ್ತಿಸಿದನು; ಆದರೆ ಆತನ ಪೇಚಿನಲ್ಲಿ ತಾನು ಪೂರಾ ಸಿಕ್ಕ ನಂತರವೇ ಆ ಗುರ್ತು ಅವನಿಗೆ ಹತ್ತಿತ್ತು.

'ಹಾ! ಹಾ! ಬಿಡು! ಬಿಡು!' ಎಂದೆನ್ನುತ್ತ ಕಂಟಕನು ಅವರಿಬ್ಬರನ್ನೂ ಬಿಡಿಸಲೋಸುಗ ನಡುವೆ ಬರಹತ್ತಲು, ಡೋಲಕಾಠಿಯು ಅತ್ಯಂತ ನಿಕರದ, ನಿಶ್ಚಿತ ಹಾಗು ನಿಷ್ಠುರ ದನಿಯಲ್ಲಿ ಕೂಗಿದನೇನಂದರೆ:—"ಬಾಬೂಜೀ, ನೀವು ತುಸ ಸುಮ್ಮನಿರ್ರಿ. ಈತನು ಮಾನವನಲ್ಲ, ಸೈತಾನನಿರುತ್ತಾನೆ. ನಿಮ್ಮ ಹಿತದ ಸಲುವಾಗೆಂದರೂ ಈತನ ಮುಳ್ಳು ಕಿತ್ತೊಗೆಯಲೇಬೇಕು. ನನಗಂತೂ ಈತನು ಕಡು ವೈರಿಯು! ಆದನ್ನೆಲ್ಲ ಆ ಮೇಲೆ ಹೇಳುವೆನು! ರಫೀ ಉದ್ದೀನ, ಹೇಳು; ಆಗ ನೀನೇ ಅಲ್ಲವೆ ನನ್ನ ಪ್ರಾಣ ಹೀರಿದವನು? ನಿನ್ನ ತಿಳುವಳಿಕೆಯ ಮೇರೆಗೆ ನೀನು ನನ್ನನ್ನು ಸಂಪೂರ್ಣವಾಗಿ ಕೊಲೆಗೊಯ್ದಿದ್ದೆಯಲ್ಲವೆ? ಇಗೋ, ಇದು ನನ್ನ ಪುನರ್ಜನ್ಮವು! ಈಗ ನಾನು ನನ್ನ ಮನಸ್ಸಿಗೆ ಬಂದಂತೆ ನಿನ್ನ ಕೊಲೆ ಮಾಡುತ್ತೇನೆ!"

ಹೀಗೆಂದು, ಡೋಲಕಾಠಿಯು ಹಲ್ಲು-ದವಡೆಗಳನ್ನು ಕಚ್ಚಿ, ವಿಕರಾಳ ಕ್ರೋಧದಿಂದ ತನ್ನ ವಜ್ರಮುಷ್ಟಿಯಿಂದ ಆಗ ಥಡಪಡಿಸುತ್ತಿದ್ದ ಹಾಗು ಹೋತಿನಂತೆ ಒದರುತ್ತಿದ್ದ ಆ ರಫೀ ಉದ್ದೀನನ ಕಣ್ಣು, ಮೂಗು, ಎದೆಗಳ ಮೇಲೆ ಗುದ್ದ ಹತ್ತಿದನು. ರಫೀ ಉದ್ದೀನನ ಕಣ್ಣು, ಮೂಗು, ಬಾಯಿಗಳೊಳಗಿಂದ ರಕ್ತದ ಧಾರೆಗಳು ಪುಟಿಯಹತ್ತಿದವು. ಆತನು ನಿರ್ವಿಣ್ಣನಾಗಿ ಸ್ಮೃತಿಯಿಲ್ಲದೆ ಬಿದ್ದುಕೊಂಡನು.

ಇಷ್ಟರಲ್ಲಿ ಡೋಲಕಾರಿಯ ಹಗೆಯೇ ತಮ್ಮ ಹಗೆಯೆಂಬದಿಷ್ಟೇ ಕಾರಣವು ಸಾಕಿದ ಹಾಗು ಪ್ರಾಮಾಣಿಕ ನಾಯಿಗೆ ಹೇಗೆ ಸಾಕಾಗುವದೋ, ಹಾಗೆಯೇ ಆ ಜಾವರಾಗಳ ವೈರವು ಜಾಗೃತಗೊಳ್ಳಲಿಕ್ಕೆ ಸಾಕಾಗಿ, ಆ ಜಾವರಾಗಳು ತಮ್ಮ ಬಿಲ್ಲುಗಳವ್ನು ರಫೀ ಉದ್ದೀನನ ಮೇಲೆ ಗುರಿಯಿಟ್ಟು ಸಳ ಸಳವೆನ್ನುವ ವಿಷಾರಿಬಾಣಗಳನ್ನು ಯಾವುದೊಂದು ಹಲಗೆಯಲ್ಲಿ ತಂತಿಯ ಮಳೆ ಹೊಡೆಯುವಂತೆ, ಅಲ್ಲಿಂದಲ್ಲೇ ಆತನ ಎದೆಯ ಮೇಲೆ ಬಿಟ್ಟರು! ರಫೀ ಉದ್ದೀನನು ಬಿದ್ದುಕೊಂಡ ಸ್ಥಳದಲ್ಲಿಯೇ ಗತಾಸುವಾಗಿ ಬಿದ್ದನು!

ಕೂಡಲೆ ಆ ಡೋಲಕಾರಿಯು ಆ ಅಘೋರ ಸಮಾಧಾನದ ಆವೇಶದಲ್ಲಿ ಕಂಟಕನ ಕಡೆಗೆ ಹೊರಳಿ:—"ಕಂಟಕ ಬಾಬು, ನಾನು ಈ ರಫೀ ಉದ್ದೀನನನ್ನು ಹೀಗೆ ಹೋತಿನಂತೆ ಗುದ್ದಿ ಗುದ್ದಿ ಕೊಂದದ್ದರ ಕಾರಣವನ್ನು ಕೇಳಿಕೊಳ್ಳಿರಿ! ನಾನೇ ಆತತಾಯಿಯೆಂದು ನಿಮಗನಿಸಿರಬಹುದು; ಆದರೆ ಈ ರಫೀ ಉದ್ದೀನನನ್ನು ನೀವು ಗುರ್ತಿಸುವದಕ್ಕಿಂತ ಮುಂಚಿನಿಂದಲೇ ನಾನು ಗುರ್ತಿಸುತ್ತಿದ್ದೇನೆ. ಈತನು ಹೀಗೆಯೇ ಕುತ್ತಿಗೆ ಹಿಚುಕಿ ಹಿಚುಕಿ ಎಷ್ಟೋ ಜನರನ್ನು ಕೊಂದುಬಿಟ್ಟಿರುತ್ತಾನೆ! ಈತನು ಮೊದಲೊಮ್ಮೆ ಈ ಕರಿನೀರಿಗೆ ಜೀವಾವಧಿ ದಂಡಿತನೆಂದು ಬಂದಿದ್ದನು; ಆಗ ನಾನೂ ಜೀವಾವಧಿ ದಂಡಿತನೇ ಆಗಿದ್ದೆನು. ನನಗೆ ಕಟ್ಟಿಗೆಗಳನ್ನು ಹೇರಿಕೊಂಡೊಯ್ಯುವ ಹಡಗದ ಮೇಲಿನ ಕೆಲಸ ದೊರೆತದ್ದರಿಂದ, ನಾನು ನೌಕಾಯಾನ ವಿದ್ಯೆಯಲ್ಲಿ ಒಳ್ಳೇ ನಿಪುಣನಾದೆನು. ಈತನು ನಮ್ಮ ಕೈಕೆಳಗೆ ಕಟ್ಟಿಗೆಯ ಜವಾದಾರನಿದ್ದನು. ಮುಂದೆ ನಾವು ಓಡಿಹೋಗುವ ಒಳಸಂಚು ಮಾಡಿದೆವು ಆ ಸಾಹಸದಲ್ಲಿ ನನಗೀತನ ನೆರವಾಯಿತು; ಆದರೆ ಈತನಲ್ಲಿ ಆಗ ಒಂದು ಕಾಸು ಕೂಡ ಇರಲಿಲ್ಲ; ಮತ್ತು ನನ್ನ ಹತ್ತರ ಸಾವಿರೆರಡು ಸಾವಿರದ ನಿಧಿಯಿದ್ದಿತು. ನಾವು ಯಾವ ನೌಕೆಯ ಮೇಲೆ ಕೆಲಸ ಮಾಡುತ್ತಿದ್ದೆವೋ, ಅದನ್ನೇ ಒಂದು ಸುಸಂಧಿ ಸಾಧಿಸಿ ಕೈವಶ ಮಾಡಿಕೊಂಡು, ಅಂದೇ ರಾತ್ರಿ ಸಮುದ್ರದಲ್ಲಿ ಬಿಟ್ಟೆವು!

"ಗಾಳಿಯು ಅನುಕೂಲವಾಗಿ ಬೀಸಿ ನಾವು 'ಭಗೋಡೆ'ಗಳು ಸಮುದ್ರದಲ್ಲಿ ಸುರಳೀತ ಮಾರ್ಗಕ್ಕೆ ಹತ್ತಿದೆವು. ಆ ಪ್ರಸಂಗದಲ್ಲಿ ಈತನು ನನ್ನ ಬಳಿಯ ನಿಧಿಯನ್ನೆತ್ತಿ ಹಾಕುವ ದುಷ್ಟ ಉದ್ದೇಶದಿಂದ, ನಾನು ಈತನಿಗೆ ಬೇರೆ ಯಾವ ಅಪರಾಧವನ್ನು ಮಾಡಿರದಿದ್ದರೂ, ಇವನು ನನ್ನ ಘಾತ ಮಾಡುವ ಬೇತು ಮಾಡಿದನು; ಹಾಗು ನಾನು ಆ ನೌಕೆಯ ಒಂದು ತುದಿಯ ಹಲಗೆಯ ಮೇಲೆ ಸಮುದ್ರದ ಕಡೆಗೆ ಮೋರೆ ಮಾಡಿ ನಿಂತುಕೊಂಡಿರಲು, ಈತನು ಆ ಹಲಗೆಯನ್ನು ಅಕಸ್ಮಾತ್ತಾಗಿ ಹೊರಳಿಸಿ, ನನ್ನೊಡನೆ

ಅದನ್ನು ಆ ವಿಶಾಲವಾದ ಸಮುದ್ರದಲ್ಲಿ ಮಗುಚಿ ಬಿಟ್ಟನು. ನಾನು ಕೂಡಲೆ ಆ ನೌಕೆಯನ್ನು ಮತ್ತೆ ಹಿಡಿಯ ಹೋಗಲು, ಈತನು ಹುಟ್ಟು-ಗಣೆಗಳಿಂದ ನನ್ನ ತಲೆಗೆ ಹೊಡೆದನು. ಆ ಕೂಡಲೆ ನನಗೆ ಬವಳಿ ಬಂದು ನಾನು ಸಮುದ್ರದಲ್ಲಿ ಗುಟಕು ನೀರು ಕುಡಿಯ ಹತ್ತಿದೆನು! ತುಸ ಹೊತ್ತಿನಲ್ಲಿ ಮುಳುಗಿದೆನು. ಈತನು ಆ ನೌಕೆಯನ್ನು ವೇಗದಿಂದ ಮುಂದೆ ಸಾಗಿಸಿ ಬಿಟ್ಟನು!

ಆದರೆ ಅದ್ಭುತ ಯೋಗಾಯೋಗದಿಂದ ನಾನು ಯಾವಾಗ ಒಮ್ಮೆಲೆ ನೀರ ಮೇಲೆ ಬಂದೆನೋ, ಆಗ ಅದೇ ಹಲಗೆಯು ತೆರೆಗಳ ಹೊಡತದೊಡನೆ ನನ್ನ ಕೈಗೆ ಸಿಕ್ಕಿತು. ಅದನ್ನು ಹಿಡಿದುಕೊಂಡು ನಾನು ಜೀವವುಳಿಸಿಕೊಳ್ಳುವ ಪರಾಕಾಷ್ಠೆ ಮಾಡುತ್ತಿರುವಷ್ಟರಲ್ಲಿ ಜಾವರಾಗಳದೊಂದು ದೊಡ್ಡ 'ಡುಂಗಿಯು' ಮುಂದುವರಿದು ನನ್ನ ಹತ್ತರ ಬಂದಿತು. ಆಗ ಆ ಜಾವರಾಗಳು ನನ್ನನ್ನು ತಮ್ಮ ಡುಂಗಿ ಎಂಬ ನೌಕೆಯಲ್ಲಿ ಹಾಕಿಕೊಂಡು ನನ್ನನ್ನು ಬದುಕಿಸಿದರು; ಆದರೆ ಈ ರಫೀ ಉದ್ದೀನನ ಅಭಿಪ್ರಾಯದಂತೆ ನಾನು ಅಂದು ಸಮುದ್ರದಲ್ಲಿ ಮುಳುಗಿ ಸತ್ತು ಹೋದೆನು! ಮತ್ತು ಈತನ ಅವಸ್ಥೆಯೇನಾಯಿತೆಂಬದು ನನಗೆ ಈ ಕ್ಷಣದ ವರೆಗೂ ಗೊತ್ತಿರಲಿಲ್ಲ! ಹಾಗು ಈಗಲಾದರೂ ಈತನ ಹೆಸರು ಕೇಳಿದೊಡನೆ, ಈತನನ್ನು ಪ್ರತ್ಯಕ್ಷವಾಗಿ ಇಲ್ಲಿ ಕಂಡೊಡನೆ ಈತನೇ ಆ ದುಷ್ಟನೆಂಬದನ್ನು ನಾನು ಗುರ್ತಿಸಿದೆನು; ಮತ್ತು ಇವನು ನನ್ನ ಮೇಲೂ ಬೇರೆ ಎಷ್ಟೋ ಜನರ ಮೇಲೂ ಮಾಡಿದ್ದ ಅತ್ಯಾಚಾರದ ಸೇಡನ್ನು ಹೀಗೆ ಹಾಯಿಸಿಕೊಂಡೆನು! ಇನ್ನು ನೀವು ನನಗೆ 'ವಿಹಿತವನ್ನೇ ಮಾಡಿದಿರಿ' ಎಂದೆನ್ನಿರಿ; ಅಥವಾ ತದ್ವಿರುದ್ಧವಾಗಿ ಅನ್ನಿರಿ, ನಾನು ಅದನ್ನು ಲೆಕ್ಕಿಸುವದಿಲ್ಲ.

"ವಿಹಿತ ವೆಸಗಿದಿರೆಂದೇ ನಾನನ್ನತಕ್ಕವನ.! ನೀವು ಈ ನೀಚನನ್ನು ಈಗ ಒಮ್ಮೆ ಕೊಲೆಗೆಯ್ದಂತೆ ಮೂರು ಮೂರು ಸಾರೆ ಕೊಂದಿದ್ದರೂ 'ನೀವು ವಿಹಿತವನ್ನೇ ಮಾಡಿದಿರೆಂ'ದು ನಾನನ್ನುತ್ತಿದ್ದೆನು! ಈತನ ಅಂಥ ಅಘೋರ ಅಪರಾಧಗಳು ನನಗೂ ಗೊತ್ತಿವೆ. ಯಾವುದನ್ನು ನಾನೇ ಮಾಡಬೇಕಾಗಿದ್ದಿತೋ, ಆದರೆ ಪರಿಸ್ಥಿತಿಯ ಮೂಲಕ ಪೇಚಿನಲ್ಲಿ ಸಿಕ್ಕ ನನ್ನಿಂದ ಮಾಡದಾಗಿದ್ದ ಕಾರ್ಯವನ್ನು ನೀವು ಮಾಡಿರುತ್ತೀರಿ! ಆದರಿಂದ ನನ್ನ ಮುಂದಿನ ಬೇಟಿನಲ್ಲಿ ಬರಬಾರದಂತಹ ಅಡಚಣಿಗಳು ಬಂದರೂ, ಅವುಗಳ ಬಗ್ಗೆ ನನಗೆ ಚಿಂತೆಯೆನಿಸುವದಿಲ್ಲ!"

"ಅಲ್ಲ-ಅಲ್ಲ; ಈತನು ಜೀವಂತನಾಗಿದ್ದರೆ ಯಾವ ಅಡಚಣಿಗಳು ನಿಮ್ಮ ಮುಂದಿನ ಬೇಟಿನಲ್ಲಿ ಖಂಡಿತನಾಗಿಯೂ ಬರುತ್ತಿದ್ದವೋ, ಅಂದರೆ

ಬಹುಶಃ ನನ್ನಂತೆಯೇ ನಿಮ್ಮ ಘಾತವನ್ನೂ ಈತನು ಮಾಡಲಿಕ್ಕೆ ತಪ್ಪುತ್ತಿದ್ದಿಲ್ಲವೊ, ಈ ಅಧಮನಾದ ಸರ್ಪವು ಈಗ ಇಲ್ಲಿ ಹೀಗೆ ಜಜ್ಜಲ್ಪಟ್ಟದ್ದರಿಂದ ಆ ಸಂಕಟದ ನಿವಾರಣವೇ ಆಯಿತೆಂದು ತಿಳಿಯಿರಿ. ನಿಮ್ಮ ಮುಂದಿನ ಬೇತು ಇನ್ನು ಹೆಚ್ಚೆಚ್ಚು ನಿರ್ವೇಧಕವಾಗಿದೆಯೆಂಬುದನ್ನೇ ನಾನು ನಿಮ್ಮ ಅನುಭವಕ್ಕೆ ಬೇಗನೆ ತಂದು ಕೊಡುತ್ತೇನೆ. ನಾನು ಯಾರು?-"

"ಅಹುದು; ಅದನ್ನೇ ತಿಳಿಯುವ ಉತ್ಕಂಠೆಯೂ ಅವಶ್ಯಕತೆಯೂ ನನಗಿರುತ್ತದೆ."

"ಆದರೆ ನನ್ನ ಮತದಂತೆ ಅದನ್ನೇ ನೀವು ನನಗೆ ಕೇಳಬಾರದು-ನಾನು ನಿಮಗೆ ಹೇಳಬಾರದು. ಯಾಕಂದರೆ, ನೀವು ಅವಿಶ್ವಾಸುಗಳೆಂದಲ್ಲ. ಸ್ವರ್ಗವಾಸಿಗಳಾದ ಅಪ್ಪಾಜಿಯವರು ನಿಮ್ಮ ಚಾರಿತ್ರ್ಯದ ಬಗ್ಗೆ ನನಗೆ ಯಾವ ಪ್ರಶಸ್ತೀ ಪತ್ರವನ್ನಿತ್ತಿರುವರೋ, ಅದೇ ಆ ಶಂಕೆಗೆ ನಿರ್ವಿಕಾರವಾದ ನಿರಾಕರಣವಾಗಿದೆ. ಅಂಡಮಾನದೊಳಗಿನ ಅಘೋರೀ ಅಪರಾಧಿಗಳ ಜಗತ್ತಿನಲ್ಲಿ ಅದೇ ಅಪರಾಧಿಗಳ ಸಹಕಾರ್ಯದಿಂದ ಕರಿನೀರಿನಿಂದ ಓಡಿ ಹೋಗುವಂಥ ಜೀವದ ಮೇಲಿನ ಒಳಸಂಚಿನಲ್ಲಿ ಯಾರು ಸೇರಬೇಕಾಗಿದೆಯೊ, ಅವರು ಎರಡು ವಿಷಯಗಳನ್ನು ತ್ಯಜಿಸಬೇಕು. ಮೊದಲನೆಯದೆಂದರೆ, ಕೆಲಸಕ್ಕೆ ಅಪರಿಹಾರ್ಯವಿರುವದಕ್ಕಿಂತ ಹೆಚ್ಚಾಗಿ ಸ್ವಂತದ್ದಾದ ಪೂರ್ವಪೀಠಿಕೆಯನ್ನು ಬೇರೆಯವರಿಗೆ ಹೇಳಬಾರದು; ಮತ್ತು ಎರಡನೇ ಸಂಗತಿಯೆಂದರೆ, ಜೀವದ ಆಶೆ! ಇವೆರಡು ಸಂಗತಿಗಳನ್ನು ಬಿಟ್ಟು ಬಿಡುವದು ಅವಶ್ಯವೆಂದು ನಾನು ಅನುಭವದಿಂದ ನಿರ್ಧರಿಸಿ ಬಿಟ್ಟಿರುತ್ತೇನೆ! ನಿಮ್ಮ ವಿಷಯದ ಪೂರ್ವ ಪೀಠಿಕೆಯು ಅವಶ್ಯವಿದ್ದಷ್ಟು ನನಗೆ ಗೊತ್ತಿದೆ. ನಾನು 'ಡೋಲಕಾಠಿ' ಎಂದಿಷ್ಟೇ ನನ್ನ ಪೂರ್ವಪೀಠಿಕೆಯು ಈ ಕೆಲಸದಲ್ಲಿ ನಿಮಗೂ ಸಾಕಾಗುವಂತಿದೆ. ಪ್ರಸಂಗ ವಿಶೇಷದಲ್ಲಿ ಬೇಕು ಬೇಕಾದಾಗ ಹೆಚ್ಚು ಹೆಚ್ಚಿನ ನನ್ನ ಸಂಗತಿಯನ್ನು ನಾನಾಗಿಯೇ ನಿಮಗೆ ತಿಳಿಸೇನು. ಇನ್ನು ನೀವು ಮೊದಲು ನಮ್ಮ ಜಾವರಾಗಳ ಕಡೆಗೆ ನಡೆಯಿರಿ. ನಾನಕೋಬಿ ರಾಜನು ನನ್ನ ಅನುಕೂಲ ಅಭಿಪ್ರಾಯದ ಮೇರೆಗೆ ನಿಮ್ಮ ಭೆಟ್ಟಿಗಾಗಿ ತೀರ ಉತ್ಸುಕನಾಗಿರುತ್ತಾನೆ. ಓಹೋ! ನಿಮ್ಮ ಬಳಿಯಲ್ಲಿ ಒಂದು ತುಬಾಕಿಯೂ ಕೆಲ ಮದ್ದು-ಗುಂಡುಗಳೂ ಒಬ್ಬ ಪೋಲೀಸನ ಬಟ್ಟೆಗಳೂ ಇದ್ದವಲ್ಲವೆ? ಈ ಜಾವರಾನು ಅದೆಲ್ಲ ಸಂಗತಿಯನ್ನು ನಮಗೆ ತಿಳಿಸಿದ್ದನು."

"ಇಗೋ, ಇಲ್ಲಿವೆ ನೋಡಿರಿ; ಆದರೆ ನಾನು ಅವನ್ನೆಲ್ಲ ಒಂದು ಕಾರಣಕ್ಕಾಗಿ ಅಡಗಿಸುತ್ತ ಬಂದಿದ್ದೇನೆ. ನಮ್ಮ ಕೈಯೊಳಗಿನ ಆ ಶಸ್ತ್ರಾಸ್ತ್ರಗಳನ್ನು

ಕಂಡು ಜಾವರಾಗಳು ಬೆದರಬಾರದು; ಮತ್ತು ಆ ಜೀನಸುಗಳನ್ನೆಲ್ಲ ನಾನು ನನ್ನ ಸ್ವಾಧೀನದಲ್ಲಿಯೇ ಇಟ್ಟುಕೊಳ್ಳುತ್ತ ಬಂದೆನು. ಇದಕ್ಕೆಲ್ಲ ಈ ಅಧಮ ರಘೀ ಉದ್ದೀನನ ಮೇಲಿನ ನನ್ನ ಅಪನಂಬಿಕೆಯೇ ಕಾರಣವಾಗಿತ್ತು."

"ಆದರೆ ನಾನನ್ನುವದೇನಂದರೆ, ನಿಮ್ಮ ಬಳಿಯಲ್ಲಿ ಓಡಿಹೋಗಲಿಕ್ಕೆ ಅತ್ಯವಶ್ಯಗಳಾದ ವಸ್ತುಗಳಿದ್ದು, ನನ್ನಲ್ಲಿ ಅವುಗಳ ಅಭಾವವೆಂಬುದನ್ನು ಕೇಳಿಯೇ ನನಗೆ ನಿಮ್ಮ ಸಹಕಾರ್ಯದ ಬಗ್ಗೆ ಚಡಪಡಿಕೆಯುಂಟಾಯಿತು. ಇನ್ನು ಆ ವಸ್ತುಗಳನ್ನು ನೀವು ಸಂಗಡ ತಕ್ಕೊಂಡೇ ನನ್ನೊಡನೆ ನಡೆಯಿರಿ."

ಗಿಡ-ಮರಗಳ ಕೆಳಗಿನ ಎಲೆ-ಹುಲ್ಲುಗಳಲ್ಲಿ ಅಡಗಿಸಿಟ್ಟಿದ್ದ ಆ ಎಲ್ಲ ಪದಾರ್ಥಗಳನ್ನು ಕಂಟಕನು ಹೊರೆದೆಗೆದು ತಂದನು. ಕೂಡಲೆ ಡೋಲಕಾಠಿಯು ಮೊಟ್ಟಮೊದಲು ಆ ತುಬಾಕಿಯ ಮೇಲೆ ಬುಭುಕ್ಷಿತನು ಪಕ್ವಾನ್ನದ ಮೇಲೆ ಮುಗಿಬೀಳುವಂತೆ ಒಮ್ಮೆಲೆ ಮುಗಿಬಿದ್ದನು; ಮತ್ತು ಒಳ್ಳೇ ಶಿಸ್ತಿನಿಂದ ಆ ನಗ್ನ-ಉಲ್ಲಿಂಗ ವೀರನು ಅದನ್ನು ತನ್ನ ಹೆಗಲ ಮೇಲಿಟ್ಟು ಕೊಂಡು ಮುಂದೆ ಸರಿದು, ಕಂಟಕನನ್ನು ಕುರಿತು ಒಳ್ಳೇ ಸೈನಿಕ ಪದ್ಧತಿಯ ಆಜ್ಞೆಯನ್ನು ಮಾಡಿದನು:

"ಚಲೋ, ಆವ, ಮೇರೇ ಪೀಛೇ ಪೀಛೇ ಆವ!"

ಕಂಟಕನು 'ಭಲೆ ಬಾಹದ್ದರ!' ಎಂದಂದು ನಕ್ಕು "ಈ ತುಬಾಕಿಯ ಸ್ಪರ್ಶದಿಂದ ನಿನ್ನ ಹೆಜ್ಜೆಗಳು ಕೂಡ ಯಾವನೊಬ್ಬ ಸೈನಿಕನಂತೆ 'ಟಪ್ಪಟಪ್ಪ' ಎಂದು ಬೀಳತೊಡಗಿದವು. ನಿನ್ನ ಮೈಯಲ್ಲಿ ಯಾವನೊಬ್ಬ ಸೈನಿಕನ ಸಂಚಾರವೇ ಆದಂತಾಗಿದೆ!"

"ಯಾವನೊಬ್ಬ ದಂಡಾಳಿನದೇ ಏಕೆ? ಪೂರ್ವದಲ್ಲೊಮ್ಮೆ ನಾನೂ ಒಬ್ಬ ದಂಡಾಳೇ ಆಗಿದ್ದೆನು! ನಾನು ಯುದ್ಧವನ್ನು ನೋಡಿದವನಿರುತ್ತೇನೆ. ಬಾಬೂಜೀ, ನಾನು ಪ್ರತ್ಯಕ್ಷ ರಣಭೂಮಿಯಲ್ಲಿ ಕಾದಿದವನಿರುತ್ತೇನೆ...."

ಆದರೆ ಬಾಯೊಳಗಿಂದ ಒಮ್ಮೆಲೆ ಹೊರಟು ಹೋದ ಸ್ವಂತದ ಪೂರ್ವವೃತ್ತದ ಇಷ್ಟು ಸಂಗತಿಯೇ ಹೆಚ್ಚಾಯಿತೆಂದು ಅನಿಸಿದ್ದರಿಂದಲೋ ಏನೋ, ಡೋಲಕಾಠಿಯು ಒಮ್ಮೆಲೆ ಸುಮ್ಮನಾದನು; ಹಾಗು ಆ ಕಂಟಕ ಮತ್ತು ಆ ಜಾವರಾ ಈ ದಂಡಾಳುಗಳ ಮುಂದಾಳುತ್ವವನ್ನು ವಹಿಸಿ, ಆ ಕಾಡಿನೊಳಗೆ ಯಾವನೊಬ್ಬ ಸೇನಾಪತಿಯಂತೆ ಹೊರಟು, ಆ ನಾನಕೋಬಿ ರಾಜನ ಕಾಡು ರಾಜಧಾನಿಯ ಕಡೆಗೆ 'ಕ್ವಿಕ್‌ಮಾರ್ಚ' ಮಾಡುತ್ತ ನಡೆದನು.

---

೨೦ನೇ ಪ್ರಕರಣ.

ಕಂಟಕಿಯು ಹೆಂಗಸರ ಬಂದಿಗೃಹದೊಳಗಿನ ಅಡುಗೆಯ ಚಪ್ಪರದಲ್ಲಿ ಸೊಪ್ಪಿನಪಲ್ಲೆಯ ಒಂದು ಬಹು ದೊಡ್ಡ ಕಬ್ಬಿಣದ ಡಿಳ್ಳಿಯ ಕೆಳಗೆ ಉರಿ ಚಾಚುತ್ತ ನಿಂತಿದ್ದಳು. ಬಂದೀ ಸ್ತ್ರೀಯರ ವೇಷದಂತೆ ಮೊಣಕಾಲವರೆಗಿನ ಒಂದು ಉರುಟಾದ ಸೀರೆಯನ್ನುಟ್ಟಿದ್ದಳು. ಎಣ್ಣೆ, ಹೆಳಲು, ಬೈತಲುಗಳಿಲ್ಲದೆ ಎಂಟೆಂಟು ದಿನ ಕಳೆಯಬೇಕಾಗುತ್ತಿದ್ದದರಿಂದ ಮತ್ತು ತೀರ ಹೊಲಸು ಹಾಗು ನೀಚರಾದಂಥ ಅನೇಕ ಜನ ಸ್ತ್ರೀಬಂದಿಗಳ ಮಧ್ಯದಲ್ಲಿ ಹಗಲಿರಳು ಕೂಡಿರ ಬೇಕಾದ್ದರಿಂದ ಕೆದರಿ-ಚಿದರಿದಂಥ ಮತ್ತು ಹೇನು-ಸೀರುಗಳ ಹಾವಳಿಯಿಂದ ಯುಕ್ತವಾದಂಥ ಅವಳ ತಲೆಗೂದಲುಗಳಾಗಿದ್ದವು ಕಾದು ಕೆಂಪಡರಿದ ದೊಡ್ಡ ದೊಡ್ಡ ಒಲೆಗಳ ಉತ್ತಾಪದಲ್ಲಿ ಒಂದೇಸವನೇ ದುಡಿದುಡಿದು ಹಸಗೆಟ್ಟ ಹಾಗು ಬೆವರಿನಿಂದ ಮುಳುಗಿದ್ದ ದೇಹದ, ಆದರೆ ಅಂಥ ಆ ಪರಿಸ್ಥಿತಿಯಲ್ಲೂ ಹುಟ್ಟಾ ಸುಭಗಳಾಗಿದ್ದ ಆ ಯುವತಿಯು, ಆ ಕಂಟಕಿಯು, ಆ ಮಾಲತಿಯು ಆ ಬೆಂಕಿಯಿಂದ ಪ್ರಜ್ವಲಿಸುತ್ತಿದ್ದ ದೊಡ್ಡ ದೊಡ್ಡ ಒಲೆಗಳ ನಡುವೆ ಪಂಚಾಗ್ನಿ ಸಾಧನದಲ್ಲಿ ತಪಸ್ವಿಯು ಒಪ್ಪುವಂತೆ ಶೋಭಿಸುತ್ತಿದ್ದಳು.

ಬೇರೆ ಯಾರಿಗೆ ಹಾಗೆಂದು ತೋರದಿದ್ದರೂ ಅವಳೆದುರಿಗೆ ಆ ಕಾಲಕ್ಕೆ ನಿಂತುಕೊಂಡಿದ್ದ ಮತ್ತು ಅವಳಿಗೆ ಗೊತ್ತಾಗದಂತೆ ಅವಳ ಕಡೆಗೆ ಸಹೃದಯ ಕೌತುಕದಿಂದ ನಿರೀಕ್ಷಿಸುತ್ತಿದ್ದ ಅನುಸೂಯಾ ಜಮಾದಾರಳಿಗಂತೂ ಆ ಕಂಟಕಿಯು ಹಾಗೆಯೇ ಶೋಭಿಸುತ್ತಿರುವಳೆಂದು ಭಾಸವಾಯಿತು!

ಆಗ ಅಲ್ಲಿಯೇ ಕೆಲಸ ಮಾಡುತ್ತಿದ್ದ ಬೇರೊಬ್ಬ ಬಂದಿ ಸ್ತ್ರೀಯಳಿದ್ದಳು. ಅವಳು ಹಿಟ್ಟಿನ ಚೀಲ ತರುವ ಕೆಲಸಕ್ಕೆಂದು ಹೋಗಲು, ಅನುಸೂಯಾ ಜಮಾದಾರಳು ಚಿಟಿಕೆ ಹೊಡೆದಳು. ಕಂಟಕಿಯು ಮೇಲೆ ಮುಖವೆತ್ತಿ ನೋಡಿದಳು. ತುಸಮುಂದೆ ಬಂದಳು. ಅಕ್ಕ-ಪಕ್ಕಗಳಲ್ಲಿ ನಿರುಕಿಸಿದಳು; ಮತ್ತು ಅನುಸೂಯೆಯ ಕೈಯೊಳಗಿನ ಚೀಟಿಯೊಂದನ್ನು ತಟ್ಟನೆ ತಕ್ಕೊಂಡು ಬದಿಯಲ್ಲಿದ್ದ ಕಟ್ಟಿಗೆಯ ಗುಂಪಿನ ಮರೆಗೆ ಹೋಗಿ ಅಡಗಿಕೊಂಡಳು. ಅನುಸೂಯಾ ಜಮಾದಾರಳು ಬಾಗಿಲಲ್ಲೇ ನಿಂತುಕೊಂಡು, ಒಳಗೆ ಯಾರೂ ಬಾರದಂತೆ ನೋಡಿಕೊಂಡಳು. ಒಂದೆರಡು ಮಿನೀಟುಗಳಲ್ಲೇ ಕಂಟಕಿಯು ಆ ಚೀಟಿಯನ್ನೋದಿಕೊಂಡು ಅಗ್ನಿಯಲ್ಲಿ ಚಲ್ಲಿಕೊಟ್ಟಳೋ, ಇಲ್ಲವೋ ಅಷ್ಟರಲ್ಲಿ ಅನುಸೂಯೆಯು "ಕೆಲಸವಾಯಿತಷ್ಟೇ?" ಎಂದು ಕೇಳುವ ಗೋಣಿನ ಸನ್ನೆ ಮಾಡುತ್ತಲೆ, ಕಂಟಕಿಯಾದರೂ ಆಯಿತೆಂಬರ್ಥದ ಪ್ರತಿ ಗೋಣು ಅಲ್ಲಾಡಿ ಸೂಚಿಸಿದ ಕೂಡಲೆ ಅನುಸೂಯೆಯು ಅಲ್ಲಿಂದ ಕಾಲ್ದೆಗೆದಳು. ಕಂಟಕಿಗೂ ತನಗೂ

ಸ್ನೇಹಸಂಬಂಧವಿರುವದೆಂಬ ಶಂಕೆಯು ಕೂಡ ಯಾರಿಗೂ ಬರಬಾರದೆಂಬ ಉದ್ದೇಶದಿಂದ ಅನುಸೂಯೆಯು ಇತ್ತೀಚೆಗೆ ಕಂಟಕಿಯೊಡನೆ ಚಕಾರಶಬ್ದವನ್ನು ಕೂಡ ಮಾತಾಡುತ್ತಿರಲಿಲ್ಲ. ಅವಳು ಬೇರೆ ಬಂದಿ ಜನ ಸ್ತ್ರೀಯರೊಡನೆ ಎಷ್ಟು ಮಾತಾಡುತ್ತಿದ್ದಳೋ ಅಷ್ಟು ಕೂಡ ಕಂಟಕಿಯೊಡನೆ ಕೆಲಸ-ಬೊಗಸೆಗಳಲ್ಲಿ ಸಂಬಂಧವುಂಟಾಗಗೊಡುತ್ತಿರಲಿಲ್ಲ.

ಆ ಚೀಟಿಯನ್ನೋದಿದ ಕೂಡಲೆ ಕಂಟಕಿಯ ಹೃದಯವು ಯಾವುದೊಂದು ಉತ್ಕಟ ಆಶೆಯು ಹೆಚ್ಚುವಿಕೆಯಿಂದ ಮತ್ತು ಸಾಹಸದ ಅಂಜಿಕೆಯಿಂದ ಧಡಪಡಿಸತೊಡಗಿತು. ಅವಳ ದೇಹವು ಸಂಚರಿಸುತ್ತಿದ್ದ ಆ ಬಂದಿಗೃಹದೊಳಗಿಂದ ಅವಳ ಮನಸ್ಸನ್ನಷ್ಟೇ ಎತ್ತಿಕೊಂಡೊಯ್ದು ಯಾವುದೊಂದು ಬೇರೆ ಜಗತ್ತಿನಲ್ಲೇ ಬಿಟ್ಟ ಹಾಗೆ ಆಕೆಗಾಯಿತು. ಆ ಚೀಟಿಯಲ್ಲಿ ಯಾವ ಭಯಂಕರ, ಆದರೆ ಶುಭಕರವಾದುದನ್ನು ಅವಳಿಗೆ ತಿಳಿಸಲಾಗಿದ್ದಿತೋ, ಅದರಲ್ಲಿ ತಾನು ವಹಿಸಬೇಕಾಗಿದ್ದ ಭೂಮಿಕೆಯನ್ನು ಹೇಗೆ ನಿಸ್ತರಿಸಿಕೊಳ್ಳಬೇಕೆಂಬ ಬಗ್ಗೆಯೇ ಅವಳ ಸಂಪೂರ್ಣ ಲಕ್ಷ್ಯವು ವೇಧಿಸಲ್ಪಟ್ಟಿತ್ತು. ಅವಳು ತನ್ನ ಮನಸ್ಸಿನೊಳಗಿನ ರಂಗಭೂಮಿಯಲ್ಲಿ ತನ್ನ ಸಾಹಸೀ ಭೂಮಿಕೆಯನ್ನು ಪುನಃ ಪುನಃ ಮಾಡಿ ನೋಡುತ್ತಿದ್ದಳು; ಬೇತನ್ನು ನಿರ್ಧರಿಸುತ್ತಿದ್ದಳು. ಅತ್ಯಲ್ಪವೂ ತಪ್ಪಾಗಬಾರದೆಂದು ಅವಶ್ಯವಾದ ಎಲ್ಲ ಕೃತ್ಯವನ್ನೂ, ಚಲನವಲನ್ನೂ, ಪ್ರಸಂಗದ ಜೋಡಣಿಯನ್ನೂ ಹೇಗೆ ಪಾರುಗಾಣಿಸಬೇಕೆಂಬದನ್ನು ಸಂಪೂರ್ಣ ನಿರ್ಧರಿಸಿಕೊಳ್ಳಲೇ ಬೇಕು; ಮತ್ತು ಹೇಗಾದರೂ ಎಲ್ಲಿಯಾದರೂ ಅತ್ಯಲ್ಪವು ತನ್ನಿಂದಾಗಲಿ ಬೇರೆಯವರಿಂದಾಗಲಿ ತಪ್ಪಿದರೆ, ಚಲನವಲನಗಳಲ್ಲಿ ತುಸ ಹೆಚ್ಚು ಕಡಿಮೆಯಾದರೆ ಈಗಿದ್ದ ಸಂಕಟಕ್ಕಿಂತ ಎಂಥ ಭಯಂಕರವಾದಂಥ ಬೇರೊಂದು ಸಂಕಟದಲ್ಲಿ ತಾನು ಬೀಳಬೇಕಾದೀತೆಂಬ ಅರಿವಿನಿಂದ ಅವಳು ನಡುನಡುವೆ ಥರಗುಟ್ಟಿ ನಡುಗುತ್ತಿದ್ದಳು; ಆದರೆ ಅದೆಲ್ಲವೂ ಒಳಸಂಚು ಚೆನ್ನಾಗಿ ಕೂಡಿ ಬಂದರೆ? ಒಂದು ಹಗಲಿರುಳಲ್ಲಿ ಸುಖದ ಸ್ವರ್ಗದಲ್ಲ ಕಾಲಿಟ್ಟು, ಕಿಶನನ ಕೊರಳಿಗೆ ಅಪ್ಪಿಕೊಳ್ಳುವದೇ!

ಅವಳ ಮನಸ್ಸಿನಲ್ಲಿ ಆ ಬಿರುಗಾಳಿಯು ಎದ್ದಿತ್ತು; ಆದರೆ ಆಕೆಯ ವರ್ತನವು ಆ ಬಂದಿಗೃಹದೊಳಗಿನ ಗಡಿಯಾರದಂತೆ, ಬಂದಿಗೃಹವು ನೇಮಿಸಿಕೊಟ್ಟ ರೀತಿಯಂತೆ, ಶಿಸ್ತಿನಿಂದ ತಪ್ಪದೆ ನಡೆದಿತ್ತು. ಎಲ್ಲ ಬಂದಿ ಜನರ ಊಟವಾಗಿ ಮಧ್ಯಾಹ್ನದಲ್ಲಿ ಅಡುಗೆಯ ವಿಭಾಗದೊಳಗಿನ ಬಂದಿ ಸ್ತ್ರೀಜನರಿಗೆ ಯಾವ ಸ್ವಲ್ಪ ಬಿಡುವು ದೊರೆಯುವದೋ ಆ ಕಾಲದಲ್ಲಿ ಕಂಟಕಿಯು

ಬಹುಶಃ ಸುಮ್ಮನೆ ಬಿದ್ದುಕೊಂಡಳು; ಆದರೆ ಅವಳ ಮನಸ್ಸು ಮಾತ್ರ ಅಸಹ್ಯ ಅವಸ್ಥೆಯಿಂದಲೂ ಸಾಶಂಕ ಅಪೇಕ್ಷೆಯಿಂದಲೂ ಏನಾದೀತು, ಹೇಗಾದೀತು? ಎಂಬ ಚಿಂತೆಯಿಂದ ಎದ್ದೆದ್ದು ಹರಿದಾಡುತ್ತಿತ್ತು.' ಅವಳು ಆಗಾಗ್ಗೆ ಅನುಸೂಯಾ ಜಮಾದಾರಳ ದಾರಿಯ ಕಡೆಗೆ ದೃಷ್ಟಿಯಿರಿಸಿಕೊಂಡು ಕೂಡ್ರುವಳು. ಗಡಿಯಾರದಲ್ಲಿ ಮೂರು ಬಡಿಯುಲು, ಅವಳಿಗೆ ನಾಲ್ಕೇ ಬಡಿಯಿತೆಂದೆನಿಸಿತು! ತಾನು ಹೊರಗಡೆಯ ಕೆಲಸಕ್ಕೆ ಹೋಗುವ ಕಾಲವೊಮ್ಮೆ ಒದಗಿತೆನಿಸಿತು; ಆದರೆ ಮೂರೇ ಬಡಿಯಿತೆಂಬದು ಖಾತ್ರಿಯಾಗಲು, ಅವಸಾನಗೆಟ್ಟಂತಾಗಿ, ಅವಳು ಮತ್ತೆ ಕೆಳಗೆ ಕುಳಿತಳು. ಇಷ್ಟಾಗುವದರೊಳಗೆ ನಿಜವಾಗಿಯೂ ನಾಲ್ಕು ಬಡಿದವು. ಅನುಸೂಯಾ ಜಮಾದಾರಳು ಬಂದಿಪಾಲನ ಅಪ್ಪಣೆಯ ಮೇರೆಗೆ ಎಂದಿನಂತೆ ಕಂಟಕಿ!' ಎಂದು ಕೂಗಿದಳು; ಮತ್ತು ಎಲ್ಲರ ಸಮಕ್ಷದಲ್ಲಿ ಕಂಟಕಿಗೆ ಅವಳ ಸಂಜೆಯ ಮುಂದಿನ ಹೊರಗಡೆಯ ಕೆಲಸಕ್ಕೆ ಹೋಗಲು ಆಜ್ಞೆ ಮಾಡಿದಳು.

ಆ ಹೊರಗಿನ ಕೆಲಸವೆಂದರೆ, ಆ ಬಂದಿ ಜನಗಳಿಗಾಗಿ ನಿರ್ಮಿಸಿದ್ದ ಆ ಬಂದಿಶಾಲೆಯ ಹೊರಗಡೆಯೊಳಗಿನ ಪ್ರೇಮೋದ್ಯಾನಕ್ಕೆ ಹೋಗಿ, ಅಲ್ಲಿಯ ಕಸಗೂಡಿಸುವ ಹಾಗು ವ್ಯವಸ್ಥೆಯಿರಿಸುವ ಕೆಲಸವಾಗಿತ್ತು. ಕಂಟಕಿಯ ಶುದ್ಧ ನಡವಳಿಯನ್ನು ಅರಿತು, ಬಂದಿಪಾಲನು ಆ ಕೆಲಸವನ್ನು ಅವಳಿಗೆ ಒಪ್ಪಿಸಿದ್ದನು. ಅವಳು ದಿನಾಲು ಆ ಪ್ರೇಮೋದ್ಯಾನದೊಳಗೆ ಹೋಗುವ ಸಲುವಾಗಿ ಹೀಗೆಯೇ ಬಂದಿಗೃಹದ ಹೊರಗೆ ಹೋಗುತ್ತಿದ್ದಳು; ಸಂಜೆಯ ಮುಂದಿನ ಕಸಗೂಡಿಸಿ, ವ್ಯವಸ್ಥೆಯಿರಿಸಿ ಪ್ರೇಮೋದ್ಯಾನವು ಮುಚ್ಚಲ್ಪಟ್ಟಿತೆಂದರೆ, ಅವಳು ಮತ್ತೆ ಆ ಬಾಗಿಲದೊಳಗೆ ಬಂದು. ಬಂದಿಗೃಹವಲ್ಲಿ ಹೋಗಿ ಸ್ವತಃ ಬಂದಿಯಾಗುತ್ತಿದ್ದಳು; ಆದರೆ ಇಂದು?-

ಇಂದು ಈ ಬಂದಿಗೃಹದ ತಲೆವಾಗಿಲೊಳಗಿಂದ ಹೊರಬಿದ್ದ ಬಳಿಕ ಮತ್ತೆ ಒಳಗೆ ಬಾರದಿರುವುದೇ ಅವಳ ನಿಶ್ಚಯವಾಗಿತ್ತು. ಕಂಟಕನು ಅನುಸೂಯೆಯ ಮೂಲಕ ಗುಪ್ತವಾಗಿ ಕಳಿಸಿದ್ದ ಆ ಚೀಟಿಯೊಳಗಿನ ಸಾಹಸದ ಒಳಸಂಚಿನಂತೆ ಓಡಿ ಹೋಗುವದರಲ್ಲಿ ಯಶ ದೊರೆತರೆ ಹಾಗೆ; ಅಪಯಶವೊದಗಿದರೆ ತತ್‌ಕ್ಷಣದಲ್ಲಿಯೇ ಹೊಟ್ಟೆಯೊಳಗೆ ಚೂರಿ ಚುಚ್ಚಿಕೊಂಡು ಆತ್ಮಹತ್ಯೆಯ ಮೂಲಕ ಹೀಗೆ-ಅಂತೂ ಈ ದಿನ ಬಂಧಮುಕ್ತವಾಗುವದೇ; ಏನಾದರೂ ಮತ್ತೆ ಈ ಬಾಗಿಲೊಳಗಿಂದ ಈ ಜೇಲಿನೊಳಗೆ ಬರುವಂತಿಲ್ಲ, ಎಂಬ ನಿರ್ಧರದಿಂದ ಕಂಟಕಿಯು ಆಗ ಹೊರಬಿದ್ದಳು 'ಜೀವಾವಧಿಯ ಶಿಕ್ಷೆಯು ಇಂದು ಇಲ್ಲಿಯೇ ಮುಗಿಯಿತಲ್ಲ!' ಎಂದು ಮಾಲತಿಯು-ಆ ಕಂಟ

ಕಿಯು ತನ್ನ ಮನಸ್ಸಿನಲ್ಲಿ ಗಟ್ಟಿಯಾಗಿ ತನ್ನನ್ನೇ ಬಚಾಯಿಸಹತ್ತಿದಳು. ಪ್ರೇಮೋದ್ಯಾನದ ಕಸಗೂಡಿಸುವ ಕಸಬೊರಿಗೆಯೊಡನೆ ಇಂದು ಅವಳು ಆ ಅಡಿಗೆಯ ಮನೆಯಲ್ಲಿ ಅಡಗಿಸಿಟ್ಟಿದ್ದ ಒಂದು ಹದನವಾದ ಚೂರಿಯನ್ನೂ ತಕ್ಕೊಂಡಿದ್ದಳು. ಅದನ್ನು ಅವಳು ಮತ್ತೊಮ್ಮೆ ಕೈಯಿಟ್ಟು ನೋಡಿದಳು; ಮತ್ತು ಬಾಗಿಲ ಬಳಿಯ ಗುರ್ತಿನ ಪಹರೆಯವರಾರಿಗೂ ಝಡತಿ ನೋಡುವ ಆವಶ್ಯಕತೆ ತೋರದಂತಹ ಮಾನಭಾವೀ, ಬೆಪ್ಪು ಹಾಗು ನಗೆಮೊಗದ ವೇಷ ದಿಂದ ಅವಳು ಆ ಬಂದಿಗೃಹದಿಂದ ಹೊರಬಿದ್ದಳು ಅನುಸೂಯೆಯು ಆಗ ಅವಳನ್ನು ಇಣಿಕಿ ನೋಡಲಿಕ್ಕೆ ಕೂಡ ಬಂದಿರಲಿಲ್ಲ. ತನಗೆ ಅದಾವುದೂ ಗೊತ್ತಿಲ್ಲವೆಂದು ಮುಂದೆ ಹೇಳಬರಬೇಕೆಂಬ ಉದ್ದೇಶವನ್ನಿಟ್ಟೇ ಅನುಸೂಯೆಯು ಬಂದಿಶಾಲೆಯೊಳಗಿನ ಬೇರೊಂದು ಕೆಲಸದಲ್ಲಿ ತೊಡಗಿಬಿಟ್ಟಿರುವ ವೇಷಧರಿಸಿದ ಚಾಣಾಕ್ಷತೆಯನ್ನು ತೋರಿ, ಬಂದಿಗೃಹದೊಳಗಿನ ತೀರ ನಟ್ಟ ನಡುವಿನ ಚೌಕಕ್ಕೆ ಆಕೆಯು ಯಾವಾಗಲೋ ಹೊರಟು ಹೋಗಿದ್ದಳು

ಬಂದಿಗೃಹದೊಳಗಿನ ಒಳ್ಳೇ ನಡತೆಯ ಸ್ತ್ರೀ ಪುರುಷ ಬಂದಿಗಳಿಗೆ ವಿವಾಹದ ಅನುಜ್ಞೆ ದೊರೆತ ಬಳಿಕ, ಆ ಕರಿನೀರ ದಂಡಿತರು ತಮಗೆ ರುಚಿಸುವ ಜೊತೆಗಾರರನ್ನು ಆರಿಸಿಕೊಳ್ಳುವ ಸಲುವಾಗಿ ಆ ಪ್ರೇಮೋದ್ಯಾನಕ್ಕೆ ಬರುತ್ತಿದ್ದರು. ಎಂದಿನಂತೆ ಈ ದಿನವೂ ಅವರೆಲ್ಲರು ಅಲ್ಲಿ ಕಲೆಯಹತ್ತಿದರು. ಪರಸ್ಪರರು ತಮ್ಮ ಜೊತೆಗಾರರೊಡನೆ ಮಾತು-ಕಥೆಗಳನ್ನಾಡುತ್ತ ಒಬ್ಬರ ಬಳಿಯಲ್ಲೊಬ್ಬರು ಕೂಡ್ರುವದರಲ್ಲಿ ಗುಂಗಾದರು. ಕಸ ಗೂಡಿಸುವದಾದ ಬಳಿಕ ಕಂಟಕಿಯೂ ಅವರೊಳಗೆ ಅತ್ತಿಂದಿತ್ತ ಅಡ್ಡಾಡಹತ್ತಿದಳು; ಆದರೆ ಅವಳ ಲಕ್ಷ್ಯವೆಲ್ಲ ಆ ಪ್ರೇಮೋದ್ಯಾನದ ಬಳಿಯಲ್ಲಿದ್ದ ಲೈನದಾರಿಯ ಕಡೆಗೇ ಇತ್ತು. ಐದು ಬಡಿಯಿತು; ಆದರೂ ಕೂಡ ಅವಳಿಗೆ ಬೇಕಾಗಿದ್ದ ಮನುಷ್ಯನು ಆ ದಾರಿಯೊಳಗೆ ಕಾಣಲೊಲ್ಲನು ಅವಳು ಅಸ್ವಸ್ಥಳಾದಳು; ಕಣ್ಣನ್ನು ಕಿಸಿಕಿಸಿದು ನೋಡತೊಡಗಿದಳು. ಐದು ಗಂಟೆಯ ನಂತರದ ಪ್ರತಿಯೊಂದು ನಿಮಿಷವು ಅವಳಿಗೆ ಪ್ರಹರದಂತೆ ದೀರ್ಘವಾಗಿ ತೋರಹತ್ತಿತು. ಐದೂಕಾಲಾಯಿತು! ಅವನಾರು? ಪೋಲೀಸನೇ?

ಅಹುದು-ಅಹುದು! ಪೋಲೀಸನೇ ಅವನು; ಆದರೆ ಕಂಟಕನೆಲ್ಲಿರುತ್ತಾನೆ? ಚೀಟಿಯೊಳಗೆ ಬರೆದಂತೆ ಲೈನದಾರಿಯ ಮೇಲೆ ಪೋಲೀಸನು ಕಾಣಿಸಿಕೊಂಡನು; ಆದರೆ ಕಂಟಕನೆಲ್ಲಿ?

ಇಷ್ಟರಲ್ಲಿ ಆ ಪೋಲೀಸನು ಆ ಚೀಟಿಯಲ್ಲಿ ಬರೆದಂತೆ ಕೈ ಎತ್ತಿ ಸನ್ನೆ ಮಾಡಿದನು. ಕೂಡಲೆ ಕಂಟಕಿಯು ತಟ್ಟನೆ ಪ್ರೇಮೋದ್ಯಾನದಿಂದ ಹೊರ

ಬಿದ್ದು ಲೈನದಾರಿಗೆ ಬಂದಳು. ಅಷ್ಟರಲ್ಲಿ ಆ ಪೋಲೀಸ ಸಿಪಾಯಿಯು ದಿಟ್ಟ ತನದಿಂದ ಮುಂದೆ ಬಂದು, ಕಂಟಕಿಯ ಕೈ ಹಿಡಿದನು. ಆ ಸ್ಪರ್ಶದಿಂದ ನ್ನಿರಿ; ಇಲ್ಲವೆ ಹತ್ತರ ಬಂದದ್ದರಿಂದ ನಿರೀಕ್ಷಿಸಿ ನೋಡಿದ್ದರಿಂದೆಂದನ್ನಿರಿ; ಆಗ ಆ ಕಂಟಕಿಯು ಗುರ್ತಿಸಿದಳೇನಂದರೆ, ಆ ಪೋಲೀಸನೇ ಕಂಟಕನೆಂದು! ಆತನ ಹಿಂದೆ ಒಬ್ಬ ಬಹು ಎತ್ತರದ, ಸಾದುಗಪ್ಪಿನ, ಆದರೆ ಆವಳಿಗೆ ತೀರ ಅಪರಿಚಿತನಾದಂಥ ಬೇರೊಬ್ಬ ಪೋಲೀಸ ಶಿಪಾಯಿ ಇದ್ದನು!

ಮೊದಲನೇ ಪೋಲೀಸನು ಕಂಟಕನಾಗಿದ್ದನು; ಎರಡನೆಯವನೇ 'ಡೋಲಕಾರಿ'ಯು! ಆವರಿಬ್ಬರೂ ಪೋಲೀಸರ ವೇಷಧರಿಸಿಕೊಂಡು, ಹೆಗಲ ಮೇಲೆ ಬಂದೂಕುಗಳನ್ನಿರಿಸಿ, ಟೊಂಕಕ್ಕೆ ಸರಕಾರೀ ಪೋಲೀಸ ಪಟ್ಟಿಗಳನ್ನು ಹಾಕಿಕೊಂಡು, ಕೇವಲ ಪೋಲೀಸ ಪದ್ಧತಿಯಿಂದ ಬಂದಿದ್ದರು. ಆವರು ಮುಂದೆ ಬಂದು, ಕಂಟಕಿಯ ಕೈಹಿಡಿದು ಆಕೆಗೆ ಕಟ್ಟಪ್ಪಣೆ ಗೆಯ್ದರೇನಂದರೆ: "ನಿನ್ನನ್ನು ಚೀಫಕಮಿಶನರ ಸಾಹೇಬರು ತಮ್ಮ ಬಂಗಲೆಗೆ ಕರೆತರ ಹೇಳಿ ರುತ್ತಾರೆ! ಕರೆದೊಯ್ಯಲಿಕ್ಕೆಂದು ನಾವಿಬ್ಬರೂ ಬಂದಿರುತ್ತೇವೆ!" ಕಂಟಕಿಯು ಹಿಂದೆ ಆ ಪ್ರೇಮೋದ್ಯಾನದಲ್ಲಿ ಬಂದಿಗೃಹದೊಳಗಿನ ಯಾವ ಒಬ್ಬ ಪಹರೆ ಯುವನು ಪಹರೆ ಮಾಡುತ್ತಿದ್ದನೊ, ಆತನು ಹತ್ತರ ಬರುತ್ತಿದ್ದನು. ಆ ಇಬ್ಬರು ಪೋಲೀಸರು ಆತನಿಗೆ ಹೇಳಿದರೇನಂದರೆ:—"ಈ ಹೆಣ್ಣುಮಗಳನ್ನು ನಾವು ಚೀಫ ಕಮಿಶನರರ ಕಡೆಗೆ ಕರೆದೊಯ್ಯುತ್ತಿರುವೆವು. ಏನು? ಬಂದಿಪಾಲ-ಜೇಲರರಿಗೆ ಹೇಳಬೇಕೇ? ಅದನ್ನು ನಾವು ಈ ಮೊದಲೇ ಹೇಳಿಬಂದಿರು ತ್ತೇವೆ ಚೀಫಕಮಿಶನರರಿಗಿಂತ ಜೇಲರರೇನು ಹಿರಿಯ ಅಧಿಕಾರಿಗಳಲ್ಲ ಬಹಳವಾದರೆ ನೀನು ನಮ್ಮ ಪಟ್ಟೆಯ ಮೇಲಿನ ಕ್ರಮಾಂಕಗಳನ್ನು ಬರೆದಿಟ್ಟು ಕೋ. ನಡೆ, ಕಂಟಕೀ, ಮುಂದಾಗು!"

ಆ ಪೋಲೀಸರ ಕಟ್ಟುನಿಟ್ಟಿನ ಮಾತು ಹಾಗು ಭಿಡೆಮುರುವತ್ತಿಲ್ಲದ ಶಿಸ್ತು ನೋಡಿ ಆ ಪಹರೆಯುವನು ಬೆಚ್ಚಿಬಿದ್ದನು ಕಂಟಕಿಯನ್ನು ಕರೆದೊಯ್ಯ ಬೇಡಿರೆನ್ನಬೇಕೆಂದರೆ, ಆ ಕಮಿಶನರನೇ ಆ ಅಂದಮಾನದಲ್ಲಿ ಮುಖ್ಯ ಸರ ಕಾರವು! ಇವರು ಆತನ ಪೋಲೀಸರು! ಇವರೊಡನೆ 'ಹೌದು-ಅಲ್ಲ' ಎನ್ನುತ್ತ 'ನೀನು-ನಾನು' ಅಂದರೆ, ಪ್ರಸಂಗದಲ್ಲಿ ನಾನೇ ಪೇಚಿಗೆ ಬೀಳಬೇಕಾದೀತು, ಎಂಬ ಶಂಕೆಯಿಂದ ಆ ಪಹರೆಯವನು ಗೊಂದಲದಲ್ಲಿ ಬಿದ್ದಿರುವಾಗಲೇ, ಆ ಪೋಲೀಸರು ಕಂಟಕಿಯನ್ನು ಮುಂದೆ ಹೊರಡಿಸಿಕೊಂಡು 'ಚಲೋ!' ಎಂದು ಅಪ್ಪಣೆಗೆಯ್ದರು! ಆ ಆಜ್ಞೆಯ ನಿರೀಕ್ಷಣೆ ಕೂಡ ಮಾಡದೆ, ಕಂಟಕಿಯು ಆ ಮೊದಲೇ ದಾರಿ ನಡೆಯಲಾರಂಭಿಸಿಬಿಟ್ಟಿದ್ದಳು! ಮುಂದೆ ಐದೇ ನಿಮಿಷ

ಗಳಲ್ಲಿ ಆ ಮೂವರೂ ಒಂದು ಅಡ್ಡದಾರಿಯಿಂದ ಬೇರೆ ಮಾರ್ಗ ಹಿಡಿದು ಹೋಗಿಯೇ ಬಿಟ್ಟರು!

ಆ ಪಹರೆಯವನು ಆ ತ್ರಿವರ್ಗರೂ ಕಾಣದಿರುವವರೆಗೆ ಆ ದಾರಿಯ ಕಡೆಗೇ ನೋಡುತ್ತ ನಿಂತನು. ಮುಂದೆ ಅರ್ಧ-ಮುಕ್ಕಾಲು ಗಂಟೆಗೆ ಆ ಪ್ರೇಮೋದ್ಯಾನವನ್ನು ದಿನದಂತೆ ಮುಚ್ಚಿಬಿಟ್ಟು, ಆತನು ಬಂದಿಗೃಹದೊಳಗೆ ಹೋದನು. ಸಂಜೆಯ ಮುಂದೆ ಗಣತಿ ಮಾಡುವ ಕಾಲಕ್ಕೆ ಒಬ್ಬ ಸ್ತ್ರೀ ಬಂದಿಯು ಕಡಿಮೆಯಾಗಿರುವಳೆಂದು ಗೊತ್ತಾಯಿತು; ಮತ್ತು ಹಾಗೆ ಕಡಿಮೆ ಯಾದವಳು ಕಂಟಕಿಯೇ ಎಂಬದು ಗೊತ್ತಾಗಲು, ಜೇಲರನು ಆ ಪ್ರೇಮೋ ದ್ಯಾನದ ಪಹರೆಯವನನ್ನು ಬೆದರಿಸಿದನು. ಆತನು ಆಗ ಸ್ಪಷ್ಟವಾಗಿ ತಿಳಿ ಸಿದನೇನಂದರೆ:—“ಚೀಫ ಕಮಿಶನರ ಸಾಬಕೊ ಪೂಛಿಯೆ. ಮೇರಿ ಕ್ಯಾ ಕಸೂರ? ಪೋಲೀಸ ಹಪಸರನೆ ಕಂಟಕೀಕೆ ಪಕಡಕರ ಉಸಕೆ ಸಾಥ ಚಲಾ ದಿಯಾ?”

ಚೀಫ ಕಮಿಶನರರ ಬಂಗ್ಲೆಗೆ ದಂಡಿತರನ್ನು ಹಲವು ಸಾರೆ ಆಕಸ್ಮಿಕ ವಾಗಿ ಕರೆದೊಯ್ಯುತ್ತಿದ್ದರು. ಹಿಂದುಸ್ತಾನದ ಹೊಸ ವಾರಂಟು ಇಲ್ಲವೆ ಬೇರೆ ಯಾವುದೊಂದು ಬಿಡುಗಡೆ, ಬಂದಿಯ ಬಿಡುವು ಮುಂತಾದ ಕೆಲಸಗಳ ಸಲು ವಾಗಿ ಹಾಗೆ ಆಗಾಗ್ಗೆ ಘಟಿಸುತ್ತಿತ್ತು; ಆದರೆ ಬಂದಿಪಾಲನನ್ನು ಕೇಳದೆ, ಪರಸ್ಪರವಾಗಿ ಸಶಸ್ತ್ರ ಪೋಲೀಸರನ್ನು ಕಳಿಸಿ, ಒಬ್ಬ ತರುಣ ಸ್ತ್ರೀ ದಂಡಿತ ಳನ್ನು ಹಿಡಿದೊಯ್ಯುವುದು ಇದಂತೂ ಪದ್ಧತಿಗೆ ವಿರುದ್ಧವಾದದ್ದೇ! ಆದ ಕಾರಣ ಜೇಲರನು ಚೀಫ ಕಮಿಶನರರ ಬಂಗ್ಲೆಗೆ ಆಗಲೆ ದೂತರನ್ನು ಕಳಿಸಿ ದನು. ನೌಕೆಯೊಳಗಿಂದ ಆ ಬಂಗ್ಲೆಗೆ ಹೋಗಬೇಕಾಗುತ್ತಿತ್ತು. ಅಷ್ಟು ದೂರ ಹೋಗಿ, ದೂತನು ಕಮಿಶನರರ ಹೇಳಿಕೆಯನ್ನು ತಂದನೇನಂದರೆ:— “ಕಂಟಕಿಯೆಂಬ ಹೆಸರಿನ ಯಾವ ಸ್ತ್ರೀದಂಡಿತಳಿಗೂ ಇತ್ತಕಡೆಯಿಂದ ಕರೆ ಕಳಿಸಿರುವದಿಲ್ಲ.”

ಆದರಿಂದ ಯಾರೋ ಇಬ್ಬರು ಪೋಲೀಸರು ಆ ತರುಣ ಸ್ತ್ರೀ ದಂಡಿತ ಳನ್ನು ಓಡಿಸಿಕೊಂಡೊಯ್ದಿರಬೇಕೆಂಬದು ಸ್ಪಷ್ಟವಾಯಿತು. ಜೇಲರನು ಗಾಬರಿಗೊಂಡನು. ಜೇಲಿನೊಳಗಿನ ಸಂಕಟ ಪ್ರಸಂಗದ ‘ಅಲಾರ್ಮ ಬೆಲ್’ ಒಮ್ಮೆಲೆ ‘ಠಣ್ಣ-ಠಣ್ಣ’ ಎಂದು ಗಟ್ಟಿ-ಗಟ್ಟಿಯಾಗಿ ಬಡೆಯಹತ್ತಿತು. ಎಲ್ಲ ಕಡೆಗೂ ಶಿಪಾಯಿಗಳ ಓಡ್ಯಾಟವೂ, ಶೋಧವೂ, ಬಂದೋಬಸ್ತೂ ನಡೆಯಿತು. ವಿಶೇಷವಾಗಿ ಪೋಲೀಸ ಚಾಳಿನಲ್ಲಿ ಆ ಇಬ್ಬರು ಪೋಲೀಸರಾರೆಂಬ ಬಗ್ಗೆ ಕಟ್ಟುನಿಟ್ಟಿನ ಶೋಧನಡೆಯಿತು; ಯಾಕಂದರೆ ಆ ತರುಣಿಯನ್ನು ಹಿಡಿದೊ

ಯ್ದಿದ್ದವರು ಇಬ್ಬರು ಪೋಲೀಸರೇ ಇದ್ದರೆಂಬ ಬಗ್ಗೆ ಎಲ್ಲ ಕಡೆಯ ಪುರಾವೆಯಿಂದಲೂ ಗೊತ್ತಾಗಿತ್ತು. ದಾರಿಯಲ್ಲಿ ಇಬ್ಬರು ಪೋಲೀಸರು ಒಬ್ಬ ತರುಣ ದಂಡಿತಳನ್ನು ಮುಂದಿಟ್ಟುಕೊಂಡು ನಡೆದುದನ್ನು ನಾವು ನೋಡಿದ್ದೆವು; ಆದರೆ ಸರಕಾರೀ ಕೆಲಸವೇ ಅದೆಂದು ತಿಳಿದು ನಾವು ಇಲ್ಲದ ಉಸಾಬರಿ ಮಾಡಲಿಲ್ಲೆಂದು ಎಷ್ಟೋ ಜನ ದಾರಿಕಾರರು ಹೇಳಿದ್ದರು. ಆ ಇಡಿ ರಾತ್ರಿಯಲ್ಲಿ ಶೋಧದ ಕೆಲಸವೇ ನಡೆಯಿತು; ಆದರೆ ಆ ಪೋಲೀಸರಾರೆಂಬದು ತಿಳಿಯಲೊಲ್ಲದು; ಮತ್ತು ಆ ತರುಣಿಯನ್ನು ಅವರು ಎಲ್ಲಿಗೆ ಕರೆದೊಯ್ದರೆಂಬದೂ ತಿಳಿಯಲೊಲ್ಲದು.

ಈ ಬಗೆಯ ಕಮಿಶನರನ ಕಡೆಯ ಹೇಳಿಕೆಯು ಬಂದಿಗೃಹಕ್ಕೆ ಬಂದು ತಲುಪುವವರೆಗೂ ಕಂಟಕಿಯನ್ನು ಓಡಿಸಿಕೊಂಡೊಯ್ದುದ್ದು ಪಕ್ಕಾ ನಿಶ್ಚಯಿಸಲಾಗಲಿಲ್ಲ; ಆದರಿಂದ ಕಂಟಕ ಮತ್ತು ಡೋಲಕಾಠಿಯರಿಗೆ ನಾಲ್ಕೈದು ತಾಸುಗಳ ಅವಧಿಯು ಸಹಜವಾಗಿ ದೊರಕಿತು. ಅದುವರೆಗೆ ಅವರನ್ನು ಬೆನ್ನಟ್ಟಿ ಹೋಗುವ ಕೆಲಸಕ್ಕೆ ಪ್ರಾರಂಭವು ಕೂಡ ಆಗಿರಲಿಲ್ಲ. ಪೋಲೀಸರ ವೇಷ ಧರಿಸುವಲ್ಲಿ ಅವರು ತೋರಿಸಿದ್ದ ಚಾಣಾಕ್ಷತನವು ಅವರಿಗೆ ಬಹು ಉಪಯುಕ್ತವಾಯಿತು. ಯಾಕಂದರೆ, ಸರಕಾರಕ್ಕೆ ಬೇರೆ ಬಗೆಯ ಸಂದೇಹವೇ ಉಂಟಾಯಿತು. ಯಾವ ಕಡೆಗೆ ಶೋಧ ಮಾಡುವ ಆವಶ್ಯಕತೆಯಿರಲಿಲ್ಲವೋ, ಅತ್ತ ಕಡೆಗೇ ಅದು ನಡೆಯಿತು. ಕಂಟಕನು ಅದರ ಲಾಭವನ್ನು ಚನ್ನಾಗಿ ಮಾಡಿಕೊಂಡನು. ಈ ಮೊದಲು ಜಾವರಾ ಜನರು ಇಂಗ್ಲಿಷರ ದಂಡಿತರ ಮೇಲೆ ಯಾವ ದಾಳಿಯನ್ನು ಮಾಡಿದ್ದರೋ, ಆಗ ಅವರ ಬಾಣದಿಂದ ಅಲ್ಲಿ ಸತ್ತು ಬಿದ್ದಿದ್ದ ತುಬಾಕಿಯ ಸೈನಿಕನ ಮೈ ಮೇಲಿನ ಪೋಲೀಸೀ ಅಂಗಿಗಳನ್ನೂ, ಆತನ ತುಬಾಕಿ-ಕಾಡತೂಸುಗಳನ್ನೂ ಕಂಟಕನು ಕಿತ್ತುಕೊಂಡದ್ದರಿಂದ, ಡೋಲಕಾಠಿಯ ಬಳಿಯಲ್ಲಾದರೂ ಹೀಗೆಯೇ ಎತ್ತಿಹಾಕಿ ಸಂಗ್ರಹಿಸಿದ್ದ ಒಂದು ತುಬಾಕಿ, ಪೋಲೀಸ ಡ್ರೆಸ್ಸ ಹಾಗು ಪಟ್ಟಿಗಳಿದ್ದದ್ದರಿಂದ ಆ ಪೋಲೀಸರ ಎರಡು ಸಂಚುಗಳ ಮೂಲಕವೇ ಅವರ ಅಂದಿನ ಆ ಒಳಸಂಚೂ, ಸಾಹಸವೂ ಪ್ರಾರಂಭವಾಗಿ, ಅವುಗಳಿಗೆ ನಿರ್ವಿಘ್ನವಾಗಿ ಯಶದೊರೆತಿತ್ತು.

ಆತನ ಬಳಿಯಲ್ಲಿದ್ದ 'ಪೋಲೀಸ ವೇಷ'ದ ಮೂಲಕವೇ ಡೋಲಕಾಠಿಯನ್ನು 'ಭಗೋಡಾ'ನೆಂದು ಪ್ರತಿಬಂಧಿಸಬೇಕೆಂಬ ವಾರಂಟು ಹೊರಟು ಎಷ್ಟೋ ವರ್ಷಗಳಾಗಿದ್ದರೂ, ಆ ಕರಿನೀರಲ್ಲಿಯ ಸರಕಾರೀ ವಸಾಹತಿಯೊಳಗೆ ಕಪಟವೇಷದಿಂದ ಅಡ್ಡಾಡುವುದರಲ್ಲಿಯೂ, ಕೂಡಲೆ ಆ ಕಾಡಿನೊಳಗಿನ ಆ ಜಾವರಾಗಳ ರಾಜಧಾನಿಗೆ ಹೋಗಿ ಜೀವಿಸುವುದರಲ್ಲಿಯೂ ಆತನು ಅತ್ಯಂತ

ನಿಷ್ಣಾತನಾಗಿದ್ದನು. ಐವತ್ತೇಳರ ಸ್ವಾತಂತ್ರ್ಯಯುದ್ಧದೊಳಗಿನ ವೃದ್ಧವೀರ ರಾದ ಯಾವ ಅಪ್ಪಾಜಿಯಿದ್ದರೋ, ಅವರ ಕಡೆಗೂ ಆತನು ಅದೇ ಛದ್ಮವೇಷ ದಿಂದ ಆಗಾಗ್ಗೆ ಹೋಗಿ ಬರುತ್ತಿದ್ದನು. ಜಾವರಾಗಳು ಕಂಟಕನಿಗೆ ಆಶ್ರಯ ವಿತ್ತ ಬಳಿಕ ಡೋಲಕಾಠಿಯು ಆತನನ್ನೂ ಆ ವಿದ್ಯೆಯಲ್ಲಿ ನಿಪುಣನನ್ನಾಗಿ ಮಾಡಿಬಿಟ್ಟನು. ಕಂಟಕನ ಭಗಿನಿಯಾದ ಕಂಟಕಿಯನ್ನು ಬಂದಿಗೃಹದೊಳ ಗಿಂದ ಬಿಡಿಸುವಾಗಿನ ಆ ಧೈರ್ಯದ ಒಳಸಂಚನ್ನು ಆ ಡೋಲಕಾಠಿಯೇ ಮಾಡಿದ್ದನು. ಆತನೇ ಕಂಟಕನೊಡನೆ ಆ ಛದ್ಮವೇಷದಲ್ಲಿ ಅನುಸೂಯೆಗೆ ಆಕೆಯ ಮನೆಯಲ್ಲಿ ಭೆಟಿಯಾಗಿದ್ದನು. ಕಂಟಕನು ಅವಳ ಬಳಿಯಲ್ಲಿ ಇಡಿಗಂ ಟೆಂದು ಇಟ್ಟಿದ್ದ ಸಾವಿರ-ಹದಿನೈದು ರೂಪಾಯಿಗಳನ್ನು ಕಂಟಕನ ಹೇಳಿಕೆಯ ಮೇರೆಗೆ ಅವಳಿಂದ ತಿರುಗಿ ತಕ್ಕೊಂಡು, ಕಂಟಕಿಗೆ ಬಂದಿಗೃಹದಲ್ಲಿ ತಲುಪಿ ಸುವ ಸಲುವಾಗಿ ಆ ಕಂಟಕನ ಸಂಬಂಧದ ಗುಪ್ತಚೀಟಿಯನ್ನು ಅನುಸೂ ಯೆಯ ಮುಖಾಂತರ ಕಳಿಸಿದ್ದನು. ಆ ಚೀಟಿಯಂತೆ ಕಂಟಕಿಯು ನಿಶ್ಚಿತ ಕಾಲಕ್ಕೆ ದಿಟ್ಟತನದಿಂದ ಆ ಪ್ರೇಮೋದ್ಯಾನದೊಳಗಿಂದ ನುಸುಳಿ ಈ ಪೋಲೀ ಸರ ವೇಷದಲ್ಲಿದ್ದ ತನ್ನ ಜೊತೆಗಾರರೊಡನೆ ಜೀವಾವಧಿ ಶಿಕ್ಷೆಯ ಬೇಡಿ ಗಳನ್ನು ಒಂದು ಕ್ಷಣದಲ್ಲಿ ಕಡಿವೊಗೆಯುವ ಆ ಜೀವದ ಮೇಲಿನ ಸಾಹಸ ಮಾಡಿದ್ದಳು.

ಕಂಟಕ-ಡೋಲಕಾಠಿಯರೊಡನೆ ಬಂದಿಗೃಹದಿಂದ ನುಸುಳಿ ಹೋಗಿದ್ದ ಕಂಟಕಿಯು ನೆಟ್ಟಗೆ ಆ ಲೈನ ದಾರಿಯ ಬಿಟ್ಟು, ತಟ್ಟನೆ ಒಂದು ಗುಪ್ತ ಕಾಲ ದಾರಿಯಿಂದ ಸಮುದ್ರ ತೀರಕ್ಕೆ ತರಲ್ಪಟ್ಟಳು. ಅಲ್ಲಿಯೊಂದು ಜಾವರಾಗಳ 'ಡುಂಗಿ'ಯು ಸಜ್ಜಾಗಿಯೇ ಇತ್ತು. ಮರದ ಒಂದು ಬಹುದೊಡ್ಡ ಬೊಡ್ಡೆ ಯನ್ನು ಕಡಿದು, ಅದನ್ನು ಒಳಗೆ ಕೊರೆದು ನಾವಿನಂತೆ (ಮರಗಿ) ತೆಗ್ಗು ಮಾಡಿ, ನಾವಿನ ಆಕಾರದಂತೆಯೇ ನಿರ್ಮಿಸಿ, ಆ ಅಖಂಡ ಬೊಡ್ಡೆಯದೇ ಯಾವ ಒಂದು ನೌಕೆಯನ್ನು ಅಂಡಮಾನದೊಳಗಿನ ಮೂಲ ನಿವಾಸಿಗಳು ಕಲ್ಪಿಸಿರುವರೋ ಮತ್ತು ಸಮುದ್ರದ ದಂಡೆಗುಂಟ ಯಾವುದರ ಮೂಲಕ ತೀವ್ರ ಪ್ರವಾಸಮಾಡುವದು ಒಳ್ಳೇ ಖಾತ್ರಿಯದಾಗಿರುವದೋ, ಆ ತೀರ ಪೂರ್ವ ಕಾಲದ ನಾವಿ ಗೆಅಲ್ಲಿ 'ಡುಂಗೀ' ಎಂದೆನ್ನುತ್ತಾರೆ. ಮಾನವನು ನೌಕಾ ವಿದ್ಯೆಯಲ್ಲಿ ಹಚ್ಚಿದ್ದ ಮೊಟ್ಟಮೊದಲಿನ ಶೋಧವದು! ಜಾವರಾ ಜನರು ಆ ಬಗೆಯ ಡುಗಿಗಳಲ್ಲಿ ಸಮುದ್ರ ಪ್ರವಾಸ ಮಾಡುವದಕ್ಕೆ ಒಳ್ಳೇ ನಿಪುಣರು! ಅಂಥದೇ ಒಂದು ಡುಗಿಯು ಸಮುದ್ರದ ಒಂದು ದುರ್ಲಕ್ಷಿತ ಹಾಗು ಅಡ್ಡ ದಾರಿಯ ದಂಡೆಯಲ್ಲಿ ಕಂಟಕನು ಸಜ್ಜಾಗಿರಿಸಿದ್ದನು. ಕಂಟಕಿಯನ್ನು ಕರೆ

ಕೊಂಡು ಪೋಲೀಸ ವೇಷದೊಳಗಿನ ಆ ಸಶಸ್ತ್ರರಿಬ್ಬರು ಆ ಡುಂಗಿಯಲ್ಲಿ ಕುಳಿತರು. ಕೂಡಲೆ ಆ ಡುಂಗಿಯು ಲಗುಬಗನೆ ಸಮುದ್ರದೊಳಗೆ ಪ್ರವೇಶಿಸ ಹತ್ತಿತು. ದಂಡೆಯೊಳಗಿನ ಯಾವ ಅತ್ಯಲ್ಪ ಜನರು ಆ ಡುಂಗಿಯು ಆ ತರುಣಿಯನ್ನು ಕೂಡ್ರಿಸಿಕೊಂಡು ದೂರ ಹೋಗುವದನ್ನು ನೋಡಿದ್ದರೋ, ಅವರಿಗೆ ಆ ದೃಶ್ಯವು ವಿಶೇಷ ಚಮತ್ಕಾರದ್ದಾಗಿ ತೋರಿದ್ದರೂ, ಸಶಸ್ತ್ರರಾದ ಇಬ್ಬರು ಪೋಲೀಸ ಸಿಪಾಯಿಗಳೇ ಆ ಡುಂಗಿಯಲ್ಲಿದ್ದದ್ದನ್ನು ಕಂಡು, ಏನೊಂದು ಹೂಲಿಯೆಬ್ಬಿಸುವ ಬುದ್ಧಿ ಇಲ್ಲವೆ ಧೈರ್ಯವು ಅವರಿಗಾಗಲಿಲ್ಲ. ಆ ಡುಂಗಿಯು ಅಲ್ಪಾವಧಿಯಲ್ಲೇ ಆ ಕರಿನೀರೊಳಗಿನ ಹಾಳಿನೊಳಗಿನ ಹಾಳೂ ಹಾಗು ನಿಬಿಡವೂ ನಿರ್ಜನವೂ ಆದ ಅರಣ್ಯದ ದಂಡೆಗಿದ್ದ ಸಮುದ್ರದ ಭಾಗದೊಳಗೆ ಹೊಕ್ಕಿತು.

ಆ ಡುಂಗಿಯಲ್ಲಿ ಕಂಟಕಿಯು ಕಂಟಕನಿಗೆ ತೀರ ಹೊಂದಿಯೇ ಕುಳಿತಿದ್ದಳು. ಆಕೆಯು ಆಗ ಕಂಟಕನ ಖಾಸ ಭಗಿನಿಯೇ ಎಂದು ತಿಳಿದಿದ್ದ ಡೋಲಕಾರಿಗೆ ಆದರಲ್ಲಿ ವಿಶೇಷವೇನೂ ಅನಿಸಲಿಲ್ಲ; ಆದರೆ ಆಕೆಯ ಮನೋಹರವಾದ ತನುಲತಿಕೆಯು ಹಾಗು ಮನಮೆಚ್ಚಿಸುವ ನಗೆಮಾತು, ನಡುವಳಿಕೆ ಇವುಗಳನ್ನು ಕಂಡು ಆ ಡೋಲಕಾರಿಗೆ ಈ ತರುಣಿಯು ಹೀಗೆಯೇ ನನ್ನ ವೈದಡವಿ ಕುಳಿತರೆ, ಎಷ್ಟು ವಿಹಿತವಾದೀತಲ್ಲ! ಎಂದು ಅನಿಸದಿರಲಿಲ್ಲ

ಆ ಡುಂಗಿಯು ನಿರ್ಜನ ಹಾಗು ನಿರ್ವಿಘ್ನ ಸಮುದ್ರದ ಭಾಗದೊಳಗೆ ಪ್ರವೇಶಿಸಿದೊಡನೆಯೇ ನೀರ ತೆರೆಗಳ ಮೇಲೆ ಅದು ಹೇಗೆ ಹೇಗೆ ಅಲ್ಲಾಡ ಹತ್ತಿತೋ, ಹಾಗೆ ಹಾಗೆಯೇ ಕಂಟಕಿಯ ಹೃದಯವು ಆನಂದೋದಧಿಯಲ್ಲಿ ಅಲ್ಲಾಡತೊಡಗಿತು. ಪಂಜರದೊಳಗಿಂದ ತಪ್ಪಿಸಿಕೊಂಡು ಹೊರಬಿದ್ದ ಹಕ್ಕಿಗೆ ನಿಸ್ಸೀಮ ಆನಂದವು ಆಗಿಯೇ ಆಗುತ್ತದೆ; ಆದರೆ ಆ ಬಂದಿಗೃಹದೊಳಗಿಂದ ನುಸುಳಿದ್ದ ಮಾಲತಿಯ ಆನಂದವು ಅದಕ್ಕಿಂತಲೂ ನಿಸ್ಸೀಮವಾಗಿತ್ತು. ಯಾಕಂದರೆ ಪಂಜರದೊಳಗಿಂದ ಹಾರಿ ಹೋಗಿದ್ದ ಹಕ್ಕಿಯು ಕಣ್ಣಿಗೆ ಕಂಡ ಗಿಡದ ಮೇಲೇನೊ ಹೋಗಿ ಕೂಡ್ರುತ್ತದೆ; ಆದರೆ ಅದರ ಆಪ್ತೇಷ್ಟ ಮಿತ್ರರಾಗಿದ್ದ ಬೇರೆ ಹಕ್ಕಿಗಳು ಅದನ್ನು ಓಡಿಸಹತ್ತುತ್ತವೆ; ಅದಕ್ಕೆ ನಿರ್ಭಯವಾದ ಗೂಡು ಒಮ್ಮೆಲೆ ದೊರಕುವದಿಲ್ಲ; ಆದರೆ ಜೀವಾವಧಿ ಶಿಕ್ಷೆಯೊಳಗಿಂದ ನುಸುಳಿ ಹೋಗಿದ್ದ ಆ ಯಾವ ಹಕ್ಕಿಯು ಆ ಡುಂಗಿಯೊಳಗೆ ನಗುತ್ತ-ಕೆಲೆಯುತ್ತ ಕುಳಿತಿದ್ದಿತೋ, ಅದಕ್ಕಿದ್ದ ಅದರ ಒಬ್ಬನೇ ಒಬ್ಬ ಗೆಳೆಯನು-ಇಷ್ಟನು ಅದನ್ನು ಲಗುಬಗನೆ ತನ್ನದನ್ನಾಗಿ ಮಾಡಿರುತ್ತಾನೆ; ಕಿಶನನ ಪ್ರಣಯಪ್ರಿಯಲೋಭದೊಳಗೆ ಆ ಹಕ್ಕಿಗೆ ಸ್ನೇಹಮಯ ಜೊತೆಯು

ಮೆಚ್ಚಿನ ಕಾವು ಕೊಡುವ ಒಂದು ಸವಿಗೂಡು ಕೂಡಲೆ ದೊರಕಿದ್ದಾಗಿದೆ! ಆ ಹಕ್ಕಿಯು-ಆ ಮಾಲತಿಯು-ಆ ಬಿಡುಗಡೆಯ ಉಲ್ಲಾಸದಲ್ಲೂ ಕಿಶನನ ಜೊತೆಯಲ್ಲೂ ಒಮ್ಮೆಲೆ ಹೆಚ್ಚಾಗಿ ದಂಗಾದದ್ದರಿಂದ, ತನಗೆ ಜೀವಾವಧಿಯ ಶಿಕ್ಷೆಯು ಎಂದಾದರೂ ಆಗಿದ್ದಿತೋ, ಈಗಲೂ ಕೂಡ ಆ ಶಿಕ್ಷಾಸೆಟವಿಯು ತನ್ನ ಸುತ್ತಲೂ ತಿರುಗುತ್ತಿರುವಳೋ ಎಂಬದು ಆ ಕ್ಷಣದಮಟ್ಟಿಗಾದರೂ ಅವಳಿಗೆ ವಿಸ್ಮೃತಿಯೇ ಆಗಿದ್ದಿತೆನ್ನಬಹುದು. ಸದ್ಯದಲ್ಲಿ ತಾನು ಕಂಟಕಿಯಿರುವೆನು; ಮಾಲತಿಯಲ್ಲ, ಎಂಬುದನ್ನು ಕೂಡ ಅವಳು ಮರೆತಳು. ಖಗ್ರಾಸ ಗ್ರಹಣ ಹಿಡಿದಾಗ ಚಂದ್ರಬಿಂಬವು ಆಕಾಶದಲ್ಲಿ ಹೇಗೆ ಅದೃಶ್ಯವಾಗುವದೋ, ಹಾಗೆ 'ಮಾಲತಿ'ಯು ಯಾವಳಲ್ಲಿ ಅದೃಶ್ಯಳಾಗಿದ್ದಳೋ ಆ ಕಂಟಕಿಯ ಆರಿಷ್ಟ ಗ್ರಹಣವು ಬಿಟ್ಟೊಡನೆಯೇ ಮತ್ತೆ ಮೊದಲಿನಂತೆಯೇ ಅವಳು ಸುಂದರ, ಸುಭಗ ಮತ್ತು ಸುಖದವಾದ ಸ್ವರೂಪದಲ್ಲಿ ಪ್ರಕಟಳಾದಳು. ಆ ಆನಂದದ ಭರದಲ್ಲಿ ಮಾಲತಿಯು ಮಾಲತಿಯಂತೆಯೇ ಮತ್ತೆ ಒಮ್ಮೆ ನಗುತ್ತ, ಸಿಟ್ಟಾಗುತ್ತ, ಕುಣಿಯುತ್ತ, ಮಾತಾಡುತ್ತ ನಿಂತುಕೊಂಡಳು ಆ ಕಿಶನನು ಅವಳಿಗೆ ಮತ್ತೆ ಕಿಶನನಂತೆಯೇ ಕಾಣಹತ್ತಿದನು. ಆ 'ಡುಂಗಿ'ಯು ಆ ಸಮುದ್ರದ ನೀರ ತೆರೆಗಳಲ್ಲಿ ಮೇಲೆ-ಕೆಳಗಾಗುವಾಗ ಒಂದಿಷ್ಟು ಹೊಡಮಳ್ಳಿದರೂ, ಆ ಕಾರಣದಿಂದ ಎಲ್ಲ ಜೋಲಿಯೂ ತಪ್ಪಿದ ಅಚ್ಚಡದ ಸೋಗು ಮಾಡಿ ಮಾಲತಿಯು ಕಿಶನನ ವಕ್ಷಃಸ್ಥಳದ ಮೇಲೆ ಬಿದ್ದುಬಿಡುವಳು. ಕೂಡಲೆ ಕಿಶನನು ಅವಳನ್ನು ತನ್ನ ಬಾಹುಗಳಲ್ಲಿ ಸಾವರಿಸಿ ಹಿಡಿಯುವಾಗ ಆಲಿಂಗಿಸಿ ಹಿಡಿಯುತ್ತಿದ್ದನು! ಅಂಥ ಸ್ವಚ್ಛಂದ ಸುಖವನ್ನು ಆಸ್ವಾದಿಸುತ್ತ-ಆಸ್ವಾದಿಸುತ್ತ, ಆದರಿಂದ ಅವಳಿಗೆ ನಿಶೆಯೇ ಹತ್ತಿದ್ದರಿಂದ ಇನ್ನೂ ತನ್ನ ಸುತ್ತಲೂ ಇದ್ದ ಕಪಟದ ಆವರಣವನ್ನು ಮಾಲತಿಯು ಒಮ್ಮೆಲೆ ದೂರ ಸರಿದವಳೇ ಅಸಾವಧತೆಯಿಂದ:—"ಕಿಶನ್! ನೋಡು, ಅತ್ತ ನೋಡು, ಆ ಚಿಕ್ಕದಾದ ತೆರೆಯಲ್ಲಿ ಆ ಸೂರ್ಯನ ಅಸ್ತಂಗತ ಕಿರಣಗಳು ಒಳಸೇರುತ್ತಲೆ, ಬೇರೆ ಬೇರೆ ಬಣ್ಣಗಳ ಗುಲಾಬೀ ಹೂವಿನ ಹಾರದಂತೆ ಆ ತೆರೆಯು ಹೇಗೆ ಶೋಭಿಸುತ್ತಿದೆ ನೋಡು! ಸಮುದ್ರದೊಳಗಿನ ವಿಭಿನ್ನ ಬಣ್ಣಗಳ ಗುಲಾಬೀ ಹಾರವು ಹೇಗಿರುತ್ತದೆಂಬದನ್ನು ತೋರಿಸುವ ಸಲುವಾಗಿಯೇ ಈ ಪುಟ್ಟದಾಗಿ ಅರಳಿದ್ದ ತೆರೆಯನ್ನು ಹೇಗೆಂದರೆ ಹೇಗೆಯೇ ಎತ್ತಿ, ಅಂಡಮಾನದ ಆಶ್ಚರ್ಯವೆಂದು ನೆನಪಿಗಾಗಿ ಅವ್ವನಿಗೊಯ್ದು ತೋರಿಸಬೇಕೆಂದು ನನಗನಿಸುತ್ತಿದೆ! ಹೌದಲ್ಲೋ ಕಿಶನ್!"

ಆಕೆಯು ಇನ್ನೂ ಅದೆಷ್ಟೋ ಮಾತಾಡತಕ್ಕವಳು; ಆದರೆ ಅಷ್ಟರಲ್ಲಿ

ಕಿಶನನು ಅವಳ ಕಿರಿಬೆರಳನ್ನು ಸಾವಧಾನತೆಯ ಸೂಚನೆಗೆಂದು ಒತ್ತಿದನು. ಆಗ ಅವಳು ಮೆಟ್ಟಿಬಿದ್ದಳು; ಯಾಕಂದರೆ, ಅವಳು ಎರಡು ಸಾರೆ 'ಕಿಶನ್' 'ಕಿಶನ್' ಎಂದು ಸಂಬೋಧಿಸಿದ್ದರಿಂದ, ಡೋಲಕಾರಿಗೆ ಸಹಜವಾಗಿಯೇ ಜಿಜ್ಞಾಸೆಯುಂಟಾಗಿ, ಆತನು ಕೇಳಿದನೇನಂದರೆ:—

"ಏನು? 'ಕಿಶನ್!' ಅಂದರೆ ಕಂಟಕ ಬಾಬುಗಳ ಮನೆಯ ನಿಜವಾದ ಹೆಸರು ಕಿಶನನೆಂದಿತ್ತೇನು? ಮತ್ತು ನಿಮ್ಮಗಳ ತಾಯಿಯು ಇನ್ನು ಇರುವಳೇ? ಅವರು ಎಲ್ಲಿರುತ್ತಾರೆ! ಕಂಟಕ ಬಾಬುಗಳ ನಿಜವಾದ ಹೆಸರು ಹೇಗೆ ಕಿಶನನೆಂದಿದೆಯೋ, ಹಾಗೆಯೇ ನಿನ್ನ ನಿಜವಾದ ಹೆಸರಾದರೂ ಕಂಟಕಿಯೆಂದಿರದೆ, ಬೇರೆ ಏನಾದರೂ ಇದೆಯೇನು? ನಿನ್ನಂತಹ ಪಾತರಗಿತ್ತಿಗೆ ಯಾವುದೊಂದು ಹೂವಿನ ಇಲ್ಲವೆ ಸುಂದರವಾದ ಹಕ್ಕಿಯ ಹೆಸರೇ ಇಡಲ್ಪಟ್ಟಿದ್ದರೆ, ಒಳ್ಳೇ ಶೋಭಿಸುತ್ತಿತ್ತು!"

ಡೋಲಕಾರಿಗೆ ತನ್ನ ಒರಟು ಸ್ವಭಾವಕ್ಕೆ ಏನು ಅನಿಸಿತೋ ಅದನ್ನು ಆತನು ಉದ್ದಂಡವಾಗಿ ಆಡಿಬಿಟ್ಟನು. ಕಿಶನನು ಮನದೊಳಗೆ ಬೆದರಿದನು! ತಮ್ಮ ಅಜ್ಞಾತವಾಸದೊಳಗಿನ ಛದ್ಮಸ್ವರೂಪವನ್ನು ಕಿತ್ತೊಗೆಯುವಷ್ಟು ಸಂಕಟದ ಪೇಚಿನೊಳಗಿಂದ ತಾವಿನ್ನೂ ಬಿಡುಗಡೆ ಹೊಂದಿಲ್ಲವೆಂಬದನ್ನು ಆತನು ಚೆನ್ನಾಗಿ ಅರಿತಿದ್ದನು. ವಿನೋದದಿಂದ ಚುಚ್ಚಲ್ಪಟ್ಟ ಮುಳ್ಳನ್ನು ವಿನೋದದಿಂದಲೇ ತೆಗೆಯಬೇಕೆಂದು ಯೋಚಿಸಿ, ಕಿಶನನು ನಕ್ಕು—

"ಹೆಸರಿನಮಟ್ಟಿಗೇ ಮಾತಾಡಬೇಕಾದರೆ 'ಡೋಲಕಾರಿ' ಎಂಬ ಹೆಸರು ನಿಮ್ಮ ತೊಟ್ಟಿಲದ ಹೆಸರಿರಲಾರದು; ಮತ್ತು ನಾನು ನಿಮಗೆ ನಿಮ್ಮ ನಿಜವಾದ ಹೆಸರು-ದೆಸೆಗಳನ್ನು ಕೇಳುವಾಗ ನೀವೇ ನನಗಾವ ಸೂತ್ರವನ್ನು ಕಲಿಸಿದ್ದಿರಿ? ಕರಿನೀರೊಳಗಿಂದ ಯಾರಿಗೆ ಯಶಸ್ವೀರೀತಿಯಿಂದ ಓಡಿ ಹೋಗಬೇಕಾಗಿದೆಯೋ ಅವರು ತಮ್ಮ ಪೂರ್ವ ವೃತ್ತವನ್ನು ಬೇರೆಯವರಿಗೆ ಸುಮ್ಮನೆ ಹೇಳುವದು, ಜೀವದ ಅಂಜಿಕೆಯು ಇವೆರಡೂ ನಿಷಿದ್ಧವೆಂದು ತಿಳಿಸಿರಲಿಲ್ಲವೆ? ಹಾಗಾದರೆ ಈಗ ಹಾಗೆಯೇ ಆಗಲಿ. ಅದೇ ಉಪದೇಶದಂತೆ ನಮ್ಮ ಬಂಧು-ಭಗಿನಿಯರ ನಿಜವಾದ ಹೆಸರುಗಳನ್ನು ನೀವು ನಿಮ್ಮ ಈ ಡೋಲಕಾರಿ ಎಂಬ ಕೃತ್ರಿಮ ಹೆಸರನ್ನು ಬಿಟ್ಟು ನಿಜವಾದ ಹೆಸರು ತಿಳಿಸುವವರೆಗೂ ಹೇಳಲಾರೆವು."

"ಅಂದರೆ, ನಿಮ್ಮಿಬ್ಬರ ನಿಜವಾದ ಹೆಸರುಗಳು ಈ ಕಂಟಕ-ಕಂಟಕಿಗಳ ವ್ಯತಿರಿಕ್ತ ಬೇರೆ ಯಾವವಾದರೂ ಇವೆ ಎನ್ನಬೇಕು! ಇದನ್ನಾದರೂ ನೀವು ತಿಳಿಸಿದಂತಾಗಲಿಲ್ಲವೆ? ಮತ್ತು ನಿಮ್ಮ ನಿಜವಾದ ಹೆಸರು 'ಕಿಶನ' ಎಂದಲ್ಲವೆ."

ಅದೆಲ್ಲ ಗೊಂದಲವನ್ನು ಒಮ್ಮೆಲೆ ನಿಲ್ಲಿಸಿಬಿಡಬೇಕೆಂದು ಮಾಲತಿಯು

ನಡುವೇ ಬಾಯಿಹಾಕಿ:—

"ಇಲ್ಲರೀ. ನಾನು ಈ ಆಕಸ್ಮಿಕ ಬಿಡುಗಡೆಯ ಆನಂದದಿಂದ ಮೈಮರೆ ತದ್ದರಿಂದ, ಹುಚ್ಚುಮಂಕೇ ಆಗಿರುತ್ತೇನೆ. ನನ್ನ ಬಾಲ್ಯದೊಳಗಿನ ಒಬ್ಬ ಅಪ್ತನ ಹೆಸರೇ ನನಗೆ ಆಗಾಗ್ಗೆ ನೆನಪಾಗುತ್ತಿದ್ದು, ಅದೇ ಈಗ ಆಕಸ್ಮಿಕ ವಾಗಿ ಈ ನಮ್ಮ ಕಂಟಕ ಬಾಬುವನ್ನು ಸಂಬೋಧಿಸುವಾಗ ನನ್ನ ಬಾಯಿಂದ ಹೊರಬಿದ್ದು ಹೋಯಿತು!"

ಆದರೆ ಆ ತಪ್ಪುತಿಳುವಳಿಕೆಯೊಡನೆ ತನಗಾದ ಆ ಬಿಡುಗಡೆಯ ಆ ಅತ್ಯಂತ ಆನಂದವೂ ತಪ್ಪಿನದೇ. ಈ ಬಿಡುಗಡೆಯೆಂದರೆ, ಬಿಡುಗಡೆಯ ಪ್ರಯತ್ನದ ಫಲೋನ್ಮುಖ ಆರಂಭವಷ್ಟೇ; ಅಂತಿಮ ಸಫಲತೆಯಲ್ಲ, ಎಂಬದು ಆಕೆಗೆ ಕಠಿ ಸ್ವರೂಪದಲ್ಲಿ ಲಕ್ಷ್ಯಕ್ಕೆ ಬಂತು. ಆಗ ಅವಳು ಕೊಂಚ ವಿಮನಸ್ಕ ಳಾಗಿಯೇ ಕುಳಿತಳು.

ಅವಳು ಆಗಲೆ ಆ ಆಳವಲ್ಲದ ಸಮುದ್ರದಲ್ಲಿ ಹಕ್ಕಿಯಂತೆ ಮೇಲಕ್ಕೇ ರುತ್ತ ಕೆಳಕ್ಕಿಳಿಯುತ್ತ ನಡೆದಿದ್ದ ಆ ಡುಂಗಿ, ಆ ನೀರ ತೆರೆಯ ಮೇಲಿನ ತರ ತರದ ಬಣ್ಣಗಳ ಕಿರಣ, ಆ ಸಮುದ್ರ ಜೀವಿಗಳು ಹಾಗು ಬಂದಿಗೃಹದೊಳ ಗಿಂದ ತಾನು ಬಿಡುಗಡೆಯಾದೆನೆಂಬ ಉನ್ಮಾದಕ ಅರಿವು ಇವುಗಳಲ್ಲಿಯೇ ಮಗ್ನಳಾಗಿದ್ದಳು; ಆದರೆ ಆ ಆನಂದದ ನೌಕೆಯು ಯಾವುದರ ಮೇಲೆ ತೇಲುತ್ತ ನಡೆದಿದ್ದಿತೋ, ಆ ಸಮುದ್ರವು ಎಷ್ಟು ಆಳವಿದ್ದೀತೆಂಬದರ ಬಗ್ಗೆ ಈಗ ಅವಳ ಲಕ್ಷ್ಯವು ವೇಧಿಸಿತು!

"ಈ ಸಮುದ್ರವು ಎಷ್ಟು ಆಳವಾಗಿದ್ದೀತು? ಮತ್ತು ನಮ್ಮ ಡುಂಗಿಯು ಎಷ್ಟು ಚಿಕ್ಕದಿದೆಯಲ್ಲ!" ಮಾಲತಿಯು ಸಮುದ್ರದ ನೀರಲ್ಲಿ ಹಣಿಕಿ ಹಾಕುತ್ತ ಕಿಶನನಿಗೆ ವಿಮನಸ್ಕತೆಯಿಂದಲೆ ಪ್ರಶ್ನೆ ಮಾಡಿದಳು.

"ಅಹುದು; ಇಂಥ ಎಷ್ಟೋ ಸಣ್ಣ-ಪುಟ್ಟ ನೌಕೆಗಳೇ ಇಂಥ ಆಳವಾದ ಸಮುದ್ರದಲ್ಲಿ ತೇಲಿ ತೇಲಿ ಪರತೀರಕ್ಕೆ ಮುಟ್ಟುತ್ತಿರುವವಲ್ಲ!" ಆಕೆಯ ಮನ ಸ್ಸಿಗೆ ಬೇಕಾಗಿದ್ದ ಉತ್ತೇಜನ ದೊರೆಯುವದಕ್ಕೆಂದೇ ಕಿಶನನು ಆಗ ಹೀಗೆಂದು ಉತ್ತರವಿತ್ತನು.

"ಎಷ್ಟು ಮಧುರ ಮಾತಾಡುತ್ತೀಯೋ ನೀನು!" ಎಂದು ಅಚ್ಛದಿಂದ ಕಿಶನನ ಬೆನ್ನಮೇಲೊಮ್ಮೆ ಮೆಲ್ಲನೆ ಚಪ್ಪರಿಸಿ, ತನ್ನ ಮಾತೃಭಾಷೆಯಲ್ಲೇ ನುಡಿದಳು ಡೋಲಕಾರಿಗೆ ತನ್ನ ಮಾತೃಭಾಷೆ ತಿಳಿಯುವದಿಲ್ಲೆಂದು ಅವಳಿ ಗನಿಸಿತ್ತು; ಯಾಕಂದರೆ, ಇದುವರೆಗೆ ಅವರೆಲ್ಲರೂ ಅಂಡಮಾನದಲ್ಲಿ ಎಲ್ಲರೂ ಮಾತನಾಡುವ ಹಿಂದೀ ಭಾಷೆಯಲ್ಲೇ ಮಾತಾಡುತ್ತಿದ್ದರು.

"ಆದರೆ ನೀವು ನನ್ನ ಬೆನ್ನ ಮೇಲೆ ಹಾಗೆಯೇ ಅಚ್ಛದಿಂದ ಚಪ್ಪರಿಸಿ ಕೇಳಿದರೆ ನಾನಾದರೂ ಹಾಗೆಯೇ ಮಧುರವಾಗಿ ಮಾತನಾಡೇನು?" ಡೋಲ ಕಾಠಿಯು ತನ್ನ ಸೈನಿಕ ಪದ್ಧತಿಯ, ಹೇಚು-ಪೇಚುಗಳಿಲ್ಲದ ವಿನೋದದಿಂದ ಅವರ ಮಾತೃಭಾಷೆಯಲ್ಲೇ ಹೇಳಿದನು; ಇಷ್ಟೇ ಅಲ್ಲದೆ ನಿಷ್ಕಪಟ ಸಲಿಗೆ ಯಿಂದ ಅವನು ಮಾಲತಿಯ ಬೆನ್ನ ಮೇಲೊಮ್ಮೆ ತಾನಾಗಿಯೇ ಮೆಲ್ಲನೆ ಚಪ್ಪ ರಿಸಿದನು ಸಹ.

ಮಾಲತಿಯು ಚಮಕಿತಳಾಗಿ:—"ಅಂದರೆ? ನಿಮಗೂ ನಮ್ಮ ಮಾತೃ ಭಾಷೆ ಬರುತ್ತದೆಂದಂತಾಯಿತು. ನಿಮ್ಮ ಮೂಲ ನಿವಾಸ ಸ್ಥಳವಾದರೂ ಮಹಾರಾಷ್ಟ್ರದಲ್ಲಿಯೇ ಇದೆಯೇನು?"

"ಛೇ! ಪರಸ್ಪರರ ಪೂರ್ವವೃತ್ತವನ್ನು ಹೀಗೆ ಕೇಳಲಾಗದು. ಪ್ರತಿಯೊ ಬ್ಬರೂ ತಾವಾಗಿ ಏನಾದರೂ ಹೇಳಿದರೆ, ಅದನ್ನಷ್ಟೇ ಕೇಳಿಕೊಳ್ಳುವುದು ಎಂದು ಕಂಟಕಬಾಬುಗಳು ಹಾಗು ನಮ್ಮಲ್ಲಿ ಮೊದಲೇ ನಿರ್ಧಾರವಾಗಿದೆ"

ಡೋಲಕಾಠಿಯು ಹೀಗೆ ನುಡಿಯುತ್ತಿರುವಷ್ಟರಲ್ಲಿ ಸಮೀಪದ ಸಿಂಧು ತಟಾಕದ ಮೇಲಿನ ಗುಡ್ಡದಿಂದ 'ಊss!!' ಎಂದು ಗಟ್ಟಿ ಕಿರುಚೋಣವೂ ಚಪ್ಪಾಳೆಗಳ ಸಪ್ಪಳವೂ ಕೇಳಿಸಿತು ಕೂಡಲೆ ಕಂಟಕ-ಡೋಲಕಾಠಿಯರು ಸೇರಿ ಆ ಡುಂಗಿಯನ್ನು ಆ ದಂಡೆಯ ಕಡೆಗೆ ಸಾಗಿಸಹತ್ತಿದರು. ಅವರು ಮಾ ಡಿದ್ದ ಒಳಸಂಚಿನಂತೆ ಭರತಿ-ಓಹಟಿಯ ಮೇರೆಗೆ ಎಲ್ಲಿ ಸುರಕ್ಷಿತ ಸ್ಥಳವಿದ್ದೀತೊ ಅಲ್ಲಿ ಅವರನ್ನು ಇಳಿಸಿಕೊಳ್ಳುವ ಸಲುವಾಗಿ ಜಾವರಾಗಳು ಆ ಬದಿಗೆ ಬರತ ಕ್ಕವರಿದ್ದರು; ಹಾಗು ಹಾಗೆ ಸಂಜ್ಞೆ ಮಾಡುವವರಿದ್ದರು. ಅದರಂತೆ ಆ ಹದಿ ನೈದು-ಇಪ್ಪತ್ತು ಮಂದಿ ಜಾವರಾಗಳು ತಮ್ಮ ಬಿಲ್ಲು-ಬಾಣಗಳಿಂದ ಸಜ್ಜಾಗಿ, ಒಂದು ಮರೆಯ ಒತ್ತಿನ ಕಡೆಗೆ ಬಂದಿದ್ದರು. ಅಲ್ಲಿಗೆ ಆ ಡುಂಗಿಯು ಬಂದ ಕೂಡಲೆ ಅವರು ಕಂಟಕ ಸಹಿತನಾಗಿ ಎಲ್ಲರನ್ನೂ ಇಳಿಸಿಕೊಂಡರು; ಹಾಗು ನಿಬಿಡವಾದ ಕಾನಿನಲ್ಲಿ ಕತ್ತಲು ಗವಿಯುವಷ್ಟರಲ್ಲಿ ಸುತ್ತುತ್ತ ಸುತ್ತುತ್ತ ಅವ ರೆಲ್ಲರೂ ನಾನಕೋಬಿರಾಜನ ಆ ಕಾಡು ರಾಜಧಾನಿಗೆ ಹೋಗಿ ತಲುಪಿದರು.

ಅಲ್ಲಿ ಜಾವರಾಜನರೆಲ್ಲರೂ ಒಂದು ಬಹು ದೊಡ್ಡ ಅಗ್ನಿ ಕುಂಡವನ್ನು ಹೊತ್ತಿಸಿ ಅದರ ಸುತ್ತಲೂ ಕುಳಿತಿದ್ದರು. ಆ ಅಗ್ನಿಕುಂಡದ ಮೇಲೆ ಒಂದು ಬಹು ದೊಡ್ಡ ಕಾಡುಹಂದಿಯ ಧಡಕ್ಕೆ ಧಡವನ್ನೇ ತಲೆಕೆಳಗೆ ಮಾಡಿ ತೂಗ ಗಟ್ಟಿದ್ದರು. ಅವರ ಸಾಮೂಹಿಕ ಬೇಟೆಯಿದ್ದಿತೆಂದರೆ, ಆ ಪ್ರಾಣಿಯನ್ನು ಅವರು ಹಾಗೆ ಅಗ್ನಿಕುಂಡದ ಮೇಲೆ ತೂಗಗಟ್ಟುತ್ತಾರೆ ಅದು ಅಲ್ಲಿ ಚನ್ನಾಗಿ ಬೆಯ್ದು ಸುಟ್ಟಿತೆಂದರೆ, ಆ ಮೇಲೆ ಅದನ್ನು ತೆಗೆದು, ಅದರ ಆ ಹಸಿಬಿಸಿ

ಮಾಂಸದ ತುಂಡುಗಳನ್ನು ಮಾಡಿ ಎಲ್ಲರಿಗೂ ಹಂಚಿಕೊಡುತ್ತಾರೆ. ಆ ಊಟವು ಮುಗಿಯಿತೆಂದರೆ, ಆ ಅಗ್ನಿಕುಂಡದ ಸುತ್ತಲೂ ಆ ಎಲ್ಲ ಸ್ತ್ರೀ ಪುರುಷರು ಬೆರೆತ ಹಾಗು ಉಲ್ಲಿಂಗಾವಸ್ಥೆಯಲ್ಲಿ ತಮ್ಮ ನಗ್ನ ನಾಚನ್ನು ಪ್ರಾರಂಭಿಸುತ್ತಾರೆ. ಅಂಥ ಅಗ್ನಿಕುಂಡಗಳನ್ನು ಪ್ರಸಂಗ ವಿಶೇಷದಲ್ಲಿ ಮೂರು ನಾಲ್ಕು ಕೂಡ ಹೊತ್ತಿಸುತ್ತಿರುತ್ತಾರೆ; ಮತ್ತು ಅವುಗಳ ಸುತ್ತಲೂ ಊಟದ ಹಾಗು ನಾಚಿನ ಬೇರೆ ಬೇರೆ ಮೂರು ನಾಲ್ಕು ತಂಡಗಳಾಗುತ್ತವೆ. ಆ ನಿಶ್ಚಿತ ಕಾರ್ಯಕ್ರಮದಲ್ಲಿ ಈ ಮೂವರು ಅತಿಥಿಗಳು ತಮ್ಮ ಜೀವದ ಮೇಲಿನ ಸಾಹಸದೊಳಗಿಂದ ಹೀಗೆ ಯಶಸ್ವೀಗಳಾಗಿ ತಿರುಗಿ ಬರುತ್ತಲೆ, ಆಗ ಅಲ್ಲೊಂದು ಹೊಸ ನೋಟವೇ ಉಂಟಾಯಿತು. ಅವರೆಲ್ಲರು ಆ ಮೂವರ ಸುತ್ತಲೂ ಒಮ್ಮೆಲೆ ಒಟ್ಟುಗೂಡಿದರು! ಅದರಲ್ಲಿ ಅವರೆಲ್ಲರ ಲಕ್ಷ್ಯವೂ ಆ ಕಂಟಕಿಯ ಕಡೆಗೇ ಇದ್ದಿತು. ನಾನಕೋಬಿ ರಾಜನಿಗೆ ಆ ಸಾಹಸೀ ಒಳಸಂಚಿನ ಮಾಹಿತಿಯು ಇದ್ದೇ ಇತ್ತು. ಆತನ ಸಲಹೆಯ ಮೇರೆಗೇ ಕಂಟಕಿಯನ್ನು ಬಿಡಿಸಿಕೊಂಡು ಬರಲಿಕ್ಕೆ ಆ ಕಂಟಕ-ಡೋಲಕಾರಿಯರು ಹೋಗಿದ್ದರು. ಕಂಟಕಿಯನ್ನು ಇಂಗ್ಲಿಷರ ಕೇವಲ ಜೀವಾವಧಿಗಳ ಬಂದಿಗೃಹದೊಳಗಿಂದ ಹೀಗೆ ಕಸಿದು ತರುವದೆಂದರೆ, ಇಂಗ್ಲಿಷರ ಕಟ್ಟುನಿಟ್ಟಿನ ಬಂದೋಬಸ್ತಿನ ಬಾಧೆಯನ್ನು ನೀರಿಳಿಸಿದಂತಾಗುವದು; ಅದಾದರೂ ತಮ್ಮ ಜಾವರಾಗಳ ಸಹಾಯ್ಯದಿಂದ, ಜಾವರಾಗಳ ಆಶ್ರಿತ ಜನರಿಂದಲೇ ಆಗುವದು! ಇದರಿಂದ ನಾನಕೋಬ ರಾಜನಿಗೆ ಸ್ವಂತದ ಗೌರವವೇ ಅನಿಸಿತು. ಆ ವಿಜಯದ ಪತಾಕೆಯೇ ಕಂಟಕಿಯಾಗಿದ್ದಳು. ಅವಳನ್ನು ಪುನಃಪುನಃ ನೋಡುವದಕ್ಕೆ ಸ್ವತಃ ನಾನಕೋಬಿ ರಾಜನಿಗೂ ಸಾಕೆನಿಸಲೊಲ್ಲದು; ಆದರೆ ಅವರೆಲ್ಲರಲ್ಲಿಯೂ ಆ ಜಾವರಾಗಳ ಹೆಂಗಸರ-ಹುಡುಗಿಯರ ಉತ್ಸುಕತೆಯನ್ನಂತೂ ಹೇಳಲಾಸಲ್ಲ! ಬೆಂಕಿಯ ಸ್ವಚ್ಛವಾದ ಬೆಳಕಿನಲ್ಲಿ ಅವಳನ್ನು ಅವರು ಅಪ ಭಾವದಿಂದ ನೋಡುತ್ತ, ನಗುತ್ತ, ಸಂಜ್ಞೆ ಮಾಡುತ್ತ ಸುತ್ತುಗಟ್ಟಿಕೊಂಡು ನಿಂತರು; ಆದರೆ ಕಂಟಕಿಗಿಂತಲೂ ಅವರು ಯಾವುದನ್ನಾದರೂ ಹೆಚ್ಚು ನಿರಿಕಿಸಿ ನೋಡುತ್ತಿದ್ದರೆ, ಅದು ಅವಳ ಸೀರೆ!

ಜಾವರಾಗಳ ಆ ವಸ್ತ್ರವಿಹೀನ ಸ್ತ್ರೀಯರೆಲ್ಲರೂ ಮಾಲತಿಗೆ ಸಂಜ್ಞೆ ಮಾಡಹತ್ತಿದರೇನಂದರೆ:-“ಇದೇನು? ಈ ಹೆಂಗಸು ತನ್ನ ಶರೀರದ ಸುತ್ತಲೂ ಇದೇನು ಅಮಂಗಲವನ್ನು ಸುತ್ತಿಕೊಂಡಿರುತ್ತಾಳೆ? ಇವಳು ಸ್ವಾಭಾವಿಕವಾಗಿ ಒಳ್ಳೇ ರೂಪವತಿಯಾಗಿ ತೋರುತ್ತಾಳೆ! ಅಂದ ಬಳಿಕ ಇವಳು ತನ್ನ ಶರೀರವನ್ನು ನಾಚಿಕೆಯಿಂದ ಹೀಗೆ ವಸ್ತ್ರದಲ್ಲೇಕೆ ಮುಚ್ಚಿಟ್ಟಿರುತ್ತಾಳೆ? ಇವಳು

ಇದನ್ನೇನು ಉಟ್ಟಿರುವಳವ್ವಾ!" ಹೀಗೆ ಹಲವು ಪ್ರಶ್ನೆಗಳನ್ನು ಆ ಸ್ತ್ರೀಯರು ತಮ್ಮ ತಮ್ಮೊಳಗೇ ಮಾಡಿಕೊಳ್ಳತೊಡಗಿದರು.

ಡೋಲಕಾರಿಯು ಅವರೊಳಗಿನೊಬ್ಬ ಸ್ತ್ರೀಯಳನ್ನು ಕುರಿತು:—"ಅದು ದಟ್ಟಿಯಿದೆ-ದಟ್ಟಿ! ಅದಕ್ಕೆ ಸೀರೆಯೆಂದೂ ಅನ್ನುವದುಂಟು!" ಎಂದು ಹೇಳಿದನು

ಆ ಕೂಡಲೆ ಅವರೆಲ್ಲರೂ ತಮ್ಮ ಬಾಯಿ ಮೇಲೆ ಬೊಟ್ಟಿಟ್ಟು ಖೊಳೆಂದು ನಕ್ಕು, ಮೂಗು ಮುರಿದು:—"ಇಶ್ಯ! ಹೆಂಗಸರೆಲ್ಲಾದರೂ ಸೀರೆಯುಡುವರೇ? ಒಂದಿಷ್ಟಾದರೂ ಮಾನ, ಮರ್ಯಾದೆ!"

ವಸ್ತ್ರರಹಿತರಾಗಿದ್ದ ಆ ಜಾವರಾಗಳ ಹೆಂಗಸರಿಗೆ, ಹೆಂಗಸರು ಸೀರೆಯುನ್ನುಡುವದು ಸ್ತ್ರೀತ್ವಕ್ಕೆ ಹೇಗೆ ಶೋಭಿಸದಿರುವ ಅವಮರ್ಯಾದೆಯೆನಿಸಿತೋ, ಅದಕ್ಕಿಂತ ನೂರಾರುಪಟ್ಟು ಹೆಚ್ಚು ಆ ಜಾವರಾ ಜಾತೀಯ ಸ್ತ್ರೀಯರು ಆಪಾದಮಸ್ತಕದ ವರೆಗೆ ಕೇವಲ ಉಲ್ಲಿಂಗ-ನಗ್ನರಿದ್ದುದನ್ನು ಹಾಗು ಗಂಡಸರೊಡನೆ ಹಾಗೆಯೇ ನಿಃಸಂಕೋಚ ರೀತಿಯಿಂದ ಕೂಡಿ ನಡೆಯುವದನ್ನು ಕಂಡು ಮಾಲತಿಗೆ ನಾಚಿಕೆಯೆನಿಸಿತು. ಒಂದೆರಡು ಸಲವಂತೂ ಅವಳು ತನ್ನ ಕಣ್ಣುಗಳನ್ನೇ ಮುಚ್ಚಿಕೊಂಡಳು! ಆ ಮೇಲೆ ಕೆಳಮುಖ ಮಾಡಿ ನಿಂತುಕೊಂಡಳು.

ನಾನಕೋಬಿ ರಾಜನಿಗೂ ತುಸ ಪೇಚೇ ಅನಿಸಿತು. ಯಾಕಂದರೆ ಅವನ ರಾಣಿಯು-ಆ ಘುಲೀರಾಣಿಯು ತೀರ ಹಟವನ್ನೇ ಹಿಡಿದು "ಕಂಟಕಿಯು ತಮ್ಮಲ್ಲಿರುವವರೆಗಾದರೂ ದಟ್ಟಿ-ಗಿಟ್ಟಿಗಳನ್ನೇನೂ ಉಟ್ಟುಕೊಳ್ಳಕೂಡದು. ಯಾಕಂದರೆ, ಇವಳ ಉದಾಹರಣೆಯುನ್ನು ಕಂಡು, ನಮ್ಮಲ್ಲಿಯ ಹುಡುಗಿಯರಿಗೂ ತರುಣಿಯರಿಗೂ ಇದೇ ಅಶ್ಲೀಲ ಚಟ ಹತ್ತೀತು!" ಎಂದು ಹೇಳಿದಳು.

ಕಂಟಕಿಯ ಬಗ್ಗೆ ಅವರಿಗೆ ದಯೆಯೆನಿಸುತ್ತಿತ್ತು. ಅವಳ ಮಾತುಗಳನ್ನು ಕೇಳಿ ಹಾಗು ಅವಳ ಕಡೆಗೆ ನೋಡಿ ಎಲ್ಲ ಸ್ತ್ರೀಯರಿಗೂ ಅಪಭಾವವು ಅನಿಸುತ್ತಿತ್ತು; ಆದರೆ ವಸ್ತ್ರಗಳನ್ನುಡುವ ಅವಳ ಆ ಅಶ್ಲೀಲತೆಯುಷ್ಟೇ ಅವರಿಗ ಹೇಸಿಕೆಯೆನಿಸುತ್ತಿತ್ತು. ಕಡೆಗೆ ಘುಲೀರಾಣಿಯು ಕಂಟಕಿಯ ದಟ್ಟಿಯ ಸೆರಗನ್ನು ತುಸ ಕೊಡವಿ ಜಗ್ಗಿ, ಮಮತೆಯಿಂದ ಸಂಜ್ಞೆ ಮಾಡಿದಳೇನಂದರೆ:—"ಬಿಟ್ಟು ಬಿಡೀ ದಟ್ಟಿಯುನ್ನು; ಹಾಗು ಹೆಂಗಸರಿಗೆ ಶೋಭಿಯೊಯುವ ವಿವಸ್ತ್ರದಿಂದಲೇ ಇರುವ ಶಿಷ್ಟಾಚಾರವನ್ನಷ್ಟು ಪಾಲಿಸು!" ಆದರೆ ಆಕೆಯು ಆ ಜಗ್ಗುವಿಕೆಯಿಂದ ಕಳಚಿದ್ದ ಸೆರಗನ್ನು ಸಾವರಿಸಿಕೊಳ್ಳುತ್ತ

ಮಾಲತಿಯು ಅದನ್ನಿನ್ನಿಷ್ಟು ಗಟ್ಟಿಯಾಗಿ ಹಿಡಿದುಕೊಂಡಳು.

ಇನ್ನು ಈ ಪ್ರಕರ್ಣವು ವಿಕೋಪಕ್ಕೆ ಎಲ್ಲಿ ಮುಟ್ಟುವದೋ ಎಂಬ ಭಯದಿಂದ ಡೋಲಕಾಠಿಯು ನಡುವೇ ಬಿದ್ದು, ಎಲ್ಲವನ್ನೂ ನಗೆಚೇಷ್ಟೆ ಎಂದು ತೋರಿ:—"ಈ ಕಂಟಿಕೆಗೆ ಹೀಗೆ ಬಟ್ಟೆ ಧರಿಸುವ ಹುಟ್ಟು ಖೋಡಿ ಗುಣವಿದೆ! ಅದು ಒಮ್ಮೆಲೆ ಸುಧಾರಿಸುವ ಬಗೆ ಹೇಗೆ? ನಾಲ್ಕಾರು ದಿನಗಳಲ್ಲಿ ಇಲ್ಲಿಯ ಸಭ್ಯ ಸ್ತ್ರೀಯರಂತೆ ವಿವಸ್ತ್ರದಿಂದಿರುವ ರೂಢಿಯು ಇವಳಿಗೂ ಆಗೇ ಆಗುವದು. ಅದುವರೆಗೆ ಇಲ್ಲಿಯ ಶಿಷ್ಟಾಚಾರದ ಬಗ್ಗೆ ಇವಳ ಮೇಲೆ ಸಕ್ತಿಯಾಗಬಾರದು. ಉಡುಪಿನದಷ್ಟೇ ಅಲ್ಲ; ಆದರೆ ತಿನ್ನುಣ್ಣುವ, ಹಾಡು-ನಾಚಿನ ಪ್ರಕರ್ಣದಲ್ಲೂ ಇವಳಿಗೆ ಅದೇ ರಿಯಾಯತಿಯಿರಬೇಕು" ಎಂದು ಹೇಳಿದನು.

——

## ೩೧ನೇ ಪ್ರಕರಣ.

"ಬಿಡು-ಬಿಡು, ಬೇಗನೆ ಬಾಣ ಬಿಡು. ಆ ಕಾಡು ಹಂದಿಯು ಆ ಕಂಟಿಯೊಳಗಿಂದ ಹೋಯಿತು ನೋಡು"

ಕಿಶನನ ಈ ಶಬ್ದವನ್ನು ಕೇಳಿ ಗಿಡದ ಮೇಲೆ ಅಡಗಿಕೊಂಡು ಕುಳಿತಿದ್ದ ಮಾಲತಿಯ ಬಿಲ್ಲಿನಿಂದ 'ಸಣಣಣ' ಎಂದೆನ್ನುತ್ತ ಬಾಣದ ಮೇಲೆ ಬಾಣಗಳು ಹೊರಡಹತ್ತಿದ್ದವು. ಆ ಕಾಡುಹಂದಿಯು ಯಾವ ಕಂಟಿಯಲ್ಲಡಗಿ ಕುಳಿತಿದ್ದಿತೋ, ಅದರ ಹಿಂದೆ ಒಂದು ಉದ್ದನ್ನ ಭಲ್ಲೆಯಿಂದ ತಿವಿತಿವಿದು ಎಬ್ಬಿಸಲಿಕ್ಕೆ ಕಿಶನನು ಪ್ರಯತ್ನಿಸುತ್ತಿದ್ದನು. ಆತನ ಕಾಟಕ್ಕೆ ಬೇಸತ್ತು ಕಡೆಗೆ ಆ ಕಾಡು ಹಂದಿಯು ಆ ಕಂಟಿಯೊಳಗಿಂದ ಹೊರಬಿದ್ದು, ಕಿಶನನು ನಿಂತುಕೊಂಡಿದ್ದ ದಿಕ್ಕಿನ ವಿರುದ್ಧ ದಿಕ್ಕಿನಿಂದ ಹೊರಟು ತನ್ನ ಕೋರೆಗಳನ್ನು ದೂಡುತ್ತ ಭರದಿಂದ ಓಡತೊಡಗಿತು. ಅದರ ದಾರಿಯನ್ನೇ ಕಾಯುತ್ತ ಮಾಲತಿಯು ಒಂದು ಗಿಡದ ಮೇಲೆ ಧನುರ್ಬಾಣಗಳಿಂದ ಸಜ್ಜಾಗಿ ಕುಳಿತಿದ್ದಳು. ಜಾವರಾಗಳ ಆ ಕಾಡು ರಾಜಧಾನಿಯಲ್ಲಿರಹತ್ತಿದಂದಿನಿಂದ ಜಾವರಾಗಳ ಹೆಂಗಸರು ತಮ್ಮ ಗಂಡಸರೊಡನೆ ಹೇಗೆ ಬೇಟೆಗಾಗಿ ಸ್ವಂತ ಹೋಗುತ್ತಿದ್ದರೋ, ಆದರಂತೆ ಮಾಲತಿಯಾದರೂ ಕಿಶನನೊಡನೆ ಧಿಟಾಲು ಹೋಗಹತ್ತಿದ್ದಳು; ಮತ್ತು ಕಳೆದ ಮೂರು-ನಾಲ್ಕು ತಿಂಗಳಲ್ಲಿ ಆ ಅರಣ್ಯವಾಸದೊಳಗೆ ಧನುರ್ಬಾಣಗಳನ್ನು ಪಯೋಗಿಸುವಲ್ಲಿ ಬೇಟೆಯ ಸಾಹಸದ ಕೆಲಸ ಮಾಡುವ ಜಾವರಾ ಸ್ತ್ರೀಯರಂತೆ ಅವಳೂ ಪಾರಂಗತಳಾಗಹತ್ತಿದ್ದಳು. ಇಂದು ವರಾಹದ ಬೇಟೆಯನ್ನು ತಾನೇ ಮಾಡುವ ಹಟಹಿಡಿ

ದುದರಿಂದ, ಅದರ ಮೊದಲನೇ ಪಾಠವನ್ನು ಕಿಶನನು ಆಕೆಗೆ ಇಂದು ಹೇಳಿಕೊಡಹತ್ತಿದ್ದನು. ವರಾಹವನ್ನು ಹುಡುಕುತ್ತ, ಅಟ್ಟುತ್ತ ಬಾಣದ ಸರಿಯಾದ ಅಳವಿನಲ್ಲಿ, ಸುರಕ್ಷಿತತೆಗಾಗಿ ಮಾಲತಿಯು ಯಾವ ಗಿಡದ ಮೇಲೆ ಪಾಳತಿಯಿಟ್ಟು ಕುಳಿತುಕೊಂಡಿದ್ದಳೋ, ಆ ಕಡೆಗೆ ಅದನ್ನು ತಂದುಬಿಡುವ ತನ್ನ ಕೆಲಸವನ್ನು ಕಿಶನನು ಚೆನ್ನಾಗಿ ಮಾಡಿದ್ದನು; ಹಾಗು ಆ ಕಂಟಿಯೊಳಗಿಂದ ಆ ಕಾಡುಹಂದಿಯು ಭರದಿಂದ ಹೊರಬೀಳುತ್ತಲೆ ಮಾಲತಿಯು ತನ್ನ ಬಾಣಗಳನ್ನು ಅದರ ಮೇಲೆ ಬಿಟ್ಟಳು.

ಅವಳ ಮೊದಲಿನ ಯಾವ ಎರಡು ಬಾಣಗಳು ಆ ಬಲಿಷ್ಠ ವರಾಹಕ್ಕೆ ತಾಕಿದ್ದವೋ, ಅವು ತನಗೆ ಕೇವಲ ಚಿಬಿಕೆ ನೆಟ್ಟಂತೆ ದುರ್ಲಕ್ಷಿಸಿ, ಆ ಪಶುವು ಹಾಗೆಯೇ ಓಡಹತ್ತಿತು. ಇಷ್ಟರಲ್ಲಿ ತನ್ನಲ್ಲಿದ್ದುಬಿದ್ದ ಬಲವನ್ನೆಲ್ಲ ಒಟ್ಟುಗೂಡಿಸಿ ಬಿಟ್ಟ ಅವಳ ಕೊನೆಯ ಬಾಣವು ನೆಟ್ಟಗೆ ಆ ಮೃಗದ ಪಕ್ಕೆಯಲ್ಲೇ ಹೊಕ್ಕಿತು; ಆದರೂ ಅದು ತುಸ ಧಡಪಡಿಸುತ್ತ ಮುಂದೆ ಹೋಗುವಷ್ಟರಲ್ಲಿ ಧಡ್ಡೆಂದು ನೆಲಕ್ಕೆ ಒರಗಿಬಿಟ್ಟಿತು.

ಅದನ್ನು ಕಂಡ ಕೂಡಲೆ ಮಾಲತಿಯು ಗಿಡದಿಂದ ಕೆಳಗಿಳಿದು ಬಂದಳು. ದೂರದಿಂದ ಓಡಿ ಬರುತ್ತಿದ್ದ ಕಿಶನನನ್ನು ಅವಳು ನಡುವೇ ಕೂಗಿದಳು; ಮತ್ತು ತನ್ನ ಶೌರ್ಯವನ್ನು ಆತನಿಂದ ಹೊಗಳಿಸಿಕೊಳ್ಳುವದಕ್ಕೆಂದು, ಪ್ರಜೆಗಳಿಂದ ರಾಜನು ಯಾವ ಅಧಿಕಾರದ ಬಲದಿಂದ ಕರವನ್ನು ಎತ್ತುವನೋ, ಅಂಥ ಅಧಿಕಾರ ವಾಣಿಯಿಂದ:-"ಯಾಕೆ? ಇಂದು ನಾನು ಜೀವದ ಮೇಲಿನ ಬೇಟೆಯ ಮಾಡಿದೆನೋ-ಇಲ್ಲೋ?"

"ಗಿಡದ ಮೇಲಿನ ಬೇಟೆಯೆಂದೆನ್ನು! ಜೀವದ ಮೇಲಿನದಲ್ಲ!" ಎಂದು ಹೇಳಿ ಕಿಶನನು ನಕ್ಕು:—"ಯಾವನು ನೆಲದ ಮೇಲೆ ಅದನ್ನು ಬೆನ್ನಟ್ಟುತ್ತ ನಿನ್ನೆದುರಿಗೆ ಆ ಹಿಂಸ್ರಪಶುವನ್ನು ಆಯತ್ತವಾಗಿ ತಂದು ಬಿಟ್ಟನೋ, ಆತನೇ ಜೀವದ ಹಂಗು ದೊರೆದು ಕೆಲಸ ಮಾಡಿದನು! ಗಿಡದ ಮೇಲೆ ಸುರಕ್ಷಿತವಾಗಿ ಕೂಡ್ರುವ ಕೆಲಸವನ್ನಷ್ಟೇ ನೀನು ಮಾಡಿದೆ!"

"ಬೇಟೆಯಾಡುವ ಪ್ರತಿಯೊಬ್ಬ ರಾಣಿಯ ಕೈಕೆಳಗೆ ಹೀಗೆ ಬೇಟೆಗಳನ್ನಟ್ಟುವ ಜನರು ಇದ್ದೇ ಇರುತ್ತಾರೆ! ನೀನೊಬ್ಬ ನಿಷ್ಣಾತ ಬೇಟೆಗಳನ್ನಟ್ಟುವ ಮನುಷ್ಯನಿರುತ್ತೀಯೆಂದೆನ್ನಬಹುದಷ್ಟೇ; ಆದರೆ ಯಾವಾತನ ಬಾಣವೋ ಆತನದೇ ಬೇಟೆಯು! ಈ ವರಾಹದ ಪಕ್ಕೆಯಲ್ಲಿ ಹೊಕ್ಕಿರುವ ಆ ಬಾಣವು ನನ್ನದಿರುತ್ತದೆ. ಆದರಿಂದಲೇ ಈ ಬೇಟೆ ನನ್ನದು!"

"ಆದೀತು! ಆ ಇಡೀ ವರಾಹವನ್ನು ನೀನೊಬ್ಬಳೇ ತಿನ್ನು; ಅಂದ

ರಾದರೂ ಆಯಿತೇ! ಇಲ್ಲದಿದ್ದರೂ ನಾನಿನ್ನು ಶಾಕಾಹಾರಿಯೇ ಆಗತಕ್ಕವ ನಿದ್ದೇನೆ. ಯಾರಿಗೆ ಕಾಡು ಹಂದಿಯ ಗುಣಗಳು ಬೇಕೋ, ಅವರು ಕಾಡು ಹಂದಿಯನ್ನೇ ತಿನ್ನಬೇಕು; ನಾನು ಬಾಳೆ-ಪೇರಲಹಣ್ಣು, ಬಟಾಟಿ-ಗೆಣಸು ಮುಂತಾದ ಗಡ್ಡೆಗಳನ್ನು..........."

"ತೀರ ಯೋಗ್ಯವು! ಯಾರಿಗೆ ತಮ್ಮ ತಲೆಯಲ್ಲಿ ಬಟಾಟೆಗಳನ್ನೇ ತುಂಬಿಕೊಳ್ಳಬೇಕಾಗಿದೆಯೋ, ಅವರು ಅವುಗಳನ್ನೇ ತಿನ್ನಬೇಕು" ಎಂದು ಮಾಲತಿಯು ಆತನಿಗೆ ನಡುವೇ ಹೇಳಿದಳು

ಇಷ್ಟರೊಳಗೆ 'ಊSS ಊSSS' ಎಂದು ಜಾವರಾಗಳ ಕಿರಚುವ ಗಟ್ಟಿ ದನಿಯು ಕೇಳಿಸಿತು. ಹಿಂದಿರುಗಿ ನೋಡುತ್ತಾನೆ, ಇತ್ತೀಚೆಗೆ ಕಿಶ ನನ ಕೈಕೆಳಗೆ ಕೆಲಸ ಮಾಡುತ್ತಿದ್ದ ಒಬ್ಬ ಜಾವರಾನು ತನ್ನ ಕಡೆಗೆ ಓಡು ತ್ತೋಡುತ್ತ ಬರುವದು ಆತನಿಗೆ ಕಾಣಿಸಿತು. ಆತನು ಬಂದವನೇ ಒಂದು ಅಳುವ ಸ್ವರ ತೆಗೆದು ಕಣ್ಣು ಒರಿಸುತ್ತ ಒಂದೆರಡು ಶಬ್ದ ನುಡಿದು, ಆ ಹಾವ-ಭಾವ ಹಾಗು ಶಬ್ದ ಕೂಡಿಸಿ ಯಾವ ಸುದ್ದಿ ಹೇಳಿದೆನೋ, ಅದರರ್ಥದ ಇಡೀ ವಾಕ್ಯವು ಹೀಗಾಯಿತು.

"ಬಾಬೂಜಿ! ಬೇಗನೆ ನಡೆಯಿರಿ, ನಾನಕೋಬಿ ರಾಜನು ನಿಮ್ಮನ್ನು ಅಳುವದಕ್ಕೆ ಕರೆಯುತ್ತಿರುವನು!"

ಆತನ ಹಾವ-ಬಾವಗಳನ್ನು ತಿಳಿದು, ಕಿಶನನು ಮಾಲತಿಗೆ ತಮ್ಮ ಮಾತೃಭಾಷೆಯಲ್ಲಿ ಹೇಳುತ್ತಾನೆ:—"ಕೇಳಿದೆಯಾ? ನಾನಕೋಬಿ ರಾಜನು ನನ್ನನ್ನು ಅಳಲಿಕ್ಕೆ ಕರೆಯುತ್ತಿರುವನಂತೆ!"

"ಇಶ್ಯ! ಹಾಗೆಂದರೇನೋ? ನಿನ್ನನ್ನು ಅಳಲಿಕ್ಕೆ ಕರೆಯುತ್ತಾನೆಂದ ರೇನು? ಅವನಿಗೆ ಅಳಬೇಕಾಗಿದ್ದರೆ, ಆತನೇ ಬೇಕಾದಷ್ಟು ಅಳಲಿ!"

"ಎಲೆ, ಅವನೊಬ್ಬನೇ ಅತ್ತರೆ ಸಾಗುವದೆಂತು? ಆತನ ಆಪ್ತಕೋಟಿ ಯೊಳಗಿನ ಯಾವನೊಬ್ಬ ಜಾವರಾನು ನಿನ್ನೆಯ ದಿವಸ ಮಲರೋಗದಿಂದ ಬಳಲುತ್ತಿರಲಿಲ್ಲವೇ? ಆತನು ಇಂದು ಸತ್ತಿರುತ್ತಾನೆ. ಆತನ ಸಲುವಾಗಿ ಆತನ ಹಿಂದೆ ಉಳಿದಂಥ ಎಷ್ಟು ಹೆಚ್ಚು ಜನರು ಕಲೆತು ಎಷ್ಟು ಗಟ್ಟಿ-ಗಟ್ಟಿ ಯಾಗಿ ಅಳುವರೋ ಅಷ್ಟು ಆ ಮೃತಮನುಷ್ಯನ ಆತ್ಮವು-ಆತನ ಭೂತವು-ಸಂತುಷ್ಟವಾದೀತು; ಇಲ್ಲದಿದ್ದರೆ ಅದು ಜೀವದಿಂದಿದ್ದ ತನ್ನ ಆಪ್ತೇಷ್ಟರನ್ನು ಕಾಡಿಸಹತ್ತುವದೆಂದು ಈ ಜಾವರಾಗಳ ತಿಳುವಳಿಕೆಯಿದೆ. ಅಂತೆಯೇ ಯಾರಾದರೂ ಸತ್ತರೆ, ಇವರು ಎಲ್ಲರಿಗೂ 'ಅಳಲಿಕ್ಕೆ ಬರ್ರಿ' ಎಂದು ಕರೆಯು ವರು. ನಗುತ್ತೀಯೇಕೆ? ನಮ್ಮಗಳಲ್ಲಾದರೂ ಪೂರ್ವದಲ್ಲಿ ಇದೇ ತಿಳಿ

ದಿದ್ದಿತು. ಇಂದಿಗೂ ನಮ್ಮಗಳಲ್ಲಿಯ ಹಲವು ಜಾತಿಗಳಲ್ಲಿ ಕೂಲಿಕೊಟ್ಟು ಅಳ ಹಚ್ಚುತ್ತಾರೆ. ಇಷ್ಟೇ ಅಲ್ಲ, ಖ್ರಿಶ್ಚನ್-ಮುಸಲ್ಮಾನರಲ್ಲಿಯೂ ಹೆಣವನ್ನು ಹುಗಿದು, ಅವು ಮತ್ತೆ ಏಳುವವವಿರುತ್ತವೆಂದು ಸಂರಕ್ಷಿಸಬೇಕು, ಎಂಬ ಯಾವ ಧರ್ಮದಾಜ್ಞೆಯಿರುವದೋ, ಅದು ಜಾವರಾಗಳ ಈ ಪರಲೋಕವಿದ್ಯೆಯ ಪಾಠವನ್ನೇ ತೀಡುತ್ತ ಬಂದದ್ದಾಗಿದೆಯಲ್ಲವೆ? ಜಾವರಾಗಳಂತೂ ಸತ್ತವರ ಸಲುವಾಗಿ ಜೀವಿತರು ಬರಿಯ ಅತ್ತರೆ ಸಾಕೆಂದು ಮನ್ನಿಸುತ್ತಾರೆ; ಆದರೆ ಮೊದಲು ಮಿಸರದಿಂದ ಜಪಾನದ ವರೆಗಿನ ಅನೇಕ ರಾಷ್ಟ್ರಗಳು ಸತ್ತವರ ನೆರವಿಗಾಗಿ ಜೀವಂತ ಆಪ್ತೇಷ್ಟರು ಸ್ವಂತಕ್ಕೆ ಹುಗಿದುಕೊಳ್ಳಬೇಕೆಂದೂ, ಪರಲೋಕಕ್ಕೆ ಹೋಗಬೇಕೆಂದೂ ಮನ್ನಿಸುತ್ತಿದ್ದರು! ಸತ್ತವರ ಜೀವಂತ ಹೆಂಡಂದಿರು, ಆಳು-ಹೋಳು, ದಾಸ-ದಾಸಿಯರು ಇವರನ್ನೂ ಅವರ ಗೋರಿಯಲ್ಲಿ ಹುಗಿಯುತ್ತಿದ್ದರು! ಅದಿರಲಿ.'' ಎಂದೆಂದು, ಆ ಜಾವರಾನ ಕಡೆಗೆ ಹೊರಳಿ, ಕಿಶನನು:—"ಹೋಗು, ನಾವುಗಳು ಶೀಘ್ರವೇ ಅಳಲಿಕ್ಕೆ ಬರುತ್ತೇವೆಂದು ನಾನಕೋಬಿ ರಾಜನಿಗೆ ಹೇಳ ಹೋಗು; ಆದರೆ ತುಸ ತಡೆ; ಇದು ನೋಡು, ಈ ವರಾಹವನ್ನು! ಇದನ್ನು ಹಾಗೆಯೇ ಬೆನ್ನಮೇಲೆ ಚೆಲ್ಲಿಕೊಂಡು ನಡೆ; ಮತ್ತು ನಾವು ನಾನಕೋಬಿ ರಾಜನಿಗೆ ಈ ಕಾಣಿಕೆ ಕಳಿಸಿರುತ್ತೇವೆಂದು ತಿಳಿಸು ಹೋಗು''

ಆ ಜಾವರಾನು ಆ ವರಾಹವನ್ನು ತನ್ನ ವಿಶಿಷ್ಟ ಪದ್ಧತಿಯಿಂದ ಕಟ್ಟಿ, ಆ ಧಡವನ್ನು ತನ್ನ ಬೆನ್ನ ಮೇಲೆ ಚಲ್ಲಿಕೊಂಡವನೇ ಅಲ್ಲಿಂದ ಹೊರಟು ಹೋದನು.

"ಎಷ್ಟು ದಣಿದಿರುವೆಯೋ ನೀನು?'' ಹೀಗೆಂದು ಕಿಶನನು ಮಾಲತಿಯನ್ನು ಪ್ರೇಮಲದೃಷ್ಟಿಯಿಂದ ನೋಡಿದನು; ಹಾಗು ಆಕೆಯ ಕೈಯನ್ನು ತನ್ನ ಕೈಯೊಳಗಿರಿಸಿಕೊಳ್ಳುತ—"ಮಾಲತ್ತೀ, ಬೆಳಗಿನಿಂದ ಬೇಟೆಯ ಸಾಹಸದಲ್ಲಿ, ಬೇಟೆಯು ಹಿಂದಿನಿಂದ ಓಡಿ ಓಡಿ ನೀನೆಷ್ಟು ಬೆವೆತಿರುತ್ತೀ? ಅದೆಷ್ಟು ದಣಿದಂತೆ ಕಾಣುತ್ತಿರುವೆ? ಮತ್ತು ತನ್ಮೂಲಕವಾಗಿಯೇ ನೀನವೆಷ್ಟು ಸುಂದರಳಾಗಿ ತೋರುತ್ತಿರುವೆ? ಇದು ನೋಡು, ಬೆವರಿನ ಸ್ವಚ್ಛ ಮತ್ತು ಶುಭ್ರಬಿಂದುಗಳು ಮುತ್ತಿನ ಸರದಂತೆ ನಿನ್ನ ಕಂಠವನ್ನೂ, ಈ ಗುಲಾಬೀ ರಕ್ತಿಮೆಯು ನಿನ್ನ ಗಲ್ಲಗಳನ್ನೂ ಎಷ್ಟು ಶೋಭೆಗೊಳಿಸುತ್ತಿರುವವಲ್ಲ! ಬಾ, ಇನ್ನು ನನ್ನ ಬಳಿಯಲ್ಲಿ ತುಸ ಕೂಡ್ರುಬಾ. ತುಸ ದಣಿವಾರಿಸಿಕೋ; ಆ ಮೇಲೆ ನಾವು ಜಾವರಾಗಳ ಕಡೆಗೆ ಹೋಗೋಣವಂತೆ!''

ಹೀಗೆಂದು ಕಿಶನನು ಅವಳನ್ನು ರಮಿಸುತ್ತ ಅಲ್ಲಿಯದೊಂದು ಖುರ್ಚಿ

ಯಂತಹ ಶಿಲಾತಲದ ಮೇಲೆ ಕೆಳಗೆ ಕಾಲು ಇಳಿಬಿಟ್ಟುಕೊಂಡು ಕುಳಿತನು; ಹಾಗು ಈ ಮೊದಲೇ ಹಿಡಿದಿದ್ದ ಆಕೆಯ ಎಡಗೈಗೊಮ್ಮೆ ಝೋಲಿ ಹೊಡೆದು, ಅವಳನ್ನು ತನ್ನ ಕಡೆಗೆ ಜಗ್ಗಿಕೊಂಡನು.

'ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳದ್ದೂ ಹಾಲು ಅನ್ನ' ಎಂಬಂತಾಗಿ, ಪ್ರಸನ್ನಳಾದ ಮಾಲತಿಯು ಒಮ್ಮೆಲೆ ಹೋಗಿ ಕಿಶನನ ಆ ತೊಡೆಯ ಮೇಲೆಯೇ ಕುಳಿತುಬಿಟ್ಟಳು. ಅವಳು ತನ್ನ ಬಲಗೈಯನ್ನು ಆತನ ಕೊರಳ ಸುತ್ತು ಚಲ್ಲುತ್ತ, ಕಾಲುಗಳನ್ನು ಆತನ ಕಾಲುಗಳ ಮೇಲೆಯೇ ಇಳಿಬಿಡುತ್ತ ತನ್ನ ಮುಖಮಂಡಲವನ್ನು ಆತನ ಪ್ರಶಸ್ತಾದ ವಕ್ಷಃಸ್ಥಳದ ಮೇಲೆ ಇರಿಸಿದಳು; ಹಾಗು ಕಣ್ಣುಮುಚ್ಚಿಕೊಂಡು ಮಂದಮಂದವಾಗಿ ಶ್ವಾಸೋಚ್ಛ್ವಾಸ ಮಾಡುತ್ತ ಅವಳು ಅಲ್ಲಿಯೇ ವಿಶ್ರಾಂತಿ ಪಡೆಯತೊಡಗಿದಳು

ಅವಳ ಗಲ್ಲದ ಮೇಲೆ ಭುರ್ರಭುರ್ರೆಂದು ಆಗಾಗ್ಗೆ ಹಾರಾಡುತ್ತಿದ್ದ ಆಕೆಯ ಕುಂತಳ ಕೇಶಗಳನ್ನು ನಡುನಡುವೆ ಸಾವರಿಸುತ್ತ, ಆಗಾಗ್ಗೆ ಆಕೆಯ ಗಲ್ಲದ ಮೇಲೆ ಚುಕ್ಕು ಬಡಿಯುತ್ತ, ಅವಳ ಕಡೆಗೆ ಪ್ರೇಮಲ ದೃಷ್ಟಿಯಿಂದ ನಿರೀಕ್ಷಿಸುತ್ತ, ತನ್ನ ಬಾಗ್ಗಿದ ತಲೆಯನ್ನು ಅವಳ ತಲೆಯ ಮೇಲಿರಿಸಿ ತಾನೂ ಕಣ್ಣು ಮುಚ್ಚುತ್ತ, ಆ ಕಿಶನನು ತನ್ನ ಆ ಪ್ರಿಯಕರಣಿಯ ಗಾಢಾಲಿಂಗನದ ಸುಖವನ್ನು ಆಸ್ವಾದಿಸುವುದರಲ್ಲಿ ನಿಮಗ್ನನಾದನು.

ಅಂಥ ಆ ಸ್ವರ್ಗೀಯ ಗುಂಗಿನಲ್ಲಿ ಕೆಲಕ್ಷಣಗಳು ಕಳೆದ ನಂತರ ಮಾಲತಿಯು ತನ್ನ ಕಣ್ಣು ತೆರೆದು, ಆತನ ವಕ್ಷಃಸ್ಥಳದ ಮೇಲೆ ಹಾಗೆ ಬಿದ್ದುಬಿದ್ದಿರಲಿಕ್ಕೇ ತನ್ನ ಮುಖವನ್ನೆತ್ತಿ ಆತನ ಮುಖಕ್ಕೆ ಹೊಂದಿಸಿದಳು.

ಅವಳ ಮೂಕ ಬಿನ್ನಹವೇ ಆತನ ಅಭ್ಯರ್ಥನವಾಗಿದ್ದಿತು! ಆತನು ಆಕೆಯ ಆ ಮೇಲೆತ್ತಿದ್ದ ಸುಂದರ ಮುಖವನ್ನು ಪುನಃ ಪುನಃ ಚುಂಬಿಸಿದನು; ಬಳಿಕ ಅವಳು ಮತ್ತೆ ತನ್ನ ಮುಖವನ್ನು ಆತನ ವಕ್ಷಃಸ್ಥಳದ ಮೇಲಿಟ್ಟು ಕಣ್ಣು ಮುಚ್ಚಿಕೊಂಡಳು.

ಅವಳಿಗೆ ಹತ್ತಿದ್ದ ಆ ಸವಿ ಗುಂಗು ಒಂದಿಷ್ಟು ಸಾಕಾಗಲು, ಅವಳು ಆತನ ತೊಡೆಯ ಮೇಲೆಯೇ, ಆದರೆ ಎದ್ದು ಸೆಟೆದುಕೊಂಡು ಕುಳಿತಳು; ತನ್ನ ಆ ಗುಂಗಿನಲ್ಲಿಯೇ ತಾನು ಯಾವ ವಿಷಯವನ್ನು ತನ್ನ ಮನಸ್ಸಿನಲ್ಲಿ ಚರ್ಚಿಸುತ್ತಿದ್ದಳೋ, ಅದು ಕಿಶನನಿಗೂ ಕೇಳಿ ಬರುತ್ತಿತ್ತೆನ್ನುವಂತೆ ಅವಳು ಅದನ್ನೇ ಮುಂದರಿಸಿ, ಅಚ್ಚರಿದಿಂದ ಕಿಶನನಿಗೆ ಕೇಳುತ್ತಾಳೆ: "ನಿಜವಲ್ಲವೇನೋ ಇದು? ನಿನಗಾದರೂ ಹೀಗೆಯೇ ಅನಿಸುವದಿಲ್ಲವೇ?"

"ಹೇಗೆ? ಸವಿಯಲ್ಲವೆ? ಅನಿಸದೇನು? ನಿನ್ನ ಇಂಥ ಪ್ರೇಮಲ ಆಲಿಂ-

ಗನದಲ್ಲಿ ಮಾಲತಿ, ಗೊತ್ತಾಗದಂತೆ ನನಗೆ ಮರಣವೊದಗಿದರೂ ಅದು ಸವಿಯೇ ಅನಿಸೀತು! ಅಂದ ಮೇಲೆ ಜೀವಂತ ಸ್ಥಿತಿಯ ಬಗ್ಗೆ ಅದೇನು ಕೇಳುತ್ತಿ?''

"ನಾನು ಹೇಳಲಾ ಹಾಗಾದರೆ, ನಾನೇನು ಕೇಳುತ್ತಿದ್ದೆನೆಂಬದನ್ನು? ಇಡ್ರಿ ಆಯುಷ್ಯದಲ್ಲಿ ಸ್ವಂತದ ಯಾವ ಆತತಾಯಿ ಅಪರಾಧವು ಘಟಿಸಿರದಿದ್ದರೂ ಒಂದೇಸವನೆ ಕಷ್ಟಗಳನ್ನನುಭವಿಸುತ್ತಿರುವ ನನಗೆ ದೈವಬಲದಿಂದ ಇಂದು ದೊರೆತಿರುವ ನಮ್ಮೀ ಪ್ರಣಯ ಪ್ರೇಮಲ ಸಂಗವೇ ಅಮೌಲ್ಯ ಸುಖವು. ಹೆಚ್ಚು ಸುಖದ ಲಾಲಸೆಗಾಗಿ ಮತ್ತೆ ಕುತ್ತಿನೊಳಗೆ ಬೀಳುವ ಸಾಹಸವನ್ನು ಇನ್ನು ಮಾಡಬೇಕಾಗಿಲ್ಲ! ಕಿಶನ್, ಇನ್ನು ಇಲ್ಲಿಂದ ಸ್ವದೇಶಕ್ಕೆ ಓಡಿ ಹೋಗುವದಕ್ಕೆಂದು ಜೀವವನ್ನು ಮತ್ತೆ ಕುತ್ತಿಗೇಕೀಡು ಮಾಡಬೇಕು? ಇಡೀ ಸಮುದ್ರವನ್ನು ನಿರುಪಯುಕ್ತ ನಾವಿನಿಂದ ದಾಟುವುದೂ, ಪ್ರಬಲ ಶತ್ರುಗಳ ಸರಕಾರೀ ಪಹರೆಯು ಸಮುದ್ರದ ಮೇಲೂ ಭೂಮಿಯ ಮೇಲೂ ಎಡಬಿಡದೆ ಕಾದಿರುವದೂ, ಅದನ್ನು ತಪ್ಪಿಸಿ ಸ್ವದೇಶಕ್ಕೆ ಹೋಗುವ ಆಶೆ ಧರಿಸುವದೂ ತೀರ ಮೂರ್ಖತನವೆಂದು ಈಗ ಅನಿಸುವದಿಲ್ಲವೆ! ಬೇರೆ ಉಪಾಯವೇ ಇರದಾಗ, ಮನುಷ್ಯತ್ವದಿಂದ ಜೀವಿಸಿರಲಿಕ್ಕೆ ಅಗತ್ಯವಾದ ಸಾಹಸ ಮಾಡುವ ಭಾಗವೇ ಇತ್ತು; ಆದರೆ ಈಗ ಇಲ್ಲಿ ನಿನ್ನ ಜೊತೆಯಲ್ಲಿ ಸ್ವಚ್ಛಂದವಾಗಿ ಹೀಗೆ ಜೀವನ ಸಾಗಿಸಲಿಕ್ಕೆ ಬರುತ್ತಿರಲು, ಇನ್ನು ಇಲ್ಲಿಯೇ ಈ ಜಾವರಾಗಳ ಆಶ್ರಯದಲ್ಲಿಯೇ, ಈ ವನವಾಸದಲ್ಲಿಯೇ ಇಡೀ ಜನ್ಮವನ್ನು ಹೀಗೆ ಆನಂದದಿಂದೇಕೆ ಕಳೆಯಬಾರದು?

"ಯಾವ ಗುಹೆಯಲ್ಲಿ ನಾವು ಇತ್ತೀಚೆಗಿರುತ್ತಿರುವೆವೋ, ಆ ಗುಹೆಯು ನನಗೆ ಸುಖದ ಪ್ರತ್ಯಕ್ಷ ಗೋಕುಲವಾಗಿ ತೋರಹತ್ತಿರುತ್ತವೆ! ಅದಕ್ಕಿಂತ ಯಾವ ರಾಣಿಯು ತನ್ನ ಮುತ್ತು-ರತ್ನಗಳ ಹಾಗು ಗಾದಿ-ಲೋಡುಗಳಿಂದ ಶೃಂಗರಿಸಲ್ಪಟ್ಟ ರತಿಮಂದಿರದಲ್ಲೂ ಹೆಚ್ಚು ಸುಖಿಯಾಗಿರಲಿಕ್ಕಿಲ್ಲ. ಕಿಶನ್, ಅರಮನೆಯಲ್ಲೂ ರಾಜ-ರಾಣಿಯರು ಒಮ್ಮೊಮ್ಮೆ ಆತ್ಮಹತ್ಯೆಗೀಡಾಗುತ್ತಿರುವರಲ್ಲವೆ? ನನ್ನ ತಾಯಿಯು ಆಗಾಗ್ಗೆ ಅನ್ನುತ್ತಿದ್ದಳೇನಂದರೆ, ಅವಶ್ಯಕ್ಕಿಂತ ಯಾವ ಹೆಚ್ಚಿನ ವಸ್ತು-ಒಡವೆಗಳಿರುವವೋ ಅವೆಲ್ಲ ಇದ್ದೂ ಇಲ್ಲದಂತೆಯೇ ಸರಿ. ಸುಖವು ಬರಿಯ ವಿಪುಲ ವಸ್ತುಭಾಂಡಾರದಲ್ಲಿರುವದಿಲ್ಲ; ಸಮಾಧಾನದಲ್ಲಿರುತ್ತದೆ. ಐವತ್ತುಗಟ್ಲೆ ಅರಮನೆಗಳಿದ್ದರೂ ತಮ್ಮ ದೇಹದ ಉದ್ದಗಲದ ಸ್ಥಳದಲ್ಲೇ ರಾಜ-ರಾಣಿಯರು ಮಲಗಬೇಕಾಗುತ್ತದೆ! ಎಲುವುಗಳು ಬೇಕಾದಷ್ಟಿವೆಯೆಂದೇನೂ ದೇಹವನ್ನು ಹಾಗೆ ಹೇಗೆ ಬೆಳಿಸಲಿಕ್ಕೆ ಆಗುವದಿಲ್ಲವೋ, ಹಾಗೆಯೇ ಜಿಲೇಬಿಗಳ ರಾಶಿಯು ಬಿದ್ದಿದ್ದರೂ ಗೇಣುದ್ದ ಹೊಟ್ಟೆಯಲ್ಲಿ ಹಿಡಿಸು

ವಷ್ಟನ್ನೇ ತಿನ್ನಲಾದೀತು! ಆದಕ್ಕಾಗಿಯೇ ನಾನನ್ನುವದೇನಂದರೆ, ಇದಕ್ಕಿಂತ ಹೆಚ್ಚಿನ ಯಾವ ಸುಖವು ಮತ್ತು ಹೇಗೆ ದೊರೆಯುವದಿದೆಯೆಂದು ನಾವು ಅದಕ್ಕಾಗಿ ಅಕ್ಷರಶಃ ಸಂಕಟದ ಸಮುದ್ರದಲ್ಲಿ ಹೀಗೆ ಮತ್ತೆ ಹಾರಿಕೊಳ್ಳಬೇಕು? ನನಗಂತೂ ಇಲ್ಲಿ ಯಾವ ಕೊರತೆಯೂ ಅನಿಸುವದಿಲ್ಲ. ಕಿಶನ್, ನಾನು ಈಗ ನಿನ್ನನ್ನು ಹೇಗೆ ಆಲಿಂಗಿಸಿರುವೆನೋ, ಎಲ್ಲಿಗೆ ಹೋದರೂ ಈ ನನ್ನ ಆಲಿಂಗನದ ಸುಖವು ಇಷ್ಟೇ ಇರತಕ್ಕದ್ದು. ಸ್ವಚ್ಛವಾದ ನೀರನ್ನು ಇಲ್ಲಿ ಈ ವನದಲ್ಲಿ ಹೊಟ್ಟೆತುಂಬ ಕುಡಿಯಿತೆಂದರೆ ತೃಷೆಯು ಶಾಂತವಾಗುತ್ತಲೆ ಯಾವ ರುಚಿ ಯೆನಿಸುವದೋ, ಅದು ಕೇವಲ ಸಿಂಧನದದ ಮೇಲೆ ಹೋದರೂ ತೃಷಿ ಶಾಂತವಾಗುವ ಸುಖವು ಹಾಗೆಯೇ ಮತ್ತು ಅಷ್ಟೇ ಇರುವದು.

"ಬೆಳಗಿನಲ್ಲಿ ಹೀಗೆ ಬೇಟೆ ಮಾಡಿ ಸಮುದ್ರತೀರದಲ್ಲಿ ಇಲ್ಲವೆ ಕಾಡು ಅರಣ್ಯದಲ್ಲಿ ಸ್ವೇಚ್ಛೆಯಿಂದ ಆಡ್ಡಾಡಬೇಕು; ದಣಿದು ಶ್ರಾಂತವಾದ ಮೇಲೆ ನಿನ್ನ ವಕ್ಷಃಸ್ಥಳದ ಮೇಲೆ ಹೀಗೆ ವಿಶ್ರಾಂತಿ ಹೊಂದಬೇಕು; ನಿನ್ನಿಂದ ಹೀಗೆ ಮೈದಡವಿಕೊಳ್ಳಬೇಕು; ಆ ಮೇಲೆ ನಾವು ಗುಹೆಯ ಕಡೆಗೆ ಹೋಗಿ, ಚೆನ್ನಾಗಿ ಹೊಟ್ಟೆ ಹಸಿದಿದ್ದ ಬಾಯಿಗೆ ಮಾಂಸ, ಮೀನ, ಹಣ್ಣು, ಹಂಪಲ ಗಳನ್ನು ಯಥಾರುಚಿಯಾಗಿ ಭುಂಜಿಸಬೇಕು; ಮಧ್ಯಾಹ್ನದಲ್ಲಿ ಜಾವರಾಗಳ ಹೆಂಗಸರೊಡನೆ ಸಮುದ್ರದ ಮಳಲು ಪ್ರದೇಶದಲ್ಲಿ ಆಟವಾಡುತ್ತ, ಹಾಡುತ್ತ, ಬಗೆಬಗೆಯ ಶಂಖ-ಶಿಂಪು-ಆಣೆಕಲ್ಲುಗಳನ್ನು ಆರಿಸಿಕೊಳ್ಳುತ್ತ, ವನಶ್ರೀಯ ಹಾಗು ಜಲಶ್ರೀಯ ಚಮತ್ಕಾರಗಳನ್ನು ನೋಡಬೇಕು; ಮತ್ತು ಹಗಲೆಲ್ಲ ಅತ್ತಿತ್ತ ಸ್ವಚ್ಛಂದವಾಗಿ ಹಾರಾಡಿ ದಣಿದ ಹಕ್ಕಿಗಳ ಜೊತೆಯು ಗೂಡಿನ ಕಡೆಗೆ ಹೊರಡಹತ್ತಲು, ಅವುಗಳಂತೆಯೇ ನಿನ್ನ ಕೈಯೊಳಗೆ ಕೈಯಿರಿಸಿ ನಮ್ಮ ಆ ಗುಹೆಯ ಗೋಕುಲಕ್ಕೆ ಮರಳಿ ಹೋಗಬೇಕು; ಮತ್ತು ನಿನ್ನನ್ನು ಅವಚಿಕೊಂಡು ಮಲಗಬೇಕು!! ಮನಸ್ಸಿನ ಆಳತೆಯಿಂದಲೇ ಯಾವುದನ್ನು ಗಣಿಸಲಾಗುವದೋ, ಆ ಪ್ರಿಯ ಸಂಗತಿಯ ಸುಖವು ಆ ಗುಹೆಯೊಳಗಿನ ನಮ್ಮ ರತಿಶಯ್ಯೆಯ ಮೇಲೆ ಯಾವ ಸಮಾಧಾನವನ್ನು ನೀಡುವದೋ, ಗೋಕುಲಕ್ಕೆ ಹೋದರೂ ಅದು ಅಷ್ಟೇ ಇರತಕ್ಕದ್ದು. ಅಂದಮೇಲೆ ಇನ್ನು ಇದಕ್ಕೂ ಮುಂದೆ ಓಡಿ ಹೋಗುವ ಪ್ರಯತ್ನದಲ್ಲಿ ಜೀವದ ಮೇಲಿನ ಹೊಸ ಸಂಕಟಗಳನ್ನು ಅದೇಕೆ ಒತ್ತಾಯದಿಂದ ಸ್ವಂತದ ಮೇಲೆ ಜಗ್ಗಿಕೊಳ್ಳುತ್ತೀ? ಇಲ್ಲಿ ನಾವು ಹೀಗೆಯೇ ಸಾಯುವವರೆಗೂ ಇರೋಣ. ' ನಮ್ಮ ಸುಖ-ಸಮಾ ಧಾನದ ಮಂಚಕ್ಕೆ ಆ ಗುಹೆಯೇ ಸಾಕಾಗಿದೆ."

"ಆದರೆ ಆ ಗುಹೆಯು ಆ ಮಂಚಕ್ಕೆ ಸಾಕಾಗುವಷ್ಟಿದ್ದರೂ, ತೊಟ್ಟಿಲಕ್ಕೆ

ಸಾತೀತೇನು? ನಾಳೆ ತೊಟ್ಟಿಲ ಕಟ್ಟುವ ಕಾಲವೊದಗಿತೆಂದರೆ?'' ಎಂದೆಂದು ಕಿಶನನು ಮಾಲತಿಯನ್ನು ಕಟ್ಟಾಡಿಸಿದನು!

''ಚೂಪ! ಏನಾದರೂ ಹರಟ ಬೇಡ!'' ಎಂದೆಂದು ಮಾಲತಿಯು ಮೆಲ್ಲನೊಮ್ಮೆ ಕಿಶನನ ಗಲ್ಲದ ಮೇಲೆ ಸಿಟ್ಟಾದವಳಂತೆ ಹೊಡೆದಳು; ಮತ್ತು ಪ್ರೀತಿಪಟ್ಟವಳಂತೆ ಖೊಕ್ಕೆಂದು ಒಮ್ಮೆಲೆ ನಕ್ಕು—''ನಾನೇನ್ನುವೆನೆಂಬದಕ್ಕೆ ಚೇಷ್ಟೆ ಮಾಡಬೇಡ!''

''ಪ್ರಿಯೇ, ಹಾಗಲ್ಲ. ಚೇಷ್ಟೆ ಮಾಡುವದಿಲ್ಲ; ಆದರೆ ಮತ್ತೆ ಸಮುದ್ರ ಪಾರಾಗಿ ಓಡಿ ಹೋಗುವ ಜೀವದ ಮೇಲಿನ ಸಂಕಟವನ್ನೇಕೆ ತಂದುಕೊಳ್ಳಬೇಕೆಂದು ಕೇಳುವಾಗ, ನೀನು ಮರೆತೇಬಿಟ್ಟುದೇನಂದರೆ, ಜೀವದ ಮೇಲಿನ ಹಳೆಯ ಸಂಕಟಗಳು ನಮ್ಮ ಸುತ್ತಲಿನ್ನೂ ಅಂಡಲೆಯುತ್ತಲಿವೆ! ನಾನು ಓಡಿಯೇ ಹೋದೆನೆಂಬದು ಕರಿನೀರ ಮೇಲಿನ ಇಂಗ್ಲಿಷ ಸರಕಾರಕ್ಕಿನ್ನೂ ಪಕ್ಕಾ ತಿಳಿದಿರದಿದ್ದರೂ, ನಾನು ಜಾವರಾಗಳ ದಾಳಿಯಲ್ಲಿ ಅವರಿಂದ ಮೃತಿ ಹೊಂದಿರಬೇಕೆಂದು ಅವರಿಗೀಗಲೂ ಅನಿಸುತ್ತಿದ್ದರೂ ಕೂಡ, ನೀನು ಮಾತ್ರ ಹಾಡುಹಗಲಲ್ಲಿ ಬಂದಿಗೃಹದೊಳಗಿಂದ ಓಡಿಸಲ್ಪಟ್ಟಿರುತ್ತೀಯೆಂಬದರಲ್ಲಂತೂ ಅವರಿಗೆ ಯಾವ ಸಂದೇಹವೂ ಇರುವದಿಲ್ಲ. ನಿನ್ನನ್ನೂ, ನಿನ್ನನ್ನೋಡಿಸಿಕೊಂಡೊಯ್ದವರನ್ನೂ ಹಿಡಿದು ಕೊಡುವವರಿಗೆ ಸಾವಿರ ಸಾವಿರ ರೂಪಾಯಿಗಳ ಪಾರಿತೋಷಕಗಳು ಸರಕಾರದಿಂದ ಜಾಹೀರು ಮಾಡಲಾಗಿವೆ. ಆ ಬಗ್ಗೆ ಒಳ್ಳೇ ಶೋಧ ನಡೆದಿವೆ. ಅವರ ಹೇರರಿಗೂ ನೌಕೆಗಳಿಗೂ ಒಂದು ವೇಳೆ ನಮ್ಮ ಇಲ್ಲಿಯ ವಾರ್ತೆ ಹತ್ತಿದರೆ? ಇಂಥ ಉದಾಹರಣೆಗಳು ಕೆಲಕೆಲವು ಘಟಿಸುತ್ತಿರುತ್ತವೆ! ಅಂಥ ಪ ಸಂಗವೊದಗಿದರೆ, ನಮ್ಮ ಕೈಯಿಂದ ನಮ್ಮ ಜೀವ ಕಳಕೊಳ್ಳುವದೇ, ಆ ಬಂದಿವಾಸದಲ್ಲಿ ಪುನಃ ಹೋಗಿ ಬೀಳುವದಕ್ಕಿಂತ ಮೇಲಲ್ಲವೇ?

''ಆ ಸಂಕಟಕ್ಕಿಂತಲೂ ಸಮುದ್ರವನ್ನು ದಾಟಿ ಹೋಗುವ ಸಾಹಸವು ಯಾವಾಗಲೂ ಲಘು ಕಠಿಣವೇ ಸರಿ! ಅಲ್ಲದೆ ನಾವು ಇಲ್ಲಿ ಪಶು-ಪಕ್ಷಿಗಳ ಜೊತೆಗಳಂತೆ ಕೂಡಿಕೊಂಡು ಜೀವಿಸಿದ್ದರೂ, ಪಶು-ಪಕ್ಷಿಗಳಂತೆಯೇ ಜೀವಿಸಿರಬೇಕಾಗುದು; ಮನುಷ್ಯರಂತಲ್ಲ! ಸ್ವದೇಶದ, ಸ್ವರಾಷ್ಟ್ರದ, ಮನುಷ್ಯತ್ವದ ಏನಾದರೂ ಸೇವೆ, ದೇಶ-ದೇವಕಾರ್ಯಗಳು ನಮ್ಮ ಕೈಯಿಂದ ಘಟಿಸದಿದ್ದರೆ, ಮನುಷ್ಯನ ಜೀವನದೊಳಗಿನ ಮಾನವತ್ವವೇನು ಉಳಿಯಿತು? ಮತ್ತು ಪ್ರಿಯೇ, ನಿನ್ನ ಗರ್ಭವನ್ನು ಯಥಾಕಾಲದಲ್ಲಿ ಧನ್ಯಗೊಳಿಸುವ ಪುಟ್ಟ ದೇವದೂತನಿಗೆ ಈ ಜಾವರಾಗಳ ಹಾಗು ಈ ಕಾಡು ಹಂದಿಗಳ ಸಂಸ್ಕೃತಿಯ

ದೀಕ್ಷೆಯನ್ನೇ ಕೊಡುವುದೇನು? ಆದ್ದರಿಂದ ಹೇಗಾದರೂ ಮಾಡಿ, ಸ್ವದೇಶಕ್ಕೆ ಹೋಗಲೇಬೇಕು. ಈ ಸಮುದ್ರವನ್ನು ಲ್ಲಂಘಿಸಲೇಬೇಕು. ಅದರಲ್ಲೂ ನಾವು ಕಠಿಣೀರಿನ ಬಂದಿಗೃಹದೊಳಗಿಂದ ಓಡಿ ಬಂದಂದಿನಿಂದ ಕಳೆದ ಮೂರು-ನಾಲ್ಕು ತಿಂಗಳುಗಳಲ್ಲಿ ನಮ್ಮಗಳ ದೈವವೂ ಅನುಕೂಲವಾಗುತ್ತ ನಡೆದಿದೆ. ಆ ನರಾಧಮ ರಫೀ ಉದ್ದೀನನನ್ನು ಈ ಡೋಲಕಾಠಿಯು ಪರಾಕ್ರಮವು ಅನಾಯಾಸವಾಗಿ ಸೇಡುಹಾಯಿಸಿಕೊಂಡಿದ್ದರಿಂದ, ನನ್ನ-ನಿನ್ನ ಮಾರ್ಗದೊಳಗೆ ಇಲ್ಲಿಯೂ ಕೂಡ ಅಡ್ಡ ಬರುತ್ತಿದ್ದ ಆ ಅಪಶಕುನವು ಸಹಜವಾಗಿಯೇ ದೂರಾಯಿತು.

"ಆ ಪ್ರಚ್ಛನ್ನ ಶತ್ರುವಾದ ರಫೀ ಉದ್ದೀನನನ್ನು ಯಾವ ಸಾಹಸದ ಸಲುವಾಗಿ ಹತ್ತಿರ ಇಟ್ಟುಕೊಳ್ಳಬೇಕಿದ್ದಿತೋ, ಆ ಸಮುದ್ರ ದಾಟುವ ಸಹಾಯ್ಯವನ್ನೀಯುವ ಒಬ್ಬ ಜೀವದ ಗೆಳೆಯನು ಆ ಡೋಲಕಾಠಿಯಲ್ಲೇ ನಮಗೆ ದೊರೆತಿರುವನು! ಆತನು ನಾವಿಕ ವಿದ್ಯೆಯಲ್ಲಿ ತಜ್ಞನೂ, ಸಾಹಸಿಯೂ ಇರುವನು. ಕಳೆದ ಮೂರು-ನಾಲ್ಕು ತಿಂಗಳುಗಳಲ್ಲಿ ಜೀವಕ್ಕೆ ಜೀವ ಕೊಡುವ ಆತನ ಸ್ನೇಹದ ಪರೀಕ್ಷೆಯೂ ಚೆನ್ನಾಗಿ ಆಗಿದೆ. ಆತನೊಂದು ಉತ್ತಮವಾದ ತರಿಯನ್ನು ಎಷ್ಟು ಪರಿಶ್ರಮದಿಂದ ಸಿದ್ಧಪಡಿಸಿ ಹಾಗು ಜೋಡಣೆಗಳನ್ನು ಜೋಡಿಸಿಟ್ಟಿರುತ್ತಾನೆಂಬದನ್ನು ನೋಡಿರುತ್ತೀಯಷ್ಟೆ? ಇನ್ನು ಆತನು ಅನುಕೂಲವಾದ ಗಾಳಿಯದಷ್ಟು ದಾರಿ ಕಾಯುತ್ತ ತಡೆದಿರುತ್ತಾನೆ. ಆ ಗಾಳಿ ಬೀಸಿತೆಂದರೆ, ನಾವು ಆ ತರಿಯನ್ನು ಸಮುದ್ರದಲ್ಲಿ ಬಿಟ್ಟು ಖಂಡಿತವಾಗಿಯೂ ಸ್ವದೇಶಕ್ಕಭಿಮುಖವಾಗಿ ಹೊರಡೋಣ."

"ಆದರೆ ಆ ಡೋಲಕಾಠಿಯ ಮನಸ್ಸಿನಲ್ಲೂ ನನ್ನ ವಿಷಯದ ಯಾವ ಒಂದು ದುರಾಶೆಯು ಉಂಟಾಗಿದೆಯೋ, ನಾನು ಆತನ ಹೆಂಡತಿಯಾಗಬೇಕೆಂಬ ಯಾವ ಅಭಿಲಾಷೆಯು ಆತನಲ್ಲಿ ಸಂಚರಿಸಹತ್ತಿದೆಯೋ, ಅದರ ದುಷ್ಪರಿಣಾಮವು ಇಂದಿಲ್ಲ ನಾಳೆಯಾದರೂ ವೈರದಲ್ಲಿಯೇ ಆಗಲಿಕ್ಕಿಲ್ಲವೇನು?"

"ಬಹಳ ಮಾಡಿ ಹಾಗಾಗಲಿಕ್ಕಿಲ್ಲ; ಯಾಕಂದರೆ, ಆತನಿಗೆ ನಿನ್ನ ಅಭಿಲಾಷೆಯು ಇದ್ದರೂ, ಅದು ನರಾಧಮ ರಫೀ ಉದ್ದೀನನಂತೆ ರಾಕ್ಷಸೀ ಅಭಿಲಾಷೆಯಲ್ಲ. ಇಂದಿಗಂತೂ ಆ ಅಭಿಲಾಷೆಯು ಸಾತ್ವಿಕವಾದದ್ದಿದೆ. ನೀನು ನನ್ನ ಖಾಸ ತಂಗಿಯಾದ ಕಂಟಕಿಯಿರುತ್ತೀ ಎಂಬದಾಗಿ ನಾನು ತೋರಿಸುತ್ತಿರುವ ಸಂಬಂಧವನ್ನೇ ಆತನು ನಿಜವೆಂದು ತಿಳಿದಿರುತ್ತಾನೆ; ಮತ್ತು ಅದಕ್ಕಾಗಿಯೇ ಆತನಿಗೆ ನಿನ್ನಂತಹ ಕುಮಾರಿಕೆಯನ್ನು ಲಗ್ನವಾಗಬೇಕೆಂದೆನಿಸುತ್ತದೆ. ಆತನು ನಿನ್ನನ್ನು ಕುಮಾರಿಕೆಯೆಂದೇ ತಿಳಿಯುತ್ತಿರುವನು. ಆತ

ನಿಗೆ ನಮ್ಮಗಳ ನಿಜಸಂಗತಿಯನ್ನೂ ನಿಜ ಸಂಬಂಧವನ್ನೂ ತಿಳಿಸಿಬಿಡುವ ಪ್ರಸಂಗವೊದಗಿದಲ್ಲಿ—"

"ಹಾಗಾದರೆ ಅದನ್ನು ಈಗಲೆ ಏಕೆ ಹೇಳುವದಿಲ್ಲ? ಕಿಶನ್, ಇತ್ತೀಚೆಗೆ ನಿನಗೆ ಬಹಿರಂಗದಲ್ಲಿ ಕೂಡ ಅಣ್ಣನೆಂದೆನ್ನುವ ನಾಚಿಕೆಯುನಿಸಹತ್ತಿದೆಯಲ್ಲ!"

ಕಿಶನನು ಅವಳನ್ನು ರೇಗಿಗೆಬ್ಬಿಸುವದಕ್ಕೆಂದು:—"ಅದೇಕೆ?" ಎನ್ನಲು,

"ಇಶ್ಯ! ಏಕೆಂದೇನು ಕೇಳುತ್ತೀ ಮತ್ತೆ? ಪ್ರಿಯಕರನಿಗೆಲ್ಲಾದರೂ ಯಾರಾದರೂ ಅಣ್ಣನೆನ್ನುತ್ತಾರೇನು? ಈ ಜಾನವರಾಗಳಲ್ಲಿ ಕೂಡ ಅಣ್ಣ-ತಂಗಿಯರ ಲಗ್ನಗಳನ್ನು ಮಾನುಷತ್ವದ ಲಕ್ಷಣವೆಂದು ತಿಳಿಯುವದಿಲ್ಲ!"

"ಜಾನವರಾಗಳಲ್ಲಿರಲಿಕ್ಕಿಲ್ಲ; ಆದರೆ ಮನುಷ್ಯತ್ವದ ಕಕ್ಷೆಯಲ್ಲಿ ಬಂಧು-ಭಗಿನಿಯರ ವಿವಾಹಗಳು ಎಂದೂ ಎಲ್ಲಿಯೂ ಆಗಿಲ್ಲವೆಂದು ಮಾತ್ರ ತಿಳಿಯಬೇಡ! ಮನುಷ್ಯ ಸಮಾಜದಲ್ಲಿ ಎಲ್ಲ ಬಗೆಯ ವಿವಾಹದ ಪ್ರಕಾರಗಳಿಗಷ್ಟೇ ಅಲ್ಲ; ಆದರೆ ಸ್ವಚ್ಛಂದ ಸಂಭೋಗಕ್ಕೂ ಯಾವ ಯಾವ ಪರಿಸ್ಥಿತಿಗಳಲ್ಲಿ ಅದು ಇಷ್ಟವೂ ಇಲ್ಲವೆ ಅಪರಿಹಾರ್ಯವೂ ಎನಿಸೀತೋ, ಆಯಾ ಪರಿಸ್ಥಿತಿಗಳಲ್ಲಿ ಧರ್ಮವೆಂದು ತಿಳಿಯಲಾಗಿದೆ. ಪ್ರತ್ಯಕ್ಷ ಗೌತಮ ಬುದ್ಧನ ಜನ್ಮವು ಯಾವ ಕುಲದಲ್ಲಿ ಆಯಿತೋ, ಆ ಕುಲದ ಕಥೆಯು ಗ್ರಂಥಾಂತರಗಳಲ್ಲಿ ಹೇಳಿರುವುದೇನಂದರೆ, ಸೂರ್ಯವಂಶದ ಒಬ್ಬ ರಾಜಪುತ್ರನಿಗೂ ಆಕೆಯ ಭಗಿನಿಗೂ ಸಂಕಟಪರತ್ವದಿಂದ ಒಂದು ನಿರ್ಜನ ಅರಣ್ಯದಲ್ಲಿ ಕಾಲಕಳೆಯಬೇಕಾಯಿತು. ಆಗ ಆ ಬಂಧು-ಭಗಿನಿಯರು ತಮ್ಮ ತಮ್ಮೊಳಗೇ ವಿವಾಹ ಮಾಡಿಕೊಂಡರು; ಮತ್ತು ಅವರ ಸಂತತಿಯ ಉದರದಲ್ಲಿಯೇ ಮುಂದೆ ಕೆಲ ಪೀಳಿಗೆಗಳ ನಂತರ ಬುದ್ಧನಂತಹ ಮಹಾತ್ಮನು ಜನ್ಮ ತಾಳಿದನು!

"ರಾಜಕುಲದ ರಕ್ತಬೀಜವು ದೈವದ್ದು! ಅದರ ಸಂಬಂಧವು ಮನುಷ್ಯನಿಗೆ ಆಗಬಾರದು; ಅದು ಅಶುದ್ಧವಾಗಕೂಡದು, ಎಂಬ ಅತಿರೇಕ ಆನುವಂಶಿಕ ಮಡಿಯನ್ನು ಧರಿಸುವ ಸಲುವಾಗಿ ಬ್ರಹ್ಮದೇಶ, ಮೆಕ್ಸಿಕೋ ಹಾಗು ಇತರ ಕೆಲವೆಡೆಗಳಲ್ಲಿಯ ಪ್ರಖ್ಯಾತಗಳಾದ 'ದೃವೀ' ರಾಜವಂಶದೊಳಗೆ ರಾಜಪುತ್ರನ ಲಗ್ನವು ಆತನ ಖಾಸ ಭಗಿನಿಯೊಡನಯೇ ಆಗಬೇಕೆಂಬ 'ಧರ್ಮಾಜ್ಞಾ' ಯಿದ್ದತು; ಶಿಷ್ಟಮಾನ್ಯ ರೂಢಿಯೇ ಇತ್ತು! ಯಾವ ಸಮಾಜಕ್ಕೆ ಆ ಧರ್ಮದಿಂದ ದುಷ್ಪರಿಣಾಮಗಳಾಗುತ್ತವೆಂದು ಅನಿಸಿತೋ, ಅದು ಅದನ್ನೇ ಅಧರ್ಮವೆಂದು ನಿರ್ಧರಿಸಿತು. ಇಂದಿಗೂ ಹಿಂದು, ಮುಸಲ್ಮಾನ, ಖ್ರಿಶ್ಚನ್, ಪಾರ್ಸಿ ಮೊದಲಾದ ಸಮಾಜಗಳಲ್ಲಿ ಕೆಲವೆಡೆ ಸೋದರ ಮಾವನ ಮಗಳನ್ನು, ಕೆಲವೆಡೆ ಅಬಚಿಯ ಮಗಳನ್ನು, ಕೆಲವೆಡೆ ಪ್ರತ್ಯಕ್ಷ ಖಾಸ ಕಕ್ಕನ ಮಗಳನ್ನು

ಲಗ್ನವಾಗುವದು ಅಧರ್ಮವೆಂದು ತಿಳಿಯಲಾಗುವದಿಲ್ಲ! ಅಂದಮೇಲೆ ನಾವಂತೂ ನಮ್ಮ ಜೀವದ ಮೇಲಿನ ಸಂಕಟಗಳನ್ನು ನೀಗಿಸುವದಕ್ಕೆಂದು ಈ ಬರಿಯ ಬಂಧು ಭಗಿನಿಯ ಸಂಬಂಧದ ಸೋಗು ತೋರುತ್ತಿದ್ದೇವೆ.''

''ಕಿಶನ್, ಆ ಡೋಲಕಾರಿಯು ನಿನ್ನೆ ನನ್ನ ಕಡೆಗೆ ಬೊಟ್ಟು ತೋರಿಸಿ ನಕ್ಕು, ನಿನಗೆ ಅವೇನನ್ನು ಹೇಳುತ್ತಿದ್ದನು? ನಿಜ ಸಂಗತಿ ತಿಳಿಸುವದಿಲ್ಲವೆ?''

''ಪ್ರಿಯೆ, ಆ ಡೋಲಕಾರಿಯು ನಿಜವಾಗಿಯೂ ಒಬ್ಬ ಸೈನಿಕ ಪದ್ಧತಿಯ ಕಪಟವನ್ನರಿಯದ ಮನುಷ್ಯನಾಗಿದ್ದಾನೆ! ಸುಳ್ಳು-ಸೊಟ್ಟೆಂಬದು ಆತನಿಗೆ ಗೊತ್ತೇ ಇಲ್ಲ. ನಿನ್ನೆ ಆ ತರಿಯು ಸರ್ವ ಬಗೆಯಿಂದ ಸಿದ್ಧವಾಗಲು, ಆತನು ಅದನ್ನು ಒಳ್ಳೇ ಸಂತೋಷದಿಂದ ನನಗೆ ತೋರಿಸಿ ಕೇಳಿದನೇನಂದರೆ:—

"ಈ ತರಿಯಿಂದ ನಿನ್ನನ್ನೂ ನಿನ್ನ ಆ ಸುರೂಪ-ಸುಭಗ ಭಗಿನಿಯನ್ನೂ ಸ್ವದೇಶಕ್ಕೆ ಸುಖರೂಪದಿಂದೊಯ್ದು ಬಿಟ್ಟರೆ, ಈ ಅಂಬಿಗನಿಗೆ ಈ ತರಿಯ ಬಾಡಿಗೆಯನ್ನೇನು ಕೊಟ್ಟೀ?''

''ನಿನಗೆ ಏನು ಬೇಕು?'' ಎಂದು ನಾನು ಕೇಳಿದ್ದಕ್ಕೆ, ಆತನು ಆಗ ನಿನ್ನ ಕಡೆಗೆ ಬೊಟ್ಟು ತೋರಿಸಿ:—''ಈ ಚಿನ್ನದ ಪುತ್ಥಳಿಯಷ್ಟು ಬೇಕು.'' ಎಂದು ಅಂದನು.

ಅದಕ್ಕೆ ನಾನು ನಕ್ಕು ''ಅದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಅವಳ ಮನಸ್ಸನ್ನು ನಿನಗೆ ವಶಪಡಿಸಿಕೊಳ್ಳಬಂದರೆ, ಪರತೀರಕ್ಕೆ ತಲುವುತ್ತಲೆ ನಿಮ್ಮಗಳ ವಿವಾಹವನ್ನು ಮಾಡಿಕೊಡುವೆನು.''

ಆಗ ಡೋಲಕಾರಿಯು ಒಮ್ಮೆಲೆ ತನ್ನ ಎದೆಯ ಮೇಲೆ ಕೈಯಿಟ್ಟು ನಕ್ಕು:—"ಆ ಕೆಲಸವು ನನ್ನದು! ನಾನು ಶಿಳ್ಳು ಹೊಡೆದ ಬಳಿಕ ಆ ಹಕ್ಕಿಯು ನನ್ನ ಕೈಮೇಲೆ ಬಂದು ಕೂಡ್ರದಿದ್ದರೆ, ನನ್ನ ಹೆಸರನ್ನೇ ಬದಲಿಸು.'' ಎಂದು ಅಂದನು. ಆ ಕೂಡಲೆ ''ಕಂಟಕಿಯು ತನಗೆ ಅನುಕೂಲಳಾದರೆ, ನಾನು ಅವಳನ್ನು ಡೋಲಕಾರಿಗೆ ಆನಂದದಿಂದ ಕೊಡುತ್ತೇನೆ." ಎಂದು ಆತನು ನನ್ನಿಂದ ವಚನ ಪಡೆದನು.

'ಭಲೆ! ಭಲೆ! ಕಿಶನ್, ನೀನೂ ನಿನ್ನ ವಚನವೂ ಚೆನ್ನಾಗಿರುತ್ತೀರಲ್ಲ!' ಎಂದಂದು ಆತನನ್ನು ಸಿಟ್ಟಿನಿಂದ ನೋಡುತ್ತ, ಮಾಲತಿಯು ಅನ್ನುತ್ತಾಳೆ: ''ಕಿಶನ್, ಎಲ್ಲ ಕೆಡಕುತನವನ್ನೂ ದಾಯಿತ್ವವನ್ನೂ ನನ್ನ ಮೇಲೆಯೇ ಹೊರಿಸಿ, ನೀನು ಸುಜನನಾಗಿ ಬಿಟ್ಟೆ! ಆದರೇನೋ, ಇನ್ನು ಆತನು ನನ್ನೊಡನೆ ಅಚ್ಚೆ-ಗಿಚ್ಚೆ ಮಾಡಹತ್ತಿದರೆ ಮತ್ತು ನಾನು ಆತನಿಗೆ ನಿಜವಾಗಿಯೂ ಅನುಕೂಲಳಾದರೊ?—''

"ಆದರೇನು? ನಿನ್ನ ಇಚ್ಛೆಯಂತೆ ನಡೆದು, ನಿನ್ನ ಸಂತೋಷಕ್ಕಾಗಿ ಆ ಮೇಲೆ ನಾನು ಸ್ವತಃ ನಿಜವಾಗಿಯೂ ನಿನ್ನ ಬಂಧುವೆಂದು ತಿಳಿದೇನು; ಹಾಗು ಆತನೊಡನೆ ನಿನ್ನ ಮದುವೆಯನ್ನು ನಾನಾಗಿಯೇ ಮಾಡಿ ಕೊಟ್ಟೆನು?"

ಕ್ರೋಧಭರದಿಂದ ತನ್ನ ತೊಡೆಯ ಮೇಲಿಂದ ಎದ್ದೇಳ ತೊಡಗಿದ್ದ ಮಾಲತಿಯನ್ನು ಕೈ ಹಿಡಿದು ಹಾಗೆಯೇ ಕೂಡ್ರಿಸುತ್ತ, ಕಿಶನನು ರಮಿಸಹತ್ತಿದನು "ಹೀಗೇಕೆ ಸಿಟ್ಟಾಗುತ್ತೀ? ಆ ಪ್ರಶ್ನೆ ಕೇಳುವಾಗ ನಿನಗೆ ಹೇಗೆನಿಸಿತು? ಅಂದ ಬಳಿಕ ಹೇಗೆ ಕೊಡಬೇಕೋ, ಹಾಗೆ ಪಡೆಯಬೇಕು; ಆದರೆ ಮಾಲತೀ, ನಿನಗೆ ನಿಜವಾಗಿಯೂ ತಿಳಿಸುವದೇನಂದರೆ, ನಿನ್ನಂತಹ ಸುಂದರ ಸುರೂಪ ಚಿನ್ನದಂತಹ ತರುಣಿಗೆ ನನ್ನಂತಹ ಕರಪು, ಕುರೂಪಿ ಹಾಗು ಯಾವ ವಿಶೇಷತ್ವವೂ ಇಲ್ಲದ ಪ್ರಿಯಕರನು ಅನುರೂಪನಾಗಿರುವುದಿಲ್ಲವೆಂಬದನ್ನು ನಾನು ನನ್ನ ಮನಸ್ಸಿನಲ್ಲಿ ಮೊದಲಿನಿಂದಲೂ ತಿಳಿದಿರುತ್ತೇನೆ. ನನಗೆ ಬರಿಯ ನಿನ್ನ ಸ್ನೇಹವಷ್ಟೇ ಲಭಿಸಿದರೂ, ನಿನ್ನ ಜೊತೆಯಲ್ಲಿ ಸೇವಕನೆಂದಾದರೂ ನನಗೆ ಇರಲಿಕ್ಕೆ ದೊರೆತರೂ ನನ್ನ ಯೋಗ್ಯತೆಯಂತೆ ನನಗೆ ಯಾವುದು ದೊರೆಯುವುದು ಇಷ್ಟವೋ ಅದೆಲ್ಲವೂ ಸಿಕ್ಕಿತೆಂದು ನಾನು ತಿಳಿಯುತ್ತ ಬಂದೇನು. ನನಗಿಂತಲೂ ನಿನಗೆ ಯಾವನು ಹೆಚ್ಚು ಅನುರೂಪನೋ, ಅಂಥ ಪ್ರಿಯಕರನನ್ನಾರಿಸಿಕೊಳ್ಳಲಿಕ್ಕೆ ನೀನು ಸರ್ವ ಬಗೆಯಿಂದಲೂ ಸ್ವತಂತ್ರಳಿರುತ್ತೀ"

"ಅಹುದಲ್ಲವೆ? ಅಂದಬಳಿಕ ನಾನು ಸ್ವತಂತ್ರಳಿರುವುದರಿಂದಲೇ ನಿನ್ನ ನೇತ್ರಗಳಿಂದ ಇಲ್ಲವೆ ಆಯ್ಕೆಯಿಂದ ಆರಿಸದೆ, ನನ್ನ ಆಯ್ಕೆಯಿಂದ ನಾನು ಇದೇ ಪ್ರಿಯಕರನನ್ನು ಆಯ್ದುಕೊಂಡಿರುತ್ತೇನೆ. ಕಿಶನ! ಪ್ರಿಯಕರಾ!" ಎಂದೆಂದು,ಮಾಲತಿಯು ಸದ್ಗದಿತಳಾಗಿ ಕಿಶನನನ್ನು ಅಪ್ಪಿಕೊಂಡಳು; ಮತ್ತು ಆತನ ವಕ್ಷಃಸ್ಥಳದ ಮೇಲೆ ತನ್ನ ತಲೆಯನ್ನಿರಿಸಿ ಕ್ಷಣಕಾಲ ನಿಃಸ್ತಬ್ಧತೆಯಿಂದ ಪ್ರೇಮಾಶ್ರುಗಳನ್ನು ದುರಿಸಹತ್ತಿದಳು. ಆ ಮೇಲೆ ಮತ್ತೆ ಗೋಣು ಮೇಲೆ ಮಾಡಿ, ಭೇದಕ ದೃಷ್ಟಿಯಿಂದ ಕಿಶನನನ್ನು ನಿರಿಕಿಸಿ, ನಕ್ಕು:—

"ಕಿಶನ್, ನಿಮ್ಮ ಗಂಡಸರ ಜಾತಿಗೆ ರೂಪ-ಬಣ್ಣಗಳ ತಿಳಿವೇ ವಿಶೇಷ. ಯಾಕಂದರೆ, ನಿಮ್ಮ ಗಂಡಸರ ಪ್ರೀತಿಯು ಅವರ ದೃಷ್ಟಿಯಲ್ಲಿರುತ್ತದೆ! ಆದರೆ ನಮ್ಮ ಲಲನೆಯರ ಪ್ರೀತಿಯು ನಮ್ಮ ಹೃದಯದಲ್ಲಿರುತ್ತದೆ. ಲಲನೆಯರ ಪ್ರೀತಿಯು ಅವರ ಹೃದಯದ ಕಣ್ಣುಗಳೊಳಗಿಂದ ನೋಡುತ್ತದೆ; ಅಂತೆಯೇ ಲಲನೆಯರಿಗೆ ಗಂಡಸರ ರೂಪ-ಬಣ್ಣಗಳು ಕಾಣುತ್ತವಲ್ಲದೆ, ಅವರ ಶೀಲ, ಸ್ವಭಾವ ಮತ್ತು ಸದ್ಗುಣಗಳು ಅವರನ್ನು ಮೋಹಗೊಳಿಸುತ್ತವೆ. ಪರಾಕ್ರಮ ಮತ್ತು ಪೌರುಷ ಇವುಗಳ ಸೌಂದರ್ಯವು ಪುರೂಪ-ಬಣ್ಣಗಳ

ಗಿಂತ ಎಷ್ಟು ಆಕರ್ಷಕವಾಗಿರುತ್ತದೆಂಬದು ಘನಶ್ಯಾಮನಾದ ಶ್ರೀರಾಮನನ್ನು ವರಿಸಿದ್ದ ಚಿನ್ನದಂತಹ ಮೈಬಣ್ಣವಳಾಗಿದ್ದ ಸೀತೆಯನ್ನು ಕೇಳಿಕೋ. ಕರೀ ಮೈಯ ಶ್ರೀಕೃಷ್ಣನನ್ನು ವರಿಸಿದ್ದ ಮತ್ತು ಶಿಶುಪಾಲಾದಿಕ ಸುಂದರ ಮೈ ಬಣ್ಣದ ಹಾಗು ಲಂಪಟರಾದ ಲಗ್ನದ ವರಗಳನ್ನು ತುಚ್ಛೀಕರಿಸಿದ್ದ ಸ್ವರೂಪ ಶಾಲಿನಿಯಾದ ರುಕ್ಮಿಣಿಯನ್ನು ಕೇಳಿಕೋ! ಆದರಿಂದಲೇ ಲಲನೆಯರ ಪ್ರೀತಿಯು ರೂಪ-ಬಣ್ಣಗಳ ಎರಡು ದಿನಗಳಲ್ಲಿ ಬತ್ತುವ ಹುಲ್ಲಿನಂತೆ ಚಂಚಲವಾಗಿರದೆ, ಶೀಲದ ಮಾಮರದಂತೆ ಸರಸವೂ, ಸುಸ್ಥಿರವೂ, ಸಫಲವೂ ಆಗಿರುತ್ತದೆ!''

"ಹೀಗಿರಬೇಕಾದ್ದೇನೋ ನಿಜವೇ!" ಎಂದು ಕಿಶನನು ಅವಳನ್ನು ರೇಗಿ ಗೆಬ್ಬಿಸುವ ಸಲುವಾಗಿ:—"ಆದರೆ ಸ್ತ್ರೀಯರ ಅರ್ಧ ಹೃದಯದಲ್ಲಿ ಅವರ ಪ್ರೀತಿಯು ವಾಸಿಸಿರುತ್ತದೆಂಬ ನಿನ್ನ ಮತವು ರುಕ್ಮಿಣಿಯ ಉದಾಹರಣದಿಂದ ನಿಜವೆಂದು ತಿಳಿಯುವುದಾದರೆ, ಸ್ತ್ರೀಯರ ಉಳಿದರ್ಧ ಹೃದಯದಲ್ಲಿ ಕಪಟವೇ ಮನೆಮಾಡಿಕೊಂಡಿರುತ್ತದೆಂಬ ನನ್ನ ಮತವೂ ಅದೇ ಉದಾಹರಣದಿಂದ ನಿನಗೂ ಸಮ್ಮತವಾಗಲೇ ಬೇಕು; ಯಾಕಂದರೆ ರುಕ್ಮಿಣಿಯ ಗುಪ್ತಪತ್ರ ವ್ಯವಹಾರವು ಸುಪ್ರಸಿದ್ಧವೇ ಇದೆ! ಆದ್ದರಿಂದ ನೀನು ನನ್ನ ಸಲುವಾಗೆಂದರೂ ಡೋಲಕಾರಿಯನ್ನು ಒಮ್ಮೆಲೆ ನಿರಾಶೆಗೊಳಿಸಬೇಡ. ಸ್ವದೇಶಕ್ಕೆ ತಲುಪಿದ ಬಳಿಕ ನಿನ್ನ ಪ್ರೇಮಯಾಚನೆಗಳನ್ನು ಸ್ವೀಕರಿಸೇನು, ಎಂಬ ಆಶೆಯನ್ನು ಆತನೆದುರಿಗೆ ಸಂತತವಾಗಿ ಹಿಡಿ. ಆತನು ಸಜ್ಜನನಿರುವನೆಂಬದಕ್ಕೆ ಸಂದೇಹವೇ ಇಲ್ಲ; ಆದರೆ ಆತನೊಬ್ಬ ನಿಷ್ಕಪಟ ಟೊಣಪನೂ ಆಗಿರುತ್ತಾನೆ. ಅದ್ದರಿಂದ ಆತನು ಯಾವ ಅಚ್ಚಿ-ಗಿಚ್ಚಿಗಳನ್ನು ಮಾಡುವನೋ, ಅವನ್ನೊ-ಮ್ಮೆಲೆ ಧಿಃಕರಿಸಬೇಡ; ಯಾಕಂದರೆ ದೇಶಕ್ಕೆ ಹೋದ ಮೇಲಾಗುವ ನಿನ್ನ ಪ್ರಾಪ್ತಿಯ ಆತನ ನಿರಾಶೆಯು ಇಂದೇ ಆದರೆ, ಆತನು ನಮ್ಮ ಸಮುದ್ರ ಲಂಘನದ ಕೆಲಸದಲ್ಲಿ ಮಾಡುತ್ತಿರುವ ಧೈರ್ಯದ ಹಾಗು ಅವಸರದ ಸಹಾಯವನ್ನು ದಿನಮೇಕಗೊಳಿಸ್ಯಾನು! ಇನ್ನು ನಿನ್ನ-ನನ್ನ ಪೂರ್ವವೃತ್ತವನ್ನೂ ನಿಜ ಸಂಬಂಧವನ್ನೂ ಅವನಿಗೆ ತಿಳಿಸಬೇಕೆಂದರೆ, ನಮ್ಮಗಳ ಪ್ರೇಮದ ಮತ್ಸರವು ಆತನ ಮನಸ್ಸಿನಲ್ಲಿ ಮನೆಮಾಡ ಹತ್ತಲಿಕ್ಕಿಲ್ಲವೆಂದು ಅದಾರು ಹೇಳಬೇಕು?

"ಮತ್ತು ನಾವು ಯಾವಾತನ ಕೊಲೆಯ ಅಪರಾಧದ ಸಲುವಾಗಿ ಈ ಶಿಕ್ಷೆಯನ್ನು ಹೊಂದಿದೆವೋ, ಆ ಖಟ್ಲೆಯ ಕಾಲಕ್ಕೆ ಯಾವ ಸಂಕಟಕ್ಕೆಂದು ನಮ್ಮ ಈ ಕೃತ್ರಿಮ ಕಂಟಕ-ಕಂಟಕಿ ಎಂಬ ಹೆಸರುಗಳನ್ನೂ ಬಂಧು-ಭಗಿನಿಯರ ಕೃತ್ರಿಮ ಸಂಬಂಧವನ್ನೂ ನಾವು ಪ್ರಕಟಿಸಿದೆವೋ, ಆ ಸಂಕಟಗಳಲ್ಲಿಯು

ಆ ಕೃತ್ರಿಮ ಹೆಸರುಗಳೂ ಸಂಬಂಧವೂ ಬೈಲಿಗೆ ಬಿದ್ದ ಕೂಡಲೆ ಮತ್ತೆ ನಮ್ಮನ್ನಾವರಿಸುವ ಸಂಭವವು ಈಗಲೂ ಇರುತ್ತದೆ! ಆದ್ದರಿಂದ ಸ್ವದೇಶಕ್ಕೆ ತಲುಪುವ ವರೆಗೂ ಸದ್ಯದ ಕಪಟ ವರ್ತನವನ್ನು ಹೀಗೆಯೇ ಇರಿಸಬೇಕಾಗಿದೆ. ದೇಶಕ್ಕೆ ತಲುಪಿದ ನಂತರ ಡೋಲಕಾರಿಯ ಪ್ರೇಮಕ್ಕೆ ನೀನು ಬೇಕಾದ ಹಾಗೆ ಅಸಮ್ಮತಿ ವ್ಯಕ್ತಪಡಿಸು; ಆತನು ಸಜ್ಜನನಿರುತ್ತಾನೆ. ನಿನ್ನ ಇಚ್ಛೆಯ ವಿರುದ್ಧವಾಗಿ ನಿನ್ನಲ್ಲಿ ಬಲಪೂರ್ವಕವಾಗಿ ಪ್ರೇಮ ಮೂಡುವ ದುರ್ಜನನು ಆತನಲ್ಲ; ಒಂದುವೇಳೆ ಆತನು ಹಟವನ್ನೇ ಹಿಡಿದರೆ ಹಾಗು ವೈರವನ್ನೇ ತಾಳಿದರೆ ಅಲ್ಲಿ ಆತನಿಗೆ ಎದುರಾಗಲಿಕ್ಕೆ ಇಲ್ಲವೆ ನೋರೆ ತಪ್ಪಿಸಿ ಬೇರೆ ಕಡೆಗೆ ಹೋಗಿರಲಿಕ್ಕೆ ನಮಗೆ ಎಷ್ಟೋ ಸುಲಭವಾದೀತ! ಇಂದಿಗೆ ನಾವು ಎಲ್ಲ ಬಗೆಯಿಂದಲೂ ಆತಂಕಕ್ಕೊಳಗಾದವರು; ಆತನ ಸಹಾಯ್ಯವ ಹೊರತು ನಾವು ಸಮುದ್ರ ದಾಟಿ ಹೋಗುವದು ಬಹುಶಃ ದುರ್ಘಟವೇ ಆಗಿದೆ! ಯಾವ ಉದ್ದಂಡ ಹಾಗು ಉಚ್ಛೃಂಖಲ ಜನರಲ್ಲಿ ಅನವಸ್ಥೆಯೆಂಬುದೇ ಸಮಾಜ ವ್ಯವಸ್ಥೆಯಾಗಿ ಕೂಡ್ರುವದೋ, ಅವರ ಜೊತೆಯಲ್ಲಿ ಯಾರಿಗೆ ಜೀವಿಸುವ ದಿದೆಯೋ, ಅವರು ಅಪದ್ಧರ್ಮವನ್ನೇ ಸದ್ಧರ್ಮವೆಂದು ತಿಳಿಯಲಿಕ್ಕೆ ಬೇಕು!"

ಇಷ್ಟರಲ್ಲಿ ಮತ್ತೆ 'ಊSS! ಕಂಟಕಬಾಬೂSS' ಎಂಬ ಕೂಗು ಕೇಳ ಹತ್ತಿತು.

"ಏಳು ಏಳು! ಅದು ನೋಡು, ಜಾವರಾಗಳು ಮತ್ತೆ ಕರೆಯಬಂದರು. ಇನ್ನು ನಾವು ಅಲ್ಲಿಗೆ ಸಮಾರಂಭಪೂರ್ವಕವಾಗಿ ಅಳಲಿಕ್ಕೆ ಹೋಗಲೇ ಬೇಕು!"

ಕಂಟಕ-ಕಂಟಕಿಯರು ಜಾವರಾಗಳ ಆ ಗುಡ್ಡದ ಮೇಲಿನ ಗುಹೆಯ ಕಡೆಗೆ ಹೋಗುವಷ್ಟರೊಳಗೆ ಆ ಜಾವರಾಗಳೊಳಗಿನ ಮೃತಮನುಷ್ಯನ ಪ್ರೇತ ಸಂಸ್ಕಾರವು ತೀರ ಭರಕ್ಕೆ ಬಂದಿತ್ತು. ಆ ಮೃತಮನುಷ್ಯನು ಜಾವರಾಗಳ ರಾಜನಾದ ನಾನಕೋಬಿಗೆ ವಿಶೇಷ ಸ್ನೇಹಿತನೂ, ಜಾವರಾಗಳೊಳಗಿನ ಒಬ್ಬ ಹಿರಿಯ 'ದಾದಾ'ನೂ ಆವದ್ದರಿಂದ, ಆತನ ಪ್ರೇತಸಂಸ್ಕಾರಕ್ಕೆಂದು ಆ ಎಲ್ಲ ಜಾವರಾಗಳೂ ಕಲೆತಿದ್ದರು. ಆ ಹೆಣವನ್ನು ಮಧ್ಯದಲ್ಲಿರಿಸಿ, ಗಂಡಸರು ಹೆಂಗಸರು ಹುಡುಗರು ಎಲ್ಲರೂ ತೀರ ಉಲ್ಲಿಂಗರೂ ನಗ್ನರೂ ಬಿರಿವೈಯ ವರೂ ಸಮ್ಮಿಶ್ರವಾಗಿ ಆ ಪ್ರೇತದ ಸುತ್ತಲೂ ಒಂದು ವರ್ತುಲದಲ್ಲಿ ಕುಳಿತು ಕೊಂಡರು. ಆ ಮೃತನ ಪತ್ನಿಗೂ ಮಕ್ಕಳಿಗೂ ಸ್ವಾಭಾವಿಕವಾಗಿಯೇ ವಿಶೇಷ ದುಃಖವಾಗಿ, ಅವರು ಶೋಕಗ್ರಸ್ತರಾಗಿದ್ದರು; ಆದರೆ ಪ್ರೇತಸಂಸ್ಕಾರ ಕ್ಕೆಂದು ಅವರ ಇಡಿ ಜನಾಂಗವು ಯಾವಾಗ ಹಾಗೆ ಸಾರ್ವಜನಿಕ ಶೋಕ

ಮಾಡಲಿಕ್ಕೆ ಆ ಹೆಣದ ಸುತ್ತಲೂ ಕಲೆತಿತೋ, ಆಗ ಆ ನೋಟದೊಡನೆ ಆ ಮೃತನ ಹೆಂಡತಿಗೆ, ತನ್ನ ಶೋಕದ ಆವೇಗವು ಹೆಚ್ಚಿತೆಂದೇ ಅಲ್ಲ; ಆದರೆ ಆ ಪ್ರೇತಸಂಸ್ಕಾರದೊಳಗಿನ ಕರ್ತವ್ಯಗಳ ಅರಿವೂ ಇದ್ದ ಮೂಲಕ ಆಕೆ ಬಿಕ್ಕು ಬಿಕ್ಕುತ್ತ ನಡುವೇ ಬಹುದೊಡ್ಡ ದನಿಯಿಂದ ಅಳತೊಡಗಿದಳು. ಆ ಕೂಡಲೆ ಒಂದು ವಿಶಿಷ್ಟ ಸ್ವರದಲ್ಲೂ ತಾಳದಲ್ಲೂ ಆ ಎಲ್ಲ ಜಾವರಾ ಜನಾಂಗವು ಅಳಲಾರಂಭಿಸಿತು. ಮೊದಮೊದಲು ಪ್ರೇತಸಂಸ್ಕಾರದೊಳಗಿನ ಒಂದು ಕರ್ತವ್ಯವೆಂದೇ ಅವರು ಅಳತೊಡಗಿದ್ದರೂ, ಸಾಮಾಜಿಕ ಭಾವನೆಯಾದರೂ ರೋಗಗಳಂತೊಂದು ಸಾಮಾಜಿಕ ಸಾಂಸರ್ಗಿಕ ರೋಗವೇ ಇದ್ದುದರಿಂದ, ಕರ್ತವ್ಯವೆಂದು ಅಳುಅಳುತ್ತಿರುವಾಗಲೆ, ಕೊನೆಗೆ ಅವರು ನಿಜವಾಗಿಯೂ ಅಳಹತ್ತಿದರು. ಅವರೆಲ್ಲರ ಕಣ್ಣುಗಳೂ ನೀರಿನಿಂದ ತುಂಬಿಬಿಟ್ಟವು!

ಬರಬರುತ್ತ ಆ ಸಾರ್ವಜನಿಕ ಮತ್ತು ಸಂಗೀತ ಆಕ್ರಂದನವು ತಡೆದರೂ ತಡೆಯಲಾರದಂತಾಯಿತು. ಅಷ್ಟರಲ್ಲಿ ಅವರೊಳಗಿನ ವೃದ್ಧರು ಕುಳಿತ ಸ್ಥಳದಿಂದೆದ್ದು ಬಂದು ಆ ಪ್ರೇತವನ್ನೊಂದು ಮೊಟ್ಟೆಯಲ್ಲಿ ಕಟ್ಟಿದರು. ಬಳಿಕ ಅದನ್ನು ತಕ್ಕೊಂಡು ಅವರೆಲ್ಲರೂ ಎದೆಬಾಯಿ ಬಡಕೊಳ್ಳುತ್ತ ಒಂದೇ ದನಿಯಿಂದ ಸಮ್ಮಿಶ್ರವಾಗಿ ಅಳುತ್ತ, ಅಲ್ಲಿಯದೊಂದು ಪ್ರಚಂಡ ವೃಕ್ಷದ ಬಳಿಗೆ ಹೋದರು. ಆ ಮರದಲ್ಲಿ ಎತ್ತರದ ಮೇಲೊಂದು ಡೋಲಿಯಿದ್ದಿತು. ಆ ಡೋಲಿಯಲ್ಲಿ ಆ ಹೆಣವನ್ನು ಚೆನ್ನಾಗಿ ಕುಳ್ಳಿರಿಸಿದ್ದರಿಂದ ಆ ಮೃತ ಮನುಷ್ಯನು ಆ ಗಿಡದ ಮೇಲಿನ ಆ ವಿಚಿತ್ರವಾದ ಡೋಲಿಯಲ್ಲಿ ಚಕ್ಕಳಿಮುಕ್ಕಳಿ ಹಾಕಿ ಕುಳಿತುಕೊಂಡು, ಮೇಲೆ ಮೋರೆ ಮಾಡಿ ಎಲ್ಲರ ಕಡೆಗೂ ಜೀವಂತ ಮನುಷ್ಯನ ಹಾಗೆಯೇ ನೋಡುತ್ತಿರುವಂತೆ ತೋರಹತ್ತಿತು. ಜಾವರಾಗಳ ಆ ಗಿಡ್ಡ ಜನರಿಗೆ ಅದು ತೀರ ಎತ್ತರವೆಂದು ತೋರಿದ್ದರಿಂದ, ಅವರೆಲ್ಲರಿಗೂ ಆ ಹೆಣವನ್ನು ಆ ಎತ್ತರದ ಡೋಲಿಯ ವರೆಗೆ ಎತ್ತಿ ಒಯ್ಯುವದು ದುರ್ಘಟವೆನಿಸಿತು. ಆದುದರಿಂದಲೇ ಡೋಲಕಾರಿಯು ಆ ಹೆಣದ ಮೊಟ್ಟೆಯನ್ನು ತನ್ನ ಡುಬ್ಬಕ್ಕೆ ಕಟ್ಟಿಕೊಂಡೊಯ್ದು ಆ ಡೋಲಿಯಲ್ಲಿ ಹಾಗೆ ಕೂಡ್ರಿಸಿ ಬಂದಿದ್ದನು. ಜಾವರಾಗಳ ಪ್ರೇತಸಂಸ್ಕಾರದೊಳಗಿನ ಈ ವಿಧಿಯು ನಡೆದಿರುವಾಗ ಎಲ್ಲರೂ ತಾಳಬದ್ಧವಾಗಿ ಅಳುವ ಪರಮಾವಧಿಯನ್ನು ಮಾಡಿದರು!

ಬಳಿಕ ಆ ಎಲ್ಲ ಜಾವರಾಗಳೂ ತಮ್ಮ ಮೈಗಳ ಮೇಲಿನ ತರತರದ ಬಣ್ಣಗಳ ಶೃಂಗಾರಿಕ ಮಣ್ಣಿನ ಪಟ್ಟೆಗಳನ್ನೆಲ್ಲ ಒರೆಸಿಬಿಟ್ಟರು. ಹದವಾಗಿ ಬೋಳಿಸಿ ನುಣುಪಾಗಿ ಮಾಡಿಕೊಂಡ ತಲೆಯ ಎಲ್ಲ ಜಾವರಾ ಸುವಾಸಿನಿಯರೂ ಗಂಡಸರೂ ಸೂತಕದ ಗುರ್ತೆಂದು ಬರಿಯ ಬೂದಿ ಬಣ್ಣದ ಮಣ್ಣು

ತಂದು, ಅದನ್ನು ಎಲ್ಲ ಸ್ತ್ರೀ-ಪುರುಷರು ತಮ್ಮ ಮೈ ಕೈಗಳಿಗೂ, ಬೋಳಿಸಿ ಕೊಂಡಂಥ ತಲೆಗಳಿಗೂ ಬಡಿದುಕೊಂಡರು. ಆ ಮೇಲೆ ಮೃತನ ಕೊನೆಯ ದರ್ಶನಕ್ಕೆಂದು ಆ ಸಮಸ್ತ ಜಾವರಾ ಜನರೂ ಎದ್ದು ನಿಂತರು. ಅವರಲ್ಲಿ ಧಾರ್ಮಿಕ ಪುರೋಹಿತನೆಂಬವನಾವನೂ ಇರುವದೇ ಇಲ್ಲ. ಆಯಾ ಕಾಲಕ್ಕೆ ಮುಂದಾಳುವಾಗಿದ್ದ ಯಾವ ವೃದ್ಧನಿರುವನೋ, ಆತನೇ ರೂಢಿಯಂತೆ ಆ ಎಲ್ಲ ಸಂಸ್ಕಾರಗಳನ್ನು ಮಾಡಿಸುತ್ತಾನೆ.

ಆಗ ಅಂಥ ಒಬ್ಬ ವೃದ್ಧನು ಮುಂದಾದನು. ಆತನು ಹರಕು-ಮುರು ಕಾದ ನಾಲ್ಕೈದೇ ಶಬ್ದಗಳಲ್ಲಿ ಹಲವು ಹಾವ-ಭಾವಗಳನ್ನು ಬೆರಿಸಿ ತನ್ನ ಯಾವ ಭಾವವನ್ನು ವ್ಯಕ್ತಪಡಿಸಿದನೋ, ಅದನ್ನು ಬರಿಯ ಶಬ್ದಗಳಲ್ಲಿ ತಿಳಿಸ ಬೇಕಾದರೆ—

"ಇನ್ನು ಈ ನಮ್ಮ ಮೃತ ಅಪ್ಪನ ಹೆಣದ ಕಡೆಗೆ ಮೂರು ತಿಂಗಳ ವರೆಗೆ ಯಾರೂ ಹಣಿಕಿ ಹಾಕಿ ನೋಡಲಾಗದು. ಆತನ ಏಕಾಂತವು ಭಂಗ ವಾದರೆ, ಆತನ ಭೂತವು ಕ್ಷೋಭೆಗೊಂಡೀತು! ನಾವು ಆತನನ್ನು ಮರೆಯು ವೆವೋ ಹೇಗೆ, ಆತನ ಪ್ರೀತಿಗೆ ಕೃತಘ್ನರಾಗುವೆವೋ ಹೇಗೆ ಇದನ್ನು ಆತನ ಭೂತವು ಈ ಎತ್ತರವಾದ ಗಿಡದ ಡೋಲಿಯಲ್ಲಿ ಕುಳಿತು ಎಡಬಿಡದೆ ನಿರೀಕ್ಷಿ ಸುತ್ತಿರುತ್ತದೆ. ಅದಕ್ಕಾಗಿ ಈ ಮೂರು ತಿಂಗಳುಗಳ ವರೆಗೆ ನಾವು ಯಾರೂ ಶೃಂಗಾರ ಸಾಮಗ್ರಿಗಳನ್ನೂ ಆಮೋದ-ಪ್ರಮೋದ, ಖುಷಿ-ಮೋಜುಗಳನ್ನೂ ಮಾಡಕೂಡದು. ನಾಚ-ಗೀಚುಗಳಂತೂ ಮೂರು ತಿಂಗಳ ವರೆಗೆ ಆಗಲೇ ಕೂಡದು! ಬಣ್ಣದ ಮಣ್ಣಿನ ಪಟ್ಟೆ ಹಚ್ಚುವದನ್ನು ಕೂಡ ಬಿಟ್ಟುಬಿಡ ಬೇಕು. ಬೂದಿ ಮಣ್ಣನ್ನಷ್ಟೆ ತಪ್ಪದೆ ಬಡಕೊಳ್ಳತಕ್ಕದ್ದು. (ಯಾಕಂದರೆ, ಕಾಡಿನಲ್ಲಿಯ ವಿಷಾರಿ ಸೊಳ್ಳೆ-ಗಿಳ್ಳೆಗಳು ಆ ಉಲ್ಲಿಂಗ ಜಾವರಾಗಳಿಗೆ ಕಚ್ಚುವ ವಾದ್ದರಿಂದ ದೇಹರಕ್ಷಣಕ್ಕೆ ಯಾವುದಾದರೂ ಮಣ್ಣಿನ ಲೇಪವು ಅತ್ಯವಶ್ಯಕ ವೇ ಆಗಿದೆ.")

ಆಗ ಒಂದು ವಿಶಿಷ್ಟಪ್ರಕಾರದ ದನಿಯಿಂದ ಎಲ್ಲ ಜಾವರಾಗಳು ಆತನ ಅಪ್ಪಣೆಗೆ ಸಮ್ಮತಿಯನ್ನಿತ್ತರು; ಹಾಗು ಅವರೆಲ್ಲರೂ ಅಲ್ಲಿಂದೆದ್ದು ತಮ್ಮ ಹೋರಿನ ಕಡೆಗೆ ನಡೆದರು.

ಕಿಶನ-ಮಾಲತಿಯರು ತಮ್ಮ ಸ್ವತಂತ್ರ ಗುಹೆಯ ಕಡೆಗೆ ಹೊರಟರು. ಅಲ್ಲಿಂದ ಹೊರಡುವಾಗ ಅವರು ಒಳ್ಳೇ ಆಸ್ಥೆಯಿಂದ ಡೋಲಕಾಕಿಗೂ ತಮ್ಮ ಲ್ಲಿಗೇ ಬರಬೇಕೆಂದು ಬಿನ್ನಯಿಸಿದರು.

ಡೋಲಕಾಕಿಗೆ ಆಗ ತತ್ವಜ್ಞಾನದ ಗುಂಗು ಉಂಟಾಗಿದ್ದಿತು. ಆತನು

ತನ್ನ ವಿದ್ವತ್ತೆಯ ವರ್ಚಸ್ವವನ್ನು ಮಾಲತಿಯ ಮೇಲೆ ಕೆಡಹಲಿಕ್ಕೆಂದು, ಕಿಶನನೊಡನೆ ಜಾವರಾಗಳ ಪ್ರೇತ ಸಂಸ್ಕಾರದಬಗ್ಗೆ ದಾರಿಗುಂಟ ಚರ್ಚಿಸುತ್ತ ನಡೆದನು.

"ಮೃತನ ವಿಷಯದ ಪ್ರೀತಿ-ಭೀತಿಗಳ ಭಾವನೆಯ ಮೇಲೆಯೇ ಇವರ ಎಲ್ಲ ಸಂಸ್ಕಾರವು ಹೇಗೆ ನಿರ್ಧರಿಸಲ್ಪಟ್ಟಿದೆಯೆಂಬದನ್ನು ನೋಡು! ಈ ಧರ್ಮಶೂನ್ಯ ಹಾಗು ಕಾಡು ಜಾವರಾಗಳ ವನ್ಯ ಪ್ರೇತ ಸಂಸ್ಕಾರದ್ದೇ, ನಮ್ಮ ವೈದಿಕ ಪ್ರೇತ ಸಂಸ್ಕಾರಗಳೂ-ಔರ್ಧ್ವದೈಹಿಕಗಳೂ ಸೂತಕ-ಶ್ರಾದ್ಧಗಳೂ ಧಾರ್ಮಿಕ ಸಂಸ್ಕರಣಗಳೂ ಆಗಿವೆ. ಹಿಂದೂ, ಖ್ರಿಶ್ಚನ್, ಮುಸ್ಲೀಮ ಇವೆರೆಲ್ಲರ ಪ್ರೇತ ಸಂಸ್ಕಾರಗಳು ಎಲ್ಲೆಡೆಯಲ್ಲೂ ಮೃತನ ವಿಷಯದ ಪ್ರೀತಿ-ಭೀತಿಗಳನ್ನೇ ಅವಲಂಬಿಸಿರುತ್ತವೆ. ಅದು ಹೇಗೆಂಬದನ್ನು ನೋಡು. ಮಾಲತೀ, ಈ ಜಾವರಾಗಳ ಪ್ರೇತಸಂಸ್ಕಾರವನ್ನು ನೋಡುತ್ತಿರುವಾಗ ನೀನು ನಡುನಡುವೆ ನಗುತ್ತಿದ್ದೆಯಲ್ಲವೆ? ಆದರೆ ನಿನಗೆ ಇವರ ಈ ಕಾಡು ಹಾಗು ಹುಚ್ಚುಚ್ಚಾರವಾಗಿ ತೋರುವ ಪ್ರೇತವಿಷಯದ ಪ್ರತಿಯೊಂದು ಸಂಸ್ಕರಣದ ಪ್ರತಿಧ್ವನಿಯು ನಮ್ಮ ಸುಧಾರಿಸಿದ ವೈದಿಕ, ಖ್ರಿಸ್ತೀ, ಮುಸ್ಲೀಮ ಪ್ರಭೃತಿ ಈಶ್ವರೋಕ್ತ ಧರ್ಮಗಳೆಂದು ಹಂಟುಬಡಿಯುವ ಪ್ರೇತ ಸಂಸ್ಕಾರಗಳಲ್ಲಿ ವ್ಯಕ್ತವಾಗುತ್ತದೆಂಬದನ್ನು ನಾನು ತೋರಿಸಿ ಕೊಟ್ಟರೆ, ನೀನು ನನಗೆ ಏನು ಕೊಡುತ್ತೀ? ಆದಿಮ ಮಾನವನು ಪ್ರೇತದ ಭೂತವಾಗಿ ಎದ್ದೇಳಬಾರದೆಂದು ಅದರ ಮೇಲೆ ಕಲ್ಲಿನ ರಾಶಿಗಳನ್ನೊಟ್ಟಿದ್ದನು; ಅವುಗಳ ಉದರದಲ್ಲೇ ಈ ಖ್ರಿಸ್ತೀ-ಮುಸಲ್ಮಾನರ ಕಬರಸ್ಥಾನಗಳೂ, ಭವ್ಯ ಕಬರಗಳೂ, ಪಿರಾಮಿಡ್ಸಗಳೂ ಜನ್ಮವೆತ್ತಿದವು! ಮೃತನ ನೌಕೆಯು ವೈತರಣಿಯನ್ನು ಈಸಿ ಹೋಗಲಿಕ್ಕೆ ಸಮರ್ಥವಾಗಬೇಕೆಂದೇ........"

"ಸಾಕಪ್ಪಾ ನಿನ್ನೀ ತತ್ವಜ್ಞಾನವು!" ಇನ್ನು ಈತನು ಈ ತತ್ವಜ್ಞಾನದ ಪ್ರವಾಹದಲ್ಲಿ ಹೀಗೆಯೇ ಹತ್ತೆಹತ್ತದಂತೆ ತೇಲಿ ಹೋಗತಕ್ಕವನೆಂದರಿತು, ಕಿಶನನು ಆ ಡೋಲಕಾರಿಯನ್ನು ನಡುವೇ ತಡೆದು:—"ನೀನು ಮೃತ ಮನುಷ್ಯರನ್ನು ವೈತರಣೀ (ಸಮುದ್ರ-ಸಂಸಾರಸಾಗರ) ದಾಟಿಸಲಿಕ್ಕೊಯ್ಯುವ ನೌಕೆಗಳ ಮಾಹಿತಿ ಹೇಳುವದಕ್ಕಿಂತ, ಮೊದಲು ಜೀವಿತ ಮನುಷ್ಯರನ್ನು ತೇಲಿಸಿಕೊಂಡೊಯ್ವ ಯಾವುದೊಂದು ನೌಕೆಯ ಮಾಹಿತಿಯನ್ನು ಹೇಳಿದರೆ ಹೆಚ್ಚು ಉಪಕಾರವಾದಂತಾದೀತು! ವೈತರಣಿಯ ಮೃತ ಸಮುದ್ರವನ್ನು ದಾಟಲಿಕ್ಕೆ ಸತ್ತ ಬಳಿಕ ನಮ್ಮ ಪ್ರೇತಗಳಿಗೆ ಯಾವುದೊಂದು ನೌಕೆಯು ಎಲ್ಲಿಯಾದರೂ ದೊರೆತೀತು; ಅದು ಸಿಗದಿದ್ದರೆ ಆಗಲಿ ಏನಾದರೂ ಮಾಡ

ಲಿಕ್ಕೆ ಬಂದೀತು; ಆದರೆ ಈ ಕರಿನೀರಿನ ಸಮುದ್ರವನ್ನು ಜೀವಂತ ವಾಗಿ ದಾಟಿ ಹೋಗಲಿಕ್ಕೆ ಉಪಯುಕ್ತವಾಗುವಂಥ ಯಾವ ನೌಕೆಯನ್ನು ನೀನು ಈ ಮೊದಲು ನಿರ್ಮಿಸುತ್ತಿದ್ದೆಯೋ ಅದರ ಬಗ್ಗೆ ಏನಾಯಿತೆಂಬ ದನ್ನು ಮೊದಲು ತಿಳಿಸು. ಯಾವ ತರಿಯನ್ನು ನೀನು ಮೊನ್ನೆ ನನಗೆ ತೋರಿಸಿದ್ದೆಯೋ, ಅದನ್ನಿನ್ನು ಸಮುದ್ರದಲ್ಲಿ ದೂಡುವದಾದರೂ ಎಂದಿಗೆ? ಅದರ ಪೂರ್ವಸಿದ್ಧತೆಯೆಲ್ಲವೂ ಆದಂತಾಯಿತೆಂದು ಮೊನ್ನೆಯೇ ಅಂದಿದ್ದೆ ಆ ಮಾತಿಗೆ ನಾಲ್ಕೆಂಟು ದಿನಗಳಾದರೂ ಕೂಡ ನೀನಿನ್ನೂ ದಿನವ್ಯೇಕವನ್ನೇಕೆ ಮಾಡುತ್ತಿರುವೆ! ಇನ್ನು ಈ ನಮ್ಮಗಳ ಜೀವದ ತರಿಯನ್ನು ಈ ಸಮುದ್ರ ದಲ್ಲೆಂದು ದೂಡಿಕೊಡುತ್ತೀಯೆಂಬವನ್ನು ಖಂಡಿತವಾಗಿ ತಿಳಿಸು ತೀರ ನಿಶ್ಚಿತ ದಿನವನ್ನೇ ಹೇಳಿಬಿಡು. ಆ ಮೇಲೆ ನಮ್ಮಗಳ ದೈವವು ನಮ್ಮನ್ನು ತೇಲಿಸಲಿ-ಮುಳುಗಿಸಲಿ! ಕೇವಲ ಭಯದಿಂದೆಂದು ಇನ್ನು ಒಂದು ದಿನವನ್ನೂ ಇಲ್ಲಿ ಕಳೆಯಲಾಗದು! ಹೇಳು, ಆ ದಿನವಾವುದೆಂಬದನ್ನು ಬೇಗನೆ ತಿಳಿಸು"

"ನಿಶ್ಚಿತ ದಿನವನ್ನೇ ತಿಳಿಸುವೆನು; ಇನ್ನು ಮೂರು ತಿಂಗಳ ಮೇಲೆ ಮೂರು ದಿನಗಳು ಮುಗಿದ ಬಳಿಕ ಯಾವ ಹೊಸ ದಿನವು ಉದಯಿಸುವದೊ, ಅಂದೇ ಈ ಕರಿನೀರ ಸಮುದ್ರದಲ್ಲಿ ಆ ನಮ್ಮ ತರಿಯನ್ನು ದೂಡೋಣ."

"ಅಬ್ಬಬ್ಬ! ಅದೇಕೆ? ಇನ್ನು ಒಮ್ಮೆಲೆ ಇಷ್ಟು ಸಾವಕಾಶವೇಕೆ? ಮೊನ್ನೆಯೇ ಸಂಪೂರ್ಣ ಸಿದ್ಧತೆಯಾಯಿತೆಂದೆ; ಈಗ ಮತ್ತೆ ಮೂರು ತಿಂಗಳು ಮೂರು ದಿನಗಳನ್ನು ತೀರ ಜೊಯಿಸರ ರೀತಿಯಲ್ಲೇ ಹೇಳಿದ್ದೇಕೆ? ಮುಹೂರ್ತ-ಗಿಹೂರ್ತದ ಲಹರಿಯುಂಟಾಯಿತೋ ಏನು?"

"ಛೇ! ಯಾವ ದಿನ ಸಿದ್ಧತೆಯು ಮುಗಿಯುವದೋ, ಅಂದೇ ಈ ಡೋಲಕಾರಿಗೆ ಮುಹೂರ್ತವಿರುತ್ತದೆ; ಆದರೆ ಮುಹೂರ್ತದ ಲಹರಿಯನ್ನು ಬಿಟ್ಟುಗೊಟ್ಟರೂ ನಾವು ಎರಡು ಲಹರಿಗಳನ್ನಂತೂ ಸಂಬಾಳಿಸಲೇಬೇಕು. ಒಂದು ಸಮುದ್ರದ ಲಹರಿ; ಇನ್ನೊಂದು ನಾನಕೋಬಿರಾಜನ ಲಹರಿ! ನಾನ ಕೋಬಿ ರಾಜನು ಇದೀಗ ನನಗೆ ಬಜಾಯಿಸಿ ಹೇಳಿದನೇನಂದರೆ, ಇಂದು ಸತ್ತಿ ರುವ ಈ ಜಾವರಾನ ಸೂತಕ ತೀರುವವರೆಗೂ ತರಿಯನ್ನು ಸಮುದ್ರದಲ್ಲಿ ಬಿಡಲಾಗದು. ಈ ಜಾವರಾಗಳ ಆ ಸೂತಕವು ಇಂದಿಗೆ ಮೂರು ತಿಂಗಳಿಗೆ ಮುಗಿಯುವದು. ಆ ಮೇಲೆ ಮುಂದೆ ಎರಡು-ಮೂರು ದಿನಗಳಲ್ಲಿ ಅವರು ನಮಗಾಗಿ ತಮ್ಮ ಡುಂಗಿಯನ್ನು ನೆರವಿಗೆ ಕೊಟ್ಟು, ಈ ಸಮುದ್ರದ ತೀರ ದಿಂದ ಅಡ್ಡದಾರಿಯಿಂದಲೇ ನಮ್ಮ ತರಿಯನ್ನು ತಮ್ಮ ಪಹರೆಯೊಳಗೆ ಸಮುದ್ರದೊಳಗೆ ತಲುಪಿಸತಕ್ಕವರಿರುವರು; ಮತ್ತು ಅನುಕೂಲ ಗಾಳಿ

ಬೀಸುವದೂ ಸಮುದ್ರದ ಬಿರುಗಾಳಿ ತೆಗ್ಗುವುದೂ ಅದೇ ಸಂಧಿಗೆ ಸಹಾಯ್ಯಕ ಗಳಾಗಬಹುದಾಗಿವೆ. ಅದಕ್ಕೆಂದೇ ಅದುವರೆಗೆ ಇಲ್ಲಿ ನಿಲ್ಲುವ ಭಾಗವಿದೆ. ಎಲೋ, ಸ್ವದೇಶಕ್ಕೆ ಹೋಗುವ ಅವಸರವು ನಿನಗಿಂತಲೂ ನನಗೆ ಕಡಿಮೆ ಯಿದೆಯೆಂದು ನೀನು ತಿಳಿಯುವೆಯಾದರೂ ಹೇಗೆ? ನಿನಗೆ ಬರಿಯ ಅವಸ ರವೇ ಇದ್ದೀತು; ಆದರೆ ನನಗಂತೂ ವಿವಾಹದವಸರವೇ ಇದೆ! ಕಂಟಕೀ, ನಾನ ನ್ನುವದು ನಿಜವಷ್ಟೇ? ನಮ್ಮಗಳ ಆ ತರಿಯನ್ನು ಪರತೀರಕ್ಕೆ ತಲುಪಿಸುವ ಕೆಲಸಕ್ಕೆಂದು ಯಾವ ಹಣವು ನನಗೆ ಕಂಟಕಬಾಬುವಿನಿಂದ ಸಲ್ಲಬೇಕಾಗಿ ದೆಯೋ, ಅದರ ಹುಂಡಿಯ ಹಣವು ಅಲ್ಲಿ ನಿನ್ನ ಪ್ರೇಮಪತ್ತಿನ ಬ್ಯಾಂಕಿನಲ್ಲೇ ದೊರೆಯಬೇಕಾಗಿದೆ. ತಿಳಿಯಿತೆ!" ಎಂದಂದು ಟೊಣಪನಾದ ಆ ಡೋಲಕಾ- ರಿಯು ನಗುನಗುತ್ತಲೇ ಮಾಲತಿಯ ಗಲ್ಲದ ಮೇಲೊಮ್ಮೆ ಅಚ್ಚೆಯಿಂದ ಚಿಟಿಕೆ ಹೊಡೆದನು.

"ಆದರೆ ಕೆಲಸ ಮಾಡಿ ತೋರಿಸಿದ ಮೇಲೆಯೇ ಹಣದ ಮಾತು! ಕಂಟಕನು ಕೊಟ್ಟ ಹುಂಡಿಯ ಹಣವು ಅಲ್ಲಿಯ ಬ್ಯಾಂಕಿನಲ್ಲಿ ದೊರಕಬೇಕಾ ದರೆ ಅದಿಗೇ ದೊರೆತೀತೆಂಬದನ್ನು ಅಂಬಿಗನು ಮರೆಯಲಾಗದು!" ವಿನಕ್ಕೆ ಆವಿಷವಷ್ಟೇ ಕಾಣುವಂತೆ ಮಾಲತಿಯು ಚಾಲಾಕಿಯಿಂದ ಬಲೆಯನ್ನೆಸೆದಳು!

---

## ೩೨ನೇ ಪ್ರಕರಣ.

"ಕಿಶನ್! ಏ ಕಿಶನ್!" ಎಂದೆನ್ನುತ್ತ, ತನ್ನ ಗವಿಯ ಬಾಗಿಲಲ್ಲಿ ಕೆಂಪಡ ರಿದ ಮುಖದಿಂದ ನಿಂತುಕೊಂಡಿದ್ದ ಮಾಲತಿಯು ಮನಸ್ಸಿನ ಮನಸ್ಸಿನೊಳಗೇ ಎರಡು-ಮೂರು ಸಾರೆ ಕೂಗಿಕೊಂಡಳು. ಆ ಮೇಲೆ ಮನಸ್ಸಿನಲ್ಲಿಯೇ "ಮಾತುಮಾತಾಡುತ್ತಿರುವಾಗ ಎಲ್ಲಿಗೆ ಹೋದನೋ ಏನೋ? ಬೆಳಿಗ್ಗೆ ಹೋದವನು ಈಗ ಮಾರುದ್ದ ಹೊತ್ತು ಏರಿದರೂ ಅಲ್ಲಿಯೇ ಆ ಜಾವರಾಗಳ ಹತ್ತರ ಏತರಲ್ಲಿಯೋ ಗುಂಗಾಗಿ ಬಿಟ್ಟಿದ್ದಾನೆ! ಎಲ! ಈತನಾರು? ಆ ಬಿದರಿನ ಮೆಳೆಯೊಳಗಿಂದ ಬರುತ್ತಿರುವವನು! ಇವನು ಆ ಬಿದರಿನಂತೆಯೆ ಎತ್ತರವಿರುವ ನಲ್ಲವೆ? ಇವನೇ? ಇವನು ಆ ಡೋಲಕಾರಿಯು. ಮತ್ತಾರಿರಬೇಕು? ನನ್ನ ಮನಸ್ಸನ್ನೊಲಿಸಕ್ಕೆ ಇವನು ಎಷ್ಟು ಪ್ರಯತ್ನಿಸುತ್ತಿರುವನಲ್ಲ! ಇವನಷ್ಟು ಪ್ರೇಮಲ ಮತ್ತು ಪ್ರಾಮಾಣಿಕ ಮನುಷ್ಯರು ಮತ್ತೆ ದೊರೆಯಲಿಕ್ಕಿಲ್ಲ. ಈತನ ವಿಷಯವಾಗಿ ನನಗೆ ನಿಜವಾಗಿಯೂ ಕರುಣೆ ಹುಟ್ಟುತ್ತದೆ; ಆದರೆ ಏನು ಮಾಡುವುದು? ಈತನ ಪ್ರೇಮವನ್ನು ನನ್ನಿಂದ ಸ್ವೀಕರಿಸಲೂ ಆಗುವ ದಿಲ್ಲ; ನಿರಾಕರಿಸಲೂ ಆಗುವದಿಲ್ಲ. ಈಗ ತಿಂಗಳಿನಿಂದ ಬೆಳಗಾಯಿತೆಂದರೆ,

ಈ ಕಾಡಿನೊಳಗಿನ ತಾಜಾ ಹೂಗಳನ್ನೂ ತಾಜಾ ಜೇನುತುಪ್ಪವನ್ನೂ ನನಗೆ ಕಾಣಿಕೆಯೆಂದು ತಂದು ಕೊಡಲಿಕ್ಕೆ ಒಂದು ದಿನವೂ ತಪ್ಪಿರುವದಿಲ್ಲ. ನಾನು ಈತನನ್ನು ಪತಿಯೆಂದು ಮನ್ನಿಸಬೇಕೆಂದು ಈತನಿಗೆ ಯಾವ ಅನಿವಾರ್ಯ ಮೋಹವುಂಟಾಗಿವೆಯೋ, ಅದನ್ನು ತ್ಯಜಿಸಿ ಈತನು ತನ್ನನ್ನು ಬಂಧುವೆಂದು ತಿಳಿ ಎಂದಂದರೆ, ನಾನು ಈಗಲೆ ಈತನನ್ನು ನನ್ನ ಬಾಂಧುವೆಂದು ಮನ್ನಿಸುವೆನು. ಯಾಕಂದರೆ ಒಟ್ಟಿನಲ್ಲಿ ಈತನು ನನಗೆ ರುಚಿಸಹತ್ತಿರುತ್ತಾನೆ.''

ಮಾಲತಿಯು ತನ್ನ ಮನಸ್ಸಿನಲ್ಲೇ ಹೀಗೆ ಮಾತಾಡುತ್ತಿರಲು, ಡೋಲಕಾಠಿಯು ಆ ಗವಿಯ ಬಳಿಗೇ ಬಂದನು. ಆತನಪೊಂದು ಕೈಯೊಳಗೆ ಆ ಕಡೆಯ ಸಿಂಧುಪುಲಿನಗಳು ಯಾವುದಕ್ಕೆಂದು ಪ್ರಸಿದ್ಧವಾಗಿವೆಯೋ, ಆ ಜಾತಿಯ ಗುಲಾಬೀ ವರ್ಣದ ಕೆತ್ತಿ ತಿಕ್ಕಿ ಸರಿಪಡಿಸಿದ, ಮೇಲೆ ಚಿತ್ರ ತೆಗೆದು ಶೋಭೆಗೊಳಿಸಿದ್ದ ಒಂದು ಸುಂದರ ಶಂಖವಿದ್ದಿತು; ಮತ್ತು ಬೇರೆ ಕೈಯಲ್ಲಿ ಒಂದು ಹಸುರು ಮುರಿಯುವ ಎಲೆಗಳ ದೊನ್ನೆಯಲ್ಲಿ ತಾಜಾ ಸುಗಂಧಯುಕ್ತ ಹೂಗಳಿದ್ದವು. ಅತ್ತಣದ ಅಡವಿಯಲ್ಲಿ ಜೇನಿನ ದೊಡ್ಡ ದೊಡ್ಡ ಹುಟ್ಟುಗಳು ವಿಪುಲವಾಗಿರುತ್ತವೆ! ಜಾವರಾ ಜನರು ಆ ಹುಟ್ಟುಗಳನ್ನು ಕೆಡಹಿ, ಹಾ, ಹಾ, ಅನ್ನುವಷ್ಟರಲ್ಲಿ ಬೇಕಾದಷ್ಟು ತಾಜಾ ಮಧುವನ್ನು ಪೂರೈಸುವಲ್ಲಿ ನಿಪುಣರಿರುವರು. ಅಂಥ ತಾಜಾ ಮಧುವನ್ನು ಆ ಶಂಖದ ಕುಪ್ಪಿ ತುಂಬಿ ತಂದು, ಡೋಲಕಾಠಿಯು ಅದನ್ನು ಕಂಟಕಿಗೆ ಕೊಟ್ಟನು. ಅವಳು ಅದನ್ನು ಗವಿಯಲ್ಲಿರಿಸಿದಳು. ಆ ಮೇಲೆ ಅವನು ಆ ಹೂಗಳನ್ನು ಅವಳಿಗೆ ಕೊಟ್ಟದ್ದಲ್ಲದೆ, ಕೆಲವು ಹೂವಿನ ಗುಚ್ಛಗಳನ್ನು ಅವಳ ಮುಡಿಯಲ್ಲಿ ತಾನು ಸ್ವತಃ ಮುಡಿಸಬೇಕೆಂದು ಕೈ ಮುಂದೆ ಚಾಚಿದನು. ಬೇಕು-ಬೇಡ ಎಂದೆನ್ನುತ್ತ, ಅವಳು ಅವನಿಂದ ಅವುಗಳನ್ನು ಮುಡಿಸಿಕೊಂಡಳು. ಉಳಿದ ಹೂಗಳ ದೊನ್ನೆಯನ್ನು ಎರಡೂ ಕೈಗಳಿಂದ ಎತ್ತಿ ಅವುಗಳ ವಾಸನೆ ತಕ್ಕೊಳ್ಳುತ್ತ, ಹಾಗು ಅವುಗಳ ತರತರದ ಬಣ್ಣಗಳಿಂದ ಪ್ರಸನ್ನಳಾಗುತ್ತ ಕಂಟಕಿಯು:—

''ಎಷ್ಟು ಸುಂದರ ಹೂಗಳಿವು! ಈ ಬಗ್ಗೆ ನಾನು ನಿಮಗೆ ತುಂಬಾ ಆಭಾರಿಯಾಗಿರುವೆನು!''

"ಆದರೆ ಕಂಟಕಿ, ಈ ಎಲ್ಲ ಹೂವುಗಳಿಗಿಂತಲೂ ಸುಂದರವಾದ ಇನ್ನೊಂದು ಹೂವು ಈ ಕಾಡಿನಲ್ಲಿವೆ; ಆದರೆ ಅದಿನ್ನೂ ನನ್ನ ಕೈಗೆ ಬಂದಿಲ್ಲ.''

''ಏತರ ಹೂವದು ಅಷ್ಟು ಸುಂದರವಾಗಿದ್ದದ್ದು?''

''ಕಂಟಕಿ! ನಿನ್ನ ಸೌಂದರ್ಯವು!'' ಹೀಗೆಂದು ಡೋಲಕಾಠಿಯು ತನ್ನ ಕಸವುಳ್ಳ ಕೈಯನ್ನು ಯಾವ ಆತಂಕವೂ ಇಲ್ಲದೆ ಅವಳ ಎಳೆಗದ್ದಕ್ಕೆ

ಹೆಚ್ಚುವ ಸಲುವಾಗಿ ಮುಂದೆ ಮಾಡಿದನು.

ತನ್ನ ಗದ್ದವನ್ನು ಹಿಂದಕ್ಕೆ ಸರಿಸಿಕೊಂಡು, ತಾನೂ ತುಸ ಹಿಂದಕ್ಕೆ ಸರಿದು ನಿಂತು, ಆದರೆ ಸಿಟ್ಟಾಗದೆ ಕಂಟಕಿಯು:—''ಇಶ್ಯ! ಇದೇನು ಚಂದ! ಈ ಹೂವು ಈಗ ಈ ಅಂಡಮಾನದ ಸಿಂಧುತಟದೊಳಗಿನ ಗುಡ್ಡದ ಮೇಲಿನ ಅರಣ್ಯದೊಳಗಿದ್ದರೂ, ಇದು ಕೈಗೆ ಬರಬೇಕಾದರೆ ಸಮುದ್ರದಾಚೆಗಿನ ಭಾರತೀಯ ದಂಡೆಯ ಗುಡ್ಡದ ಅಡವಿಯಲ್ಲೇ ಬಂದೀತು!''

''ಅದೇ ಆಶೆಯಿಂದಲೇ ನಾನು ಜೀವ ಧರಿಸಿರುತ್ತೇನೆ; ಮತ್ತು ನಾನು ನಿರ್ಮಿಸಿರುವ ತರಿಯಾದರೂ ತಾರಿಸುವದಿದ್ದರೆ, ಅದೇ ಆಶೆಯಿಂದ ತಾರಿಸೀತು. ಆಯಿತು. ಇನ್ನು ಮೂರೇ ದಿನಗಳುಳಿದವು. ಇಂದೇ ಜಾವರಾಗಳ ಆ ಮೂರು ತಿಂಗಳ ಸೂತಕವೂ ತೀರಿತು. ನಮಗಿನ್ನು ಅತ್ತ ಕಡೆಗೇ ಹೋಗಬೇಕಾಗಿದೆ. ನಾಲ್ಕನೇ ದಿವಸ ನಾವು ನಮ್ಮ ಸಾಹಸದ ತರಿಯನ್ನು ಸಮುದ್ರದಲ್ಲಿ ನೂಕಿದವೆಂದೇ ತಿಳಿ! ಸ್ವದೇಶಕ್ಕೆ ಒಯ್ಯುವ ಗಾಳಿಯೂ ಈಗ ತೀರ ಅನುಕೂಲವಾಗಿ ಬಿಟ್ಟಿದೆ. ಇದರ ಮೇಲೆ ಮುಂದೆ ದೇವರು ಏನು ಮಾಡುವನೋ ಮಾಡಲಿ!''

''ದೇವರು ತೀರ ವಿಹಿತವಾದುದನ್ನೇ ಮಾಡುವನರೀ. ಇಂದು ನನಗೊಂದು ಶುಭಶಕುನವಾಗಿರುವದರಿಂದ, ಇನ್ನು ಆ ವಿಷಯದಲ್ಲಿ ಅನುಮಾನವೇ ಇಲ್ಲ. ನಾನು ಆ ಶಕುನದ ಸಂಗತಿಯನ್ನು ಕಂಟಕ ಬಾಬುವಿಗೆ ಬೆಳಿಗ್ಗೇ ತಿಳಿಸಿದ್ದೆನು.''

''ಏನದು? ಅದನ್ನು ನಾನು ಕೇಳಿಕೊಳ್ಳಲಿಕ್ಕೆ ಅರ್ಹನಲ್ಲವೇ? ಶಕುನಗಳು ಯಾವಾಗಲೂ ಸತ್ಯವಿರುತ್ತವೆಂಬುದು ಸುಳ್ಳಲ್ಲ.''

"ಹೇಳುತ್ತೇನೆ ಕೇಳಿರಿ. ನಿನ್ನೆಯ ರಾತ್ರಿಯಲ್ಲಿ ನನ್ನ ಪ್ರೀತಿಯ ತಾಯಿಯು ನನಗೆ ಕನಸಿನಲ್ಲಿ ಕಂಡಳು. ಈ ಅಂಡಮಾನದ ಕರಿನೀರ ಸಮುದ್ರದ ಆಚೇ ಥಡಕ್ಕೆ ನಮ್ಮ ದೇಶದ ದಂಡೆಯಲ್ಲಿ ಅವಳು ನಿಂತುಕೊಂಡಿದ್ದಳು. ಅವಳು ತನ್ನ ಎರಡೂ ಕರಗಳನ್ನು ಚಾಚಿ, ನನ್ನನ್ನುದ್ದೇಶಿಸಿ ಅನ್ನುತ್ತಾಳೆ:— 'ಎಲೆ ಹುಡುಗೀ, ಬಾ; ಬೇಗನೆ ಬಾ ಈ ನನ್ನ ಬಾಹುಗಳಲ್ಲಿ ಸೇರಿಕೊಂಡು ನನ್ನನ್ನು ಬಿಗಿಯಾಗಿ ಅಪ್ಪಿಕೋ. ಹಾರು; ಕೊಂಚವೂ ಹೆದರಬೇಡ. ನಾನು ನಿನ್ನನ್ನು ಮೇಲಿಂದ ಮೇಲೆಯೇ ಹಿಡಿಯುತ್ತೇನೆ ನೋಡು!' ಅವ್ವನ ಈ ನುಡಿಗಳನ್ನು ಕೇಳುತ್ತಲೆ ನಾನು ಒಮ್ಮೆಲೆ ಹಾರಿಕೊಂಡೆನು; ಹಾಗು ನೀರಿನದೊಂದು ಚಿಕ್ಕಪ್ರವಾಹವನ್ನು ದಾಟುವಂತೆ ಇಡೀ ಸಮುದ್ರವನ್ನು ನಿರಾಯಾಸವಾಗಿ ದಾಟಿ, ಅವ್ವನ ಬಾಹುಗಳಲ್ಲಿ ಸೇರಿದೆನು. ಅಷ್ಟರಲ್ಲಿ ದೃಶ್ಯಾಂತರವಾಗಿ

ನಮ್ಮ ಮನೆಯಲ್ಲಿ ತೂಗುಮಂಚದ ಮೇಲೆ ಕುಳಿತು;ನಾನೂ ನಮ್ಮವ್ವನೂ ಜುರಿ ತಕ್ಕೊಳ್ಳಹತ್ತಿದೆವು; ಹಾಗು ನನಗೆ ಯಾವವು ಹೆಚ್ಚಾಗಿ ರುಚಿಸುವವೋ ಆ ಗೀತಗಳನ್ನು ನಮ್ಮವ್ವನು ನನಗಾಗಿ ಹಾಡಹತ್ತಿದಳು! ಡೋಲಕಾಠೀ, ಆ ಸ್ವಪ್ನ ಕಂಡಾಗಿನಿಂದ ನಾನು ನಿಜವಾಗಿಯೂ ತೀರ ಅಧೀರಳಾಗಿಬಿಟ್ಟಿದ್ದೇನೆ. ನಮ್ಮನ ಆ ಹಾಡುಗಳು ನನ್ನ ಕಿವಿಯೊಳಗೆ ಒಂದೇಸವನೆ ಗುಣಗುಟ್ಟ ಹತ್ತಿವೆ. ನಮ್ಮವ್ವನು ನನಗೆ ಎಂದು ಭೆಟ್ಟಿಯಾದಾಳೆಂದು ನನಗನಿಸಿಬಿಟ್ಟಿದೆ." ಎಂದಂದು ಕಂಟಕಿಯು ಬಿಕ್ಕಿ ಬಿಕ್ಕಿ ಅಳತೊಡಗಿದಳು

"ಸುಮ್ಮನಾಗು-ಸುಮ್ಮನಾಗು. ನಿನಗೆ ನಿಮ್ಮವ್ವನ ನೆನವು ವಿಹ್ವಲ ಗೊಳಿಸುತ್ತಿರುವಂತೆಯೇ ನನ್ನ ತಾಯಿಯ ನೆನಪು ನನಗಾಗಹತ್ತಿತೆಂದರೆ, ನನಗೆ ತೀರ ಕಸವಿಸಿಯೇ ಆಗಹತ್ತುತ್ತದೆ. ನನ್ನ ತಾಯಿ ಮತ್ತು ನನ್ನೊಬ್ಬ ಚಿಕ್ಕ ಹತ್ತು-ಹನ್ನೆರಡು ವರ್ಷದ ಪ್ರೀತಿಯ ತಂಗಿ! ನನ್ನ ಹೊರತು ಅವರಿಗೆ ಬೇರೆ ಯಾರ ಆಧಾರವೂ ಇದ್ದಿಲ್ಲ! ಅವರಾದರೂ ನನ್ನ ಬಗ್ಗೆ ಹೀಗೆಯೇ ದಾರಿ ನೋಡುತ್ತಿರಬಹುದು. ನನ್ನ ಅವರಲ್ಲಿ ಹೀಗೆಯೇ ವಿಂಗಡವಾಗಿ ಹೋಗಿದೆ. ನಾನು ಅವರನ್ನು ಎಂದು ಕಾಣುವೆನೋ ಎಂದು ನನಗೂ ಅನಿಸಿ ಬಿಟ್ಟಿದೆ." ಎಂದು ಹೇಳುಹೇಳುತ್ತಿರಲಿಕ್ಕೆ ಡೋಲಕಾಠಿಯು ಕಂಠವೂ ಒತ್ತಿ ಬಂದಿತು; ಹಾಗು, ಆತನ ಕಣ್ಣುಗಳಿಂದಲೂ ಅಶ್ರುಗಳು ಪ್ರವಹಿಸಹತ್ತಿದವು.

"ನಿಮ್ಮ ಆ ಚಿಕ್ಕತಂಗಿಯು ಈಗ ದೊಡ್ಡವಳಾಗಿರಬಹುದಲ್ಲವೆ?"

"ಎಂಥ ದೊಡ್ಡವಳು? ಇಪ್ಪತ್ತರ ಮನೆಗೆ ತಲುಪಿರಬಹುದು ಆಕೆಯ ಚೇಷ್ಟೆ ಮಾಡಬೇಕೆನಿಸಿದಾಗ ನಾನು ಅವಳ ಎರಡೂ ಕೈಗಳನ್ನು ಹಿಡಿದು, ಅವಳನ್ನು ನನ್ನ ಮೈಸುತ್ತಲೂ ಗರಗರನೆ ತಿರುಗಿಸುತ್ತಿದ್ದೆನು ಈಗಲೂ ಕೂಡ ನಾನು ಅವಳಿಗೆ ಯಾವಾಗ ಭೆಟ್ಟಿಯಾಗುವೆನೋ, ಆಗ ಮೊಟ್ಟಮೊದಲು ಹಾಗೆಯೇ ಅವಳ ಕೈ ಹಿಡಿದು, ಅವಳಿಗೆ ಜವಳಿ ಬರುವವರೆಗೂ ಮತ್ತು ನಮ್ಮವ್ವನು ಸಿಟ್ಟಾಗಿ ಕೂಗುವವರೆಗೂ ಒಂದೇಸವನೆ ಗರಗರವೆಂದು ತಿರುಗಿಸ ತಕ್ಕವನಿರುತ್ತೇನೆ. ಅವಳು ಈಗಇಪ್ಪತ್ತರ ಮನೆಗೆ ತಲುಪಿದ್ದರೂ ಅವಳು ನನ ಗಿಂತೇನೂ ದೊಡ್ಡವಳಾಗಿರಲಿಕ್ಕಿಲ್ಲ. ನಿನ್ನ ಬಂಧುವು ನಿನ್ನ ಅಚ್ಛೆಯನ್ನು ಹೀಗೆಂದಾದರೂ ಮಾಡಿರುತ್ತಾನೇನು?"

"ಸತ್ಯವನ್ನು ಹೇಳಲೊ?" ಮಾಲತಿಯು ಭಾವನೆಯ ಉಬ್ಬಳಿಕೆಯಲ್ಲಿ ಹೇಳಿಬಿಟ್ಟಳು:'ನನಗೆ ಒಬ್ಬೊಂಟಿಗನಾದ ಪ್ರೀತಿಯ ಹಿರಿಯಣ್ಣನಿದ್ದನು...."

"ಅಂದರೆ?" ಡೋಲಕಾಠಿಯು ತಟ್ಟನೆ ಕೇಳಿದನೇನಂದರೆ:—"ಹಾಗಾದರೆ ಇಲ್ಲಿ ಆ ಕಂಟಕ ಬಾಬುವಿರುವನಲ್ಲ; ನಿನಗೆ ಅವನೇನಾಗಬೇಕು?"

ಆ ಪ್ರಶ್ನೆಯೊಡನೆ ಮಾಲತಿಯು ಹೆಚ್ಚಾಗಿ ಗಡಬಡಿಸಿದಳು; ಹಾಗು ಆಕೆಯ ಮುಖಮುದ್ರೆಯು ಕಕ್ಕಾವಿಕ್ಕಿಯಾಯಿತು; ಆದರೆ ಅಷ್ಟರಲ್ಲಿ ಅತ್ತ ಕಡೆಯಿಂದ ಕಂಟಕನು ಬರುತ್ತಿರುವದು ಕಾಣಿಸಹತ್ತಿದ್ದರಿಂದ, ಆವಳಿಗೆ ಆ ವಿಷಯವನ್ನು ಸಹಜವಾಗಿಯೇ ಬದಲಿಸಲಾಯಿತು.

"ಅತ್ತ ಕಂಟಕನು ಬಂದನು ನೋಡು; ಹೆಸರು ಎತ್ತುತ್ತಲೇ ಬಂದ ನವ್ವಾ! ನಿನಗೆ ನೂರು ವರ್ಷ ಆಯುಷ್ಯವಿದೆ" ಎಂದಂದು ಕಂಟಕಿಯು ಓಡುತ್ತಲೆ ಹೋಗಿ, ಅವನನ್ನು ಅಪ್ಪಿಕೊಂಡಳು.

"ಭಲೆ! ಡೋಲಕಾರೀ, ಕಂಟಕಿಯನ್ನು ಬೇಗನೆ ಕರೆತರಬೇಕೆಂದು ನಿನಗೆ ಹೇಳಿ ಕಳಿಸಿರಲು, ನೀನು ಇಲ್ಲಿಯೇ ಇವಳೊಡನೆ ಹರಟೆ ಕೊಚ್ಚುತ್ತ ನಿಂತುಬಿಟ್ಟೆಯಲ್ಲ! ಸೂತಕ ಮುಗಿಯುವ ಸಂಸ್ಕಾರದ ಸಲುವಾಗಿ ಆ ಎಲ್ಲ ಜಾವರಾಗಳೂ ಅತ್ತ ಹೊರಟೇ ನಿಂತಿರುತ್ತಾರೆ. ನಾನಕೋಬಿ ರಾಜನು ಎಷ್ಟೋ ಹೊತ್ತಿನಿಂದ ನಮ್ಮೆಲ್ಲರ ಮಾರ್ಗಪ್ರತೀಕ್ಷೆ ಮಾಡಹತ್ತಿರುತ್ತಾನೆ. ನಡೆಯಿರಿ; ಬೇಗನೆ ಹೋಗೋಣ ನಡೆಯಿರಿ."

"ಛೆ! ಕಂಟಕ ಬಾಬೂ! ನಾನು ತಂದಿರುವ ಈ ತಾಜಾ ಜೇನುತುಪ್ಪವನ್ನಷ್ಟು ಎಲ್ಲರೂ ಸೇವಿಸದ ಹೊರತು ಇಲ್ಲಿಂದ ಕಾಲುಕಿತ್ತಲಾಗದು! ಕಂಟಕಿ, ಆ ಜೇನುತುಪ್ಪವನ್ನು ಇತ್ತ ತಕ್ಕೊಂಡು ಬಾ."

ಡೋಲಕಾರಿಯ ಒತ್ತಾಯಕ್ಕೆ ಒಳಗಾಗಿ ಮಾಲತಿಯು ಜೇನುತುಪ್ಪವನ್ನು ತಂದಳು. ವಿಶಾಲವಾದ ಎಳೆ ಎಲೆಗಳ ಮೇಲೆ ಆ ಶಂಖದ ಕುಪ್ಪಿಯೊಳಗಿನ ಮಧುವು ಮೂವರಿಗೂ ಬಡಿಸಲಾಯಿತು; ಮತ್ತು ಆ ಸಿಹಿಯಾದ ವನ್ಯಾಹಾರವನ್ನು ಮಟಮಟವೆಂದು ತಿಂದವರೇ, ಆ ಮೂವರೂ ಜಾವರಾಗಳ ಆ ಹೋರಿನ ಕಡೆಗೆ ಲಗುಬಗೆಯಿಂದ ನಡೆದರು.

ಜಾವರಾಜನರ ಪದ್ಧತಿಯು ಮೇರೆಗೆ ಆ ಮೂರು ತಿಂಗಳ ಸೂತಕವು ಅಂದಿಗೆ ಮುಗಿಯತಕ್ಕದ್ದಿತ್ತು. ಅವರ ಆ ಮೃತನ ಉತ್ತರಕ್ರಿಯೆಯ ಕೊನೆಯ ಸಂಸ್ಕಾರವನ್ನು ಮಾಡುವ ಸಲುವಾಗಿ ಆ ಎಲ್ಲ ಸ್ತ್ರೀ-ಪುರುಷರು ಮೈಗೂ ತಲೆಗೂ ಬೂದಿ ಮಣ್ಣನ್ನು ಬಡಕೊಂಡು ಒಂದೇ ತಾಳದಲ್ಲೂ ಸ್ವರದಲ್ಲೂ ಗಟ್ಟಿಗಟ್ಟಿಯಾಗಿ ಅಳುತ್ತ, ಯಾವ ಗಿಡದೊಳಗಿನ ಡೋಲಿಯಲ್ಲಿ ಮೂರು ತಿಂಗಳ ಹಿಂದೆ ಆ ಮೃತನ ಹೆಣವನ್ನು ಕಟ್ಟಿ ಕೂಡ್ರಿಸಿಟ್ಟಿದ್ದರೋ, ಆ ಗಿಡದ ಕಡೆಗೆ ಒಟ್ಟುಗೂಡಿ ಹೋದರು. ಆ ವಿಶಾಲವಾದ ವೃಕ್ಷವನ್ನು ಕಂಡೊಡನೆಯೇ ಅವರೆಲ್ಲರೂ ನಿಂತರು. ಆ ಮೇಲೆ ಡೋಲಕಾರಿಯು ಆ ಗಿಡದ ಮೇಲಿನ ಆ ಆ ಎತ್ತರದ ಡೋಲಿಯೊಳಗಿಂದ ಆ ಹೆಣದ ಮೊಟ್ಟೆಯನ್ನು ಬಿಚ್ಚಿಕೊಂಡು

ಕೆಳಗಿಳಿಸಿ ತಂದನು. ಮಳೆ, ಗಾಳಿ, ಬಿಸಿಲುಗಳೂ ರಣ ಹದ್ದೂ ಇವುಗಳ ಸಾಮೂಹಿಕ ಕರ್ತವ್ಯದಿಂದ ಆ ಮೊಟ್ಟೆ ಕಟ್ಟಿಟ್ಟ ಪ್ರೇತದ ಮಾಂಸವೆಲ್ಲ ಕಳೆದ ಮೂರು ತಿಂಗಳುಗಳಲ್ಲಿ ನಿಶ್ಶೇಷವಾಗಿತ್ತು. ಎಲುವಿನ ಪಂಜರವು ಮಾತ್ರ ಉಳಿದಿತ್ತು. ಅದನ್ನು ನಟ್ಟನಡುವಿರಿಸಿಕೊಂಡು ಆ ಜಾವರಾಗಳ ಒಬ್ಬ ವೃದ್ಧ ಮುಂದಾಳುವು ಆ ಹೆಣದ ಎಲುವಿನ ಶಿರೋಭಾಗ ವನ್ನಷ್ಟು ಕಡಕಡನೆ ಮುರಿದು ತೆಗೆದನು. ಆ ಮೇಲೆ ತಲೆಬುರುಡಿ ಸಹಿತ ವಾದ ಆ ಶಿರೋಭಾಗವನ್ನು ಅವನು ಕೈಯಿಂದ ಎತ್ತಿ ಹಿಡಿದನು. ಕೂಡಲೆ ಆ ಮೃತನ ವಿಧವೆಯು ಮುಂದೆ ಬಂದಳು. ಆಕೆ ಒಡ್ಡಿದ್ದ ಕೈಗಳಲ್ಲಿ ಆ ಆಕೆಯ ಗಂಡನ ಶಿರೋಭಾಗವನ್ನು ಚೆಲ್ಲುತ್ತ ಆ ಮುಂದಾಳುವು "ಈ ಭಾಗವು ನಿನ್ನದು!'' ಎಂದಂದನು

ಆ ವಿಧವೆಯು ಆ ಶಿರೋಭಾಗವನ್ನು ತೊಳೆದು, ಒರೆಸಿ, ತಿಕ್ಕಿ ಅದಕ್ಕೆ ತೂತು ಕೆಡಹಿದಳು. ಅದರಲ್ಲೊಂದು ಹಗ್ಗವನ್ನು ಪೋಣಿಸಿದಳು; ಹಾಗು ಆ ಶಿರದ ಎಲುವಿನ ಪಂಜರವನ್ನು ಅವಳು ಎಲ್ಲರ ಸಮಕ್ಷದಲ್ಲಿ ಕೊರಳೊಳಗೆ ಕಟ್ಟಿ ಬೆನ್ನ ಮೇಲೆ ಚಲ್ಲಿಕೊಂಡಳು. ನಮ್ಮ ಕಡೆಗೆ ವಿಧವೆಯ ಚಿಹ್ನವೆಂದರೆ, ಕೇಶ ವಪನವು, ಕಾಷಾಯ ವಸ್ತ್ರಧಾರಣವು ಹೇಗೋ, ಇಂಗ್ಲಿಷರೊಳಗಿನ ವೈಧವ್ಯ ದ ಚಿಹ್ನವೆಂದರೆ ವಿಧವೆಯು ಒಂದು ಕರೀಹೊದಿಕೆಯನ್ನು ಸೆರಗಿನಂತೆ ತಲೆಯ ಮೇಲಿಂದ ಬೆನ್ನ ಮೇಲೆ ಹೇಗೆ ಬಿಡುವಳೋ, ಅದರಂತೆಯೇ ಆ ಜಾವರಾ ಗಳೊಳಗಿನ ವಿಧವೆಯರು, ಅವರು ಎಲ್ಲಿಯವರೆಗೆ ವಿಧವೆಗಳಾಗಿರುವರೋ, ಅಲ್ಲಿಯ ವರೆಗೆ ತಮ್ಮ ಮೃತಪತಿಯ ಶಿರದ ಎಲುವನ್ನು ತಮ್ಮ ಕೊರಳೊಳಗೆ ಕಟ್ಟಿಕೊಂಡು ಬೆನ್ನ ಮೇಲೆ ಇರಿಸುತ್ತಾರೆ. ಅವರು ಪುನರ್ವಿವಾಹ ಮಾಡಿ ಕೊಂಡರೆ, ಆ ಎರಡನೇ ಗಂಡನೇ ಆ ತಲೆಬುರುಡೆಯ ಎಲುವನ್ನು ಆಕೆಯ ಕೊರಳೊಳಗಿಂದ ಬಿಚ್ಚಿ ತೆಗೆಯಲರ್ಹನು. ಆಕೆ ಸ್ವಂತ ಅಥವಾ ಮತ್ತಾರಾ ದರೂ ಅದನ್ನೆಂದೂ ತೆಗೆಯಲರ್ಹರಲ್ಲ.

ಆ ವಿಧವೆಗೆ ಆ ಶಿರೋಭಾಗವನ್ನು ಕೊಟ್ಟ ಬಳಿಕ ಮೃತನ ಸಂದುಗಳ ನ್ನೆಲ್ಲ ಬಡೆದು ಜಜ್ಜಿ ಕಟ್ಟಕಡಲ್ ಎಂದು ಮುರಿಯಲಾಯಿತು. ಪ್ರತಿಯೊಂದು ಎಲುವನ್ನು ಬೇರೆ ಬೇರೆ ವಿಂಗಡಿಸಿದರು. ಅವುಗಳೊಳಗಿನ ಕೆಲ ವಿಶಿಷ್ಟ ಎಲುವು ಗಳು ಮೃತನ ಮಕ್ಕಳಿಗೆ 'ಇವು ಮಕ್ಕಳ ಭಾಗ' ಎಂದು ಕೊಡಲಾಯಿತು; ಮತ್ತು ಕೆಲ ವಿಶಿಷ್ಟ ಆಪ್ತರಿಗೆ 'ಇವು ಆಪ್ತರ ಭಾಗ' ಎಂದು ದೊರೆತವು. ಉಳಿ ದವುಗಳನ್ನೆಲ್ಲ ಆ ಜಾವರಾ ಜನರೊಳಗಿನ ಮಾಟಗಾತಿಯು ತನ್ನೆದುರಿಗಿಟ್ಟು ಕೊಂಡು ಆರಿಸಿ ಸರಿಪಡಿಸುತ್ತ, ಅವುಗಳ ಮೂರು ಸಮಭಾಗಗಳನ್ನು ಮಾಡಿ

ದಳು. ಅವುಗಳಲ್ಲೊಂದು ಭಾಗವು ಅರಣ್ಯದ ಭೂತದ ಮೇಲಿನ ಮಾಟಕ್ಕೆಂದು, ಒಂದು ಬೆಂಕಿಯ ಮಾಟಕ್ಕೆಂದು, ಇನ್ನೊಂದು ಸಮುದ್ರದ ಮಾಟಕ್ಕೆಂದು ಅವಳು ತಿಳಿಸಿದಳು. ಯಾರಿಗೆ ಯಾವ ಭೂತದ ಮೇಲೆ ಅಧಿಕಾರ ನಡೆಯಿಸುವ ಇಚ್ಛೆಯಿದ್ದಿತೋ, ಅವರು ಆಯಾ ಭಾಗದ ಎಲುವಿನೊಳಗಿನ ಒಂದೊಂದು ತುಂಡು ತಕ್ಕೊಂಡರು. ಮೃತನ ಆ ಎಲುವುಗಳ ಬೇರೆ ಬೇರೆ ಆಭರಣಗಳನ್ನು ಮಾಲೆ-ತಾಯಿತಗಳನ್ನು ಮಾಡಿ, ಆ ಜಾವರಾ ಸ್ತ್ರಿ-ಪುರುಷರು ತಮ್ಮ ಕೊರಳೊಳಗೆ ಅಥವಾ ಬೇರೆ ಅಂಗಗಳಲ್ಲಿ ಕಟ್ಟಿಕೊಳ್ಳುತ್ತಾರೆ; ಮತ್ತು ಅದರಿಂದ ರೋಗಗಳ ಬಾಧೆಯೂ ಆಯಾ ಭೂತಗಳಿಂದ ಸಂರಕ್ಷಣವೂ ಆಗುತ್ತದೆಂದು ಅವರ ಶ್ರದ್ಧೆಯಿರುತ್ತದೆ.

ಅದರಲ್ಲಿಯೂ ಮೃತ ಜಾವರಾನು ಅವರೊಳಗಿನ ಯಾವನೊಬ್ಬ ಪ್ರತಿಷ್ಠಿತ ಇಲ್ಲವೆ ದೊಡ್ಡ ಮನುಷ್ಯನಾಗಿದ್ದರೆ, ಆತನ ಯಾವದೊಂದು ಎಲವನ್ನು ಉಪಯೋಗಿಸಿಕೊಳ್ಳುವ ಅಧಿಕಾರವಿರುವದು ಒಳ್ಳೇ ಭೂಷಣವೆಂದು ತಿಳಿಯಲಾಗುತ್ತದೆ. ಅಂಥ ಎಲುವುಗಳನ್ನು ಸ್ನೇಹಿತರಿಗೂ ಅತಿಥಿ ಅಭ್ಯಾಗತರಿಗೂ ಕಾಣಿಕೆಯೆಂದು ಕೊಡಲಾಗುತ್ತದೆ.

ಡೋಲಕಾಠಿಯು ನಾನಕೋಬಿ ರಾಜನ ಪರಮ ಸ್ನೇಹಿತನೂ, ಸಹಾಯ್ಯಕನೂ ಆಗಿದ್ದನು. ಆತನನ್ನು ಸನ್ಮಾನಿಸುವದಕ್ಕೆಂದು ಆ ಮೃತನ ಎಲುವಿನೊಳಗಿನ ಯಾವ ಎಲುವುಗಳು ಸಮುದ್ರದ ಭೂತದ ಮೇಲಿನ ಮಾಟವೆಂದು ಆ ಮಾಟಗಾರ್ತಿಯು ಆರಿಸಿಟ್ಟಿದ್ದಳೋ, ಅವುಗಳಲ್ಲೊಂದು ಪುಟ್ಟ ಸುಂದರ ಎಲುವನ್ನೆತ್ತಿ ನಾನಕೋಬಿ ರಾಜನು ಡೋಲಕಾಠಿಗೆ ಮನ್ನಣೆಯ ಕಾಣಿಕೆಯೆಂದು ಕೊಟ್ಟನು; ಮತ್ತು ಕೈ ಕಣ್ಣುಗಳ ಸನ್ನೆ ಹಾಗು ಒಂದು ಶಬ್ದ ಇವುಗಳಿಂದ ಆಶ್ವಾಸಿಸಿದನೇನಂದರೆ:-"ಇನ್ನು ನಿಮಗೆ ಸಮುದ್ರದ ಅಂಜಿಕೆಯಿಲ್ಲ! ಇದು ನಿಮ್ಮನ್ನು ನಿಮ್ಮ ದೇಶಕ್ಕೆ ಸುರಕ್ಷಿತವಾಗಿ ತಾರಿಸಿಕೊಂಡೊಯ್ಯುವದು!"

ಡೋಲಕಾಠಿಯ ಮನಸ್ಸಿನ ಮೇಲೆ ಆ ಭಯಾನಕ ಪ್ರೇತದ ಮಸ್ತಕ, ದಂತ, ಎಲುವು, ಸಂದುಗಳನ್ನೆಲ್ಲ ಕಟಕಟನೆ ಮುರಿದ ಹಾಗು ತುಂಡು ಮಾಡಿದ ಆ ಇಡೀ ಸಂಸ್ಕಾರದ ಯಾವುದೊಂದು ಗಂಭೀರ ಪರಿಣಾಮವು ಆಗುತ್ತ ನಡೆದಿತ್ತು. ಅದರಲ್ಲೂ ಆ ಮಾಟಗಾರ್ತಿಯು ಈತನಿಗೆ ಆ ಜಾವರಾ ಭಾಷೆಯೊಳಗಿನ ತುಂಡು ಶಬ್ದಗಳಿಂದ ಸೂಚಿಸಿದಳೇನಂದರೆ:—

"ಇದೊ! ಜುರುಬಿನ! ಎಲುವು, ಮಂತ್ರ!" ಅಂದರೆ "ಇತ್ತ ಬಾ, 'ಜುರುಬಿನ' ಎಂಬ ಸಮುದ್ರದ ಭೂತದ ಮೇಲಿನ ಮಂತ್ರವನ್ನು ನಿನಗೆ ಹೇಳುತ್ತೇನೆ. ಇದನ್ನು ಅಂದು ಆ ಎಲುವನ್ನು ಕೊರಳೊಳಗೆ ಕಟ್ಟಿಕೊಳ್ಳಬೇಕು.

ಆ ಜಾವರಾಗಳ ಸ್ತ್ರೀಯರು ಗಿಡ್ಡರಾದ್ದರಿಂದ ಅವರು ಡೋಲಕಾಠಿಯ ಟೊಂಕದಷ್ಟೇ ಎತ್ತರವಿದ್ದರು. ಅದರಿಂದ ಆ ಮಾಟಗಾರ್ತಿಯ ಬಾಯ ಆ ಗುಪ್ತ ಮಂತ್ರವನ್ನು ಕೇಳಿಕೊಳ್ಳುವದಕ್ಕೆಂದು ತನ್ನ ಕಿವಿಗಳನ್ನು ಆಕೆಯ ಬಾಯಿ ಹತ್ತರ ಒಯ್ಯುವಾಗ ಡೋಲಕಾಠಿಯು ನೆಲಕ್ಕೆ ಕೂಡ್ರಬೇಕಾಯಿತು. ಆ ಮೇಲೆ ಅವಳೊಂದು ವಿಚಿತ್ರ ಮುಖಮುದ್ರೆ ಹಾಗು ಮೈಯಲ್ಲಿ ಭೂತ ಸಂಚರಿಸಿದಂತೆ ಕೈಗಳನ್ನು ತಿರುತಿರುವಿ, ಆತನ ಕಿವಿಯಲ್ಲಿ ಊದಿದಳು; ಮತ್ತು ನಮ್ಮ ಕಡೆಯ ಮಾಂತ್ರಿಕರು ಹೇಗೆ 'ಹ್ರಾಂ, ಹ್ರೀಂ, ಹ್ರೂಂ,....ಹ್ರಃ' ಎಂಬ ಅರ್ಥಶೂನ್ಯ ಅಕ್ಷರಗಳನ್ನುಚ್ಚರಿಸುವರೋ, ಕೇವಲ ಅದರಂತೆಯೇ ಒಂದು ನಿರರ್ಥಕ ಮಂತ್ರವನ್ನು ಆತನ ಕಿವಿಯಲ್ಲಿ ಹಲವು ಸಾರೆ ಉಚ್ಚರಿಸಿದಳು. ಜಾವರಾಗಳ ಸಂಗತಿಯಲ್ಲಿ ಇರುತ್ತಲೆ ತಾನೂ ಒಬ್ಬ ಜಾವರಾನೇ ಆಗಹತ್ತಿದ್ದ ಆ ಡೋಲಕಾಠಿಯ ಭಾವನಾವಶ ಮನಸ್ಸಿನಲ್ಲಿ ಆ ಮಂತ್ರ ಹಾಗು ಎಲುಬಿನ ತಂತ್ರಗಳ ಬಗ್ಗೆ ಅಚಲವಾದ ವಿಶ್ವಾಸವಿದ್ದಿತು.

ಸೂತಕವು ತೀರಿದೊಡನೆಯೇ ಜಾವರಾಗಳು ತಮ್ಮ ತಮ್ಮ ಇಚ್ಛಿತ ಮಂಗಲ ಶೃಂಗಾರ ಮಾಡಿಕೊಳ್ಳಲಿಕ್ಕೆ ಪ್ರಾರಂಭಿಸಿದರು. ಅವರು ಇದುವರೆಗೆ ಬಡಕೊಂಡಿದ್ದ ಬೂದಿ ಮಣ್ಣನ್ನು ತೊಳೆದು ಬಿಟ್ಟರು ಗಂಡಸರೆಲ್ಲ ಕೆಂಪು. ಹಳದಿ, ಕೇಶರೀ, ಬಿಳೀ ಮಣ್ಣಿನ ಸುಶೋಭಿತ ಪಟ್ಟಿಗಳನ್ನು ತಮ್ಮ ನಗ್ನಶರೀರಕ್ಕೆಲ್ಲ ಅಡ್ಡತಿಡ್ಡ ತಮ್ಮ ಮನಸಿಗೆ ಬಂದಂತೆ ಎಳೆದುಕೊಂಡರು. ಸುವಾಸಿನಿಯರು ತಮ್ಮ ತಲೆಗಳ ಮೇಲೆ ಬೆಳೆದ ಕರಿಕೆ-ಕೋಲಿಗಳಂತಹ ಕೂದಲುಗಳನ್ನೆಲ್ಲ ತೆಗೆದು, ತಲೆಯು ತಾಮ್ರದ ತಂಬಿಗೆಯಂತೆ ಒಳ್ಳೇ ನುಣುಪಾಗಿ ತೋರುವ ಸಲುವಾಗಿ ತಮ್ಮ ತಮ್ಮ ಪ್ರಿಯಕರರ ಕೈಯಿಂದಲೂ, ಗಂಡಸರು ತಮ್ಮ ಪ್ರಿಯಕರಣಿಯರ ಕೈಯಿಂದಲೂ ಕಾಜಿನ ಹರಿತಾದ ತುಂಡುಗಳಿಂದ ತಲೆಗಳನ್ನು ಬೋಳಿಸಿಕೊಂಡರು. ಹಬ್ಬ-ಹುಣ್ಣಿವೆಗಳಲ್ಲಿ ಪರಸ್ಪರರ ಜಡೆ ಹೆಣೆಯುವುದರಲ್ಲಿ ನಮ್ಮವರು ಹೇಗೆ ಗುಂಗಾಗುತ್ತಾರೋ, ಹಾಗೆ ಆ ಜಾವರಾಗಳ ತೀರ ವಿವಸ್ತ್ರರಾದ ಸುವಾಸಿನಿಯರೂ ಕುಮಾರಿಕೆಯರೂ ಒಳ್ಳೇ ಪ್ರೇಮದಿಂದ ಪರಸ್ಪರರ ತಲೆಕೂದಲುಗಳನ್ನು ಬೋಳಿಸಿ ನುಣುಪು ಮಾಡಿ ಶೃಂಗರಿಸುತ್ತಿರುವಾಗ ಗುಂಪು-ಗುಂಪಾಗಿ ನಗೆಯುತ್ತ-ಕೆಲೆಯುತ್ತ ಕುಳಿತುಕೊಂಡರು. ಆ ಮೇಲೆ ಹವಳದ ಅಥವಾ ಬಣ್ಣದ ಸಿಂಪುಗಳ ಇಲ್ಲವೆ ಮೃತನ ಹೆಣದ ಎಲುಬಿನ ಮಾಲೆಗಳನ್ನು ಅವರು ತಮ್ಮ ಕೊರಳೊಳಗೆ ಧರಿಸಿದರು. ವಿಧವೆಯರು ತಮ್ಮ ಮೃತಪತಿಗಳ ತಲೆಬುರುಡೆ ಹಾಗು ಎಲವುಗಳ ಮಾಲೆಗಳನ್ನು ಧರಿಸಿಕೊಂಡರು! ಈ ಬಗೆಯಾಗಿ ಎಲ್ಲರ ಶೃಂಗಾರ

ಭೂಷಣಗಳು ಆದನಂತರ, ಸೂತಕದಿಂದ ಕಳೆದ ಮೂರು ತಿಂಗಳಲ್ಲಿ ಯಾವ ನಾಚು-ನೃತ್ಯದ ಉತ್ಸುಕತೆಯು ಅವರಲ್ಲಿ ತುಂಬಿದ್ದಿತೋ, ಅದನ್ನು ಪೂರ್ತಿ ಗೊಳಿಸಿಕೊಳ್ಳುವದಕ್ಕೆಂದು ಸೂತಕ ಮುಗಿದದ್ದರ ಯಾವ ಬಹು ದೊಡ್ಡ ಆ ಸಂಘದ ನಾಚು ಅಂದು ಸಿಂಧು ತಟಾಕದಲ್ಲಿ ಆಗುವದಿದ್ದಿತೋ, ಅತ್ತ ಕಡೆಗೆ ಆ ಎಲ್ಲ ಊಲ್ಲಿಂಗ ಆಬಾಲವೃದ್ಧ ಸ್ತ್ರೀ-ಪುರುಷರೂ ಸಮ್ಮಿಶ್ರರಾಗಿ ಹೋಗ ಹತ್ತಿದರು; ಮತ್ತು ಅತ್ತ 'ನಾವು ಬೇಗನೆ ನಾಚಿಗೆ ಬರುತ್ತೇವೆ'ಂದು ನಾಸ ಕೋಬಿ ರಾಜನಿಗೆ ಹೇಳಿ, ಕಂಟಕ-ಕಂಟಕಿಯರು ಡೋಲಕಾರಿಯೊಡನೆ ತಮ್ಮ ಗುಹೆಯ ಕಡೆಗೆ ಹೋಗಲಿಕ್ಕೆ ಹೊರಟರು.

ಗುಹೆಯ ಬಳಿಗೆ ಹೋಗಿ ಅಲ್ಲಿಯ ಹಾಸುಗಲ್ಲಿನ ಮೇಲೆ ಆ ಮೂವರೂ ಕುಳಿತರು. ಆ ಮೇಲೆ ಕಂಟಕಿಯು ಎಷ್ಟೋ ಹಣ್ಣುಗಳನ್ನೂ, ಎಳೆ ನೀರ ಕಾಯಿಗಳನ್ನೂ, ಮಧುವನ್ನೂ, ಕೆಂಡಸುಟ್ಟ ಮಾಂಸವನ್ನೂ ತಂದಿಟ್ಟಳು. ಹಸಿದ ಹೊಟ್ಟೆಯ ಆ ತ್ರಿವರ್ಗರೂ ಅದನ್ನು ತಿಂದು, ಎಳೆ ನೀರು ಕುಡಿದರು.

"ತೀರಿತು. ಇನ್ನು ಈ ವನ್ಯ ತಿಂಡಿಯು ಇನ್ನೆರಡೇ ದಿನ ಸಿಗುವದು. ನಾಡದ್ದು ವನಭೋಜನ ಮುಗಿದ ಮೇಲೆ ಸಮುದ್ರಭೋಜನಕ್ಕೆ ಆರಂಭವಾಗುವದು!" ಎಂದಂದು ಡೋಲಕಾರಿಯು ಕಂಟಕನ ಬೆನ್ನ ಮೇಲೆ ಚಪ್ಪರಿಸಿ, ಆತನಿಗೆ ಆಶ್ವಾಸನವನ್ನಿತ್ತನು.

"ಮತ್ತು ದೇವರ ಕೃಪೆಯಷ್ಟು ಇದ್ದರೆ, ಮುಂದಿನ ತಿಂಗಳ ಈ ದಿನಕ್ಕೆ ನಾವು ನಮ್ಮಗಳ ದೇಶದಲ್ಲಿ ನಮ್ಮ ನಮ್ಮಗಳ ಮನೆಯಲ್ಲಿ, ನಮ್ಮ ಪ್ರಿಯ ಜನರೊಡನೆ ನಗೆದಾಡುತ್ತ-ಕೆಲೆದಾಡುತ್ತ ಪ್ರಿಯ ಭೋಜನದಲ್ಲಿ ಮಗ್ನರಾಗಿರುವೆವು!'' ಎಂದು ಕಂಟಕನು ಕಂಟಕಿಯ ಬೆನ್ನಮೇಲೆ ಆಶ್ವಾಸನಪೂರ್ವಕವಾಗಿ ಚಪ್ಪರಿಸಿ ಹೇಳಿದನು.

" ಇನ್ನು 'ದೇವರ ಕೃಪೆಯಿದ್ದರೆ' ಎಂದೇಕನ್ನುತ್ತೀ?'' ಡೋಲಕಾರಿಯು ಅತ್ಯಂತ ಉಲ್ಲಸಿತ ವೃತ್ತಿಯಿಂದ ಕಂಟಕನಿಗೆ ಅಂದು:—"ದೇವರ ಕೃಪೆಯಂತೂ ಇಂದು ಆಗಿಯೇ ಬಿಟ್ಟಿದೆ! ಕಂಟಕ ಬಾಬು, ನಾನು ತರಿಯನ್ನು ಚೆನ್ನಾಗಿ ಸಿದ್ಧಗೊಳಿಸಿರುತ್ತೇನೆ. ಪೋಲೀಸರ ಬಟ್ಟೆಗಳು, ಬಂದೂಕುಗಳು, ಮದ್ದು-ಗುಂಡು ಇವನ್ನೆಲ್ಲ ಸಿದ್ಧಪಡಿಸಿರುವೆನು. ಜಾವರಾಗಳ ನಿಪುಣ ನಾವಿಕರು ತಮ್ಮ ಡುಂಗಿಯನ್ನು ನಮ್ಮ ತರಿಯೊಡನೆ ಬಹು ದೂರದ ವರೆಗೆ ಕಳಿಸಲಿಕ್ಕೆ ಬರುತ್ತಿರುವರು. ನಮ್ಮ ತರಿಯಲ್ಲಿ ಮಾಂಸ, ಮಧ್ಯ, ಮಧು, ಹಣ್ಣು ಮುಂತಾದ ಅನ್ನ-ನೀರುಗಳ ಸಾಮಗ್ರಿಯನ್ನು ಸಾಕಷ್ಟಿರಿಸುವೆನು. ಮೀನ ಹಿಡಿಯುವ ಜಾಳಿಗೆ ಕೂಡ ತಕ್ಕೊಂಡಿರುವೆನು. ಸ್ವದೇಶದಲ್ಲಿಳಿದ ಕೂಡಲೆ

ರೋಖ ಹಣಬೇಕಾದ್ದರಿಂದ ಆ ದೊಡ್ಡ ನಿಧಿಯನ್ನು ನನ್ನ-ನಿನ್ನ ಸಾಮೂಹಿಕ ಶೇವುಗಳಿಂದ ಕೂಡಿಸಿರುವೆನು ಪ್ರಿಯಕಂಟಕ, ಮನುಷ್ಯಯತ್ನದಿಂದ ಏನೇನು ಕೂಡಿಸುವದು ಅವಶ್ಯವೋ ಅದನ್ನೆಲ್ಲ ಕೂಡಿಸಲಾಗಿದೆ; ಆದರೆ ಈ ಖೋಡಿ ಸಮುದ್ರಕ್ಕೆ ಕರಿನೀರೆಂದು ಸುಮ್ಮನೆ ಅನ್ನುವದಿಲ್ಲ. ಆ ಯಮನ ದವಡೆ ಯಲ್ಲಿ ನಾವು ನಮ್ಮ ಸಾದಾ ಗಾಳಿಯ ಗತಿಯಿಂದ ಸಾಗುವ ತರಿಯನ್ನು ದೂಡಿ ಸಾಗಬೇಕಾದುದರಿಂದ, ಅದರಲ್ಲಿ ಯಶವು ಕೊನೆಗೆ ದೈವಾಧೀನವೇ ಇದ್ದೀತು; ಅದರಿಂದಲೇ-ದೇವರ ಕೃಪೆಯಿರಬೇಕೆಂಬ ಈ ಅರಿವಿನಿಂದಲೇ-ನನ್ನ ಮನಸ್ಸಿ ನಲ್ಲಿ ಆಗಾಗ್ಗೆ ಹುರುಹುರು ಅನ್ನುತ್ತಿತ್ತು; ಆದರೆ ಇಂದು ಸಮುದ್ರದ ಆ 'ಜುರುಬಿನ' ಭೂತದ ಮೇಲಿನ ಪ್ರತಿ ಬಂಧಕವಾಗಿದ್ದ ಒಂದು ಮಂತ್ರವನ್ನು, ಆ ಎಲುವಿನ ತಂತ್ರವನ್ನು ಆ ಜಾವರಾಗಳ ಮಾಟಗಾರ್ತಿಯು ನನಗೆ ಯಾವಾಗ ದಯಪಾಲಿಸಿದಳೋ, ಈಗ ನನಗೆ ನಿಜವಾಗಿಯೂ ಹಾಯ! ಎನಿ ಸಿತು. ದೈವೀಕೃಪೆಯ ಆ ಲಿಖಿತ ವಚನ ಚೀಟಿಯನ್ನು ನೋಡು!' ಎಂದಂದು ಮಾಟಗಾರ್ತಿಯು ಕೊಟ್ಟಿದ್ದ ಆ ಮೃತಜಾವರಾನ ಅಂಗುಷ್ಟ ಮಾತ್ರವಾದ ಮಂತ್ರಿತ ಎಲುವನ್ನು ಡೋಲಕಾಠಿಯು ಕಂಟಕನ ಮುಂದೆ ಹಿಡಿದನು.

"ಥೂ! ಡೋಲಕಾಠೀ, ನಿನ್ನ ಮನಸ್ಸಾದರೂ ಎಷ್ಟು ಕಾಡಾಗಿ ಹೋ ಗಿದೆಯಲ್ಲ! ನೀನು ಮಡ್ಡನೋ ಮಡ್ಡನು!" ಎಂದಂದು ಕಂಟಕನು ಆತನ ಉಪಹಾಸ ಮಾಡಿದನು.

"ನಾನು ಮಡ್ಡನೇ? ಕಾಡುಮನುಷ್ಯನೇ? ಕಂಟಕಾ, ಈ ಕಾಡು ಜಾವ ರಾಗಳಲ್ಲೇ ಅಲ್ಲ, ಆದರೆ ನಮ್ಮ ಶೀರ ಸುಧಾರಿಸಿದ ಆರ್ಯರಲ್ಲೂ ಕೂಡ ಭೂ ತಗಳ ಅಸ್ಥಿಗಳಲ್ಲಿ ದೈವೀಗುಣಗಳಿರುತ್ತವೆಂಬ ತಿಳಿವು ಇರುವುದಿಲ್ಲವೆ? ಕೆಲ ಬ್ರಾಹ್ಮಣಾದಿಕ ಜಾತಿಗಳಲ್ಲಿ ಭೂತದ ತಲೆ ಬುರುಡೆಯ ಕೆಲ ಚೂರ್ಣವನ್ನು ಪಾಯಸದಲ್ಲಿ ಹಾಕಿ ಶ್ರಾದ್ಧದ ದಿವಸ ಪಿತರಸ್ಥಾನೀಯ ಪುರುಷನೂ ಯಜ ಮಾನನೂ ಭುಂಜಿಸಬೇಕೆಂದು ಶಾಸ್ತ್ರಾಧಾರವಿರುವದಿಲ್ಲೇನು? ಬುದ್ಧಾ ದಿಕರ ಹಲ್ಲು-ಎಲುವು ಪ್ರಭೃತಿ ಅವಶೇಷಗಳ ಸ್ತೋಮವು ಕ್ಷತ್ರಿಯ-ವೈಶ್ಯ- ಶೂದ್ರಾದಿಕ ಪಂಥಿಗಳಲ್ಲಿ ಅದೆಷ್ಟಿತ್ತೆಂಬದನ್ನು ನೋಡು. ಖ್ರಿಶ್ಚನ್-ಮುಸ ಲ್ಮಾನರ ವಿಷಯದಲ್ಲಂತೂ ಹೇಳಬೇಕಾದುದೇ ಇಲ್ಲ. ಮೃತರ ಅಸ್ಥಿಗಳ ಮೇಲೆಯೇ ಅವರ ಕಬರಗಳು ಕಟ್ಟಲ್ಪಟ್ಟಿರುತ್ತಿದ್ದು, ಕಬರಿನೊಳಗಿನ ಸತ್ತಂ ಥವರ ಅಸ್ಥಿಗಳನ್ನು ಸಂರಕ್ಷಿಸುವ ಸಲುವಾಗಿ, ಜೀವಿತರ ಅಸ್ಥಿಗಳನ್ನು ಕಬರಿ ನಲ್ಲಿ ಹುಗಿಯುವ ಸರತಿ ಬರುವ ವರೆಗೂ ದುಂಬಿ-ದಾಳಿಗಳನ್ನು ಮಾಡ ಲಿಕ್ಕೆ ಅವರು ಹಿಂದೆಗೆಯುವದಿಲ್ಲ! ಸತ್ತವರ ಅಸ್ಥಿಗಳ ಹೆಚ್ಚಳವೂ, ಅಷರಲ್ಲಿ

ಧಾರ್ಮಿಕ ಅಥವಾ ಮಾಂತ್ರಿಕ ಇಲ್ಲವೆ ದೈವಿಕ ಗುಣಗಳು ವಾಸಿಸುತ್ತವೆಂಬ ಭಾವನೆಯೂ ಜಾವರಾಗಳಲ್ಲಷ್ಟೇ ಇರದೆ, ಲೋಕದಲ್ಲೆಲ್ಲ ಇರುತ್ತದೆ! ಅದ್ದರಿಂದ ಜಾವರಾಗಳನ್ನಷ್ಟೇ ಕಾಡು ಜನರೆಂದೇಕೆ ಅನ್ನುತ್ತೀ? ಅನ್ನುವದೇ ಆದರೆ ಎಲ್ಲರಿಗೂ ಕಾಡು ಜನರೇ ಎಂದೆನ್ನು!! ಏನೆಂದರೂ ನನ್ನದಂತೂ ಈ ಮಂತ್ರಿತ ಅಸ್ಥಿಯ ಮೇಲೆ ಸಂಪೂರ್ಣ ವಿಶ್ವಾಸವಿರುವದು ನಿಜವು. ಈ ತಾಯಿತವನ್ನು ಆ ಮಾಟಗಾರ್ತಿಯು ನನಗೆ ಉಪದೇಶಿಸಿದ ಮಂತ್ರದೊಡನೆ ಯಾರ ಕೊರಳೊಳಗೆ ಕಟ್ಟಲಾಗುವದೋ, ಅವರಿಗೆ ಆ 'ಜುರುಬಿನ'ದ ಆ ಸಮುದ್ರದ ಭೂತದ ಅಂಜಿಕೆಯಿರುವದಿಲ್ಲ. ಆತನು ಸಮುದ್ರದಲ್ಲೆಂದೂ ಮುಳುಗಲಾರನು. ಆ ಸಮುದ್ರ ಪ್ರವಾಸಿಯು ಸುರಕ್ಷಿತ ರೀತಿಯಿಂದ ಪರತೀರಕ್ಕೆ ಹೋಗಿಯೇ ಹೋಗತಕ್ಕವನೆಂಬ ಆ ಮಾಟಗಾರ್ತಿಯು ಆಶ್ವಾಸನವನ್ನು ಸುಳ್ಳೆಂದು ಅದರ ಪ್ರಯೋಗ ಮಾಡಿ ನೋಡದ ಹೊರತು ನೀನು ಹೇಗೆ ಅನ್ನುವವನು? ಅನುಭವ ಪಡೆಯುವ ಮೊದಲೇ ಖೊಟ್ಟಿಯೆನ್ನುವದು, ಅದೂ ಒಂದು ಮಡ್ಡತನವೇ ಅಲ್ಲವೇನು?"

"ಹಾಗೆಯೇ ಆಗಲೆಪ್ಪಾ! ಆ ಸಮಂತ್ರಕ ತಾಯಿತವನ್ನು ನೀನೇ ನಿನ್ನ ಕೊರಳಲ್ಲಿ ಕಟ್ಟಿಕೋ ಹಾಗು ತರಿಯಿಂದ ಇಲ್ಲವೆ ಆ ತಾಯಿತದಿಂದ ಎತರಿಂದಾದರೂ ಸಮುದ್ರವನ್ನು ತಾರಿಸಿ, ನಾವುಗಳು ಸ್ವದೇಶಕ್ಕೆ ಸುಖರೂಪವಾಗಿ ತಲುಪಿಸಲ್ಪಟ್ಟೆವೆಂದರೆ ತೀರಿತು."

"ಛೇ! ಛೇ! ನನ್ನ ಜೀವನದ ಸಲುವಾಗೆಂದು ನನ್ನ ಕೊರಳಲ್ಲಲ್ಲ. ನನ್ನ ಜೀವನವೆಂದರೆ ಈ ನನ್ನ ಪ್ರೀತಿಯ ಕಂಟಕಿ, ಈ ನನ್ನ ಭಗಿನಿ ಹಾಗು ನನ್ನ ಪ್ರೇಯತಮೆಯು! ಇವಳು ಸುಖಿಯಾಗಿಯೂ ಸುರಕ್ಷಿತವಾಗಿಯೂ ಇದ್ದಳೆಂದರೆ, ನಾವು ಸುಖಿಗಳೂ ಸುರಕ್ಷಿತರೂ ಇದ್ದಂತಾಯಿತು. ಅದಕ್ಕೆಂದೇ ನಾನು ಈ ತಾಯಿತವನ್ನು ಕಂಟಕಿಯ ಕೊರಳಲ್ಲಿ ಕಟ್ಟುವವನು; ಮತ್ತು ನನಗೆ ದೀಕ್ಷೆಕೊಡುವಾಗ ಆ ಮಾಟಗಾರ್ತಿಯು ನನಗೆ ಉಪದೇಶಿಸಿರುವ ಆ ಗುಪ್ತ ಮಂತ್ರವನ್ನು ನಾನು ಇವಳ ಕಿವಿಯಲ್ಲಿ ಯಥಾವಿಧಿಯಿಂದ ಉಪದೇಶಿಸತಕ್ಕವನು. ಈ ತಾಯಿತವು ನಿನ್ನ ಕೊರಳೊಳಗೆ ಎಲ್ಲಿಯವರೆಗೆ ಇದ್ದೀತೋ, ಅಲ್ಲಿಯ ವರೆಗೆ ಪ್ರಿಯೇ, ನಿನ್ನ ಜೀವಕ್ಕೆ ತುಂಬಿದ ಸಾಗರದಲ್ಲೂ ಭಯವಿರಲಾರದು ಒಂದು ವೇಳೆ ನಮ್ಮ ತರಿಯು ಒಡೆದರೂ, ಸ್ವತಃ ಸಮುದ್ರದೇವನು ಕೇವಲ ತನ್ನ ತೆರೆಗಳ ಮೇಲೆಯೇ ಹೊತ್ತೊಯ್ದು ನಿನ್ನನ್ನು ಪರತೀರಕ್ಕೆ ತಲುಪಿಸುವನು! ಪ್ರೀಮುಕರಣೀ, ಬಾ ಮುಂದಕ್ಕೆ, ಆ ಸೆರಗನ್ನು ತುಸ ಕೆಳಗೆ ಸರಿಸು."

ಎಂದಂದು ಡೋಲಕಾರಿಯು ತೀರ ನಿಃಸಂಕೋಚ ಪ್ರೇಮಲತನದಿಂದ ಕಂಟಕಿಯ ಹೆಗಲಮೇಲೆ ಕೈಯಿಟ್ಟು, ಆಕೆಯ ಆ ಅಪೂರ್ಣ ವಸ್ತ್ರದ, ಆದರೆ ಬಿಗಿದು ಕಟ್ಟಿದ್ದ ಸೆರಗನ್ನು ಸಡಿಲಿಸಿ, ಅದನ್ನು ಹೆಗಲ ಕೆಳಗೆ ಸರಿಸಹತ್ತಿದನು.

ಹಾಗೆ ಮಾಡುವಾಗ ವೈಗಡರುವ ಉಪದ್ರವೀ ಲಂಪಟತೆಯು ಆತನಲ್ಲಿ ಕೊಂಚವೂ ಇರಲಿಲ್ಲ; ಮಡ್ಡ ಹಾಗು ತುಸ ಟೊಣಪ ಅಮರ್ಯಾದತನವಷ್ಟೇ ಆತನದಿದ್ದಿತು. ಯಾವಾತನ ಮಾತಿನಲ್ಲಿ ಕಪಟವೆಂಬುದು ಎಳ್ಳಷ್ಟೂ ಅಲ್ಲವೋ ಅಂಥವನ ಪ್ರೇಮದಿಂದ ಆ ಕಂಟಕಿಗೆ ಆ ಡೋಲಕಾರಿಯ ಬಗ್ಗೆ ಸಿಟ್ಟಂತೂ ಬರಲೇ ಇಲ್ಲ; ತದ್ವಿರುದ್ಧವಾಗಿ ಆತನ ವಿಷಯವಾಗಿ ಅವಳಲ್ಲಿ ಕಳವಳವೂ ಕರುಣೆಯೂ ಉಂಟಾಗಹತ್ತಿತ್ತು; ಆದರೆ ಈತನ ಆ ಆತುರ ಪ್ರಣಯಕ್ಕೆ ಹೀಗೆ ಪ್ರತಿಬಂಧವಿಲ್ಲದ ಉತ್ತೇಜನ ಕೊಡುತ್ತ ಹೋದರೆ, ದೇಶಕ್ಕೆ ತಲುಪಿದ ಬಳಿಕ ಈತನ ವಿವಾಹ ವಿಷಯದ ಬೇಡಿಕೆಯನ್ನು ತಿರಸ್ಕರಿಸಲಿಕ್ಕೆ ತನಗೆ ಕೊಂಚವೂ ಅವಕಾಶ ಉಳಿಯಲಾರದೆಂದೂ ಹಾಗು ಈತನನ್ನು ಸಂಶಯದಲ್ಲಿರಗೊಡದೆ, ವಾಣಿಯಿಂದಲೂ ವರ್ತನದಿಂದಲೂ ತಾನು ಈತನನ್ನು ವಿವಾಹವಾಗುವ ನಿರ್ಧರ ತೋರಿಸಿ ಕೊಟ್ಟರೆ, ಮುಂದೆ ಯಾವಾಗ ತಾನು ಲಗ್ನವಾಗಲಿಕ್ಕೆ ಒಲ್ಲೆನೆನ್ನುವೆನೋ ಆಗ ಈ ಡೋಲಕಾರಿಯ ಮನಸ್ಸಿನಲ್ಲಿ ವಿಶ್ವಾಸಘಾತದ ಅರಿವಿನಿಂದ ಭಯಂಕರ ವೈರವು ಹುಟ್ಟುವ ಸಂಭವವಿದೆಯೆಂಬ ಬೆದರಿಕೆಯು ಕಂಟಕಿಯ ಮನಸ್ಸಿನಲ್ಲಿ ಇತ್ತೀಚಿಗೆ ಆಗಾಗ್ಗೆ ತಲೆದೋರಹತ್ತಿತ್ತು.

ಡೋಲಕಾರಿಯು ಅವಳ ಬೆನ್ನ ಮೇಲೆ ಚಪ್ಪರಿಸಿ, ಅವಳ ಹೆಗಲ ಮೇಲೆ ಕೈಯಿಟ್ಟದ್ದು ಕಾಮುಕ ಪ್ರಣಯಕ್ಕಿಂತಲೂ ವತ್ಸಲ ಅಕ್ಕರೆಯದೆಂದೇ ಆಕೆಗನಿಸಿದ್ದರೂ ಮತ್ತು ಆತನು ಹಾಗೆ ತನ್ನನ್ನು ಮೈದಡವಿದ್ದು ಯಾವನೊಬ್ಬ ಪ್ರೀತಿಯ ಹಿರಿಯಣ್ಣನು ಮೈದಡವಿದಂತೆ ಅವಳಿಗೆ ರುಚಿಸಿದ್ದರೂ ಆ ಮೇಲಿನ ಬೆದರಿಕೆಯಿಂದಲೇ ಅವಳು ಡೋಲಕಾರಿಯ ಕೈಯನ್ನು ಕೆಲಮಟ್ಟಿಗೆ ತಿರಸ್ಕಾರದಿಂದ ದೂಡಿ, ಹಿಂದಕ್ಕೆ ಸರಿದಳು; ಹಾಗು ತನ್ನ ಸೆರಗನ್ನು ತನ್ನ ಟೊಂಕಕ್ಕೆ ಪುನಃ ಸಿಕ್ಕಿಸಿಕೊಳ್ಳುತ್ತ ಸಿಟ್ಟಿನ ದನಿಯಿಂದಲೇ—

"ಆ ತಾಯಿತವನ್ನು ಕಟ್ಟುವುದಿದ್ದೆಯಷ್ಟೇ; ಅದನ್ನು ನಮ್ಮ ಕಂಟಕ ಬಾಬುವೇ ಕಟ್ಟಲಿ. ನೀವು ಹೀಗೆ ಸುಮ್ಮನೆ ನನ್ನ ಮೈಮುಟ್ಟಿ ಕಟ್ಟುವ ಅವಶ್ಯಕತೆಯಿಲ್ಲ."

ಕಂಟಕಿಯ ಆ ತಿರಸ್ಕಾರದೊಡನೆ ಡೋಲಕಾರಿಯ ಪ್ರೇಮಲ ಮನಸ್ಸು ಅತ್ಯಂತ ವಿರಸಗೊಂಡದ್ದರಿಂದ ಆತನ ಕಣ್ಣೊಳಗಿಂದ ಒಮ್ಮೆಲೆ ಅಶ್ರುಗಳುದು

ರಿದವು; ಮತ್ತು ದನಿಯೂ ಸಿಟ್ಟಿನಿಂದ ಕಂಪಾಯಮಾನವಾಯಿತು! ಕೂಡಲೆ ಆತನು ಕಂಟಕಿಯಿಂದ ದೂರ ಸರಿದು ನಿಂತುಕೊಂಡನು. ಆ ಅವಮಾನವನ್ನು ನಗೆಚೇಷ್ಟೆಗೆಂದು ತಿಳಿಯದೆ, ಆತನು ಕಂಟಕಿಯನ್ನು ಕುರಿತು, ಕಳವಳದಿಂದ ಅನ್ನುತ್ತಾನೆ:—

"ಕಂಟಕಿ ನೀನು ನನ್ನೊಡನೆ ಇನ್ನೂ ಇಷ್ಟು ಪರಕೀಯತ್ವವ ತಾಳುತ್ತಿಯಲ್ಲವೆ? ನಿನ್ನ ಸ್ವಯಂವರದ ಆ ಪಣಕ್ಕೆಂದಲ್ಲವೆ ನಾನು ಈ ಘೋರ ಸಾಗರದಲ್ಲಿ ಈ ಪುಟ್ಟ ತರಿಯನ್ನು ದೂಡಿ ನಿಮ್ಮನ್ನು ಈ ಕರಿನೀರೊಳಗಿಂದ ಓಡಿಸಿ ಸ್ವದೇಶಕ್ಕೆ ತಲುಪಿಸುವ ಜೀವದ ಮೇಲಿನ ಸಾಹಸಕ್ಕೆ ತೊಡಗಿರುವುದು? ಆದರೆ ನಿನ್ನ ಮನಸ್ಸಿನಲ್ಲಿ ಇನ್ನೂ ಇಷ್ಟು ಪರಕೀಯತ್ವವು ವಾಸಿಸುತ್ತಿದ್ದರೆ, ನಿನ್ನೆದುರಿಗೆ ಬೇಕುಬೇಕಂತ ಕುಣಿದು, ನಿನಗೆ ತೊಂದರೆ ಕೊಟ್ಟು, ಸ್ವಂತದ ಅವಮಾನ ಮಾಡಿಸಿಕೊಳ್ಳುವ ಮನುಷ್ಯನು ಈ ಡೋಲಕಾರಿಯಾಗಿಲ್ಲ. ಮುಂದೆ ನನ್ನೊಡನೆ ವಿವಾಹವಾಗುವೆನೆಂದು ನೀನು ಇದುವರೆಗೆ ನನಗೆ ಆಮಿಷದೋರುತ್ತ ಬಂದಿದ್ದರೆ, ಅದು ನಿನಗಂತೂ ಒಪ್ಪುವುದಿಲ್ಲ. ಇದರ ಪರಿಣಾಮವು........."

ಇಷ್ಟು ಗಂಭೀರವಾಗಿಯೂ ಇಷ್ಟು ವಿಷಾದದಿಂದಲೂ ಡೋಲಕಾರಿಯು ಮಾತನಾಡಿದ್ದನ್ನು ಮೊದಲೆಂದೂ ನೋಡಿರದಿದ್ದ, ಆ ಕಂಟಕನಿಗೂ ಡೋಲಕಾರಿಯ ಮನಸ್ಸು ಅಷ್ಟು ಉದ್ವಿಗ್ನವಾದುದನ್ನು ಕಂಡಕೂಡಲೆ ಬೆಚ್ಚಿಬಿದ್ದಂತಾಯಿತು. ದೇಶಕ್ಕೆ ತಲುಪಿದ ಮೇಲೆಯೇ ಕಂಟಕಿಯು ದೊರೆಯದ ನಿರಾಶೆಯಿಂದ ಯಾವ ಈತನ ವೈರವು ತಲೆದೋರಬಹುದಾಗಿದ್ದಿತೋ, ಅದರ ಆ ಪ್ರಾರಂಭದ ಮುಹೂರ್ತವು ಇಲ್ಲಿಯೇ ಆಗುವದೋ ಏನೋ? ಯಾವ ತುಬಾಕಿ ಹಾಗು ಮದ್ದು-ಗುಂಡುಗಳನ್ನು ನಾವು ಪರಸ್ಪರರ ಸಂರಕ್ಷಣಕ್ಕೆಂದು ಒಟ್ಟುಗೂಡಿಸಿದ್ದೆವೋ, ಅವೇ ಇನ್ನು ಪರಸ್ಪರರ ವಿನಾಶಕ್ಕೆ ಕಾರಣವಾಗುವವೋ ಏನೋ? ಇಂದಿಲ್ಲ ನಾಳೆ ಈ ಡೋಲಕಾರಿಯು ಇದೇ ಮಾಲತಿಗಾಗಿ ಪ್ರತಿ ರಘೀ ಉದ್ದೀನನೇ ಆಗಿ, ಮಾಲತಿಯ ಹಾಗು ತನ್ನ ಜೀವಕ್ಕೆ ಮುಳುವಾಗುವನೋ ಏನೋ? ಇಂಥ ಭಯಪ್ರದ ಶಂಕೆಗಳಿಂದ ಕಂಟಕನ ಎದೆಯಲ್ಲಿ ಧಸ್ಸೆಂದಿತು! ಆದರೆ ಆ ಅನಿಷ್ಟಪ್ರಸಂಗವನ್ನು ಶಕ್ಯವಾದಷ್ಟು ಇಂದಿನದು ನಾಳೆಗಾದರೂ ದೂಡುತ್ತ, ಸಾಗಿದಷ್ಟು ದಿನ ಸಾಗಿಸುವದಷ್ಟೇ ಆತನ ಕೈಯಲ್ಲಿದ್ದಿತು; ಮತ್ತು ಏನಾದರೂ ಡೋಲಕಾರಿಯು ಸೌಜನ್ಯವನ್ನು ತೀರ ಬಿಸುಟೆ ಒಗೆಯುವವನಲ್ಲೆಂಬ ನಿಶ್ಚಿಂತೆಯು ಈಗಲೂ ಕಂಟಕನಿಗೆ ಅನಿಸದಿರುತ್ತಿದ್ದಿಲ್ಲ ಆದರಿಂದ ಡೋಲಕಾರಿಯು

ಇನ್ನು ಏನಾದರೂ ವಿಕೋಪದಿಂದ ಮಾತಾಡುವಷ್ಟರಲ್ಲಿಯೇ ಕಂಟಕನು ಮನವೊಲಿಸುವ ದನಿಯಲ್ಲಿ ಆತನಿಗೆ ತಿಳಿಹೇಳಹತ್ತಿದನೇನಂದರೆ:—

"ಗೆಳೆಯಾ, ಪರಿಣಾಮವೇತರದು? ಇಂಥ ಸ್ತ್ರೀಸುಲಭ ಸಂಕೋಚದ ಬಗ್ಗೆ ಕೌತುಕವೆನಿಸಬೇಕೋ-ಕೋಪಗೊಳ್ಳಬೇಕೋ? ಛೇ! ಛೇ! ಪ್ರೇಯಸಿಯ ಅನುರಂಜನವನ್ನೆಂತು ಮಾಡಬೇಕೆಂಬ ಕಲೆಯು ಆ ಕಾಡು ಜಾವರಾಗಳಿಗೂ ತಿಳಿಯುತ್ತದೆ ಅಷ್ಟೂ ಕೂಡ ನಿನಗೆ ತಿಳಿಯುವದಿಲ್ಲ ಕಟ್ಟು, ಆ ತಾಯಿತವನ್ನು ನಿನ್ನ ಕೈಯಿಂದಲೇ ಕಂಟಕಿಯ ಕೊರಳೊಳಗೆ ಚೆನ್ನಾಗಿ ಕಟ್ಟು. ನಾನು ಈಕೆಯ ಹಿರಿಯಣ್ಣನು. ನನ್ನ ಕೆಲ ಅಧಿಕಾರವನ್ನಾದರೂ ಈಕೆಯು ಮನ್ನಿಸಬೇಡವೇ? ಅದಕ್ಕಾಗಿಯೇ ಈ ಚಾಣಾಕ್ಷ ಹುಡುಗೆಯು, ನಾನು-ಈಕೆಯ ಹಿರಿಯಣ್ಣನು,-ಹೇಳುವವರೆಗೂ ಬಹಿರಂಗವಾಗಿ ನಿನಗೆ ಅಸಮ್ಮತಿ ತೋರಿಸಿದಳು! ಹಾ, ಭಗಿನೀ, ಡೋಲಕಾಠಿಗೆ ಆ ತಾಯಿತವನ್ನು ನಿನ್ನ ಕೊರಳಲ್ಲಿ ಕಟ್ಟಗೊಡು; ಬೇಡೆನ್ನಬೇಡ."

"ಇಷ್ಟಕ್ಕಾಗಿಯೇ ಸಿಟ್ಟಾದಿರೇನು? ಎಂಥ ಹುಚ್ಚರು ನೀವು!" ಎಂದು ಆ ಪ್ರಸಂಗವನ್ನು ನೀಗಿಸುವ ಸಲುವಾಗಿ ಕಂಟಕಿಯು ಪ್ರಸಂಗಾವಧಾನದಿಂದ ನುಡಿದು, ಅತ್ಯಂತ ಆಕರ್ಷಕವಾಗಿ ನಕ್ಕು, ಡೋಲಕಾಠಿಯ ಕಿರಿಬೆರಳನ್ನು ಮೆಲ್ಲನೆ ಜಗ್ಗಿದಳು. ಆ ಲಘು ಆಕರ್ಷಣದಿಂದ ಆನೆಯನ್ನು ಕಟ್ಟಿಸಿ ಎಳೆದಷ್ಟು ಅವಶನಾಗಿ, ಆ ಬಡ ಡೋಲಕಾಠಿಯು ಮತ್ತೆ ತಟ್ಟನೆ ಆಕೆಯ ಹತ್ತರ ಹೋದನು; ಮತ್ತು ಪ್ರಸನ್ನಚಿತ್ತದಿಂದ ಬಿನ್ನಯಿಸಿದನೇನಂದರೆ:—

"ಆ ನಿನ್ನ ಸೆರಗನ್ನು ನೀನೇ ತುಸ ಕೆಳಗೆ ಸರಿಸು; ಹಾ, ಅಷ್ಟೇ ಸಾಕು. ತಾಯಿತವನ್ನು ಕೊರಳೊಳಗೆ ಕಟ್ಟಬರಬೇಕಲ್ಲ! ಆದರೆ ನಾನು ಮೊದಲು ನಿನ್ನ ಕಿವಿಯಲ್ಲಿ ಮಂತ್ರ ಹೇಳಬೇಕಾಗಿದೆ. ಹೇಳಲೋ? ನನ್ನ ಮೋರೆಯನ್ನು ತೀರ ನಿನ್ನ ಕಿವಿಯ ಹತ್ತರ ತರಲೋ? ಹಾ, ಇಲ್ಲದಿದ್ದರೆ ಮತ್ತೆ ನಿನ್ನ ಅಮರ್ಯಾದೆಯಾದೀತು; ಹಾಗು ನೀನು ನಾಗಿಣಿಯಂತೆ ಮತ್ತೆ ಫೂತ್ಕಾರ ಮಾಡೀ!"

ಡೋಲಕಾಠಿಯು ಪ್ರೇಮಭರಿತನಾದನು. ಅವನು ತನ್ನ ತುಟಿಗಳನ್ನು ಅವಳ ಕಿವಿಯ ಹತ್ತರ ಒಯ್ದು, ಒಂದು ಕೈಯನ್ನು ಅವಳ ಕೊರಳ ಸುತ್ತಲೂ ಹಾಕಿ ಅವಳನ್ನು ಹತ್ತರ ಎಳೆದುಕೊಂಡನು; ಮತ್ತು ಆ ಮಾಟಗಾರ್ತಿಯು ತನಗೆ ಹೇಳಿಕೊಟ್ಟಿದ್ದ ಆ ನಿರರ್ಥಕ ಅಕ್ಷರಗಳ ಆ ಮಂತ್ರವನ್ನು ಮೂರು ಮೂರು ಸಾರೆ ಆಕೆಯ ಕಿವಿಯಲ್ಲುಚ್ಚರಿಸಿದನು.

ಆ ಮಂತ್ರವನ್ನು ನೂರಾರು ಸಾರೆಯಾದರೂ ಉಚ್ಚರಿಸುತ್ತ ಆ

ಡೋಲಕಾಂತಿಯು ಹಾಗೆಯೇ ನಿಲ್ಲಬಹುದಾದಷ್ಟು ಕಂಟಕಿಗೆ ತೀರ ಸ್ಮೈದ ಡವಿ ನಿಂತುಕೊಂಡಿದ್ದನು; ಆದರೆ ಕಂಟಕಿಯು ಮತ್ತೆ ಯಾವಾಗ ಘೂತ್ಕರಿ ಸುವಳೋ ಎಂಬ ಧಗಧಗಿಯು ಆತನಿಗೆ ಹತ್ತಿದ್ದರಿಂದ, ಆತನು ಘಟಿಸಿದಷ್ಟೇ ಸುಖವನ್ನು ಅನುಭೋಗಿಸಿ, ತೀರ ಸಲಿಗೆಯು ತರವಲ್ಲವೆಂದು, ಮಂತ್ರದ ದೀಕ್ಷೆಗೆ ಅವಶ್ಯವಿದ್ದ ಮೂರು ಸಾರೆಯ ಉಚ್ಚಾರವಾದೊಡನೆಯೇ ಮುಗಿ ಸಿದನು; ಮತ್ತು ಆತನು ತನ್ನ ಕೈಯೊಳಗಿನ ತಾಯಿತವನ್ನು ಸರಿಪಡಿಸುತ್ತ ಸರಿದು ನಿಂತನು.

"ಬೇಗನೆ ಮುಗಿಯಿತಲ್ಲ?" ಎಂದಂದು ಕಂಟಕಿಯು ಮುಗುಳು ನಗೆ ನಕ್ಕಳು; ಆದರೆ ಆ ಮುಗುಳ ನಗೆಯ ಅರ್ಥ ತಿಳಕೊಳ್ಳುವಷ್ಟು ಭಾನವು ಡೋಲಕಾಂತಿಯ ಆನಂದದಿಂದ ಪುಲಕಿತವಾಗಿದ್ದ ಪ್ರಾಂಜಲ ಮನಸ್ಸಿಗೆ ಎಲ್ಲಿರ ಬೇಕು? ಆತನು ಸರಳ ರೀತಿಯಿಂದಲೇ—

"ಭಲೆ! ಮುಗಿಯಿತಲ್ಲ? ಇನ್ನೂ ಈ ತಾಯಿತವನ್ನು ನಿನ್ನ ಕೊರಳೊ ಳಗೆ ಕಟ್ಟುವುದಿದೆ. ಹಾ, ಹೀಗೆ; ಹೀಗೆಯೇ ಎದುರಿಗೆ ಬಾ! ಗೋಣನ್ನು ಚನ್ನಾಗಿ ಮೇಲಕ್ಕೆತ್ತಿ ಹಿಡಿ. ಸರಿಯಲಿ ಬಿಡು ಆ ಸೆರಗು. ಅದನ್ನು ಸಾವರಿಸಿ ಹಿಡಿಯಲಿಕ್ಕೆ ಮತ್ತೆ ಮತ್ತೆ ಕೈಗಳನ್ನೇಕೆ ಅಡ್ಡ ತರುತ್ತೀ? ಹಾ, ಹಾಗೆಯೇ ಸೆಟೆದು ನಿಂತುಕೋ!"

ಡೋಲಕಾಂತಿಯು ಆಕೆಯ ಎದುರಿಗೆ ತೀರ ಹತ್ತರ ನಿಂತುಕೊಂಡು, ಆ ತಾಯಿತವು ಅವಳ ವಕ್ಷಃಸ್ಥಳದ ಮೇಲೆ ಚೆನ್ನಾಗಿ ಇಳಿ ಬೀಳುವಹಾಗೆ ಕಟ್ಟತೊಡಗಿದನು.

ಅಷ್ಟರಲ್ಲಿ ಅವಳ ವಕ್ಷಃಸ್ಥಳದ ಹಾಗು ಗೋಣಿನ ನಡುವೆ ಏನೋ ಗುರ್ತಿನ ಕಲೆಗಳಿರುವಂತೆ ಆತನಿಗೆ ಕಾಣಿಸಿತು.

ಕೂಡಲೆ ಆತನು "ಗೋಣಿನ ಹತ್ತರ ಇದೇನು? ಈ ಕಲೆಗಳೇತರವು? ಬೇಟೆಗೆ ಹೋದಾಗ ಮುಳ್ಳುಗಳಲ್ಲಿ ಬಿದ್ದಿಲ್ಲವಷ್ಟೇ?" ಎಂದು ಕೇಳುತ್ತಿರಲಿಕ್ಕೆ ಅವು ಕಲೆಗಳಾಗಿರದೆ, ಕೆಂಪು ಬಣ್ಣದಿಂದ ಹಚ್ಚೆಚುಚ್ಚಿದ್ದ ಅಕ್ಷರಗಳೇ ಅವಾ ಗಿವೆಯೆಂದು ಆತನಿಗೆ ಕಾಣಿಸಿತು. ಅರೆಕ್ಷಣದಲ್ಲಿ ಅವನು ಅವುಗಳನ್ನು ಓದಿದನೇನಂದರೆ:—ಮಾಲಾತೀ"

"ಏನು? ಮಾ-ಲಾ-ತೀ? ಮಾಲತೀ?"

ಅದನ್ನು ಗಟ್ಟಿಯಾಗಿ ಓದುತ್ತಲೆ ಮತ್ತು ಶಬ್ದವು ಹೊಂದುತ್ತಲೆ ಆ ಡೋಲಕಾಂತಿಯ ಇಡೀ ಮುಖಮುದ್ರೆಯೇ ಬದಲಾಗಿ ಹೋಯಿತು. ಆತನ ಮೈಮೇಲೆ ರೋಮಾಂಚಗಳೆದ್ದವು!

ತೀರ ವಿಸ್ಮೃತಿಯೊಳಗಿಂದ ಮೆಲ್ಲ ಮೆಲ್ಲನೆ ಸ್ಮೃತಿಹೊಂದುವ ಮಾನವ ನಂತೆ ಆತನು ಆ ಕಂಟಕಿಯನ್ನು ಅನಿಮಿಷ ದೃಷ್ಟಿಯಿಂದ ನಿರೀಕ್ಷಿಸತೊಡಗಿದನು. ಕ್ಷಣಾರ್ಧದಲ್ಲಿ ಆತನು ಅತ್ಯಂತ ಸ್ನಿಗ್ಧ ಆದರೆ ತೀರ ವಿಸ್ಮಯ ಪೂರ್ಣ ದನಿಯಲ್ಲಿ ಕಂಟಕಿಯನ್ನು ಕುರಿತು ಕೇಳಿದನೇನಂದರೆ:—

"ಸತ್ಯಂ ವದ! ನಿನಗೆ ನಿನ್ನ ಪ್ರೀತಿಯ ಅವ್ವನ ಕೊರಳಾಣೆಯಿದೆ. ನಿನ್ನ ನಿಜವಾದ ಹೆಸರು ಇದೇ ಏನು? ನೀನು ಮಾಲತಿಯೇ ಅಲ್ಲವೆ? ನಿನ್ನ ಈ ಹೆಸರನ್ನು ನಿನ್ನೀ ವಕ್ಷಃಸ್ಥಳದ ಮೇಲೆ ಆದಾರು ಹಚ್ಚೆ ಚುಚ್ಚಿದರು? ಹೇಳು, ಸತ್ಯವಾದುದನ್ನೇ ತಿಳಿಸು."

ತನ್ನ ನಿಜವಾದ ಹೆಸರು ಡೋಲಕಾಂತಿಗೆ ಹಾಗೆ ಅಕಸ್ಮಾತ್ತಾಗಿ ತಿಳಿದು ಬಂದುದರಿಂದ, ಕಂಟಕಿಯು ಒಂದಿಷ್ಟು ಬೆಚ್ಚಿಬಿದ್ದಿದ್ದರೂ, ಇದರಲ್ಲಿ ವಿಶೇಷ ಹಾನಿಯಿರುವದೆಂಬ ಅದಾವ ಕಾರಣವೂ ಕಾಣಿಸದ್ದರಿಂದ ಡೋಲಕಾಂತಿಯು ಅವಳಿಗೆ ಅವಳ ಪ್ರೀತಿಯ ತಾಯಿಯ ಕೊರಳಾಣೆಯನ್ನು ಅಷ್ಟು ಕಳವಳದಿಂಡಿಡಲು, ಆ ತಾಯಿಯ ಸ್ಮೃತಿಯಿಂದ ಅವಳ ಕಂಠವು ಒತ್ತರಿಸಿ ಬಂದಂತಾದ್ದರಿಂದ ಅವಳು ಸಂಭಾಳಿಸಿ ಮಾತನಾಡುತ್ತಿದ್ದರೂ, ನಿಜಸಂಗತಿಯೇ ಅವಳ ಬಾಯಿಂದ ಹೊರಬಿದ್ದು ಹೋಯಿತು.

"ಅದು ನನ್ನ ಬಾಲ್ಯದಲ್ಲಿಯ ಬೇರೊಂದು ಹೆಸರಾಗಿತ್ತು. ನನ್ನ ಹಿರಿಯಣ್ಣನೊಮ್ಮೆ ಅಚ್ಚದಿಂದ ಅದನ್ನು ಹೀಗೆ ಕೆಂಪು ಬಣ್ಣದಿಂದ ನನ್ನ ಕುತ್ತಿಗೆಯ ಹತ್ತಿರ ಹಚ್ಚೆಚುಚ್ಚಿದ್ದನು; ಆದರೆ ನನ್ನ ಮೂಲ ಹೆಸರು ಕಂಟಕಿಯೆಂದೇ ಇದೆ."

"ಇಲ್ಲ; ಮಾಲತೀ, ನೀನು ಮಾಲತಿಯೇ ಇರುತ್ತೀ! ಇದು ನೋಡು, ಆ ಹೆಸರಿನ ಸುತ್ತಲಿನ ಸುಳುವನ್ನು. ಅದು ನೋಡು ಹಚ್ಚೆ ಚುಚ್ಚುಚುಚ್ಚುತ್ತಲೆ ನನ್ನ ಕೈಯಿಂದಾದ ತಪ್ಪಿನ ಮೂಲಕ 'ಲ'ದ ಬದಲು 'ಲಾ' ಆದದ್ದನ್ನು! ಆ ತಪ್ಪಿದ ರೂಪವು 'ಮಾಲಾತೀ.' ಛೇ! ಇದೆಲ್ಲ ಅಶಕ್ಯವು; ಆದರೆ ಆದೇತಕ್ಕೆ?" ಎಂದು ಡೋಲಕಾಂತಿಯು ಗದ್ಗದ ಸ್ವರದಿಂದ ಅನ್ನುತ್ತ, ಮಾಲತಿಯನ್ನು ನಖ ಶಿಖಾಂತ್ಯದ ವರೆಗೂ ನಿರಿಕಿಸಿ ನೋಡಿ—"ಇದು ನೋಡು ನಿನ್ನ ಪ್ರತ್ಯಕ್ಷ ಮೂರ್ತಿಯನ್ನು. ಈ ಅಂಗಾಲಿನಿಂದ ನಡುನೆತ್ತಿಯವರೆಗಿನ ವೈಶಿಷ್ಟ್ಯ; ಈ ಮೊದಲು ನನ್ನ ಅಸಾವಧತೆಯ ಮಂಜಿನೊಳಗೆ ಮುಚ್ಚಲ್ಪಟ್ಟ ನಿನ್ನ ಆಕೃತಿಯು ನಾನು ಸ್ಮೃತಿ ಹೊಂದಿದ ಕೂಡಲೆ, ಆ ಮಂಜು ಕಡಿಮೆಯಾಗುತ್ತಲೆ, ನಖ ಶಿಖಾಂತ್ಯವಾಗಿ ನಮ್ಮ ಮಾಲತಿಯ ಸ್ವರೂಪದಲ್ಲೀ ಹೇಗೆ ಪ್ರಕಟ ವಾಯಿತು ನೋಡು! ಕಂಟಕ ಬಾಬು, ನೀವು ಯಾರೋ ಇದ್ರಿ; ಆದರೆ ಈ

ಮನ್ನಿಸಿದ ಭಗಿನಿಯಾದ ಕಂಟಕಿಯು ನನ್ನ ಖಾಸ ತಂಗಿಯಾದ ಲತಿಯೇ ಇರುತ್ತಾಳೆ!! ಇನ್ನು ಸತ್ಯವೇನೆಂಬದನ್ನು ತಿಳಿಸಿರಿ! ನಾನು ್ಯವನಿರುತ್ತೇನೆ ನನಗೆ ಅಂಜಬೇಡಿರಿ."

ಡೋಲಕಾರಿಯು ಆ ಅತ್ಯಂತ ಅನಪೇಕ್ಷಿತ ವಾಕ್ಯದೊಡನೆ ಕಂಟಕನ ಬಿಂದ ಮಾತೇ ಹೊರಡದಾದವು. ಎಷ್ಟೋ ವರ್ಷಗಳ ಮುಂಚೆ ಮಾಲ ಅಣ್ಣನು ಶಿಕ್ಷೆಹೊಂದಿ ಕರಿನೀರಿಗೆ ಹೋಗಿದ್ದನೆಂಬದು ಆತನಿಗೆ ತಟ್ಟನೆ ಸಾಯಿತು; ಆದರೆ ಈ ಡೋಲಕಾರಿಯು ಮಾಲತಿಯ ಖಾಸ ಅಣ್ಣನೇ ಂದು ನಿರ್ಧಾರವಾದರೆ, ತನ್ನ ಮಾರ್ಗದೊಳಗಿನ ಡೋಲಕಾರಿಯು ಮಾಲತಿ ಯುದ ವೈಯಕ್ತಿಕ ಅಭಿಲಾಷೆಯ ಮೂಲಕ ಯಾವ ವೈರವು ಅಡ್ಡ ಬರುವ ವಿದ್ದಿತೋ, ಆ ಸಂಕಟವು ಹೀಗೆ ಒಮ್ಮೆಲೆ ನಿವಾರಣವಾಗಿ ಬಿಟ್ಟರೆ, ಎಲ್ಲ ಸಕ್ಕೂ ಅನುಕೂಲವಾಗುವ ಸಂಭವವಿದೆಯೆಂಬದು ಕೂಡಲೆ ಆತನಿಗೆ ್ತವಾಗಿ ತಿಳಿದು ಬಂದದ್ದರಿಂದ, ಆತನು ಡೋಲಕಾರಿಗೆ ತಟ್ಟನೆ ಹೇಳು ನೆ:—

"ಗೆಳೆಯಾ, ನಾನು ಸತ್ಯವನ್ನೇ ನಿನಗೆ ಹೇಳೇನು; ಆದರೆ? ಆದರೆ? ತಾಳು. ಈ ನನ್ನ ಮಾಲತಿಯು ಆ ಹೆಸರನ್ನು ಹಚ್ಚಿ ಚುಚ್ಚಿದ್ದ ಯಾವ ಯು ಅಣ್ಣನಿದ್ದನೋ, ಆತನು ಮುಂದೆ ಒಂದು ಕಾಳಗಕ್ಕೆ ಹೋದನು; ತ್ತು ಅಲ್ಲಿ ಆತನಿಗೆ ತಲೆಯ ಮೇಲೊಂದು ಪೆಟ್ಟು ಹತ್ತಿತು. ಆ ಗಾಯದ ನು ನಿರಂತರದ ಗುರ್ತು ಆತನ ತಲೆಯ ಮೇಲಿರುತ್ತದೆಂದು ನಮಗೆ ಕ್ಕ ಗೊತ್ತಾಗಿದ್ದಿತು. ಅಂಥ ಯಾವುದೊಂದು ಗುರ್ತು ನಿನ್ನ ತಲೆಯ ಲೆ...."

ಕಂಟಕನು ತನ್ನ ವಾಕ್ಯವನ್ನು ಮುಗಿಸುವದರೊಳಗೇ ಡೋಲಕಾರಿಯು ತಲೆಯ ಮೇಲೆ ಹುಲ್ಲುಗಡ್ಡೆಗಳಂತೆ ಬೆಳೆದಿದ್ದ ಕೂದಲುಗಳನ್ನು ಸರಿಸಿ, ಲಮಾಡಿ, ತನ್ನ ಮಸ್ತಕವನ್ನು ಕಂಟಕನ ಮುಂದೆ ಹಿಡಿದನು. ಯುದ್ಧ ಲ್ಲಾದ ಎರಡು ಅಂಗುಲ ಆಳವಿದ್ದ ಗಾಯದ ಒಂದು ಬಹುದೊಡ್ಡ ಕಲೆಯು ಸುಸ್ಪಷ್ಟವಾಗಿ ಕಾಣಿಸುತ್ತಿತ್ತು! ಆ ಗುರ್ತು ನೋಡಿ ಕಂಟಕನಿಗೆ ಇವನೇ ಲತಿಯ ಅಣ್ಣನೆಂಬ ಬಗ್ಗೆ ಖಾತ್ರಿಯಾಯಿತು!

ಬಳಿಕ ಕಂಟಕನು ತನ್ನ ಸಂಗತಿಯು ಹೇಗೆ ಸಂಭವಿಸಿದ್ದಿತೋ, ಗಿಯೇ ಡೋಲಕಾರಿಗೆ ವಿಸ್ತಾರವಾಗಿ ತಿಳಿಸಹತ್ತಿದನು. ತನ್ನ ಹೆಸರು ನ್, ಇವಳ ಹೆಸರು ಮಾಲತಿ ಎಂದಿದ್ದರೂ, ತಾವು ಯಾವ ಸಂಕಟದ ಟಿನಲ್ಲಿ ಸಿಕ್ಕದ್ದರಿಂದ ಅವುಗಳನ್ನು ಬದಲಿಸಿ ಕಂಟಕ-ಕಂಟಕಿಗಳೆಂಬ ಉಪ

ನಾವುಗಳನ್ನಿಟ್ಟುಕೊಳ್ಳಬೇಕಾಯಿತೆಂಬದನ್ನೂ ಇತರ ಸಂಗತಿಗಳನ್ನೂ ತಿಳಿಸಿದನು.

ಕಂಟಕನು ಅನ್ನುತ್ತಾನೆ "'ನಿಮ್ಮ ಹುಡುಗನಿಗೆ ಯುದ್ಧದಲ್ಲೊಂದು ತಲೆಯ ಮೇಲೆ ಪೆಟ್ಟಾಗಿರಬೇಕೆಂಬದು ಅಂತರ್ಜ್ಞಾನದಿಂದಲೇ ತಿಳಿಯುತ್ತದೆ.' ಎಂದು ಹೇಳಿ, ಆ ಅಧಮ ಕಿತವಾನನು, ಆ ರಫೀ ಉದ್ದೀನನು ಸಾಧುವಿನ ವೇಷದಲ್ಲಿ ಯಾವಾಗ ಹೇಳಿದನೋ, ಆಗ್ಗೇ ಮಾಲತಿಯ ತಾಯಿಯು ಶ್ರದ್ಧೆಯು ಆತನಲ್ಲಿ ನೆಲಿಸಿತು. ಈ ಸಂಕಟದಲ್ಲಿ ಸಿಕ್ಕುಬೀಳಲಿಕ್ಕೆ ಒಂದು ದೃಷ್ಟಿಯಿಂದ ಈ ನಿನ್ನ ತಲೆಯ ಮೇಲಿನ ಕಲೆಯು ಹೇಗೆ ಆಗ ಕಾರಣೀಭೂತವಾಗಿದ್ದಿತೋ, ಅದೇ ಕಲೆಯು ಈಗ ನಿಮ್ಮ ಅಣ್ಣ-ತಂಗಿಯರ ವಿಂಗಡವನ್ನು ಕೊನೆಗಾಣಿಸಿ ನಿಮ್ಮ ಗುರ್ತುಗಳನ್ನು ಪರಸ್ಪರರಿಗೆ ತೋರಿಸುವ ಸಾಕ್ಷಿಯಾಯಿತು! ಮಾಲತಿಯನ್ನು ಸಂಕಟಮೊಳಗಿಂದ ಪಾರುಮಾಡುವ ಸಾಧನವಾಯಿತು! ಅದರಂತೆಯೇ ಆ ಅಧಮ ಕಿತವಾನ (ಲಫಂಗ)ನಿಗೆ, ಆ ರಫೀಉದ್ದೀನನಿಗೆ ನಿನ್ನ ಕೈಯಿಂದಲೇ ಪ್ರಾಣದಂಡ ಭೋಗಿಸಬೇಕಾಗಿ, ನಿನ್ನ ಈ ಭಗಿನಿಯ ಸೇಡನ್ನು ತಿಳಿಯುವೆ, ಆದರೆ, ಈಕೆಯ ಅಣ್ಣನೇ ಹಾಯಿಸಿಕೊಂಡ ಆ ಯೋಗಾಯೋಗವು ಎಷ್ಟು ಆಹ್ಲಾದದಾಯಕವಾಗಿದೆಯೋ ಅಷ್ಟೇ ಆಕರ್ಷಕವೂ ಆಗಿವೆ."

"ಛೇ-ಬಿಡೊ" ಆ ಉಗ್ರ ಡೋಲಕಾರಿಯು ಸೆಟೆದು ನಿಂತುಕೊಂಡು, ತನ್ನ ಪುಷ್ಟ ದಂಡಗಳನ್ನು ವಾತಾವರಣದಲ್ಲಿ ತಿರುವುತ್ತ, ತುಟಿ-ದವಡೆಗಳನ್ನು ಕಚ್ಚುತ್ತ ಗುಣಗುಟ್ಟಿದನೇನಂದರೆ—

"ಆ ರಫೀ ಉದ್ದೀನನನ್ನು ನಾನು ನನ್ನ ವಿಷಯದ ಸೇಡಿಗಾಗಿ ಕೊಂದೆನು. ನನ್ನ ತಂಗಿಯ ಸೇಡಿಗಾಗಿ ಆತನ ಕುತ್ತಿಗೆಯನ್ನು ಇನ್ನೊಮ್ಮೆ ಹೀಗೆ ಅತಿ ಗಟ್ಟಿಯಾಗಿ ಹಿಚುಕಿ ಆತನನ್ನು ಮತ್ತೊಮ್ಮೆ ಕೊಲೆಗೆಯ್ಯಲೇಬೇಕು!" ಎಂದಂದು, ಸಿಟ್ಟಿನ ಆವೇಶದಲ್ಲಿ ಅಲ್ಲಿಯ ವಾತಾವರಣದ ಕುತ್ತಿಗೆಯನ್ನೇ ಆ ಡೋಲಕಾರಿಯು ಗಟ್ಟಿಗಟ್ಟಿಯಾಗಿ ಹಿಚುಕತೊಡಗಿದನು!

"ಅಣ್ಣಾ, ಬಿಡು; ಆ ಕೋಪವನ್ನಿನ್ನು ತ್ಯಜಿಸು!" ತನ್ನ ಅಣ್ಣನ ಹಾಗು ಚಿಕ್ಕಂದಿನಿಂದಲೂ ಇಂದಿನ ವರೆಗಿನ ಎಲ್ಲ ಸುಖ-ದುಃಖಗಳ ನೆನಪಿನಿಂದ ಕಣ್ಣುತುಂಬ ಅಶ್ರು ಹರಿಯುತ್ತಿದ್ದ ಆ ಮಾಲತಿಯು ತನ್ನ ಅಣ್ಣನ ಆ ಕೈಯನ್ನು ಮೆಲ್ಲನೆ ಕೆಳಗೆ ಜಗ್ಗಿಕೊಂಡು, ತನ್ನ ಕೈಯಿಂದ ಒತ್ತುತ್ತ ಆತನನ್ನು ಅಕ್ಕರೆಯಿಂದ ಸಮಾಧಾನಪಡಿಸಹತ್ತಿದಳು.

'ಮಾಲೀ, ತಂಗೀ!-ನನ್ನಿಂದ ನಿನ್ನ ಯಾವ ಕಲ್ಯಾಣವೂ ಆಗಿರುವುದಿಲ್ಲ

ನಾನು ನಿನಗೆ ಅಣ್ಣನಿದ್ದೂ ಇಲ್ಲದಂತೆಯೇ ಆಗಿಹೋಗಿದೆ! ನಿನ್ನ ಮನಸ್ಸಿನಂತೆ-’

“ಅಣ್ಣಾ, ನೀನು ಈಗ ನನಗೆ ಭೆಟ್ಟಿಯಾದೆಯಷ್ಟೇ? ಇದರಿಂದ ನನ್ನ ಮನಸ್ಸಿನಂತೆಯೇ ಎಲ್ಲವೂ ಆಗಿಹೋದಂತಾಗಿದೆ! ಇನ್ನು ನನ್ನ ಮನಸ್ಸಿನಂತೆ ಏನಾದರೂ ಆಗುವುದಿದ್ದರೆ, ನಮ್ಮ ತಾಯಿಯ ಭೆಟ್ಟಿಯೊಂದು! ಅಣ್ಣಾ, ನನ್ನನ್ನು ಪ್ರೀತಿಯಿಂದಪ್ಪಿಕೋ!”

“ಮಾಲೀ, ತಂಗೀ!” ತನ್ನ ಕೊರಳಿಗೆ ಬಿದ್ದಿದ್ದ ಆ ತನ್ನ ತಂಗಿಯನ್ನು ತಾಯಿಯು ಮಕ್ಕಳನ್ನು, ಅದರಲ್ಲಿಯೂ ಹೆಣ್ಣು ಮಕ್ಕಳನ್ನು ಬಿಗಿಯಾಗಿ ಅಪ್ಪಿಕೊಂಡು, ಅವರ ಕೂದಲುಗಳ ಮೇಲೂ ಬೆನ್ನಿನ ಮೇಲೂ ಕೈಯಾಡಿಸುವಂತೆ, ಆತನು ಅವಳ ಬೆನ್ನಮೇಲೆ ಕೈಯಾಡಿಸುತ್ತ, ಆ ಭೆಟ್ಟಿಯ ಇನಿಗನಸಿನಲ್ಲಿಯೇ ನಡು ನಡುವೆ ಸುಮ್ಮ ಸುಮ್ಮನೆ “ಮಾಲೀ,” “ತಂಗೀ” ಎಂದು ಕೂಗುತ್ತಿರಲು, ಆಕೆಯು ಮೆಲ್ಲನೆ “ಹೂ”, “ಓ” ‘ಅಣ್ಣಾ!’ ಎಂದೆನ್ನುತ್ತಿದ್ದಳು.

ಕೆಲ ಕ್ಷಣಗಳ ನಂತರ ಡೋಲಕಾರಿಯು ತನ್ನ ಬಾಹುಪಾಶದೊಳಗಿಂದ ತನ್ನ ತಂಗಿಯನ್ನು ಮುಕ್ತಗೊಳಿಸಿ, ಕಿಶನನ ಕಡೆಗೆ ಹೊರಳಿ:—

“ಕಿಶನ್, ನೀನಿದ್ದೆಯೆಂದೇ ತನ್ನ ತಂಗಿಯನ್ನು ಹಲವು ಸಂಕಟಗಳೊಳಗಿಂದ ಬದುಕಿಸಿರುತ್ತೀ. ಅದಕ್ಕಾಗಿ ನನ್ನಮೇಲೆ ನಿನ್ನ ಅನಂತ ಉಪಕಾರಗಳಾಗಿವೆ; ಆದರೆ ತಿಳಿದು ನೋಡಿದರೆ, ನನ್ನ ಉಪಕಾರಗಳಾದರೂ ನಿನ್ನ ಮೇಲೆ ಅಲ್ಪಸ್ವಲ್ಪಾಗಿಲ್ಲ! ನೀನು ನನ್ನ ತಂಗಿಯನ್ನು ನನಗೆ ತಿರುಗಿ ಕೊಟ್ಟೆ. ನಾನಾದರೂ ಇದಕೋ, ಈ ನಿನ್ನ ಪ್ರಿಯಕರಿಣಿಯನ್ನು ನಿನಗೆ ತಿರುಗಿ ಕೊಡುತ್ತೇನೆ! ನನ್ನ ಹೆಬ್ಬಯಕೆಗಳ ವರದಕ್ಷಿಣೆಯೊಡನೆ ಈ ನನ್ನ ತಂಗಿಯನ್ನು ನಾನು ನಿನಗೆ ಯಥಾಶಾಸ್ತ್ರವಾಗಿ ಕನ್ಯಾದಾನ ಮಾಡುತ್ತೇನೆ!”

“ಲಗ್ನದ ನಂತರವೇ!” ಎಂದಂದು ಕಿಶನನು ನಕ್ಕನು.

ಬಳಿಕ ಆ ಗೊತ್ತಾದ ದಿವಸ ಆ ಬಡ ಆತಿಥ್ಯಶೀಲರಾದ ಜಾವರಾಗಳು ಬಹು ವಿಜೃಂಭಣೆಯಿಂದ ಆ ಮೂವರಿಗೂ ಹೊರಡಲಪ್ಪಣೆಯಿತ್ತರು. ಯಾವ ಕಾಲಕ್ಕೆ ಕಿಶನ್, ಮಾಲತೀ ಹಾಗು ಆಕೆಯ ಅಣ್ಣ (ಅಂದಿನಿಂದ ಆ ಡೋಲಕಾರಿಗೆ ಅಲ್ಲಿಯವರೆಲ್ಲರೂ ಅಣ್ಣನೆಂದೇ ಅನ್ನಹತ್ತಿದರು.) ಇವರು ಆ ತರಿಯಲ್ಲಿ ಕುಳಿತು ಬೆಳದಿಂಗಳ ಇರುಳಲ್ಲಿ ಕೊಂಚವೂ ಸಪ್ಪಳಾಗದಂತೆ ಆ ತರಿ ನೀರ ದಂಡೆಯನ್ನು ಬಿಟ್ಟರೋ, ಆ ಕಾಲಕ್ಕೆ ಸಮುದ್ರದ ಭೂತವನ್ನು, ಆ ‘ಜುರುಬಿನ’ವನ್ನು ಪ್ರಸನ್ನೀಕರಿಸಿಕೊಳ್ಳಲಿಕ್ಕೆಂದು ಜಾವರಾ ಜನರು ತಮಗೆ ಗೊತ್ತಿದ್ದಂಥ ಎಲ್ಲ ಮಾಟಗಳನ್ನು ಮಾಡಿದರು; ಮತ್ತು ತಮ್ಮ ‘ಡುಂಗಿ’ ಗಳೊಡನೆ ಆ ಜಾವರಾಗಳೊಳಗಿನ ನಿಪುಣರಾದ ಅಂಬಿಗರು ಆ ಕಿಶನನ ತರಿ

ಯನ್ನು ಸಮುದ್ರದ ದಂಡೆಯ ಬದಿಯ ಒತ್ತುಗಳೊಳಗಿನ ಅಡ್ಡದಾರಿಯಿಂದ ಇಂಗ್ಲಿಷರ ನಿಶ್ಚಿತ ಠಾಣ್ಯದೊಳಗಿನ ಪಹರೆಗಳನ್ನು ತಪ್ಪಿಸುತ್ತ ಕರಿನೀರಿನ ಮುಖ್ಯ ಸಮುದ್ರದ ವರೆಗೂ ಕಳಿಸಿ ಬಂದರು.

ಕರಿನೀರಿನ ಆ ಮಹಾಸಮುದ್ರದಲ್ಲಿ ಕೇವಲ ಗಾಳಿಯ ಮೇಲೆಯೇ ಬಿಟ್ಟದ್ದ ಆ ಸಣ್ಣ ತರಿಯು! ರಾತ್ರಿಯ ಕತ್ತಲಲ್ಲಂತೂ ನಾಲ್ಕೂ ದಿಕ್ಕಿನಿಂದ ಪ್ರತ್ಯಕ್ಷ ಕಾಲನೇ 'ಆಽ' ಎಂದು ನಿಂತಿರುವಂತೆ ಭಾಸವಾಗುತ್ತಿತ್ತು! ಇಷ್ಟು ಭಯಾನಕ, ಇಷ್ಟು ಘಾತುಕ, ಇಷ್ಟು ಹಾಳು, ಇಷ್ಟು ಅಸಹಾಯ್ಯ ಎದೆಗಾರಿಕೆಯು ಅದಾಗಿತ್ತು. ಮಧ್ಯರಾತ್ರಿಯ ಕಾರ್ಗತ್ತಲೆಯಲ್ಲಿ ಆ ವಿಶಾಲವಾದ ಸಮುದ್ರವು ಗರ್ಜಿಸ ಹತ್ತಿತೆಂದರೆ, ಮೃತ್ಯುವೇ ಡುರುಕಿ ಹಾಕುತ್ತಿರುವಂತೆ ಅನಿಸುತ್ತಿತ್ತು! ಆದರೆ ಜೀವಾವಧಿ ಶಿಕ್ಷೆಯಲ್ಲಿ ಸವೆಯುವದಕ್ಕಿಂತ, ಅವರಿಗೆ ಆ ಎದೆಗಾರಿಕೆಯೂ ಕೂಡ ಸೌಖ್ಯದ್ದೆನಿಸಿತು!

ಕರಿನೀರಿನ ಆ ಭಯಾನಕ ಸಮುದ್ರದಲ್ಲಿ ಕೇವಲ ಗಾಳಿಯ ಗತಿಯ ಮೇಲೆ ಬಿಡಲ್ಪಟ್ಟಿದ್ದ ಆ ಪುಟ್ಟ ತರಿಯು ಒಳ್ಳೇ ವೇಗದಿಂದ ಸಾಗಿತ್ತು. ಶೀಡಿನ ತಟ್ಟುಗಳು ಉಬ್ಬುಬ್ಬಿ ಹೋಗಿದ್ದವು. ಆ ಮೂವರೂ ಸರತಿ ಸರತಿಯಂತೆ ಒಂದೇಸವನೆ ಹುಟ್ಟು ಕಡಿಯುತ್ತ ನಡೆದಿದ್ದರು. ಮಾಲತಿಯು ಕೂಡ ಹುಟ್ಟು ಹಾಕುವ ತನ್ನ ಸರತಿಯನ್ನು ಯಥಾಶಕ್ತಿ ನೀಗಿಸುತ್ತಿದ್ದಳು.

ಆಕಾಶದಲ್ಲಿ ನಡುವೇ ಬಿರುಗಾಳಿಯೆದ್ದು ಕಾರ್ಗತ್ತಲೆ ಬೀಳುವದು. ನಡುವೇ ಸಮುದ್ರವು ಸಿಟ್ಟಿಗೆದ್ದಂತಾಗುವದು, ನಡುವೇ ಅದು ಝುಳು ಝುಳು ತರಂಗಗಳೇಳುವ ಸರೋವರದ ಹಾಗೆ ಪ್ರಸನ್ನವಾಗಿ ತೋರುತ್ತಿತ್ತು. 'ಎಲ್ಲಿಯಾದರೂ ತುಸ ಸಪ್ಪಳವಾಯಿತೆ'ಂದರೆ, ಆ ಮೂವರ ಹರಣವೂ ಹಾರಿದಂತಾಗಿ, ಅವರೆಲ್ಲರ ಮುಖಗಳು ಭಯದಿಂದ ಕಪ್ಪು ಕಾಡಿಗೆಯಂತಾಗುವವು. ಅದನ್ನು ಹತ್ತಿಕ್ಕುತ್ತಿಕೊಂಡು ಮತ್ತೆ ಪರಸ್ಪರರಿಗೆ ಧೈರ್ಯ ಹೇಳುತ್ತ, ನಗುತ್ತ, ಹಾಡುತ್ತ ಅವರು ಹುಟ್ಟು ಕಡಿಯುತ್ತಿದ್ದರು.

ಅನುಕೂಲವಾದ ಗಾಳಿಯು ಅವರ ತರಿಯ ಸೀಡಿನಲ್ಲಿ ತುಂಬಿಕೊಂಡಿತ್ತು; ಆದರೆ ಅಷ್ಟರಿಂದಲೇ ಆ ತರಿಯು ನಿರಾತಂಕವಾಗಿ ನಡೆದಿರಲಿಲ್ಲ. ಜೀವಾವಧಿಯ ಬೇಡಿಗಳನ್ನು ಮುರಿದು ತಾವು ಕರಿನೀರಿನಿಂದ ಓಡಿಹೋಗುತ್ತಿದ್ದೇವೆಂಬ ಕಲ್ಪನೆಯ ಆನಂದದ ಗಾಳಿಯು ಅವರ ಹೃದಯದ ಸೀಡಿನೊಳಗೆ ಎಷ್ಟು ಹೊಕ್ಕಿದ್ದಿತೋ, ಪ್ರಾಮುಖ್ಯವಾಗಿ ಅಷ್ಟರಿಂದಲೇ ಆ ತರಿಯು ನಿರಾತಂಕದಿಂದ ನಡೆದಿದ್ದಿತು.

ಮನುಷ್ಯನ ಆಶೆ-ನಿರಾಶೆ, ಪಾಪ-ಪುಣ್ಯ, ನ್ಯಾಯ-ಅನ್ಯಾಯ, ಸಾಧ್ಯ-

ಅಸಾಧ್ಯ ಇವುಗಳ ವರೆಯಿಂದ ಲೋಕದ ವ್ಯವಹಾರವನ್ನೇನೂ ಪರೀಕ್ಷಿಸ ಲಾಗುವದಿಲ್ಲ. ಆ ವಿಚಾರವು ಗಣನೆಯಲ್ಲಿ ಕೂಡ ಇರಲಾರದು. ನಮಗೆ ಯಾವದು ಸಂಭವನೀಯವೆಂದು ತೋರುವದೋ, ಅದು ಆಕಸ್ಮಾತ್ತಾಗಿ ಅಸಂಭವವಾಗುವದು; ಅಸಂಭವವೆನಿಸುತ್ತಿರುವದೇ ಒಮ್ಮೊಮ್ಮೆ ಆಕಸ್ಮಾತ ರೀತಿಯಿಂದ ಸಂಭವಿಸಿ ಬಿಡುತ್ತದೆ. ನಾವು ಇದಕ್ಕೆ ಯೋಗಾಯೋಗವೆಂ ದೆನ್ನುತ್ತೇವೆ. ಅಂದರೇನೇ ಆ ಲೋಕ ವ್ಯವಹಾರವು ನಮ್ಮ ಇಚ್ಛೆಯ ಇಲ್ಲವೆ ತರ್ಕದ ಅನುರೋಧದಿಂದ ನಮಗೆ ಏನೂ ತಿಳಿಯುವದಿಲ್ಲವೆಂದು ನಾವು ಮಾನ್ಯತೆ ಕೊಡುವೆವು.

ತೀರ ಅರಮನೆಯಲ್ಲಿ ನೂರಾರು ದಾಸ-ದಾಸಿಯರು ಲಾಲನ-ಪಾಲನ ಮಾಡುತ್ತಿರಲು ಇಲ್ಲವೆ ಪ್ರತ್ಯಕ್ಷ ಅರಸು-ಅರಸಿಯರು ತಮ್ಮ ಕಂಕುಳದಲ್ಲೆತ್ತಿ ಕೊಂಡು ಆಡಿಸುತ್ತಿರಲು, ಹರಕೆಗಳ ಸಾಯಾಸದಿಂದ ಲಭಿಸಿದ್ದ ರಾಜ ಪಿಂಡದ ಮಗುವು ರಾಜನ ಇಲ್ಲವೆ ರಾಣಿಯ ಕೈಯೊಳಗಿಂದ ಜಾರಿ ಎತ್ತರದ ಪ್ರಾಸಾ ದದ ಮೇಲಿಂದ ಕೆಳಗಿನ ಫರಸುಗಲ್ಲ ಮೇಲೆ ಬಿದ್ದು ಚೂರು ಚೂರಾಗಿ ಹೋ ಗುತ್ತವೆ! ಶ್ರೀಮಂತ ಪೇಶವೆ ರಘುನಾಥರಾಯರ ಒಂದು ಕೂಸು ಸ್ವತಃ ಶ್ರೀ ಮಂತರು ಅದನ್ನು ಅಚ್ಚದಿಂದೆತ್ತಿ ಆಡಿಸುತ್ತಿರುವಾಗ ಉಪ್ಪರಿಗೆಯ ಮೇಲಿಂದ ಕೆಳಗೆ ಬಿದ್ದು ಸತ್ತು ಹೋಯಿತೆಂದು ಹೇಳುತ್ತಾರೆ! ತದ್ವಿರುದ್ಧವಾಗಿ ಕ್ವೇಟಾ ಇಲ್ಲವೆ ಬಿಹಾರಗಳಲ್ಲಿ ಆದ ಭೀಷಣ ಭೂಕಂಪದ ಧಕ್ಕೆಯೊಡನೆ ಯಾವಾಗ ದೊಡ್ಡ ದೊಡ್ಡ ಪಟ್ಟಣಗಳು ಕಳಚಿ ಭೂಮಿಯಲ್ಲಿ ಕಾಣದಂತಾದವೋ, ಆಗ ನಾಲ್ಕಾಲ್ಕು ಅಂತಸ್ತಿನ ಗಚ್ಚಿನ ಮಂದಿರಗಳು ಮೇಲಿನಿಂದ ಧಡ್ಡ ಧಡ್ಡ ಎಂದು ಹೊರಳಿ, ಕೆಳಗೆ ಸೀಳಿ ಬಾಯ್ಬಿಟ್ಟಿದ್ದ ಭೂಮಿಯ ಗರ್ತದಲ್ಲಿ ಗುಂಪು ಗುಂಪಾಗಿ ಬಿದ್ದವು. ಮಂದಿ, ಮನುಷ್ಯರು, ತಂದೆ-ತಾಯಿ-ಮಕ್ಕಳು ಎಲ್ಲರೂ ಜಜ್ಜಿ ಜಜ್ಜಿ ಪುಡಿಗೋಡು ಕೆಸರಿನ ಗುಡ್ಡೆಯಾದಂತಾಗಿ, ಕಲ್ಲಿನ ರಾಶಿಗಳ ನಡುವೆ ಗಚ್ಚು-ಕೆಸರುಗಳಂತೆ ಸಿಕ್ಕು ನೆಲಸಮವಾಗಿ ಹೋದರು; ಮತ್ತು ಅದರಲ್ಲಿಯೇ ಅಗಿ ಅಗಿಯುತ್ತಿರಲು, ಹಾಗೆ ಜಜ್ಜಿ ಸತ್ತಿದ್ದ ಯಾವಳೊಬ್ಬ ತಾಯಿಯ ಮಗ್ಗುಲಲ್ಲಿ ಮಲಗಿದ್ದ ಒಂದಾನೊಂದು ಶಿಶುವು ಎರಡು ಕಲ್ಲುಗಳ ನಡುವಿನ ಬಿರುಕಿನಲ್ಲಿ ಸುರಕ್ಷಿತವಾಗಿದ್ದದ್ದು ದೊರೆತಿತು! ಒಬ್ಬಾನೊಬ್ಬ ಮನು ಷ್ಯನು ಕ್ವೇಟಾದಲ್ಲಿ ೩೫-೪೦ ದಿನಗಳ ನಂತರವೂ ಬಿದ್ದಿದ್ದ ಮಣ್ಣಿ ಕೆಳಗೆ ಜೀವ ಸಹಿತವಾಗಿ ದೊರೆತನು! ಇದಕ್ಕೇ ಯೋಗಾ ಯೋಗವೆನ್ನುವರು. ದೈವವೆನ್ನು ವರು! ಯಾವುದರ ಕಾರ್ಯ-ಕಾರಣಗಳ ತೊಡಕು ನಮ್ಮಿಂದ ಬಿಡಿಸಲಾಗುವ ದಿಲ್ಲವೋ ಇಲ್ಲವೆ ನಮ್ಮ ಇಚ್ಛೆಯಿಂದ ಬಿಡುವದಿಲ್ಲವೋ ಅದಕ್ಕೇ ನಾವು ದೈವ

ವೆನ್ನುತ್ತೀವೆ. ದೈವ, ಯೋಗಾಯೋಗಗಳೆಂದರೆ ನಮ್ಮಗಳ ಅಜ್ಞಾನ, ನಿರಾಶೆ!

ಕರಿನೀರಿನ ಆ ಮಹಾ ಸಮುದ್ರದಲ್ಲಿ ಕೇವಲ ಗಾಳಿಯ ಸುಳುವಿನ ಮೇಲೆಯೇ ಬಿಡಲ್ಪಟ್ಟಿದ್ದ ಆ ಚಿಕ್ಕ ತರಿಯು ಹಾಗು ಪ್ರತಿಕ್ಷಣದಲ್ಲೂ ಮೃತ್ಯುವಿನ ಬೆಟ್ಟಕ್ಕೆ ಅಪ್ಪಳಿಸಲಿರುವ ಆ ಮೂವರ ಜೀವಗಳ ದೈವದಲ್ಲಿ ಆ ಅನುಕೂಲ-ಪ್ರತಿಕೂಲ ಯೋಗಾಯೋಗಗಳಲ್ಲಿ ಯಾವ ಯೋಗಾಯೋಗವುಂಟಾದೀತು?-ಅವರ ಗತಿಯು ಏನಾದೀತು?-ಹೇಗಾದೀತು?-

ತರಿಯು ಜಾವರಾಗಳ ನಿವಾಸದಿಂದ ಹೊರಟು ಎಂಟು ದಿನಗಳಾದವು. ಸಂಕಟಗಳೊಡನೆ ಕಾದಕಾದುತ್ತಿರಲು, ಆ ಸಂಕಟಗಳ ಭಯವು ಕೊಂಚ ಕಡಿಮೆಯಾಯಿತು. ಅನ್ನ-ನೀರುಗಳ ಪೂರೈಕೆಯು ತೀರಹತ್ತಿದ್ದೇ ಕೆಡಕು; ಆದರೆ ಅವರ ಪ್ರವಾಸವೂ ಅರ್ಧಕ್ಕಿಂತ ಹೆಚ್ಚಾಗಿತ್ತು. ನಡುನಡುವೆ ಜಾಳಿಗೆ ಚೆಲ್ಲಿ ಮೀನಗಳನ್ನು ಹಿಡಿಯುತ್ತಿದ್ದರು-ತಿನ್ನುತ್ತಿದ್ದರು. ಅವರ ಮೇಲೆಯೇ ಅವರ ನಿರ್ವಾಹ ಸಾಗುವಂತಿತ್ತು; ಆದರೆ ಅವರ ಕ್ಷೀಣತೆಯು ಮಾತ್ರ ಹೆಚ್ಚಿತು. ಅದರಲ್ಲಿಯೂ ಮಾಲತಿಯು ವಿಶೇಷ ಕ್ಷೀಣಳಾದಳು; ಆದರೂ ಪ್ರವಾಸವು ಇನ್ನು ತೀವ್ರವೇ ಮುಗಿಯುವದೆಂದು ಅವಳ ಅಣ್ಣನು ಅವಳಿಗೆ ಹೇಳಿ:—"ಆತತಾಯಿ, ಪಾಪಿಗಳಾದ ಆ ರಫೀ ಉದ್ದೀನನಂತಹ ಕಿತವರು ಈ ಕರಿನೀರೊಳಗಿಂದ ತೇಲಿ ಒಮ್ಮೊಮ್ಮೆ ಸ್ವದೇಶಕ್ಕೆ ತಲುಪಿದ್ದನ್ನು ನಾವು ನೋಡುತ್ತೇವೆ. ಅಂದಬಳಿಕ ನಿನ್ನಂತಹ ನಿರಪರಾಧ, ಸುಶೀಲ ಅಬಲೆಗೆ ಆ ದಯಾರ್ದ್ರ ದೇವನು ಕೈಕೊಡದಿರುವನೆ? ನಿನ್ನ ಪುಣ್ಯದ ಬಲದಿಂದ ನಾವೆಲ್ಲರೂ ಸಮುದ್ರ ಪಾರಾಗುವೆವು! ಅಲ್ಲವೆ ಆ ತಾಯಿತ, ಆ ಮಾಟಗಳು, ಆ ನಿನ್ನ ಶುಭಶಕುನ ಅವೆಲ್ಲ ಸತ್ಯವಾಗದಿರುವವೇ?"

ಈ ಬಗೆಯಾಗಿ ಅವಳಿಗೆ ಧೈರ್ಯಕೊಟ್ಟನೆಂದರೆ, ಅವಳ ದೇಹದ್ವಲ್ಲದಿದ್ದರೂ ಮನಸ್ಸಿನ ಕ್ಷೀಣತೆಯು ನಿವಾರಣವಾಗುತ್ತಿತ್ತು. ರಾತ್ರಿಯಾಗುತ್ತಲೆ ಕಿಶನನ ತೊಡೆಯ ಮೇಲೆ ಯಾವಾಗ ತಲೆಯಿಟ್ಟು ಮಲಗುವಳೋ ಹಾಗು ಆತನು ಆಕೆಯನ್ನು ಚುಕ್ಕುಬಡಿಯುವನೋ, ಆಗ ಆಕೆಗೆ ಚಿಂತೆಯೆಂಬುದು ಸೋಂಕುತ್ತಿರಲಿಲ್ಲ ಸಹ. ಅಷ್ಟು ಬೇಗನೆ, ಅಷ್ಟು ಗಾಢವಾಗಿ ಅವಳಿಗೆ ಹತ್ತಿದ್ದ ನಿದ್ದೆಯಿಂದ, ಬೆಳಗಾದ ಮೇಲೆಯೇ ಅವಳು ಎಚ್ಚರ ಹೊಂದುತ್ತಿದ್ದಳು. ಆಗ ಅವಳು ತೀರ ಹುರುಪುಳ್ಳವಳಾಗಿರುತ್ತಿದ್ದಳು.

ಎಂಟನೇ ದಿನವೂ ನಿರ್ವಿಘ್ನದಿಂದ ಪಾರಾಯಿತು. ಅಂದಿನ ಸಂಜೆಯು ಸೂರ್ಯಾಸ್ತ ಸಮಯದ ಶೋಭೆಯೂ ಮತ್ತು ಸಮುದ್ರದ ಆಶ್ವಾಸಕ ವರ್ತನವೂ ಇವುಗಳ ಮೂಲಕ ಆ ಮೂವರಿಗೂ ವಿಪುಲವಾದ ಉಲ್ಲಾಸವೆನಿಸ

ಹತ್ತಿತು. ಗಾಳಿಯು ಮಾತ್ರ ತುಸ ಮಂದವಾಗಿತ್ತು. ಅದಕ್ಕಾಗಿ ಅವರು ತಮ್ಮ ಹುಟ್ಟುಗಳನ್ನು ಹೆಚ್ಚು ಒತ್ತರದಿಂದ ಕಡಿಯಲಿಕ್ಕೆ ಪ್ರಾರಂಭಿಸಿದರು; ಆದರೆ ಪ್ರತಿಯೊಂದು ಹುಟ್ಟಿನ ಗತಿಯೊಡನೆ ಸ್ವದೇಶದ ದಂಡೆಯು ಬೇಗ ಬೇಗನೆ ಸಮೀಪಿಸಹತ್ತಿರುವದೆಂಬದರ ಅರಿವಿನಿಂದ ಅವರುಗಳ ಆ ಶ್ರಮದ ಕಷ್ಟವು ಅವರಿಗೆ ಕೊಂಚವೂ ಅನಿಸುತ್ತಿರಲಿಲ್ಲ. ತದ್ವಿರುದ್ಧವಾಗಿ ಉಲ್ಲಸದ ಭರದಲ್ಲಿ ಕಿಶನನು ತನಗೆ ಬರುತ್ತಿದ್ದ ಯಾವದೋ ಒಂದು ಅಂಬಿಗರ ಅರ್ಧ ಮರ್ಧ ಹಾಡನ್ನು ಹಾಡಹತ್ತಿದನು. ನಡುವೇ ಮಾಲತಿಯ ಕಡೆಗೆ ನೋಡಿ ಚೇಷ್ಟೆಯಿಂದ ನಗಹತ್ತಿದನು. ಆಕೆಯ ಅಣ್ಣನೂ ಅದೇ ಹಾಡಿನ ಪಲ್ಲವಿಯನ್ನೊಂದು ಗತ್ತಿನ ಮೇಲೆ ಗತ್ತಿನಿಂದ ತರಿಗೆ ಹುಟ್ಟು ಕಡಿಯುಹತ್ತಿದನು.

ಒಂದು ಚರಣವನ್ನು ಕಿಶನನಂದರೆ, ಇನ್ನೊಂದನ್ನು ಅಣ್ಣನು ಹಾಡುತ್ತ, ಮತ್ತೆ ಮತ್ತೆ ಅದನ್ನೇ ಅನ್ನುತ್ತ ಅವರಿಬ್ಬರೂ ಹುಟ್ಟು ಕಡಿದು ತರಿಯನ್ನು ವೇಗವಾಗಿ ಸಾಗಿಸಹತ್ತಿದರು. ತರಿಯು 'ಸರ್‍ರ ಸರ್‍ರ' ಎಂದೆನ್ನುತ್ತ ಮುಂದೆ ಮುಂದೆ ನಡೆದಿತ್ತು. ಆದರಿಂದ ಸ್ವದೇಶವು ಭರಭರ್‍ರೆಂದು ಸಮೀಪಿಸಹತ್ತಿತ್ತು. ಕತ್ತಲೆಗವಿದು, ಚಿಕ್ಕೆಗಳು ಆಗಸದ ತುಂಬೆಲ್ಲ ಮಿನುಗಹತ್ತಿದವು. ತಂಗಾಳಿಯಿಂದ ಅವರ ಶ್ರಮಗಳೆಲ್ಲ ಪರಿಹಾರವಾದವು.

ಮಾಲತಿಯು ಆ ಹಾಡು ಕೇಳುತ್ತ ಕೇಳುತ್ತ ಆ ಪುಟಿಯುವ ಮಂಚದಂತಹ ತರಿಯ ಮೇಲೆ ಕಿಶನನ ಮಗ್ಗುಲವನ್ನೇ ತಲೆಗಿಂಬು ಮಾಡಿಕೊಂಡು ಒರಗಿದಳು. ಆ ನಿವಾಂತ ಸಮಯದಲ್ಲಿ ಆಕೆಗೆ ನಿದ್ದೆಯಾವಾಗ ಹತ್ತಿತೆಂಬದು ಅವರಾರಿಗೂ ತಿಳಿಯಲಿಲ್ಲ

ಅನುಕೂಲ ದಿಕ್ಕಿನ ಗಾಳಿಯು ಮತ್ತೆ ಚನ್ನಾಗಿ ಬಿಟ್ಟಿತು. ಸೀಡು ಉಬ್ಬಿ ತುಂಬಿತು; ಆದರಿಂದ ಹುಟ್ಟು ಕಡಿಯುವದು ಮಂದವಾಯಿತು. ಇನ್ನು ಅದರ ಅವಶ್ಯಕತೆಯೂ ಉಳಿದಿರಲಿಲ್ಲ. ಮಧ್ಯರಾತ್ರಿಯಾಯಿತು. ಚಂದ್ರನು ಉದಯಿಸಿದನು. ಸುತ್ತಲೆಲ್ಲ ಕಡೆಗೂ ಸಮುದ್ರದ ನೀರಿನ ಮೇಲೆ ಚಂದ್ರನ ಕಿರಣಗಳು ಬಿದ್ದು, ಮಿಂಚುವ ಬೆಳ್ಳಿಯ ತಗಡನ್ನೇ ಹಾಸಿದಂತಾಯಿತು. ಇಷ್ಟರಲ್ಲಿ ತರಿಯಿಂದ ತುಸ ಅಂತರದ ಮೇಲೆ 'ಸಳ-ಸಳ-ಸಳ' ಎಂಬ ಬಹು ದೊಡ್ಡ ಸಪ್ಪಳವಾಗಿ, ಒಂದು ಬಹು ಎತ್ತರದ ಸ್ತಂಭದಂತೆ ನೀರಿನ ಬಹು ದೊಡ್ಡ ಕಂಬವು ಮೇಲಕ್ಕೆದ್ದಿತು.

ಅಣ್ಣನು ದಿಟ್ಟಿಸಿ ನೋಡಿದನು. ಅದೊಂದು ಪ್ರಚಂಡ ಮೀನವು-ತಿಮಿಂಗಿಲವು ಅರ್ಧ ಮರ್ಧ ಎದ್ದು ನಿಂತುಕೊಳ್ಳುವಂತೆ ನಿಂತು, ಹೋಳೆಯುಹುತು. ಸಮುದ್ರದಲ್ಲಿ ಹಲವು ಸಾರೆ ತಿರುಗಾಡಿದ್ದ ಆ ಡೋಲಕಾರಿ

ಯು ಅದನ್ನು ಕೂಡಲೆ ಗುರ್ತಿಸಿದನು. ಇದೊಂದು ಭಯಂಕರ ಜಾತಿಯ ತಿಮಿಂಗಿಲವಿದೆಯೆಂದರಿತನು. ಆ ಕೂಡಲೆ ಆತನು ತನ್ನ ತುಬಾಕಿಯನ್ನೆತ್ತಲು, ನೀರಿನದೊಂದು ಬಹು ದೊಡ್ಡ ತೆರೆಯೂ ಬಹು ದೊಡ್ಡ ಖಳಖಳವೆಂಬ ಸಪ್ಪಳವೂ ಆಗಿ, ಆ ಮೀನವು ನೀರಲ್ಲಿ ಮುಳುಗಿ ಕಾಣಿಸದಾಯಿತು. ಜೀವದ ಮೇಲಿನ ಆಕಸ್ಮಿಕ ಸಂಕಟದ ನಿವಾರಣವಾಯಿತೆಂದು ಡೋಲಕಾಠಿ-ಕಿಶನರ ಗಾಬರಿಯು ತಗ್ಗಿತು

ಆ ಭಯಂಕರ ಮೀನದ ದರ್ಶನದಿಂದಲೇ ಅಂಥ ಮೀನಗಳ ಕತೆಗಳು ಮುಂದುವರಿದವು. ಆಗ ಡೋಲಕಾಠಿಯು ಕಿಶನನಿಗೆ ಹೇಳಿದನೇನಂದರೆ: "ಇಂಥ ಬಹು ದೊಡ್ಡ ಮೀನಗಳು ಉಗಿಯ ಶಕ್ತಿಯಿಂದ ತಮ್ಮ ಕೆಳಗಿನ ನೀರೊಳಗೆ ಒಂದೇ ಸವನೆ ತಿರುಗಾಡುತ್ತಿರುವ ಚಕ್ರಗಳುಳ್ಳ ದೊಡ್ಡ ದೊಡ್ಡ ಉಗಿ ಹಡಗಗಳಿಗೆ ಗಂಟುಬಿದ್ದವೆಂದರೆ, ಒಮ್ಮೊಮ್ಮೆ ಅವು ತಮ್ಮ ಪ್ರಚಂಡವಾದ ಶಕ್ತಿಯ ಬಲದಿಂದ ಆ ಹಡಗಕ್ಕೆ ಹಡಗವನ್ನೇ ಬುಡಮೇಲು ಮಾಡಿಬಿಡುತ್ತವೆಂದು ಸಿಂಧುಪ್ರವಾಸಿಗಳು ಹೇಳುತ್ತಾರೆ. ಸಣ್ಣ ಸಣ್ಣ ತರಿಗಳನ್ನಂತೂ ಅವು ಆಗಾಗ್ಗೆ ಅಡ್ಡಗಟ್ಟುತ್ತ ಸಾಕುಸಾಕೆನಿಸಿ ಬಿಡುತ್ತವಂತೆ. ಅವುಗಳಲ್ಲಿಯ ಕೆಲ ತಿಮಿಂಗಿಲಗಳು ಮನುಷ್ಯರನ್ನು ಭಕ್ಷಿಸುವ ಜಾತಿಯವಿರುತ್ತವಂತೆ.

ಅದನ್ನು ಕೇಳಿ ಕಿಶನನ ಮೈಮೇಲೆ ಮುಳ್ಳುಗಳೇ ಎದ್ದವು. ಆಗ ಆತನು:—"ಏನಂದಿ? ನರಭಕ್ಷಕ ಮೀನಗಳಿರುವವೊ? ಅದು ನಿಜವೇ?"

ಆದರೆ ಕಿಶನನ ಆ ಪ್ರಶ್ನೆಗೆ ಡೋಲಕಾಠಿಯು ಉತ್ತರ ಕೊಡುವ ಕಾರಣವೇ ಉಳಿಯಲಿಲ್ಲ. ವೇಳೆಯೇ ದೊರೆಯಲಿಲ್ಲ! ಏಕೆಂದರೆ, ಕಿಶನನು ಹಾಗೆಂದು ಕೇಳಿದನೋ ಇಲ್ಲವೋ, ಅಷ್ಟರಲ್ಲಿ ಯಾವನೊಬ್ಬ ದುರ್ಬಲನ ಕೆನ್ನೆಯ ಮೇಲೆ ರಾಕ್ಷಸನು ಹೊಡೆಯುವಂತೆ, ಆ ಪುಟ್ಟ ತರಿಯು ತೆರೆಗಳ ಮೇಲೆ ಯಾವ ಬದಿಯಿಂದ ಹತ್ತುತ್ತಿತ್ತೋ, ಆ ಬದಿಗೆ ಒಂದು ಬಲವಾದ ಪೆಟ್ಟು ತಗಲಿತು. ಕೂಡಲೆ ಆ ತರಿಯು ಯಾವುದೊಂದು ಬಟ್ಟಲವು ಡಬ್ಬು ಬೀಳುವಂತೆ ಒಮ್ಮೆಲೆ ಸಂಪೂರ್ಣ ಡಬ್ಬವಾಗಿ ಬಿದ್ದಿತು!

ಆ ಕೂಡಲೆ ಒಂದು ಪ್ರಚಂಡವಾದ ತೆರೆಯು ಹೊಡೆಯಿತು. ಒಂದು ಭಯಂಕರ ಮೀನ-ತಿಮಿಂಗಲದ ದೇಹವು ಆ ತರಿಯ ಸುತ್ತಲೂ ತಿರುಗಿತು. ಆಗಲೆ ಹಾರಿ ಸಮುದ್ರದಲ್ಲಿ ಮುಳುಗಿದ್ದ ಮೀನವೇ ಗುಪ್ತ ರೀತಿಯಿಂದ ಆ ತರಿಯ ಮೇಲೆ ಮತ್ತ ಸಾಗಿ ಬಂದಿತ್ತು; ಹಾಗು ತನ್ನ ಬಾಲದ ಒಂದೇ ಹೊಡೆತದಿಂದ ಆ ತರಿಯನ್ನು ಬುಡಮೇಲುಗೊಳಿಸಿತ್ತು. ಅದರೊಳಗಿನ ಯಾರಾದರೂ ಮನುಷ್ಯರು ಹೊರಗೆ ಚಿಮ್ಮಲ್ಪಟ್ಟಿರುತ್ತಾರೋ ಇಲ್ಲವೋ

ಎಂಬದನ್ನು ನೋಡಿ, ಆತನನ್ನು ಹಿಡಿಯುವ ಹವಣಿನಿಂದ ಆ ರಾಕ್ಷಸೀ ಮೀನವು-ತಿಮಿಂಗಿಲವೂ-ಅದರ ಜೊತೆಗಾರರಾದ ಮೀನಗಳೂ ಆ ತರಿಯ ಸುತ್ತಲೂ ತಿರುಗುವ ಸಲುವಾಗಿ ಹಾಗೆ ನೀರ ಮೇಲಕ್ಕೆ ಬಂದಿದ್ದವು.

ತರಿಯು ಡಬ್ಬಾಗುವಾಗ ಆ ಪೆಟ್ಟಿನ ಹೊಡೆತದಿಂದ ಧೂರ ಎಸೆಯಲ್ಪಟ್ಟಿದ್ದ ಕಿಶನನ ಮೇಲೆ ಆ ರಾಕ್ಷಸೀ ಮೀನವು ಹಾರಿ, ಆತನನ್ನು ಹಿಡಕೊಂಡು ಸಮುದ್ರ ತಳಕ್ಕೆ ಒಯ್ದಿತು!

ಇತ್ತ ಡೋಲಕಾರಿಯು ತನ್ನ ಮೇಲೆ ಡಬ್ಬ ಬಿದ್ದಿದ್ದ ತರಿಯೊಳಗಿಂದ ಹೊರ ಹೊರಡಲಿಕ್ಕೆ ಹೆಚ್ಚಾಗಿ ಪ್ರಯತ್ನಿಸಿದನು; ಆದರೆ ಆ ಪ್ರಯತ್ನವು ಆತನಿಗೆ ಪ್ರಾಣಾಂತ್ಯದ ಧಡಪಡವಾಗಿ ಪರಿಣಮಿಸಿತು!! ಆ ಪ್ರಯತ್ನದಿಂದ ಆತನಿಗೇನೂ ಲಾಭವಾಗಲಿಲ್ಲ. ಆತನ ಮೂಗು-ಬಾಯಿಗಳಲ್ಲಿ ತೆರೆಯ ನೀರು ಸೇರಿ, ಆತನ ಜೀವವು ಕಸವಿಸಿಗೊಂಡಿತು. ಆತನು ನೋಡು-ನೋಡುತ್ತಿರಲಿಕ್ಕೆ ಮುಳುಗಿ ಹೋದನು!!!

ಮತ್ತು ಮಾಲತೀ? ತಾನು ಮುಳುಗಿದೆನೆಂಬದು ಅವಳಿಗೆ ಕೊಂಚವೂ ತಿಳಿಯಲಿಲ್ಲ! ಅವಳು ಆಗ ಗಾಢನಿದ್ದೆಯಲ್ಲಿದ್ದಳು. ಅವಳಿಗೆ ಆ ಪುಟಿಯುವ ಮಂಚದ ಮೇಲೆ ತರಿಯು ಮೇಲೆ- ಇನಿಗನಸು ಬಿದ್ದಿತ್ತು. ತಾನು ಚಿಕ್ಕಂದಿನಲ್ಲಿಯ ಆ ತಮ್ಮ ತೂಗುಮಂಚದ ಮೇಲೆಯೇ ಕುಳಿತುಕೊಂಡಿದ್ದು, ತಮ್ಮ ಅಪ್ಪನು ತನಗೆ ಆಗಿನ ಆ ಪ್ರೇಮುಲ ಗೀತೆಗಳನ್ನೇ ಅನ್ನುತ್ತಿರುವಂತೆ ಹಾಗು ಆ ತೂಗಮಂಚವು ಮೇಲೆ ಮೇಲೆ ಹೋಗಿ ಕೆಳಗಿಳಿಯುತ್ತಿರುವಾಗ ತನಗೆ ಎಷ್ಟೋ ಸುಖವೆನಿಸಿದಂತೆ ಆಕೆಗೆ ಆಗಿತ್ತು!!

ಆ ಸವಿಗನಸಿನಲ್ಲಿ ಅವಳು ಆ ತರಿಯಲ್ಲಿ ಹೇಗೆ ಮಲಗಿಕೊಂಡಿದ್ದಳೋ ಆ ತರಿಯು ಡಬ್ಬಾಗುತ್ತಲೆ ಅವಳನ್ನು ಹಾಗೆಂದರೆ ಹಾಗೆಯೇ ಆ ಸಮುದ್ರದ ತೆರೆಗಳ ಮೇಲೆ ಮಲಗಿಸಲಾಯಿತು! ಎಚ್ಚರಿಕೆ ಎಂಬುದು ಅವಳಿಗೆ ಮತ್ತೆ ಉಂಟಾಗಲೇ ಇಲ್ಲ!!

ಆ ಸುಖಸ್ವಪ್ನವೆಂಬುದೇ ಆಕೆಯ ಕಟ್ಟ ಕಡೆಯ ಅರಿವಾಗಿದ್ದಿತು. ಅವಳ ಕೊನೆಯ ತಿಳಿವೇ ಅದಾಗಿತ್ತು; ಅಂದರೆ ಆಕೆಯು ಮಟ್ಟಿಗೆ ಅವಳು ಸುಖರೂಪವಾಗಿ ಮನೆಗೆ ಹೋಗಿ ತಮ್ಮಪ್ಪನಿಗೆ ಭೇಟಿಯಾದಳು! ಅವಳ ಮಟ್ಟಿಗೆ ಅವಳ ಅರಿವಿನ ಕೊನೆಯ ದೃಶ್ಯವು ಸುಖಾಂತ್ಯವೇ ಆಗಿತ್ತು!

ಓಂ ಶಾಂತಿಃಶಾಂತಿಃಶಾಂತಿಃ

ಸಂಪೂರ್ಣ.